# ಸ್ವಾತಂತ್ರ್ಯ ಚಳುವಳಿ ಮತ್ತು ಕುಂದರನಾಡು

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಚರಿತ್ರೆ ವಿಷಯದಲ್ಲಿ ಪಿಎಚ್.ಡಿ.
ಪದವಿಗಾಗಿ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ


• ಸಂಶೋಧಕರು •

**ಯಲಶೆಟ್ಟಿ ಬಸವರಾಜ**

ಹಾರೂಗೇರಿ ಜಿ. ಬೆಳಗಾವಿ

ನೋಂದಣಿ ಸಂ. : BRDSHH-00241

• ಮಾರ್ಗದರ್ಶಕರು •

**ಡಾ. ಸ್ಮಿತಾ ಪ್ರಮೋದ ಸುರೇಬಾನಕರ**

ವಿಶ್ರಾಂತ ಪ್ರಾಚಾರ್ಯರು ಮತ್ತು ಇತಿಹಾಸ ವಿಭಾಗದ ಮುಖ್ಯಸ್ಥರು
ರಾಣಿ ಪಾರ್ವತಿ ದೇವಿ ಪ್ರಥಮ ದರ್ಜೆ ಮಹಾವಿದ್ಯಾಲಯ, ಬೆಳಗಾವಿ-590006






**ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,**
**ಹಾರೂಗೇರಿ ಜಿ. ಬೆಳಗಾವಿ**

ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೯

# ಸ್ವಾತಂತ್ರ್ಯ ಚಳುವಳಿ ಮತ್ತು ಕುಂದರನಾಡು

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಚರಿತ್ರೆ ವಿಷಯದಲ್ಲಿ ಪಿಎಚ್.ಡಿ.
ಪದವಿಗಾಗಿ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ

ಸಂಶೋಧಕರು
**ಯಲಶೆಟ್ಟಿ ಬಸವರಾಜ**
ಹಾರೂಗೇರಿ ಜಿ. ಬೆಳಗಾವಿ
ನೋಂದಣಿ ಸಂ. : BRDSHH-00241

ಮಾರ್ಗದರ್ಶಕರು
**ಡಾ. ಸ್ಮಿತಾ ಪ್ರಮೋದ ಸುರೇಬಾನಕರ**
ವಿಶ್ರಾಂತ ಪ್ರಾಚಾರ್ಯರು ಮತ್ತು ಇತಿಹಾಸ ವಿಭಾಗದ ಮುಖ್ಯಸ್ಥರು
ರಾಣಿ ಪಾರ್ವತಿ ದೇವಿ ಪ್ರಥಮ ದರ್ಜೆ ಮಹಾವಿದ್ಯಾಲಯ, ಬೆಳಗಾವಿ-590006




**ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,**
**ಹಾರೂಗೇರಿ ಜಿ. ಬೆಳಗಾವಿ**
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೯

# ಪ್ರಮಾಣ ಪತ್ರ

**'ಸ್ವಾತಂತ್ರ್ಯ ಚಳುವಳಿ ಮತ್ತು ಕುಂದರನಾಡು'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಸ್ಮಿತಾ ಪ್ರಮೋದ ಸುರೇಬಾನಕರ** ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. **ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಚರಿತ್ರೆ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ನಾನು ಪ್ರಕಟಿಸಿರುವುದಿಲ್ಲವೆಂದೂ ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : 25 - 11 -೨೦೧೯

**ಯಲಶೆಟ್ಟಿ ಬಸವರಾಜ**
**ಸಂಶೋಧನ ವಿದ್ಯಾರ್ಥಿ**
**ಶ್ರೀ ಬಿ. ಆರ್. ದರೂರ**
**ಸಂಶೋಧನ ಕೇಂದ್ರ, ಹಾರೂಗೇರಿ.**

# ದೃಢೀಕರಣ ಪತ್ರ

**ಯಲಶೆಟ್ಟಿ ಬಸವರಾಜ** ಇವರು **'ಸ್ವಾತಂತ್ರ್ಯ ಚಳುವಳಿ ಮತ್ತು ಕುಂದರನಾಡು'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ **ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಚರಿತ್ರೆ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಇವರು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟಿಸಿಲ್ಲವೆಂದೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೨೫ - ೧೧ -೨೦೧೯

**ಡಾ. ಸ್ಮಿತಾ ಪ್ರಮೋದ**
**ಸುರೇಬಾನಕರ**
ಮಾರ್ಗದರ್ಶಕರು,
ಶ್ರೀ ಬಿ. ಆರ್. ದರೂರ
ಸಂಶೋಧನ ಕೇಂದ್ರ, ಹಾರೂಗೇರಿ

# • ಪರಿವಿಡಿ •

ಪುಟ ಸಂಖ್ಯೆ

ಪುಟ ಸಂಖ್ಯೆ

# ಅಧ್ಯಾಯ – ೧
# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಪೂರ್ವ ಅಧ್ಯಯನಗಳ ಸಮೀಕ್ಷೆ ಮತ್ತು ಸ್ವರೂಪ

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಇತಿಹಾಸ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತನ್ನದೆಯಾದ ಮಹತ್ವವನ್ನು ಹೊಂದಿದೆ. ಸಾವಿರಾರು ವರ್ಷಗಳ ಇತಿಹಾಸ ಈ ಜಿಲ್ಲೆಗಿದೆ. ಇತಿಹಾಸ ಕಾಲದಿಂದಲೂ ಅನೇಕ ಅರಸು ಮನೆತನಗಳು ಆಳ್ವಿಕೆಯನ್ನು ನಡೆಸಿವೆ. ಇಲ್ಲಿ ಹರಿದ ಕೃಷ್ಣಾ, ಘಟಪ್ರಭಾ, ಮಲಪ್ರಭಾ ಮತ್ತು ಅವುಗಳ ಉಪನದಿಗಳು ಅನಾದಿ ಕಾಲದಿಂದಲೂ ಮಾನವ ತನ್ನ ಸಂಸ್ಕೃತಿಯನ್ನು ಕಟ್ಟಿಕೊಳ್ಳಲು ಆಶ್ರಯ ನೀಡಿವೆ. ಮೌರ್ಯ, ಶಾತವಾಹನ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ ಮತ್ತು ಅವರ ಸಾಮಂತರು ಈ ಪರಿಸರದಲ್ಲಿ ಆಳ್ವಿಕೆಯನ್ನು ನಡೆಸಿದ್ದಾರೆ. ಅವರ ನಂತರ ೧೬ನೆಯ ಶತಮಾನದ ನಂತರ ಜಿಲ್ಲೆಯಲ್ಲಿ ಆದಿಲ್‌ಷಾಹಿಗಳು, ಮೊಗಲರು, ಮರಾಠರು ತಮ್ಮ ಪ್ರಾಬಲ್ಯವನ್ನು ಮೆರೆದರು. ೧೯ನೆಯ ಶತಮಾನದ ಆರಂಭದಿಂದ (೧೮೧೮) ಬೆಳಗಾವಿ ಜಿಲ್ಲಾ ಪರಿಸರದಲ್ಲಿ ಬ್ರಿಟಿಷರು ತಮ್ಮ ಹಿಡಿತವನ್ನು ಸಾಧಿಸಿದರು. ಕಿತ್ತೂರ ರಾಜ್ಯದ ಮೇಲೆ ದಾಳಿ ಮಾಡಿ ಚೆನ್ನಮ್ಮನನ್ನು ಸೋಲಿಸಿದರು. ತದನಂತರ ೧೯೨೪ರಲ್ಲಿ ಬೆಳಗಾವಿಯಲ್ಲಿ ಅಖಿಲ ಭಾರತ ಕಾಂಗ್ರೆಸ ಅಧಿವೇಶನ ನಡೆದು ಸ್ವಾತಂತ್ರ್ಯ ಚಳುವಳಿಯ ಹೊಸ ಶಕೆಯನ್ನು ಪ್ರಾರಂಭಿಸಿತು. ಗಾಂಧೀಜಿಯವರು ಅದರ ಅಧ್ಯಕ್ಷರಾಗಿದ್ದು ಮತ್ತಷ್ಟು ಚಳುವಳಿಯ ಗಾಂಭೀರ್ಯತೆ ಹೆಚ್ಚಿಸಿತು. ೧೯೨೦ರಿಂದ ೧೯೪೭ರವರೆಗೆ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿ ಇಡೀ ದೇಶಕ್ಕೆ ಮಾದರಿಯಾಗಿತ್ತು.

ಪ್ರಸ್ತುತ ಅಧ್ಯಯನದ ವಿಷಯ "ಸ್ವಾತಂತ್ರ್ಯ ಚಳುವಳಿ ಮತ್ತು ಕುಂದರನಾಡು". ಕುಂದರನಾಡು ರಾಷ್ಟ್ರಕೂಟರ ಕಾಲದಿಂದ ಹೆಸರುವಾಸಿಯಾಗಿದೆ. ವಿಸ್ತಾರವಾದ ಪ್ರದೇಶವಾಗಿತ್ತು. ಇದು ಬೆಳಗಾವಿ ಜಿಲ್ಲೆಯ ಮೂರು (ಹುಕ್ಕೇರಿ, ಗೋಕಾಕ ಮತ್ತು ಬೆಳಗಾವಿ) ತಾಲ್ಲೂಕುಗಳನ್ನು ಒಳಗೊಂಡಿತ್ತು. ಅಧ್ಯಯನದಲ್ಲಿ ಬಹುತೇಕವಾಗಿ ಈ ಮೂರು ತಾಲ್ಲೂಕುಗಳನ್ನು ಕುರಿತಾಗಿಯೇ ಉಲ್ಲೇಖಿಸಿದರೂ ಅಲ್ಲಲ್ಲಿ ಜಿಲ್ಲೆಯ ವಿವಿಧ ಪ್ರದೇಶಗಳನ್ನು ಸಂದರ್ಭೋಚಿತವಾಗಿ ಉಲ್ಲೇಖಿಸಲಾಗಿದೆ.

## ೧.೧ ಅಧ್ಯಯನದ ಉದ್ದೇಶ :

ಕುಂದರನಾಡು ಈಗಿನ ಬೆಳಗಾವಿ ಜಿಲ್ಲೆಯ ಹುಕ್ಕೇರಿ, ಗೋಕಾಕ ಮತ್ತು ಬೆಳಗಾವಿ ತಾಲ್ಲೂಕುಗಳನ್ನು ಒಳಗೊಂಡ ಪ್ರದೇಶ. ಸವದತ್ತಿ ರಟ್ಟರ ಕಾಲದ ಕುಹಂಡಿ-೩೦೦೦ ಪ್ರದೇಶದಲ್ಲಿದ್ದ ಇದು ಅಂಕಲಗಿ, ಪಾಶ್ಚಾಪೂರ ಮತ್ತು ಗೋಕಾಕದವರೆಗೆ ವಿಸ್ತರಿಸಿತ್ತು. ಇಲ್ಲಿ ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಸವದತ್ತಿ ರಟ್ಟರು ಮುಂತಾದ ಅರಸು ಮನೆತನಗಳು ಆಳಿದ್ದು ಅವರು ನಿರ್ಮಿಸಿದ ದೇವಾಲಯಗಳು ಮತ್ತು ಶಿಲ್ಪ-ಶಾಸನಗಳು ಈ ನಾಡಿನ ಇತಿಹಾಸವನ್ನು ಕಟ್ಟಿಕೊಡಲು ಸಹಾಯಕವಾಗಿವೆ. ಬೆಳಗಾವಿ ಜಿಲ್ಲೆ ಸ್ವಾತಂತ್ರ್ಯ ಚಳುವಳಿಯಲ್ಲಿ ಪ್ರಮುಖ ಪಾತ್ರವಹಿಸಿತ್ತು. ಇಲ್ಲಿ ನಡೆದ ಆಂದೋಲನದ ವಿವಿಧ ಘಟನೆಗಳು ಬ್ರಿಟಿಷ ಮತ್ತು ಭಾರತದ ರಾಷ್ಟ್ರಮಟ್ಟದ ಗಮನ ಸೆಳೆದಿದ್ದವು. ವಿಶೇಷವಾಗಿ ಕುಂದರನಾಡಿನ ಹೆಚ್ಚು ಪ್ರಸಿದ್ಧಿ ಪಡೆದ ಊರೆಂದರೆ ಹುದಲಿ. ಇದು ಅಂದು ಬೆಳಗಾವಿ ಜಿಲ್ಲೆ ಸ್ವಾತಂತ್ರ್ಯ ಚಳುವಳಿಯ ಕೇಂದ್ರಸ್ಥಾನವಾಗಿತ್ತು. ಇಲ್ಲಿ ಕರ್ನಾಟಕ ಸಿಂಹವೆಂದೇ ಖ್ಯಾತಿ ಪಡೆದ ಗಂಗಾಧರರಾವ ದೇಶಪಾಂಡೆ ಮತ್ತು ಅವರ ಸಹಚರರು ನಡೆಸಿದ ಕ್ಷಿಪ್ರ ಹೋರಾಟ ಮತ್ತು ಖಾದಿ ಪ್ರಚಾರ ಇಡೀ ಬ್ರಿಟಿಷ ಸರಕಾರವನ್ನೇ ನಡುಗಿಸಿತ್ತು.

ಬಂಗಾಲ ವಿಭಜನೆ ನಂತರ ಜಿಲ್ಲಾ ಪರಿಸರ ಮತ್ತು ಕುಂದರನಾಡಿನ ಸ್ವಾತಂತ್ರ್ಯ ಚಳುವಳಿಯ ಕಿಚ್ಚು ಹೆಚ್ಚಾಯಿತು. ಅದರಲ್ಲಿಯೂ ಗಾಂಧೀಜಿಯವರ ಪ್ರಭಾವದಿಂದ ಅಸಹಕಾರ ಚಳುವಳಿ ತೀವ್ರಗೊಂಡಿತು. ಜೊತೆಗೆ ಉಪ್ಪಿನ ಸತ್ಯಾಗ್ರಹ, ಅರಣ್ಯ ಸತ್ಯಾಗ್ರಹ, ಸ್ವದೇಶಿ ಚಳುವಳಿ, ಕ್ವಿಟ್ ಇಂಡಿಯಾ ಚಳುವಳಿ ಮುಂತಾದವುಗಳು ಇಲ್ಲಿ ಜರುಗಿದವು. ೧೯೩೭ರಲ್ಲಿ ಹುದಲಿಯಲ್ಲಿ ನಡೆದ ಖಾದಿ ಸಮ್ಮೇಳನದಲ್ಲಿ ಮಹಾತ್ಮಾ ಗಾಂಧೀಜಿಯವರು ಭಾಗವಹಿಸಿ ಖಾದಿ ಉತ್ಪಾದನೆ ಮತ್ತು ಚಳುವಳಿಯನ್ನು ತೀವ್ರಗೊಳಿಸುವ ಕರೆ ನೀಡಿದರು. ಜನ ಖಾದಿಯಿಂದ ಪ್ರಭಾವಿತಗೊಂಡು ವಿದೇಶಿ ವಸ್ತುಗಳನ್ನು ಬಹಿಷ್ಕರಿಸಿ ಸ್ವದೇಶಿ ಉತ್ಪನ್ನಗಳಿಗೆ ಒತ್ತು ನೀಡತೊಡಗಿದರು. ಕುಂದರನಾಡಿನಲ್ಲಿ ನಡೆದ ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯ ಘಟನೆಗಳು ಇಡೀ ಮುಂಬಯಿ ಕರ್ನಾಟಕಕ್ಕೆ ಮಾದರಿಯಾಗಿದ್ದವು. ಬ್ರಿಟಿಷರ ವಿರೋಧ ಮತ್ತು ಕಠೋರ ಕಾನೂನುಗಳ ಹೊರತಾಗಿಯು ಇಲ್ಲಿನ ನಾಯಕರು, ಯುವಕರು, ಮಹಿಳೆಯರು ಮುಂತಾದವರು ಟೆಲಿಫೋನ ತಂತಿಯನ್ನು ಕತ್ತರಿಸುವುದು, ರೈಲು ಹಳಿಗಳನ್ನು ಕಿತ್ತು ಹಾಕುವುದು, ಬ್ರಿಟಿಷರ ಖಜಾನೆ ಲೂಟಿ ಮಾಡುವುದು, ಬ್ರಿಟಿಷ ಅಧಿಕಾರಿಗಳನ್ನು ಕೊಲ್ಲುವುದು ಮುಂತಾದ ತೀವ್ರಗಾಮಿ ಚಟುವಟಿಕೆಗಳಿಗೆ ತೊಡಗಿದರು. ಬೆಳಗಾವಿಯಿಂದ ಗೋಕಾಕವರೆಗಿನ ಪ್ರದೇಶವನ್ನು ಬ್ರಿಟಿಷರು ಡೆಂಜರಝೋನ್ (ಅಪಾಯವಲಯ) ಎಂದು ಘೋಷಿಸಿದ್ದರು. ಈ ಪ್ರದೇಶವನ್ನು ಕಾಯಲು ನೂರಾರು ಪೊಲೀಸರನ್ನು ನಿಯೋಜಿಸಲಾಗಿತ್ತು. ಬ್ರಿಟಿಷರು ಎರಡನೆಯ ಜಾಗತಿಕ ಯುದ್ಧದಲ್ಲಿ ತೊಡಗಿದ್ದರಿಂದ ಆಸ್ಟ್ರೇಲಿಯಾದ ಮಿಲಿಟರಿ ಬಳಸಿ ಕುಂದರನಾಡಿನ ಸ್ವಾತಂತ್ರ್ಯ ಚಳುವಳಿಯನ್ನು ಹತ್ತಿಕ್ಕಲು ಪ್ರಯತ್ನಿಸಲಾಯಿತು. ನೂರಾರು ನಾಯಕರು ಬ್ರಿಟಿಷರ ಕೋಪಕ್ಕೆ ಗುರಿಯಾಗಿ ಸೆರೆವಾಸ ಅನುಭವಿಸಬೇಕಾಯಿತು. ಕೆಲವರಿಗೆ ಗಲ್ಲು ಶಿಕ್ಷೆಯನ್ನು ವಿಧಿಸಲಾಯಿತು. ಇಂತಹ ಚಳುವಳಿಯ ಇತಿಹಾಸವನ್ನು ಪುನಃ ಕಟ್ಟಿಕೊಡುವ ಉದ್ದೇಶದಿಂದ

ಪ್ರಸ್ತುತ ವಿಷಯವನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಆ ಮೂಲಕ ಕುಂದರನಾಡಿನ ಪರಿಸರದಲ್ಲಿ ದೇಶಕ್ಕಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟದ್ದ ಮಹಾನ ನಾಯಕರ ತ್ಯಾಗ ಮತ್ತು ಬಲಿದಾನಗಳ ಸ್ವರೂಪ ಮತ್ತು ಮಹತ್ವ ತಿಳಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

## ೧.೨ ಅಧ್ಯಯನದ ವ್ಯಾಪ್ತಿ :

'ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡ ಕುಂದರನಾಡು ಪ್ರದೇಶ ಜಿಲ್ಲೆಯ ಮೂರು ದೊಡ್ಡ ತಾಲೂಕುಗಳಿಗೆ ವಿಸ್ತರಿಸಿದೆ. ಅಂದರೆ ಬೆಳಗಾವಿ, ಹುಕ್ಕೇರಿ ಮತ್ತು ಗೋಕಾಕ ತಾಲ್ಲೂಕು ಮಾತ್ರ ಸೀಮಿತಗೊಳಿಸಿ ಅಧ್ಯಯನ ಕೈಗೊಳ್ಳಲಾಗಿದೆ. ಈ ಕುಂದರನಾಡಿನ ಒಟ್ಟು ನಲವತ್ನಾಲ್ಕು ಹಳ್ಳಿಗಳು ಬರುತ್ತವೆ. ಹುಕ್ಕೇರಿ ತಾಲ್ಲೂಕಿನ ೨೧, ಗೋಕಾಕ ತಾಲ್ಲೂಕು ೧೪, ಬೆಳಗಾವಿ ತಾಲ್ಲೂಕನಲ್ಲಿ ೦೯ ಹಳ್ಳಿಗಳಿಗೆ ಅಧ್ಯಯನದ ವ್ಯಾಪ್ತಿಯನ್ನು ನಿಗದಿಗೊಳಿಸಲಾಗಿದೆ'. ಅಧ್ಯಯನದ ಸೂಕ್ಷ್ಮತೆ ಮತ್ತು ವಿಸ್ತಾರದ ದೃಷ್ಟಿಯಿಂದ ಕೇವಲ ಕುಂದರನಾಡಿನ ಪರಿಸರವನ್ನು ಮಾತ್ರ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಆದರೆ ಸಂದರ್ಭೋಚಿತವಾಗಿ ಜಿಲ್ಲೆಯ ಬೇರೆ-ಬೇರೆ ತಾಲ್ಲೂಕು ಪ್ರದೇಶವನ್ನು ಕೂಡಾ ಇಲ್ಲಿ ಉಲ್ಲೇಖಿಸಲಾಗಿದೆ. 'ಅಧ್ಯಯನದ ಕಾಲಾವಧಿಯನ್ನು ಕ್ರಿ.ಶ. ೧೯೦೦ ರಿಂದ ೧೯೪೭ರವರೆಗಿನ ಅವಧಿಗೆ ಸೀಮಿತಗೊಳಿಸಲಾಗಿದೆ. ಏಕೆಂದರೆ ಈ ಅವಧಿಯಲ್ಲಿಯೇ ಬೆಳಗಾವಿ ಜಿಲ್ಲೆ ಮತ್ತು ಕುಂದರನಾಡಿನಲ್ಲಿ ಸ್ವಾತಂತ್ರ್ಯ ಚಳುವಳಿಯ ಮಹತ್ವಪೂರ್ಣವಾದ ಘಟನೆಗಳು ಜರುಗಿದವು'. ಆದರೆ ೧೯೦೦ ಕ್ಕಿಂತ ಹಿಂದಿನ ಕೆಲ ಘಟನೆಗಳನ್ನು ಅಲ್ಲಲ್ಲಿ ಸಂದರ್ಭೋಚಿತವಾಗಿ ಬಳಸಲಾಗಿದೆ.

## ೧.೩ ಅಧ್ಯಯನದ ವಿಧಾನ :

ಪ್ರಸ್ತುತ ಸಂಶೋಧನೆಗೆ ಇತ್ತೀಚಿನ ಚಾರಿತ್ರಿಕ ಅಧ್ಯಯನದ ವಿಧಿ-ವಿಧಾನಗಳನ್ನು ಅನುಸರಿಸಲಾಗಿದೆ. ಇದೊಂದು ಚರಿತ್ರೆ ಶಿಸ್ತಿನ ಅಧ್ಯಯನವಾಗಿದೆ. ಅಧ್ಯಯನಕ್ಕೆ ಆಯ್ದುಕೊಂಡ ವಿಷಯವು ಬಹುತೇಕ ಕ್ಷೇತ್ರಕಾರ್ಯವನ್ನು ಅವಲಂಭಿಸಿದೆ. ಈ ಪರಿಸರದ ಸ್ವಾತಂತ್ರ್ಯ ಚಳುವಳಿಗಾರರ ಗ್ರಾಮಗಳಿಗೆ ಖುದ್ದಾಗಿ ಭೇಟಿ ನೀಡಲಾಗಿದೆ. ಅವರು ಬರೆದ ದಿನಚರಿ, ಡೈರಿ, ಬುಲೆಟಿನ್ ಮತ್ತು ಇತರ ದಾಖಲೆಗಳನ್ನು ಸಂಗ್ರಹಿಸಿ ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರ ಮನೆಗಳಿಗೆ ಮತ್ತು ಸಂಘ-ಸಂಸ್ಥೆಗಳಿಗೆ ಭೇಟಿ ನೀಡಿ ಅವರ ಬಗ್ಗೆ ಮಾಹಿತಿ ಮತ್ತು ಛಾಯಾ ಚಿತ್ರಗಳನ್ನು ಸಂಗ್ರಹಿಸಲಾಗಿದೆ. ಇದರ ಜೊತೆಗೆ ಬೇರೆ ರಾಜ್ಯಗಳ ಪತ್ರಾಗಾರ, ಗ್ರಂಥಾಲಯ ಮತ್ತು ಇತರ ಸಂಸ್ಥೆಗಳಲ್ಲಿ ದೊರೆಯುವ ದಾಖಲೆಗಳನ್ನು ಕೂಡಾ ಬಳಸಿಕೊಳ್ಳಲಾಗಿದೆ. ಹೀಗೆ ಸಂಗ್ರಹಿಸಿದ ಮಾಹಿತಿಗಳನ್ನು ಕಾಲಾನುಕ್ರಮದಲ್ಲಿ ಜೋಡಿಸಿ ಅವುಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ. ಇದು ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕ ಅಧ್ಯಯನವಾಗಿದೆ. ಆ ಮೂಲಕ ಕುಂದರನಾಡಿನಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯ ವಿವಿಧ ಆಯಾಮಗಳನ್ನು ಕಟ್ಟಿಕೊಡಲಾಗಿದೆ. ಪ್ರಾಥಮಿಕ ಹಾಗೂ ಮಾಧ್ಯಮಿಕ ಆಕರಗಳನ್ನು ಹೆಚ್ಚಾಗಿ ಬಳಸಿಕೊಳ್ಳಲಾಗಿದೆ. ಕೊನೆಯ ಟಿಪ್ಪಣಿಗಳಲ್ಲಿ ವಿವರಗಳನ್ನು ನೀಡಿದ್ದು ಪೂರಕವಾಗಿ ಅನುಬಂಧಗಳಲ್ಲಿ ಛಾಯಾಚಿತ್ರ, ನಕ್ಷೆ, ಸ್ವಾತಂತ್ರ್ಯ ಹೋರಾಟಗಾರರ ವಿವರಗಳನ್ನು ನೀಡಲಾಗಿದೆ.

## ೧.೪ ಪೂರ್ವ ಅಧ್ಯಯನಗಳ ಸಮೀಕ್ಷೆ :

ಪ್ರಸ್ತುತ ನಾನು ಅಧ್ಯಯನಕ್ಕೆ ಆಯ್ದುಕೊಂಡ ವಿಷಯಕ್ಕೆ ಸಂಬಂಧಿಸಿದಂತೆ ವಿವಿಧ ಆಯಾಮಗಳಿಗೆ ಮಾಹಿತಿ ಮತ್ತು ವಿಷಯಗಳನ್ನು ಸಂಗ್ರಹಿಸಲು ಪ್ರಯತ್ನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಹಲವಾರು ವಿದ್ವಾಂಸರ ಬಿಡಿಲೇಖನಗಳನ್ನು ಮತ್ತು ಅವರು ರಚಿಸಿದ ಪ್ರಾಥಮಿಕ ಮತ್ತು ಅನುಷಂಗಿಕ ಕೃತಿಗಳನ್ನು ಪರಾಮರ್ಶಿಸಲಾಗಿದೆ. ಈ ಪರಿಸರ ಕುರಿತು ಈಗಾಗಲೇ ಹಲವಾರು ವಿದ್ವಾಂಸರು ಕೃತಿಗಳನ್ನು ರಚಿಸಿರುವರು. ಅವುಗಳ ಪರಾಮರ್ಶೆ ಈ ರೀತಿಯಾಗಿವೆ. ರಾಮಚಂದ್ರ ವಡವಿಯವರ "ಕುಂದರನಾಡಿನಲ್ಲಿ ಒಂದು ಅಧ್ಯಾಯ ಛೋಡೋ ಭಾರತ ಪರ್ವ" ಕೃತಿಯಲ್ಲಿ ಈ ನಾಡಿನಲ್ಲಿ ನಡೆದ ಕ್ವಿಟ್ ಇಂಡಿಯಾ ಚಳುವಳಿ ಕುರಿತು ಸವಿವರವಾಗಿ ತಿಳಿಸಿದ್ದಾರೆ. ಚಳುವಳಿಯಲ್ಲಿ ಭಾಗವಹಿಸಿದ ಎಲ್ಲ ಮಹನೀಯರ ಮಾಹಿತಿಗಳನ್ನು, ಅವರು ಎದುರಿಸಿದ ತೊಂದರೆಗಳನ್ನು ತಿಳಿಸಿದ್ದಾರೆ. ಇದರ ಜೊತೆಗೆ ೧೯೩೦-೩೨ರ ಅವಧಿಗೆ ಚಳುವಳಿಯ ಕೆಲ ಘಟನಾವಳಿಗಳನ್ನು ಉಲ್ಲೇಖಿಸಲಾಗಿದೆ. ಪ್ರೊ. ಸಂಗಮೇಶ ಹಂಡಗಿ ಮತ್ತು ಎನ್. ಪಿ. ದಾಸಪ್ಪಗೌಡರ ಸಂಪಾದಕತ್ವದಲ್ಲಿ "ಕುಂದರನಾಡಿನ ಕುಂದಣ" ಸ್ಮರಣ ಸಂಚಿಕೆಯಲ್ಲಿ ಸ್ವಾತಂತ್ರ್ಯ ಚಳುವಳಿಯ ಕೇಂದ್ರಸ್ಥಾನವಾಗಿದ್ದ ಹುದಲಿಯ ಬಗ್ಗೆ ವಿವರಣೆ ನೀಡಿದ್ದಾರೆ. ಇಲ್ಲಿ ಗಂಗಾಧರರಾವ ದೇಶಪಾಂಡೆಯವರು ಸ್ಥಾಪಿಸಿದ 'ಕುಮರಿ ಆಶ್ರಮ'ದಲ್ಲಿ ಹೇಗೆ ಚಳುವಳಿಯ ರೂಪರೇಷೆಗಳು ಸಿದ್ಧಗೊಳ್ಳುತ್ತಿದ್ದವು ಎಂಬುದನ್ನು ತಿಳಿಸಿದ್ದಾರೆ. ಜೊತೆಗೆ ಹುದಲಿಯಲ್ಲಿನ ಖಾದಿ ಕೇಂದ್ರ, ಗಾಂಧೀಜಿಯವರ ಭೇಟಿ ಮತ್ತು ಬ್ರಿಟಿಷರ ದಮನಕಾರಿ ನೀತಿ ಮುಂತಾದ ಅಂಶಗಳನ್ನು ಇಲ್ಲಿ ವಿವರಿಸಿದ್ದಾರೆ. ಶ್ರೀ ಎಲ್. ಎಸ್. ಶಾಸ್ತ್ರೀಯವರ ನೇತೃತ್ವದಲ್ಲಿ ರಚಿತವಾದ "ಸ್ವಾತಂತ್ರ್ಯ ಸಂಗ್ರಾಮ" ಕೃತಿಯಲ್ಲಿ ಬೆಳಗಾವಿ ಜಿಲ್ಲಾ ಪರಿಸರದಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯ ಕುರಿತು ಮಾಹಿತಿ ನೀಡಲಾಗಿದೆ. ಅದರಲ್ಲಿ ೧೯೨೦ರಿಂದ ೧೯೪೨ರವರೆಗೆ ಜಿಲ್ಲೆಯ ಬೇರೆ-ಬೇರೆ ಪ್ರದೇಶಗಳಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯ ವಿವಿಧ ಆಯಾಮಗಳ ಕುರಿತು ಚರ್ಚಿಸಲಾಗಿದೆ. ಡಾ. ಸರೋಜನಿ ಚವಲಾರರವರ "ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು" ಎಂಬ ಕೃತಿಯಲ್ಲಿ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಹೋರಾಟಗಾರರ ಕಿರು ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಚಂದ್ರಶೇಖರ ಅಕ್ಕಿ ಮತ್ತು ಮಹಾಲಿಂಗ ಮಂಗಿಯವರ ಸಂಪಾದಕತ್ವದ "ಗೋಕಾವಿ ಸಿರಿ ಸಂಪದ" ಕೃತಿಯಲ್ಲಿ ಗೋಕಾಕ ತಾಲ್ಲೂಕು ಮತ್ತು ಕುಂದರನಾಡಿನಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯ ಮಾಹಿತಿಗಳನ್ನು ನೀಡಿದ್ದಾರೆ. ಬಿ. ವಾಯ್. ದೇಶಪಾಂಡೆ (ಅಣ್ಣೂ ಗುರೂಜಿ)ಯವರು ಬರೆದ "ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಸಮರ" ಸಂಪುಟ-೧ ಮತ್ತು ೨ ಕೃತಿಗಳಲ್ಲಿ ಬೆಳಗಾವಿ ಜಿಲ್ಲಾ ಪರಿಸರ ಮತ್ತು ಕುಂದರನಾಡಿನ ನಡೆದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಮಹನೀಯರು, ಸಂಘ-ಸಂಸ್ಥೆ, ಆಂದೋಲನದ ಪ್ರಮುಖ ಘಟನೆಗಳು ಮತ್ತು ಬ್ರಿಟಿಷರ ನೀತಿಗಳನ್ನು ಕುರಿತು ವಿವರಿಸಿದ್ದಾರೆ. ಸೋಮಲಿಂಗ ಮಳಗಲಿ ಮತ್ತು ಅಚ್ಯುತ ವಡವಿಯವರು ರಚಿಸಿದ "ಸಚಿತ್ರ ಭಾರತ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸ ಮತ್ತು ಗಾಂಧೀಜಿ" ಎಂಬ ಕೃತಿಯಲ್ಲಿ ಬೆಳಗಾವಿಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ ಅಧಿವೇಶನ ಮತ್ತು ೧೯೩೭ರ ಹುದಲಿಗೆ ಗಾಂಧೀಜಿ ಭೇಟಿ ಕೊಟ್ಟು ಮಾಹಿತಿಗಳನ್ನು

ತಿಳಿಸಿದ್ದಾರೆ. ಸೂರ್ಯನಾಥ ಕಾಮತರವರ "ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು" ಸಂ.೧, ೨ ಮತ್ತು ೩ ಕೃತಿಗಳಲ್ಲಿ ಕರ್ನಾಟಕದ ಎಲ್ಲ ಜಿಲ್ಲೆಗಳ ಸ್ವಾತಂತ್ರ್ಯ ಚಳುವಳಿಗಾರರ ಮಾಹಿತಿಯನ್ನು ವಿವರವಾಗಿ ನೀಡಿದ್ದಾರೆ. ಅದರಲ್ಲಿ ಬೆಳಗಾವಿ ಜಿಲ್ಲೆಯ ಬೇರೆ-ಬೇರೆ ಕಾಲಘಟ್ಟದ ಸ್ವಾತಂತ್ರ್ಯ ಚಳುವಳಿಯ ಮಾಹಿತಿಗಳನ್ನು ಕೂಡಾ ನೀಡಿದ್ದಾರೆ. ಆರ್. ಎಚ್. ಕುಲಕರ್ಣಿರವರ "ಫ್ರೀಡಂ ಮೂವ್ಮೆಂಟ್ ಇನ್ ಬೆಳಗಮ್ ಡಿಸ್ಟ್ರೀಕ್ಟ್" ಕೃತಿಯಲ್ಲಿ ಬೆಳಗಾವಿ ಪರಿಸರದಲ್ಲಿ ನಡೆದ ಚಳುವಳಿಯ ಪಕ್ಷಿನೋಟವನ್ನು ನೀಡಿದ್ದಾರೆ. ಆರ್. ಎಸ್. ನಾರಾಯಣರವರ "ಬಿಲ್ಡರ್ಸ್ ಆಫ್ ಮಾಡರ್ನ ಇಂಡಿಯಾ – ಗಂಗಾಧರರಾವ ದೇಶಪಾಂಡೆ" ಕೃತಿಯಲ್ಲಿ ಖಾದಿಯ ಪ್ರಚಾರ ಮತ್ತು ಚಳುವಳಿಯಲ್ಲಿ ದೇಶಪಾಂಡೆಯವರ ಪಾತ್ರ ಕುರಿತು ಸವಿವರವಾಗಿ ವಿವರಿಸಿದ್ದಾರೆ. ಜೇಮ್ಸ ಕ್ಯಾಂಬೇಲ್‌ರ "ಗೆಝೆಟಿಯರ್ ಆಫ್ ಬಾಂಬೈ ಪ್ರೆಸಿಡೆನ್ಸಿ – ವೆಲ್ಯೂಮ್, XXI, ಬೆಳಗಮ್" ಮತ್ತು ಸೂರ್ಯನಾಥ ಕಾಮತರು ಸಂಪಾದಿಸಿದ "ಬೆಳಗಮ್ ಡಿಸ್ಟ್ರೀಕ್ಟ ಗೆಝೇಟಿಯರ್"ಗಳಲ್ಲಿ ಸ್ವಾತಂತ್ರ್ಯ ಚಳುವಳಿಯ ವಿವರಗಳನ್ನು ಸೂಕ್ಷ್ಮವಾಗಿ ತಿಳಿಸಿದ್ದಾರೆ. ಅಪ್ಪಣ್ಣ ಬ. ವಗ್ಗರ ಅವರ "ಮುಂಬೈ ಕರ್ನಾಟಕದ ಸಂಸ್ಥಾನಗಳಲ್ಲಿ ಸ್ವಾತಂತ್ರ್ಯ ಹೋರಾಟ" ಹಾಗೂ ಎಸ್. ವ್ಹಿ. ಕಾನಡೆಯವರ "ರೋಲ್ ಆಫ್ ಪ್ರೆಸ್ ಇನ್ ಇಂಡಿಯನ್ ನ್ಯಾಷಿನಲಿಸ್ಟ ಮೂವ್ಮೆಂಟ್ ಇನ್ ಕರ್ನಾಟಕ (೧೫೫೬-೧೯೪೭)" ಇವು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾದ ಸಂಶೋಧನ ಅಪ್ರಕಟಿತ ಮಹಾ ಪ್ರಬಂಧಗಳನ್ನು ಅವಲೋಕಿಸಲಾಗಿದೆ. ಎಮ್. ವ್ಹಿ. ಕೃಷ್ಣರಾವ್ ಮತ್ತು ಜಿ. ಎಸ್. ಹಾಲಪ್ಪರವರ "ಹಿಸ್ಟರಿ ಆಫ್ ಫ್ರೀಡಂ ಮೂವ್ಮೆಂಟ್ ಇನ್ ಕರ್ನಾಟಕ" ಸಂ.೧ ಮತ್ತು ೨ ಕೃತಿಗಳಲ್ಲಿ ಇಡೀ ಕರ್ನಾಟಕ ರಾಜ್ಯದ ಸ್ವಾತಂತ್ರ್ಯ ಚಳುವಳಿಯನ್ನು ಕಿತ್ತೂರಿನ ಘಟನೆಯಿಂದ ಭಾರತ ಸ್ವಾತಂತ್ರ್ಯದವರೆಗಿನ ಬೇರೆ-ಬೇರೆ ಘಟನೆಗಳು, ಹೋರಾಟಗಳು, ಸಂಘ-ಸಂಸ್ಥೆಗಳು, ಲಾವಣಿಗಳು ಮುಂತಾದ ಅಂಶಗಳನ್ನು ಸವಿವರವಾಗಿ ತಿಳಿಸಿದ್ದಾರೆ.

ಈ ಎಲ್ಲ ಕೃತಿಗಳಲ್ಲಿ ಕುಂದರನಾಡು ಮತ್ತು ಬೆಳಗಾವಿ ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯ ಕುರಿತು ಸಂಪೂರ್ಣವಾದ ವಿಶ್ಲೇಷಣಾತ್ಮಕ ಅಧ್ಯಯನದ ಕೊರತೆ ಕಂಡುಬರುತ್ತದೆ. ಅಲ್ಲದೆ ಇಲ್ಲಿ ಸೂಕ್ಷ್ಮತರಹದ ಅಧ್ಯಯನವನ್ನು ಕೈಗೊಂಡು ಈ ಕೊರತೆಯನ್ನು ತುಂಬಿಕೊಡಲು ಪ್ರಯತ್ನಿಸಲಾಗಿದೆ. ಆ ಮೂಲಕ ಕುಂದರನಾಡಿನ ಸ್ವಾತಂತ್ರ್ಯ ಚಳುವಳಿಯ ಬಗ್ಗೆ ಸೂಕ್ಷ್ಮತರವಾದ ಅಧ್ಯಯನ ಕೈಗೊಳ್ಳಲಾಗಿದೆ.

## ೧.೫ ಅಧ್ಯಯನದ ಸ್ವರೂಪ :

ಈ ಮಹಾಪ್ರಬಂಧವು ೬ ಅಧ್ಯಾಯಗಳನ್ನು ಒಳಗೊಂಡಿದೆ.

* ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಪೂರ್ವ ಅಧ್ಯಯನಗಳ ಸಮೀಕ್ಷೆ ಮತ್ತು ಸ್ವರೂಪ ಇವುಗಳನ್ನು ವಿವರಿಸಲಾಗಿದೆ.

* ಎರಡನೆಯ ಅಧ್ಯಾಯದಲ್ಲಿ ಕುಂದರನಾಡಿನ ಭೌಗೋಳಿಕ ಅಂಶಗಳು ಮತ್ತು ಹಾಗೂ ಚಾರಿತ್ರಿಕ ಸಂಗತಿಗಳನ್ನು ದಾಖಲಿಸಿ ಅಧ್ಯಯನಕ್ಕೆ ಪ್ರಸ್ತಾವನೆ ನೀಡಲಾಗಿದೆ.
* ಮೂರನೆಯ ಅಧ್ಯಾಯವು ಕುಂದರನಾಡಿನ ಸ್ವಾತಂತ್ರ್ಯ ಚಳುವಳಿಯ ಚಾರಿತ್ರಿಕ ಹಿನ್ನೆಲೆ ಮತ್ತು ಸ್ವರೂಪವನ್ನು ವಿಶ್ಲೇಷಿಸುತ್ತದೆ.
* ನಾಲ್ಕನೆಯ ಅಧ್ಯಾಯದಲ್ಲಿ ಸ್ವಾತಂತ್ರ್ಯ ಚಳುವಳಿಯ ಪ್ರಮುಖ ಆಯಾಮಗಳನ್ನು ಗುರುತಿಸಿ ವಿವರಿಸಲಾಗಿದೆ.
* ಐದನೆಯ ಅಧ್ಯಾಯದಲ್ಲಿ ಕುಂದರನಾಡಿನ ಸ್ವಾತಂತ್ರ್ಯ ಹೋರಾಟಗಾರರು ಮತ್ತು ಹೋರಾಟದ ಅನನ್ಯತೆಯ ಕುರಿತು ಶೋಧಿಸಲಾಗಿದೆ.
* ಆರನೆಯ ಅಧ್ಯಾಯವು ಸಮಾರೋಪ ಇಲ್ಲಿ ಅಧ್ಯಯನದ ಫಲಿತಗಳನ್ನು ಕ್ರೋಢೀಕರಿಸಲಾಗಿದೆ. ಜೊತೆಗೆ ಅಧ್ಯಯನದ ಹೊಸ ಸಾಧ್ಯತೆಗಳನ್ನು ಸೂಚಿಸಲಾಗಿದೆ.

ಹೀಗೆ ಪ್ರಸ್ತುತ ಅಧ್ಯಯನವು ಒಂದು ಚಿಂತನ ಕ್ರಮವನ್ನು ರೂಪಿಸಿಕೊಂಡಿದೆ.

# ಅಧ್ಯಾಯ - ೨

# ಕುಂದರನಾಡಿನ ಭೌಗೋಳಿಕ ಅಂಶಗಳು ಮತ್ತು ಚರಿತ್ರೆ

## ೨.೧ ಕುಂದರನಾಡಿನ ಪದ ನಿಷ್ಪತ್ತಿ :

ಕುಂದರನಾಡು ಐತಿಹಾಸಿಕವಾಗಿ ಮತ್ತು ರಾಜಕೀಯವಾಗಿ ಅತ್ಯಂತ ಪ್ರಸಿದ್ಧಿಯನ್ನು ಪಡೆದ ಪ್ರದೇಶ. ಬೆಳಗಾವಿ ಜಿಲ್ಲೆಯ ಹುಕ್ಕೇರಿ, ಗೋಕಾಕ ಮತ್ತು ಬೆಳಗಾವಿ ತಾಲೂಕಿನ ಈ ಪ್ರದೇಶಕ್ಕೆ ಕುಂದರನಾಡು ಎಂದು ಕರೆಯುವರು. ಪ್ರೊ. ಶಿವಲಿಂಗಪ್ಪಾ ಭಾವಿಕಟ್ಟಿಯವರು ಕುಂದರನಾಡನ್ನು ಕುರಿತು ಹೀಗೆ ಹೇಳುತ್ತಾರೆ. "ಕರ್ನಾಟಕವನ್ನಾಳಿದ ಅರಸು ಮನೆತನಗಳಲ್ಲಿ ಸವದತ್ತಿಯ ರಟ್ಟರು ಆಳಿದ ಕುಹುಂಡಿ ಮೂರುಸಾವಿರ ನಾಡಿನ ಒಂದು ಭಾಗವೇ ಕುಂದರನಾಡು"[೧]. 'ಕುಂದರು' ಎಂದರೆ ಹಿಂದುಳಿದವರು, ಕಾಡಾಡಿಗಳು ಎಂಬ ಅರ್ಥವಿದೆ. ಇದಲ್ಲದೆ ಕುಂದ ಎಂದರೆ ಚಿಕ್ಕ ಕಾಡು, ಗುಡ್ಡ ಬೆಟ್ಟಗಳ ಪ್ರದೇಶ. ಕಾಡಿನಲ್ಲಿರುವ ಹಳ್ಳಿಗಾಡು ಜನ ಸಮುದಾಯದ ನಾಡೇ ಕುಂದರನಾಡು. ಕುಂದರನಾಡಿನವರಿಗೆ ಗುಡದಳ್ಳಿಯ ಜನರೆಂದು ಕರೆಯುತ್ತಾರೆ. ದಿವಂಗತ ಬಸವರಾಜ ಕಟ್ಟಿಮನಿಯವರು ಹೇಳುವಂತೆ 'ಕುಂದರಿಗಿಯ ನಾಡು ಕುಂದರನಾಡಾಗಿರಲು ಸಾಕು'. ಕುಂದರಗಿಯು ಮಾರ್ಕಂಡೇಯ ನದಿತೀರದ ಪುಟ್ಟ ಹಳ್ಳಿ. ಇದು ಹಿಂದೊಮ್ಮೆ ಪಾಳೆಯದ ಪಟ್ಟಾಗಿತ್ತು. ಇಲ್ಲಿ ಅನೇಕ ಐತಿಹಾಸಿಕ ಪಳಿಯುಳಿಕೆಗಳಿವೆ. ಕುಂದರನಾಡು ಕುಹುಂಡಿ ಮೂರುಸಾವಿರ ನಾಡೆನ್ನುವುದಕ್ಕಿಂತ ಕುಂಡಿ ಮೂರುಸಾವಿರ ನಾಡಿನ ಒಂದು ಭಾಗವೆನ್ನುವುದು ಹೆಚ್ಚು ಸಮಂಜಸ. ಇದು ಒಪ್ಪತಕ್ಕ ಮಾತು. 'ಕುಂದರ'ವೆಂಬ ಪದಕ್ಕೆ ಕೋಶದಲ್ಲಿ ವಿಷ್ಣು, ಒಂದು ಬಗೆಯ ಔಷಧಿ ಹುಲ್ಲು ಇತ್ಯಾದಿ ಅರ್ಥಗಳನ್ನು ನೀಡಲಾಗಿದೆ. ಪ್ರಾಯಶಃ ವಿಶಿಷ್ಟ ಸಸ್ಯಸಂಪತ್ತು ಹೊಂದಿದ ನಾಡು ಇದಾಗಿರಬಹುದಾಗಿದೆ.

ಒಂದು ಕಾಲಕ್ಕೆ ಕುಂದರನಾಡು ಕಾನನ ಶ್ರೇಣಿಗಳಿಂದ ರಮ್ಯವೆನಿಸಿತ್ತು, ಆದರೆ ಇಂದು ಕಾಡು ಕಣ್ಮರೆಯಾಗಿದೆ. ಜನಪದರು ಈ ನಾಡಿಗೆ ಇಂದು 'ಕುಲಗೇಡಿ ಕುಂದರನಾಡೆ'ಂದು ಕರೆಯುತ್ತಾರೆ. ಚಿಗಲದಿನ್ನಿಯ ಗುಡದಪ್ಪಾ ನಾಯ್ಕನು ಕುಂದರನಾಡನ್ನಾಳಿದ ಬಗೆಗೆ ಹೆಳವರಲ್ಲಿ ಉಲ್ಲೇಖಗಳಿವೆ. "ಕುಂದರನಾಡ ಕಡೀಹಳ್ಳಿ ಕನಗಾಂವಿ ಅಲ್ಲಿ ನೆಲೆಸಿದಾಳ ಕೋಲ್ಲಾಪುರ ಅಂಬಾ ಭವಾನಿ" ಎಂದು ಲಾವಣಿಕಾರ ಹಾಡಿದ್ದುಂಟು. ಗೋಕಾಕ ತಾಲೂಕಿನ ಕನಗಾಂವಿ ಕುಂದರನಾಡಿನ

ಪೂರ್ವದಂಚಿನ ಕೊನೆಯ ಹಳ್ಳಿ. ಕನಗಾಂವಿ ಕನ್ನಮ್ಮಾ ಗ್ರಾಮ ದೇವತೆಯನ್ನು ಕೊಲ್ಲಾಪೂರ ಅಂಬಾತಾಯಿ ಎಂದು ಈ ಲಾವಣಿಕಾರ ಕೊಂಡಾಡಿದ್ದಾನೆ. "ಕುಂದರನಾಡಿನ ಪೂರ್ವದ ಸೀಮೆಯ ಅರಸಿ ಕನಕಾಂಬೆ ರಕ್ಷಕ ಶಕ್ತಿಯಾದರೆ, ಪಶ್ಚಿಮದ ಗಡಿ ಚಿಗಲದಿನ್ನಿಯ ಕಮಲಾಂಬೆ ನಾಡ ರಕ್ಷಿಪ ಸಿರಿದೇವಿ"[೨] ಎಂದು ಕವಿ ಹಾಡಿದ್ದಾರೆ.

## ೨.೨ ಕುಂದರನಾಡಿನ ವಿಸ್ತಾರ :

ಕುಂದರನಾಡು ಭಾರತೀಯ ಸ್ವಾತಂತ್ರ್ಯ ಚಳುವಳಿಯ ಇತಿಹಾಸದಲ್ಲಿ ಗಮನ ಸೆಳೆಯುವ ಪ್ರದೇಶವಾಗಿದೆ. ಇದು ಐತಿಹಾಸಿಕವಾಗಿ ಅತ್ಯಂತ ಪುರಾತನವಾದ ಚರಿತ್ರೆಯನ್ನೊಳಗೊಂಡ ಸಾಂಸ್ಕೃತಿಕ ಪ್ರದೇಶವೂ ಹೌದು. ಈ ಪ್ರದೇಶವು ಬೆಳಗಾವಿ ಜಿಲ್ಲೆ ಪಶ್ಚಿಮ ದಿಕ್ಕಿನ ಹುಕ್ಕೇರಿ, ಗೋಕಾಕ ಮತ್ತು ಬೆಳಗಾವಿ ತಾಲೂಕುಗಳನ್ನು ಒಳಗೊಂಡಿದೆ. ಈ ಮೂರು ತಾಲೂಕುಗಳಲ್ಲಿ ಬರುವ ನಲವತ್ನಾಲ್ಕು ಹಳ್ಳಿಗಳ ಈ ಒಟ್ಟು ಪ್ರದೇಶಕ್ಕೆ ಕುಂದರನಾಡು ಎಂದು ಕರೆಯುತ್ತಾರೆ. ಕುಂದರನಾಡಿನ ಮೇರೆಯನ್ನು ಹೀಗೆ ಗುರುತಿಸಲಾಗಿದೆ. ಪೂರ್ವಕ್ಕೆ ಏಳುಪಟ್ಟಿ, ಪಶ್ಚಿಮಕ್ಕೆ ಚಿಕ್ಕಲದಿನ್ನಿ, ದಕ್ಷಿಣಕ್ಕೆ ತುಮ್ಮರಗುದ್ದಿ, ಉತ್ತರಕ್ಕೆ ರಾಮಗಾನಟ್ಟಿ ಇನ್ನೊಂದು ಉಲ್ಲೇಖದ ಪ್ರಕಾರ ಇದರ ಉತ್ತರ ಸೀಮೆ ಘಟಪ್ರಭಾ ನದಿ, ಹಿಡಕಲ್ ಜಲಾಶಯ, ಪೂರ್ವಕ್ಕೆ ಮಾರ್ಕಂಡೇಯ ನದಿಯ ಗೊಡಚಿನಮಲ್ಕಿ ಜಲಪಾತ. ದಕ್ಷಿಣ ಮತ್ತು ಪಶ್ಚಿಮ ದಿಕ್ಕಿಗೆ ತಮ್ಮರಗುದ್ದಿಯ ಪಶ್ಚಿಮ ಭಾಗವನ್ನು ಸುತ್ತುವರಿದಂತಹ ಸಹ್ಯಾದ್ರಿ ಕಿರು ಪರ್ವತಾವಳಿ ಅಂದರೆ ಈ ಪ್ರದೇಶದ ವ್ಯಾಪ್ತಿಯಲ್ಲಿ ನಲವತ್ನಾಲ್ಕು ಹಳ್ಳಿಗಳು ಬರುತ್ತಿದ್ದು, ಇದಕ್ಕೆ ಕುಂದರನಾಡು ಎಂದು ಕರೆಯುತ್ತಾರೆ.

## ೨.೩ ಕುಂದರನಾಡಿನ ಐತಿಹ್ಯ :

ಪ್ರಾಚೀನ ಕಾಲದ "ರಾಮಾಯಣ ಕಾಲದ ದಂಡಕಾರಣ್ಯದ ಭಾಗವಿದು. ವನವಾಸ ಕಾಲದಲ್ಲಿ ಶ್ರೀ ರಾಮನು ತಂಗಿ ಮುಂದೆ ಕಿಷ್ಕಂದೆ ಕಡೆಗೆ ಸಾಗಿದನೆಂದು ಲಭ್ಯವಿದೆ"[೩] ಹೇಳಲಾಗುತ್ತಿದೆ. ಮಹಾಭಾರತದಲ್ಲಿಯೂ ಈ ಪ್ರದೇಶದ ಬಗ್ಗೆ ಉಲ್ಲೇಖವಿದೆ. "ಪಾಂಡವರು ವನವಾಸ ಕಾಲದಲ್ಲಿ ಈ ಪ್ರದೇಶದಲ್ಲಿ ಸಂಚರಿಸಿದ ಬಗ್ಗೆ ರಂಗದೋಳಿ ಮತ್ತು ಕರಿಕಟ್ಟಿ ಹತ್ತಿರ ಪೂಜೆಗೊಳ್ಳುತ್ತಿರುವ ಭೀಮನ ಪಾದಗಳೆಂದು ಗುರುತಿಸುತ್ತಿರುವುದು ಹಾಗೂ ಅದರ ಹತ್ತಿರ ಭೀಮಗಡ ಎಂಬ ಊರು ಇರುವುದು ಇದಕ್ಕೆ ಸಾಕ್ಷಿ ಎನಿಸಿದೆ"[೪]. ಈ ಪ್ರದೇಶದಲ್ಲಿ ಮಾರ್ಕಾಂಡೇಯ ಋಷಿ ತಪಸ್ಸು ಮಾಡಿದನೆಂದು ಹೇಳುತ್ತಾರೆ.

"ಎಂಟನೆಯ ಶತಮಾನದ ಶಿಲಾಲೇಖದನ್ವಯ ಹೊಂಗಲಬೀಡು, ಪರಸನಕಾಡು, ಕುಂತಲನಾಡು, ಕುಂದನನಾಡು, ಕುಂದರನಾಡು ಎಂದು ಗುರುತಿಸಲ್ಪಟ್ಟಿದೆ ಎಂದು ಡಾ. ಸಿ. ಎನ್. ದೇ ಉಲ್ಲೇಖಿಸುತ್ತಾರೆ. ಕಲ್ಯಾಣ ಚಾಲುಕ್ಯರ ಆಡಳಿತಕ್ಕೆ ಕುಂದರಗಿಯೇ ಕುಂದರನಾಡಿನ ಕೇಂದ್ರವಾಗಿತ್ತೆಂದೂ ಮತ್ತು ಕುಂದರರಾಜ ಎಂಬುವನು ಕಲ್ಯಾಣ ಚಾಲುಕ್ಯರಿಗೆ ರಾಜ್ಯದಾಡಳಿತದ ಈ ಭಾಗವನ್ನು ಒಪ್ಪಿಸಿದನೆಂದು ಕೆಲವು ಕಡೆ ಉಲ್ಲೇಖಿಸುತ್ತಾರೆ"[೫].

ಕುಂದರನಾಡನ್ನು ಕುರಿತು ಸ್ವಾತಂತ್ರ್ಯ ಹೋರಾಟಗಾರರಾದ, "ಕರ್ನಾಟಕದ ಸಿಂಹ ಗಂಗಾಧರರಾವ್ ದೇಶಪಾಂಡೆಯವರು ತಮ್ಮ ಆತ್ಮ ಚರಿತ್ರೆಯಲ್ಲಿ ಇದರ ಮೇಲಿನಂತೆ ಕುಂದರನಾಡಿನ ಮೇಲೆ ಗುರುತಿಸಿದ್ದಾರೆ. ಪಾಶ್ಚಾಪುರ ಪರಗಣಾದಲ್ಲಿ ಕುಂದರಗಿ ಸಮ್ಮತ ಅಂಕಲಗಿ ಸಮ್ಮತದ ಗ್ರಾಮಗಳೇ ಕುಂದರನಾಡು. ಗುಡಕೆತ್ತರಲ್ಲಿರುವ ಹೆಳವರು ಊರೂರಿಗೆ ಬಂದು ನಾಡವರ ಜನರ ಪ್ರಾಚೀನ ಇತಿಹಾಸ ಮತ್ತು ವಂಶಾವಳಿಯನ್ನು ವಿವರಿಸುತ್ತಾರೆ. ಅವರ ಪ್ರಕಾರ ಕುಂದರನಾಡಿನ ವಿಸ್ತಾರವನ್ನು ಹೀಗೆ ಗುರುತಿಸಬಹುದು. ಕುಂದರನಾಡು ದಕ್ಷಿಣೋತ್ತರ ಹದಿನೈದು ಮೈಲು ಮತ್ತು ಪೂರ್ವ ಪಶ್ಚಿಮವಾಗಿ ಹನ್ನೆರಡು ಮೈಲು ವಿಸ್ತಾರದ ಪ್ರದೇಶವಾಗಿದೆ. ಒಟ್ಟು ಸುಮಾರು ಎರಡನೂರು ಚದರ ಮೈಲು ಇದರ ಕ್ಷೇತ್ರವಿದೆ"[೬]. ಈ ಪ್ರದೇಶದಲ್ಲಿ ಗುಡ್ಡ, ಬೆಟ್ಟ, ಹಳ್ಳ, ನದಿಗಳು ಹರಿದಿವೆ. ಇದರಲ್ಲಿ ವಿಶೇಷವೆಂದರೆ ಈ ಪುಟ್ಟ ಕುಂದರನಾಡಿನಲ್ಲಿ ಬಳ್ಳಾರಿ ಹಳ್ಳ ಹರಿದಿದ್ದು, ಅನೇಕ ಊರುಗಳ ಇಕ್ಕೆಲಗಳಲ್ಲಿ ಸಾಗಿ ಆ ಭೂಪ್ರದೇಶವನ್ನು ಶ್ರೀಮಂತಗೊಳಿಸಿದೆ. ಇದು ಪಶ್ಚಿಮದಿಂದ ಹರಿದು ಕುಮರಿ, ರಾಮಾಪುರ, ಹುದಲಿ, ಸುಲಧಾಳ, ಮಲಾಮರಡಿ, ಗುಜನಾಳ, ಬೂದಿಹಾಳ, ಎದ್ದಲಗುಡ್ಡ, ಅಂಕಲಗಿ, ಅಕ್ಕತಂಗೇರಹಾಳ ಇವುಗಳ ಬದಿಯಲ್ಲಿ ಹರಿದು ಕುಂದರಗಿ ದಾಸನಟ್ಟಿಯ ಹತ್ತಿರ ಮಾರ್ಕಂಡೇಯ ನದಿಗೆ ಕೂಡುತ್ತದೆ. ಈ ಮಾರ್ಕಂಡೇಯ ನದಿಯು ಪಶ್ಚಿಮ ತುದಿಯಿಂದ ಕುಂದರನಾಡನ್ನು ಪ್ರವೇಶಿಸಿ ಪೂರ್ವಾಭಿಮುಖವಾಗಿ ಹರಿಯುತ್ತ ರಂಗಧೋಳಿ, ಶಿರೂರ, ಹಗೆದಾಳ, ಹರನಕೊಳ್ಳ, ಪಾಶ್ಚಾಪುರದಿಂದ ಮುಂದೆ ಸಾಗಿ ಗೊಡಚಿನಮಲ್ಕಿ ಜಲಪಾತವನ್ನು ನಿರ್ಮಿಸಿದೆ. ಇದಲ್ಲದೆ ಗೂಗಿಕೊಳ್ಳದ ಸೃಷ್ಟಿ ಸೌಂದರ್ಯವನ್ನು ನಿರ್ಮಿಸಿ ಘಟಪ್ರಭಾ ನದಿಯಲ್ಲಿ ಸಂಗಮವಾಗುವುದು. ಇದೀಗ ಕುಂದರನಾಡಿನ ಹುಕ್ಕೇರಿ ತಾಲೂಕಿನ ಶಿರೂರ ಹತ್ತಿರ ಮಾರ್ಕಂಡೇಯ ನದಿಗೆ ಆಣೆಕಟ್ಟು ನಿರ್ಮಿಸಲಾಗಿದೆ.

ಕುಂದರನಾಡು ಬೆಳಗಾವಿ ಜಿಲ್ಲೆಯಲ್ಲಿ ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿಯನ್ನು ಪಡೆಯುತ್ತಾ ಬಂದಿದೆ. ಇದು ಕರ್ನಾಟಕದಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ವಿಶೇಷ ಸ್ಥಾನವನ್ನು ಹೊಂದಿದೆ. ವರ್ಷದ ಮೇ ತಿಂಗಳನ್ನು ಬಿಟ್ಟರೆ ಉಳಿದ ಎಲ್ಲ ಮಾಸಗಳಲ್ಲಿಯೂ ಈ ಪ್ರದೇಶವೂ ಹಚ್ಚ ಹಸಿರಾಗಿ ಕಂಗೊಳಿಸುತ್ತದೆ. ಸಸ್ಯ ಸಂಪತ್ತಿನ ಈ ನಾಡು ಪಕ್ಷಿ ಸಂಕುಲದ ತವರು. ಪ್ರಾಕೃತಿಕವಾಗಿ ಕುಂದರನಾಡು ತನ್ನ ಸುತ್ತಲೂ ಗುಡ್ಡ ಬೆಟ್ಟಗಳನ್ನು ಹೊಂದಿ ಅತ್ಯಂತ ಸುಂದರವಾಗಿ ಕಾಣುತ್ತಿದೆ.

### ೨.೪ ಕುಂದರನಾಡಿನ ಸ್ವರೂಪ :

ಕುಂದರನಾಡಿನ ವೈಶಿಷ್ಟ್ಯಗಳನ್ನು ಪರಿಚಯಿಸುತ್ತ – ಈ ಕೆಳಗಿನ ಪದ್ಯವನ್ನು ಉದಾಹರಿಸುತ್ತಾರೆ.

**"ಕುಂದರನಾಡು ಸುಂದರ ನಾಡು.**
**ಅಂದ ಚಂದದ ಬಂಧುರ ಬೀಡು**

**ಬಳ್ಳಾರಿಯ ಅರ್ಭಟ ನೋಡಾ**

**ಮಾರ್ಕಾಂಡೆ ತಾಯಿಯಾ ಏರಾಟ ನೋಡಾ"[೭]**

ಕುಂದರನಾಡು ರೈತಾಪಿ ಜನರ ಪ್ರದೇಶವಾಗಿದ್ದು ರೈತ ವರ್ಗ ಸುಗ್ಗಿಯ ಸಂದರ್ಭದಲ್ಲಿ ಹಾಡುತ್ತ ಕುಣಿಯುತ್ತ ತಂತಿ ನುಡಿಸುತ್ತ ತಾಳ ಬಾರಿಸಿ ರಾಶಿಯನ್ನು ಮಾಡುತ್ತಿದ್ದರು. ಹೊಲಗಳಲ್ಲಿ ಹಂತಿಯನ್ನು ಕಟ್ಟಿ ಕಣದಲ್ಲಿ ರಾಶಿಯನ್ನು ಮಾಡುವುದು ಅವರಿಗೆ ಅತ್ಯಂತ ಸಂತೋಷದ ಕೆಲಸವಾಗಿತ್ತು. ರೈತನ ಶ್ರಮದಿಂದ ಬೆಳೆದ ಕಾಳುಕಡಿಗಳನ್ನು ಚೀಲಗಳಲ್ಲಿ ತುಂಬುತ್ತ ಕಣಜದ ರಾಶಿಯನ್ನೇ ಅವರು ಭರಿಸುತ್ತಿದ್ದರು. ಆದುದರಿಂದ ಕುಂದರನಾಡಿನ ಒಟ್ಟು ಪ್ರದೇಶವು ಕೃಷಿ ಪ್ರಧಾನವಾದುದೆಂದು ಸ್ಪಷ್ಟವಾಗುತ್ತದೆ.

ಹಲವು ಜಾನಪದ ಕವಿಗಳು ಕುಂದರನಾಡಿನ ನಿಸರ್ಗ ಸೌಮ್ಯತೆಯನ್ನು ಮನದುಂಬಿ ಬಿನ್ನಿಸಿರುವರು. ಕುಂದರಗಿಯ ನಾಡನ್ನು ಒಬ್ಬಳು ಸ್ತ್ರೀಗೆ ಹೋಲಿಸಿ ಗರತಿಯೊಬ್ಬಳು ಹೀಗೆ ಹಾಡಿರುವಳು.

**"ಹಸಿರನು ಉಟ್ಟಾಳ ಹಸಿರನು ತೊಟ್ಟಾಳ**
**ಹಸಿವು ನೀರಡಿಕೆ ನೀಗ್ಯಾಳ । ಕುಂದರಗಿ ನಾಡವ್ವಾ**
**ಹಸಿದವನು ಒಂದು ಖುಷಿಯಾಗಿ"[೮]**

ಇದಲ್ಲದೆ ಕುಂದರನಾಡನ್ನು ಕುರಿತು ಒಂದು ಕವಿತೆಯನ್ನು ನಾಡಿನ ಖ್ಯಾತ ಕವಿಗಳಾದ ಶ್ರೀ ಎಸ್. ಡಿ. ಇಂಚಲ ಅವರು ಬರೆದಿದ್ದಾರೆ. ಅವರು ಕುಂದರನಾಡಿನ ವೈಶಿಷ್ಟ್ಯಗಳನ್ನು ವಿವರಿಸುತ್ತಾ

**"ವಿಶ್ವಭಾರತಿಗೆಂದು ಕನ್ನಡದ ಆರತಿಯ**
**ನೆತ್ತಿ ಬೆಳಗಿದ ದಿವ್ಯ ಶಕ್ತಿಗಳ ಬೀಡು**
**ಸ್ವಾತಂತ್ರ್ಯ ಸಮರದಲ್ಲಿ ಸಾಹಸದಿ ಮುನ್ನುಗ್ಗಿ**
**ಮಾಡಿ ಮಡಿದಿಹ ಧೀರ ಕನ್ನಡರ ನಾಡು**

**ಇದುವೆ ಕುಂದರನಾಡು ಇದು ಕುಳಿಂದರನಾಡು**
**ಇದುವೆ ಕುಂದದ ಸೌಖ್ಯದೆಡೆಯ ಬೀಡು**
**ಇದುವೆ ಸಾಹಿತ್ಯ ಸಂಸ್ಕೃತಿಗಳ್ಗೆ ನೆಲೆವಿಡು**
**ಇದುವೆ ಸಿದ್ದೇಶ್ವರನ ಕೃಪೆಯ ಹಾಡು"[೯]**

ಎಂದು ಸ್ತುತಿಸಿದವರು.

**ಕುಂದರನಾಡಿನಲ್ಲಿ ಬರುವ ಒಟ್ಟು ೪೪ ಹಳ್ಳಿಗಳು ಈ ರೀತಿಯಾಗಿವೆ.**

| | | | |
|---|---|---|---|
| ೧) | ಹುದಲಿ | ೨) | ತುಮ್ಮರ ಹುದ್ದಿ |
| ೩) | ಕಬಲಾಪೂರ | ೪) | ನಂದಿ |
| ೫) | ಭರನಟ್ಟಿ | ೬) | ರಂಗಧೋಳಿ |

| | | | |
|---|---|---|---|
| ೭) | ಗುತ್ತಿ | ೮) | ಪನಗುತ್ತಿ |
| ೯) | ಇಸ್ಲಾಮಪೂರ | ೧೦) | ಶಾಹಬಂದರು |
| ೧೧) | ಚಿಕ್ಕಲದಿನ್ನಿ | ೧೨) | ರಾಜನಕಟ್ಟಿ |
| ೧೩) | ಗುಟಗುದ್ದಿ | ೧೪) | ಗಜಪತಿ |
| ೧೫) | ಸುಲಧಾಲ | ೧೬) | ಗುಜನಾಳ |
| ೧೭) | ಬೂದಿಹಾಳ | ೧೮) | ಎದ್ದಲಗುಡ್ಡ |
| ೧೯) | ಅಂಕಲಗಿ | ೨೦) | ಅಕ್ಕತಂಗೇರಹಾಳ |
| ೨೧) | ತೆಳಹಟ್ಟಿ | ೨೨) | ಮದವಾಲ |
| ೨೩) | ಈರನಟ್ಟಿ | ೨೪) | ಉರಿಬಿನಹಟ್ಟಿ |
| ೨೫) | ಬೆಣಚಿನಮರಡಿ | ೨೬) | ಶೀಗಿಹೊಳೆ |
| ೨೭) | ದಾಸನಟ್ಟಿ | ೨೮) | ಕುಂದರಗಿ |
| ೨೯) | ಪಾಶ್ಚಾಪೂರ | ೩೦) | ಮಾವನೂರ |
| ೩೧) | ಗೊಡಚಿನಮಲ್ಕಿ | ೩೨) | ಪರಕನಟ್ಟಿ |
| ೩೩) | ಕೆಸರೂರ | ೩೪) | ಬಗನಾಳ |
| ೩೫) | ನೀದೆಟ್ಟಿ (ಸಿಂದೆಟ್ಟಿ) | ೩೬) | ಕೊಟಬಾಗಿ |
| ೩೭) | ಬನ್ನಿಬಾಗಿ | ೩೮) | ಮಲ್ಲಾಪೂರ |
| ೩೯) | ಕರಗುಪ್ಪಿ | ೪೦) | ಬಸಾಪೂರ |
| ೪೧) | ಹಗೇದಾಲ | ೪೨) | ಶಿರೂರ |
| ೪೩) | ಮಲ್ಲಾಪೂರ | ೪೪) | ಹಾರನಕೊಳ್ಳ |

## ೨.೫ ಕುಂದರನಾಡಿನ ಭೌಗೋಳಿಕ ಪರಿಸರ :

ಪ್ರಸ್ತುತ ಕುಂದರನಾಡಿನ ಪರಿಸರವನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಅಧ್ಯಯನದ ವ್ಯಾಪ್ತಿಯು ಮಿತಿ ಮತ್ತು ನಿರ್ದಿಷ್ಟತೆಯಿಂದ ಸಂಶೋಧನಾ ಪರಿಸರದ ವಿಷಯದ ವ್ಯಾಪ್ತಿಯನ್ನು ಮಾರ್ಕಂಡೇಯ, ಹಿರಣ್ಯಕೇಶಿ ಮತ್ತು ಘಟಪ್ರಭಾ ಪರಿಸರಕ್ಕೆ ಸೀಮಿತಗೊಳಿಸಿಕೊಳ್ಳಲಾಗಿದೆ. ಈ ನದಿಗಳು ಬೆಳಗಾವಿ, ಹುಕ್ಕೇರಿ ಹಾಗೂ ಗೋಕಾಕ ತಾಲ್ಲೂಕಿನ ಭಾಗಗಳಲ್ಲಿ ಹರಿಯುತ್ತವೆ. ತಮ್ಮ ಸಾಂಸ್ಕೃತಿಕ ಪರಿಸರವನ್ನು ನಿರ್ಮಾಣ ಮಾಡಿವೆ. ಪರಿಸರದಲ್ಲಾಗುವ ಬದಲಾವಣೆಗಳಿಗೆ ಹೊಂದಿಕೊಂಡು ಜೀವ ಸಂಕುಲಗಳು ತಮ್ಮನ್ನು ಅಭಿವೃದ್ಧಿಗೊಳಿಸಿಕೊಳ್ಳುತ್ತವೆ. ಇದಕ್ಕೆ ಮಾನವನು ಹೊರತಾಗಿಲ್ಲ. ಈ ಪರಿಸರದಲ್ಲೂ ಈ ಅಂಶ ಹೇರಳವಾಗಿ ಕಂಡುಬರುತ್ತದೆ. ಇಲ್ಲಿ ವಾಸಿಸುತ್ತಿರುವ ಪ್ರಾಣಿ ಸಂಕುಲಗಳು ತಮ್ಮನ್ನು ಈ ಪರಿಸರಕ್ಕೆ ಸಜ್ಜುಗೊಳಿಸಿಕೊಂಡಿರುವುದನ್ನು ಅನೇಕ ಮೂಲಗಳಿಂದ ಗ್ರಹಿಸಬಹುದಾಗಿದೆ. ಇಲ್ಲಿನ ಭೌಗೋಳಿಕ ಪರಿಸರ ಮಾನವನ ರಾಜಕೀಯ, ಆರ್ಥಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಿಸರದ ಮೇಲೆ ಪ್ರತ್ಯೇಕ್ಷ ಮತ್ತು ಪರೋಕ್ಷವಾಗಿ ಪ್ರಭಾವ ಬೀರಿದ್ದನ್ನು ಅನಾದಿ ಕಾಲದಿಂದಲೂ ಕಾಣಬಹುದಾಗಿದೆ.

ಕುಂದರನಾಡು ಪರಿಸರವು ಘಟಪ್ರಭಾ, ಹಿರಣ್ಯಕೇಶಿ, ಮಾರ್ಕಂಡೇಯ ನದಿಗಳ ಸುತ್ತ-ಮುತ್ತಲಿನ ಪ್ರದೇಶಗಳನ್ನು ಒಳಗೊಂಡಿದ್ದು, ಇದು ಬೆಳಗಾವಿ, ಹುಕ್ಕೇರಿ ಮತ್ತು ಗೋಕಾಕ ತಾಲ್ಲೂಕುಗಳಲ್ಲಿ ವ್ಯಾಪಿಸಿದೆ.

"ಈ ಪರಿಸರದ ಶಿಲಾ ರಚನೆಯು ಕೋಟ್ಯಾಂತರ ವರ್ಷಗಳ ಹಿಂದೆ ಆಗಿರುವಂತಹವು. ಇಲ್ಲಿರುವ ಶಿಲಾ ರಚನೆಯಗಳ ಕುರಿತು ಈಗಾಗಲೇ ಕೆಲವರು ಅಧ್ಯಯನವನ್ನು ಕೈಗೊಂಡಿದ್ದಾರೆ"[೧೦]. ಘಟಪ್ರಭಾ ಹಾಗೂ ಅದರ ಉಪನದಿಗಳಾದ ಮಾರ್ಕಂಡೇಯ ಮತ್ತು ಹಿರಣ್ಯಕೇಶಿ ನದಿಗಳಿಂದಾದ ಕೊರಕಲು ಪ್ರದೇಶಗಳು ಹಾಗೂ ಕಣಿವೆಗಳ ಅಧ್ಯಯನದಿಂದ ಈ ಭಾಗದ ಶಿಲಾರಚನೆ ಹಾಗೂ ಸ್ವರೂಪವನ್ನು ಅರಿಯಲು ಸಹಾಯಕವಾಗಿದೆ. "ಇಲ್ಲಿ ಆರ್ಕೆಯನ್, ಕಲಾದಗಿ, ಡೆಕ್ಕನ್ ಟ್ರಾಪ್ ಮತ್ತು ಚತುರ್ಥ ಯುಗದ ಶಿಲೆಗಳು ಕಂಡುಬರುತ್ತವೆ"[೧೧].

"ಆರ್ಕೆಯನ್ ಶಿಲೆಗಳು (ಭೂಗರ್ಭ ಇತಿಹಾಸದ ಪ್ರಥಮ ಯುಗ). ೧.೭ ಬಿಲಿಯನ್ ವರ್ಷಗಳಿಂದ ಹಿಡಿದು ೫೦೦ ಮಿಲಿಯನ್ ವರ್ಷಗಳ ಅವಧಿಯಲ್ಲಿ ಪ್ರೋಟೋಜೊಯಿಕ್ ಯುಗದಲ್ಲಿ ಮುಂದುವರೆಯುತ್ತವೆ"[೧೨]. "ಈ ಕಾಲದಲ್ಲಿ ಅಂದರೆ ಪ್ರೋಟೋಜೊಯಿಕ್ ಯುಗದ ಉತ್ತರಾರ್ಧದಲ್ಲಿ ಆರ್ಕೆಯನ್ ಶಿಲೆಗಳು ಕಂಡುಬರುತ್ತವೆ. ಹಿರಣ್ಯಕೇಶಿ ನದಿಯ ಪ್ರಾರಂಭ ಭಾಗ ಹಾಗೂ ಘಟಪ್ರಭಾ ನದಿಯ ಮಧ್ಯದ ಭಾಗದಲ್ಲಿ ಆರ್ಕೆಯನ್ ಶಿಲೆಗಳಿವೆ"[೧೩]. "ಅವುಗಳಲ್ಲಿ ರೂಪಾಂತರ ಹೊಂದಿದ ಸಿಸ್ಟ್, ಫೈಲೈಟ್, ಕ್ವಾರ್ಟ್ಜ್ ಹಾಗೂ ಗ್ರಾನೈಟ್ ನೀಸಗಳು ಪ್ರಮುಖವಾಗಿವೆ"[೧೪]. "ಕೊಣ್ಣೂರು ಪರಿಸರದಲ್ಲಿ ಕಂಡುಬರುವ ಮತ್ತೊಂದು ಪ್ರಮುಖ ಶಿಲಾವರ್ಗ ಕಲಾದಗಿ ಶಿಲಾವರ್ಗ. ಈ ಶ್ರೇಣಿಯ ಶಿಲೆಯನ್ನು ಮೊಟ್ಟಮೊದಲ ಬಾರಿಗೆ ಬಾಗಲಕೋಟ ಜಿಲ್ಲೆಯ ಕಲಾದಗಿ ಪಟ್ಟಣದ ಸಮೀಪದಲ್ಲಿ ೧೮೨೭ರಲ್ಲಿ ರಾಬರ್ಟ ಬ್ರೂಸ್‌ಫೂಟ್‌ರವರು ಪತ್ತೆ ಹಚ್ಚಿದರು"[೧೫]. "ಇವು ದಖ್ಖನ ಪ್ರಸ್ಥಭೂಮಿಯಲ್ಲಿಯೇ ಅತೀ ಪ್ರಾಚೀನವಾದ ಶಿಲೆಗಳಾಗಿವೆ. ಕೊಣ್ಣೂರಿನ ಸಮೀಪದ ಗೋಕಾಕ ಪಟ್ಟಣ ಮತ್ತು ದಡ್ಡಿ ಗ್ರಾಮಗಳ ಸುತ್ತಮುತ್ತ ಇಂತಹ ಶಿಲಾರಚನೆಗಳು ಕಂಡುಬರುತ್ತವೆ"[೧೬]. "ಘಟಪ್ರಭಾ ಕಣಿವೆಯ ಮಧ್ಯದ ಮತ್ತು ಕೆಳಗಿನ ಪ್ರದೇಶದಲ್ಲಿ ಹೆಚ್ಚಾಗಿ ನೋಡಬಹುದಾಗಿದೆ"[೧೭]. "ಇವು ನದಿಗಳ ಗಷ್ಟು ಹಾಗೂ ರೂಪಾಂತರದಿಂದ ರಚನೆಯಾಗಿವೆ"[೧೮]. "ಕ್ವಾರ್ಟ್‌ಜೈಟ್, ಮರಳು ಶಿಲೆ, ಸುಣ್ಣದ ಕಲ್ಲು, ಬಳಪದ ಕಲ್ಲು ಹಾಗೂ ಪೆಂಟೆಕಲ್ಲುಂಡೆಗಳು ಪ್ರಮುಖ ಪ್ರಬೇಧಗಳಾಗಿವೆ. ಪೆಂಟೆಕಲ್ಲುಂಡೆ ಶಿಲೆಗಳು ಬೂದನೇರಳೆ, ಕಡುನೇರಳೆ ಹಾಗೂ ಕಂದುಗುಲಾಬಿ ಬಣ್ಣಗಳಲ್ಲಿ ಕಂಡುಬರುತ್ತವೆ. ಆದರೆ ಕೊಣ್ಣೂರು ಪರಿಸರದ ಕಲಾದಗಿ ಶಿಲೆಗಳು ಏಕರೂಪದ ರಚನೆ ಮತ್ತು ಕೆಂಪು ಬಣ್ಣವನ್ನು ಹೊಂದಿರುವುದು ವಿಶೇಷ. ಗೋಕಾಕ್ ಫಾಲ್ಸ್‌ನ ಕೆಳಭಾಗದಲ್ಲಿ ಇಂತಹ ಶಿಲಾರಚನೆಗಳ ಪದರುಗಳು ಕಂಡುಬರುತ್ತವೆ. ಇಲ್ಲಿನ ಕ್ವಾರ್ಟ್ಜ್ ಮತ್ತು ಕಾಂಗ್ಲೋಮರೇಟ್ ಶಿಲೆಗಳು ಸುಮಾರು ೪೦೦ ಅಡಿಗಿಂತ ಹೆಚ್ಚು ದಪ್ಪಗಿರುವು ಪದರುಗಳನ್ನು ಹೊಂದಿವೆ. ಫಾಲ್ಸ್‌ನ ಉತ್ತರ ಭಾಗದಲ್ಲಿ ತೆರೆದಿಡುವ ಬಂಡೆಗಳು ಸುಮಾರು ೩೦೦ ಅಡಿಗಳಷ್ಟು ದಪ್ಪವಾಗಿರುವುದು ಸ್ಪಷ್ಟವಾಗಿ ಗೋಚರಿಸುತ್ತವೆ"[೧೯]. ಕ್ವಾರ್ಟ್ಜ್‌ಶಿಲೆಯು ಕಠಿಣ ಸ್ವರೂಪದ್ದಾಗಿದ್ದರೂ ನದಿಯ ರಭಸಕ್ಕೆ ದೊಡ್ಡದಾದ

ಕುಳಿ ಅಥವಾ ಕಂದಕಗಳು ನಿರ್ಮಾಣವಾಗಿರುವುದನ್ನು ಇಲ್ಲಿ ಕಾಣುತ್ತೇವೆ. ಗೋಕಾಕ್ ನಗರದಿಂದ ವಾಯುವ್ಯಕ್ಕೆ ೪ ಕಿ.ಮೀ. ದೂರದಲ್ಲಿರುವ ಮಾರ್ಕಂಡೇಯ ಮತ್ತು ಘಟಪ್ರಭಾ ನದಿಗಳು ಕೂಡುವ (ಸಂಗಮ) ಪ್ರದೇಶದಲ್ಲಿ ಕಲಾದಗಿ ಶ್ರೇಣಿಯ ಬೆಟ್ಟಗಳಿದ್ದು, "ಅರಭಾವಿಯ ಹತ್ತಿರ ಕಲಾದಗಿ ಶಿಲಾ ಶ್ರೇಣಿಯ ಮೇಲೆ ಡೆಕ್ಕನ್ ಟ್ರಾಪ್ ಶಿಲಾರಚನೆಯ ಕಂಡುಬರುತ್ತದೆ. ಕ್ವಾರ್ಟ್ಜೈಟನ ಶಿಲಾಪದರುಗಳನ್ನು ದಡ್ಡಿ ಮತ್ತು ಪಾಶ್ಚಾಪೂರ ಗ್ರಾಮಗಳ ಸುತ್ತಲೂ ಕಾಣಬಹುದು. ಮೇಲೆ ತಿಳಿಸಿದ ಆರ್ಕೆಯನ್ ಮತ್ತು ಕಲಾದಗಿ ಶಿಲಾವರ್ಗಗಳು ಪ್ರಿಕೇಂಬ್ರಿಯನ್ ಯುಗಕ್ಕೆ ಸಂಬಂಧಿಸಿದ್ದವುಗಳಾಗಿದ್ದು, ಅವು ನದಿಜನ್ಯ ಸ್ವರೂಪದ್ದಾಗಿವೆ"[೨೦].

ಈ ಪರಿಸರದಲ್ಲಿ "ಡೆಕ್ಕನ್ ಟ್ರಾಪ್ ಶಿಲಾರಚನೆಗಳಿದ್ದು, ಬೆಳಗಾವಿ ಜಿಲ್ಲೆಯಲ್ಲಿ ಇವು ಗೋಕಾಕದಿಂದ ರಾಮದುರ್ಗದವರೆಗೆ ಹರಡಿಕೊಂಡಿವೆ. ಡೆಕ್ಕನ್‌ಟ್ರಾಪ್ ಶಿಲಾವರ್ಗವು ಜ್ವಾಲಾಮುಖಿಯಿಂದುಟಾಗಿದೆ. ಡೆಕ್ಕನ್ ಟ್ರಾಪ್ ಶಿಲೆಗಳಲ್ಲಿ ಕೆಲವು ಕಡೆ ಪಳೆಯುಳಿಕೆಗಳಿರುವುದು ಕಂಡುಬರುತ್ತದೆ. ವಿಶೇಷವಾಗಿ ಕೌಜಲಗಿ, ಉಪ್ಪಾರಟ್ಟಿ, ಮಮದಾಪೂರಗಳಲ್ಲಿ ಇಂತಹ ಪಳೆಯುಳಿಕೆಗಳು ಪತ್ತೆಯಾಗಿವೆ"[೨೧]. "ಚತುರ್ಥ ಯುಗದ ಶಿಲೆಗಳು ಕೂಡ ಈ ಪರಿಸರದಲ್ಲಿ ಲಭ್ಯ. ಇವು ಬಹುತೇಕವಾಗಿ ನದಿ ಜನ್ಯವಾಗಿವೆ. ಇವುಗಳಲ್ಲಿ ಪ್ರಾಣಿ ಮತ್ತು ಸಸ್ಯಗಳ ಅವಶೇಷಗಳು ಕಂಡುಬಂದಿವೆ. ೧೮೭೬ರಲ್ಲಿ ರಾಬರ್ಟ್ ಬ್ರೂಸ್ ಪೂಟರು ನಡೆಸಿದ ಸಂಶೋಧನೆಯ ಫಲವಾಗಿ ಶಿಲೆಗಳಲ್ಲಿರುವ ಜೀವ-ಜಂತುಗಳ ಪಳೆಯುಳಿಕೆಗಳು ಪತ್ತೆಯಾಗಿವೆ. ಗೋಕಾಕ್ ತಾಲ್ಲೂಕಿನ ಚಿಕದೌಲಿ ಎಂಬ ಪ್ರದೇಶದಲ್ಲಿ ದನದ ಜಾತಿಗೆ ಸೇರಿದ ಪ್ರಾಣಿಗಳ ಅವಶೇಷಗಳು ದೊರಕಿವೆ. ಅವುಗಳಲ್ಲಿ ರಿನೋಸಾರಸ್ ಡೆಕ್ಕನಿನ್‌ನಿಸ್ ಎಂಬ ಪ್ರಬೇಧದ ಪ್ರಾಣಿಯ ಅವಶೇಷಗಳನ್ನು ಪತ್ತೆ ಮಾಡಲಾಗಿದೆ"[೨೨].

ಈ ಪರಿಸರದಲ್ಲಿ ಜಲಸಂಪನ್ಮೂಲಕ್ಕೆ ಕೊರತೆಯಿಲ್ಲ. ಇಲ್ಲಿ ಹಲವಾರು ನದಿಗಳು, ಉಪನದಿಗಳು ಅವುಗಳಿಗೆ ಕೊಡುವ ಝರಿಗಳು, ಕೆರೆ, ಕಾಲುವೆಗಳು, ಬಾವಿಗಳು ಇದ್ದು ಅನಾದಿ ಕಾಲದಿಂದಲೂ ಮಾನವನ ಜೀವನದ ನಿರ್ವಹಣೆಯ ಅವಿಭಾಜ್ಯ ಅಂಗಗಳಾಗಿ ಪಾತ್ರವಹಿಸುತ್ತ ಬಂದಿವೆ. ಅಂತಹ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಳ್ಳುವಲ್ಲಿ ಘಟಪ್ರಭಾ ಹಾಗೂ ಅದರ ಉಪನದಿಗಳಾದ ಮಾರ್ಕಂಡೇಯ ಮತ್ತು ಹಿರಣ್ಯಕೇಶಿ ನದಿಗಳು ಬಹುಮಟ್ಟಿಗೆ ಜೀವ ಸೆಲೆಯಾಗಿ ನಿಂತಿವೆ.

"ಘಟಪ್ರಭಾ ನದಿಯು ಸಹ್ಯಾದ್ರಿ ಪರ್ವತ ಶ್ರೇಣಿಯ ಅಂಬೋಲಿ ಘಟ್ಟದ ಹತ್ತಿರದ ಚಂದಗಡ್ ತಾಲ್ಲೂಕಿನ ರಾಮಘಡದಲ್ಲಿ ಉಗಮಿಸುತ್ತದೆ"[೨೩]. ಇದು ಕೃಷ್ಣಾನದಿಯ ದಕ್ಷಿಣ ಭಾಗದ ಪ್ರಮುಖ ಉಪನದಿಗಳಲ್ಲೊಂದು. ಚಂದ್‌ಗಡ್‌ನಿಂದ ಪೂರ್ವಕ್ಕೆ ಹರಿದು ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲ್ಲೂಕಿನ ದಡ್ಡಿ ಗ್ರಾಮದ ಸಮೀಪ ಇರುವ ಶೇಡಿಹಾಳದಲ್ಲಿ ಪ್ರವೇಶ ಪಡೆಯುತ್ತದೆ. ಈ ನದಿಯು ಕರ್ನಾಟಕ ರಾಜ್ಯ ಹಾಗೂ ಬೆಳಗಾವಿ ಜಿಲ್ಲೆಯನ್ನು ಇಲ್ಲಿಂದಲೇ ಪ್ರವೇಶಿಸಲು ಅಣಿಯಾಗುತ್ತದೆ. ಈ ನದಿಯು ಒಟ್ಟು ಹರಿವು ೩೦೪ ಕಿ.ಮೀ. ದಡ್ಡಿಯ ಸಮೀಪ ಇದಕ್ಕೆ

ತಾಮ್ರಪರ್ಣಿ ನದಿ ಕೂಡುತ್ತದೆ. "ತಾಮ್ರಪರ್ಣಿ ನದಿಯ ಒಟ್ಟು ಹರಿವು ೭೦ ಕಿ.ಮೀ. ಘಟಪ್ರಭಾ ನದಿಗೆ ಹಿರಣ್ಯಕೇಶಿ ಮತ್ತು ಮಾರ್ಕಂಡೇಯ ನದಿಗಳು ಬಂದು ಸೇರುತ್ತವೆ. ಹಿರಣ್ಯಕೇಶಿ ನದಿಯು ಮಹಾರಾಷ್ಟ್ರದ ಅಜಾರಾ ಹತ್ತಿರ ಹುಟ್ಟಿ ಪೂರ್ವಾಭಿಮುಖವಾಗಿ ಹರಿದು ಹುಕ್ಕೇರಿ ತಾಲ್ಲೂಕಿನ ಇಂಗಳಗಿ ಗ್ರಾಮದ ಹತ್ತಿರ ಘಟಪ್ರಭಾ ನದಿಯನ್ನು ಸೇರುತ್ತದೆ. ಈ ನದಿಯ ಒಟ್ಟು ಹರಿವು ೧೨೦ ಕಿ.ಮೀ.ಗಳು"[೨೪]. ಮಾರ್ಕಂಡೇಯ ನದಿಯು ಖಾನಾಪುರ ತಾಲ್ಲೂಕಿನ ಬೈಲೂರು ಎಂಬ ಹಳ್ಳಿಯ ಹತ್ತಿರ ಉಗಮವಾಗುತ್ತದೆ. ಇದು ಗೋಕಾಕ್ ಹತ್ತಿರ ಘಟಪ್ರಭಾ ನದಿಯನ್ನು ಕೂಡುತ್ತದೆ. ಮಾರ್ಕಂಡೇಯ ನದಿಯು ಒಟ್ಟು ಹರಿವು ೧೦೦ ಕಿ.ಮೀ.ಗಳು.

ಒಟ್ಟಾರೆಯಾಗಿ ಈ ಪರಿಸರದಲ್ಲಿ ಹರಿಯುವ ಘಟಪ್ರಭಾ ಹಾಗೂ ಅದರ ಉಪನದಿಗಳು ಪ್ರಾಚೀನ ಕಾಲದಿಂದ ಇಂದಿನವರೆಗೆ ಮಾನವನಿಗೆ ಹಾಗೂ ಈ ಕಾಲದವರೆಗೂ ನಾಗರಿಕತೆ ಬೆಳವಣಿಗೆಯಲ್ಲಿ ತುಂಬಾ ಸಹಾಯಕಾರಿಯಾದ ಪಾತ್ರವಹಿಸುತ್ತಾ ಬಂದಿವೆ. ಇಂದಿನ ದಿನಮಾನಗಳಲ್ಲಿ ಈ ಪ್ರದೇಶದ ಆರ್ಥಿಕ ಅಭಿವೃದ್ಧಿಯ ಬೆನ್ನೆಲುಬಾಗಿ ಈ ಪರಿಸರವು ಪ್ರಮುಖ ಪಾತ್ರವಹಿಸುತ್ತಿವೆ. ಘಟಪ್ರಭಾ ನದಿಗೆ ಹಿಡಕಲ್ ಗ್ರಾಮದ ಬಳಿ ಜಲಾಶಯವೊಂದನ್ನು ನಿರ್ಮಿಸಲಾಗಿದೆ. ಹಾಗೇ ಮಾರ್ಕಂಡೇಯ ನದಿಗೆ ಶಿರೂರು ಗ್ರಾಮದ ಸಮೀಪ ದೊಡ್ಡದಾದ ಬ್ಯಾರೇಜನ್ನು ನಿರ್ಮಿಸಲಾಗಿದ್ದು, ಈ ಭಾಗದ ಕೃಷಿ, ಕೈಗಾರಿಕೆ ಮತ್ತು ಜನರ ಜೀವನೋಪಾಯಕ್ಕೆ ಇವು ಹೆಚ್ಚಿನ ಸಹಾಯಕವಾಗಿವೆ.

"ಈ ಪರಿಸರದಲ್ಲಿ ನದಿಗಳು, ಉಪನದಿಗಳು ಹಳ್ಳ ಹಾಗೂ ಝರಿಗಳು ಹೆಚ್ಚಿನ ಕಾಲ ಹರಿಯುವುದರಿಂದ ಸಹಜವಾಗಿಯೇ ಈ ಪ್ರದೇಶ ಫಲವತ್ತತೆಯಿಂದ ಕೂಡಿದೆ. ಕಪ್ಪು ಎರೆಮಣ್ಣಿನಿಂದ ಕೂಡಿದ ಪ್ರದೇಶ ಇಲ್ಲಿ ಹೆಚ್ಚಾಗಿದ್ದು ಕೆಲವು ಕಡೆ ಮಾತ್ರ ಕೆರೆಮಣ್ಣು ಹಾಗೂ ಮರಳು ಮಿಶ್ರಿತ ಮಣ್ಣು ಮತ್ತು ಕರ್ಲ ಮಣ್ಣು ಕಂಡುಬರುತ್ತದೆ"[೨೫]. ಈ ಭಾಗದಲ್ಲಿನ ಪಾಶ್ಚಾಪೂರ ಗ್ರಾಮ ಪರಿಸರದ ಸುತ್ತಲಿನ ಭೂಮಿಯು ಕುಂದರನಾಡಿನಲ್ಲಿಯೇ ಅತೀ ಹೆಚ್ಚು ಫಲವತ್ತಾದ ಪ್ರದೇಶವಾಗಿದೆ[೨೬]. ಇಲಲ್ಲಿ ಬೆಳೆಯುವ ಜೋಳ, ಮೆಣಸಿನ ಕಾಯಿ ಹಾಗೂ ಕಬ್ಬು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿವೆ. ಕೊಣ್ಣೂರು ಪರಿಸರದಲ್ಲಿ ಕಬ್ಬು, ಜೋಳ, ಗೋಧಿ, ತಂಬಾಕು, ಹತ್ತಿ, ಶೇಂಗಾ, ಹೆಸರು, ಸೋಯಾ ಮುಂತಾದ ಧಾನ್ಯಗಳನ್ನು ಬೆಳೆಯಲಾಗುತ್ತದೆ. ಉಪ್ಪಿನಾಂಶವುಳ್ಳ ಕರ್ಲಮಣ್ಣು ಗೋಧಿ ಬೆಳೆಗೆ ಸೂಕ್ತವಾಗಿರುತ್ತದೆ. ಕಪ್ಪ ಎರೆಮಣ್ಣು ಫಲವತ್ತಾಗಿದ್ದು ಕಬ್ಬು ಹತ್ತಿಗೆ ಅತ್ಯುತ್ತಮ. ಈ ಭಾಗದ ಹೆಚ್ಚಿನ ಜನರು ಕೃಷಿಯೇತರ ಚಟುವಟಿಕೆಗಳಲ್ಲಿಯೂ ತೊಡಗಿರುವುದು ವಿಶೇಷವಾಗಿದೆ.

ಇಲ್ಲಿನ ಪರಿಸರದ ಹವಾಗುಣವು ಉತ್ತಮವಾಗಿದೆ. ಮಾನ್‌ಸೂನ್ ಮಳೆಯಾಧಾರಿತ ಈ ಪ್ರದೇಶದಲ್ಲಿ ಉತ್ತಮ ಮಳೆಯಾಗುತ್ತದೆ. ವಿಶೇಷವಾಗಿ ಜೂನ್‌ನಿಂದ – ಸೆಪ್ಟೆಂಬರ್ ಅವಧಿಯಲ್ಲಿ ಮಳೆ ಹೆಚ್ಚು. ಸರಾಸರಿ ಮಳೆಯ ಪ್ರಮಾಣ ವಾರ್ಷಿಕ ೫೦೦ ಮಿ.ಮೀ. ಅದೇ ರೀತಿಯಾಗಿ ಈ

ಪ್ರದೇಶದಲ್ಲಿ ಬೆಟ್ಟ-ಗುಡ್ಡಗಳಿರುವ ಕಾರಣ ಬಿಸಿಲು ಹೆಚ್ಚು. ಬೇಸಿಗೆಯಲ್ಲಿ ಗರಿಷ್ಠ ೪೦೦ ಸೆಂ.ಮೀ.ಗೆ ಉಷ್ಣಾಂಶವಿರುತ್ತದೆ. ಅಲ್ಲಲ್ಲಿ ದಟ್ಟವಾದ ಹಾಗೂ ಕುರುಚಲು ಮತ್ತು ಶುಷ್ಕ ಅರಣ್ಯ ಪ್ರದೇಶವೂ ಇದೆ. ಗೋಕಾಕದ ಹತ್ತಿರದ ಬಸ್ತೀ ಗುಡ್ಡವು ಸಮುದ್ರ ಮಟ್ಟದಿಂದ ೮೧೨ ಮೀ. ಹಾಗೂ ಮಣ್ಣಿಕೇರಿ ಬೆಟ್ಟವು ಸು. ೭೫೦ ಮೀ. ಎತ್ತರವಾಗಿದೆ. ಹುಕ್ಕೇರಿ ತಾಲ್ಲೂಕಿನಲ್ಲಿ ಕೂಡಾ ೯೧೪ ಮೀ. ಎತ್ತರದ ಬೆಟ್ಟಗಳಿವೆ. ಈ ಪ್ರದೇಶದಲ್ಲಿ ಸಾಗುವಾನಿ, ಬೀಟೆ, ಶ್ರೀಗಂಧ, ತೇಗ, ಮತ್ತಿ, ನಂದಿ, ಜಾಲಿ, ಹುಣಸೆ, ಬೇವು, ರೋಸ್‌ವುಡ್, ಬಿದಿರು ಮುಂತಾದ ಮರಗಳು ಬೆಳೆಯುತ್ತದೆ. ಬೃಹತ್ ಬೆಟ್ಟ ಹಾಗೂ ಶಿಲಾವೃತವಾದ ಈ ನಾಡಿನಲ್ಲಿ ಕೆಲವು ಪ್ರಮುಖವಾದ ಖನಿಜ ಸಂಪನ್ಮೂಲಗಳು ಸಹ ಭೂಮಿಯಲ್ಲಿ ಬೆರೆತು ಹೋಗಿವೆ. ಮರಳುಶಿಲೆ, ಅಬ್ರಕ, ಸುಣ್ಣದಕಲ್ಲು, ನೀಸ್, ಡೋಲಮೈಟ್, ಮ್ಯಾಂಗನೀಸ್, ಸ್ಫಟಿಕದ ಶಿಲೆ ಮುಂತಾದವು ಸಿಗುತ್ತದೆ. ಅರಣ್ಯ ಪ್ರದೇಶ ಕೆಲವು ಕಡೆ ದಟ್ಟವಾಗಿದ್ದು ಮತ್ತೆ ಕೆಲವು ಕಡೆ ಶುಷ್ಕ ಅರಣ್ಯಗಳಿಂದ ಕೂಡಿದೆ. ಮತ್ತೆ ಕೆಲವು ಕಡೆ ಬಯಲು ಪ್ರದೇಶಗಳನ್ನು ನೋಡಬಹುದಾಗಿದೆ. ಕರಡಿ, ತೋಳ, ಮೊಲ, ಕಾಡುಬೆಕ್ಕು, ಹೈನಾ, ಬಾವಲಿ, ನರಿಗಳು ಇವು ಇಲ್ಲಿ ಕಂಡುಬರುವ ಪ್ರಮುಖವಾದ ವನ್ಯ ಮೃಗಗಳು. ಹಸು, ಎತ್ತು, ನಾಯಿ, ಬೆಕ್ಕು, ಮೊಲ, ಕುರಿ, ಮೇಕೆಗಳು ಸಾಕು ಪ್ರಾಣಿಗಳು. ನವಿಲು, ಪಾರಿವಾಳ, ಬಾತುಕೋಳಿ, ಕಿಂಗ್‌ಫೀಶರ್ ಇವು ಪ್ರಮುಖವಾದ ಈ ಪ್ರದೇಶದ ಪಕ್ಷಿ ಸಂಕುಲಗಳಾಗಿವೆ.

ಕುಂದರನಾಡಿನ ಅಂಕಲಗಿ, ಹುದಲಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶವು ಸದಾ ಹಚ್ಚ ಹಸುರಿನಿಂದ ಕೂಡಿರುತ್ತದೆ. ಅಲ್ಲದೇ ಜಿಲ್ಲೆಯಲ್ಲಿ ಹೆಚ್ಚು ಮಳೆ ಬೀಳುವ ಪ್ರದೇಶಗಳಲ್ಲಿ ಒಂದಾಗಿದೆ.

## ೨.೬ ಕುಂದರನಾಡಿನ ಚಾರಿತ್ರಿಕ ಹಿನ್ನೆಲೆಯ ಅವಲೋಕನ :

ಸಾಂಸ್ಕೃತಿಕ ಇತಿಹಾಸ ಕ್ಷೇತ್ರಕ್ಕೆ ಈ ಪ್ರದೇಶವು ತನ್ನದೇ ಆದ ಕೊಡುಗೆಯನ್ನು ನೀಡಿದೆ. ಬಹುವಿಸ್ತಾರವಾದ ಬೆಳಗಾವಿ ಜಿಲ್ಲಾ ಪ್ರದೇಶದಲ್ಲಿ ಶಾತವಾಹನ, ಆದಿಕದಂಬ, ಬಾದಾಮಿಯ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ಸೇವುಣರು ಅರಸು ಮನೆತನಗಳು ದೀರ್ಘಕಾಲ ರಾಜ್ಯಭಾರ ಮಾಡುತ್ತಿದ್ದವು. ರಾಷ್ಟ್ರಕೂಟರ ಸಾಮಂತರರಾದ ಸವದತ್ತಿಯ ರಟ್ಟರು, ಕಲ್ಯಾಣದ ಚಾಲುಕ್ಯರ ಸಾಮಂತ ಅರಸರಾದ ಗೋವೆಯ ಕದಂಬರು, ಕೋಲ್ಹಾಪೂರದ ಶಿಲಾಹಾರರು, ಅಲ್ಲದೇ ೧೪ನೆಯ ಶತಮಾನದ ನಂತರಾವಧಿಯಲ್ಲಿ ಆಳಿದ ವಿಜಯನಗರದ ಅರಸರು, ಬಿಜಾಪೂರದ ಆದಿಲ್‌ಷಾಹಿಗಳು ಹಾಗೂ ಅವಕಾಶ ಸಿಕ್ಕಾಗೊಮ್ಮೆ ಈ ಪ್ರದೇಶವನ್ನು ವಶಪಡಿಸಿಕೊಳ್ಳುತ್ತಿದ್ದ ಮರಾಠಾ ರಾಜ್ಯದ ಅಧಿಕಾರಿಗಳು, ತಮ್ಮ ಆಡಳಿತವನ್ನು ಬೆಳಗಾವಿ ಜಿಲ್ಲೆಯ ಪ್ರದೇಶದಲ್ಲಿ ನಿರ್ವಹಿಸಿರುವ ಬಗೆಗೆ ದಾಖಲೆಗಳಿವೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಕೊಣ್ಣೂರು ಪರಿಸರವು ಮೇಲೆ ಉಲ್ಲೇಖಿಸಿದ ಎಲ್ಲಾ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು. ಇಲ್ಲಿ ಸಿಕ್ಕಿರುವ ಶಾಸನಗಳು ಆ ಕಾಲದ ರಾಜಕೀಯ ಆಡಳಿತದ ಬಗೆಗೆ ವಿವರವಾದ ಮಾಹಿತಿ

ನೀಡುತ್ತವೆ. ಆದರೂ ಬೇರೆ-ಬೇರೆ ಪ್ರದೇಶದಲ್ಲಿ ಸಿಕ್ಕಿರುವ ಮಾಹಿತಿಗಳನ್ನು ಪರಿಶೀಲಿಸಿ ಅಭಿಪ್ರಾಯಪಡುವುದಾದರೆ ಈ ಪರಿಸರದ ಸಮಗ್ರ ರಾಜಕೀಯ ಚರಿತ್ರೆ ಕಟ್ಟಿಕೊಳ್ಳುವಲ್ಲಿ ಶಾಸನಗಳ ಅನುಪಸ್ಥಿತಿ ಹೆಚ್ಚಾಗಿ ಕಂಡುಬರುವುದು. ಅಲ್ಲದೇ ಸಿಕ್ಕಿರುವ ಶಾಸನಗಳು ಹೆಚ್ಚಿನ ಅಸ್ಪಷ್ಟತೆ ಹಾಗೂ ತೃಟಿತವಾಗಿವೆ. ಕದಂಬ, ಬದಾಮಿ ಚಾಲುಕ್ಯ, ಕಲ್ಯಾಣದ ಚಾಲುಕ್ಯ, ಕಲಚೂರಿ, ಸವದತ್ತಿಯ ರಟ್ಟರು ಹಾಗೂ ಸೇವುಣರ ಶಾಸನಗಳು ಲಭ್ಯವಿದ್ದು, ಅವು ಆ ಕಾಲದ ರಾಜಕೀಯ ಸಂಬಂಧಗಳನ್ನು ವಿವರಿಸಿ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ.

"ಕುಂದರನಾಡು ಪರಿಸರವು ಜಿಲ್ಲೆಯ ಮೂರು ದೊಡ್ಡ ತಾಲೂಕುಗಳಾದ ಗೋಕಾಕ, ಹುಕ್ಕೇರಿ ಮತ್ತು ಬೆಳಗಾವಿ ತಾಲೂಕಿನ ಕೆಲವು ಭಾಗಗಳನ್ನು ಒಳಗೊಂಡಿದೆ"[೨೭]. "ಇದು ಕೂಹಂಡಿ ವಿಭಾಗದ ಕುಂದರಗಿ ಕಂಪಣದ ಮುಖ್ಯ ಚಿಕ್ಕ ಆಡಳಿತ ವಿಭಾಗವಾಗಿತ್ತು. ಕೂಹಂಡಿ-೩೦೦೦ರ ಉಲ್ಲೇಖ ಭಾಗಶಃ ಆ ವಿಭಾಗದಲ್ಲಿದ್ದ ಗ್ರಾಮಗಳ ಸೂಚಕವಾಗಿತ್ತು. ರಟ್ಟರು ಆಡಳಿತದಲ್ಲಿ ವಿಭಾಗವಾಗಿದ್ದು ಕೂಹಂಡಿ-೩೦೦೦ರವು ಬನವಾಸಿ-೧೨೦೦೦ ಎಂಬ ಬಹುದೊಡ್ಡ ಆಡಳಿತ ವಿಭಾಗದಲ್ಲಿ ಒಳಗೊಂಡಿತ್ತು. ಕೂಹಂಡಿ ವಿಭಾಗವು ಸದಾ ಬಹಳ ವಿಸ್ತಾರವಾದ ಆಡಳಿತ ವಿಭಾಗವಾಗಿತ್ತು"[೨೮].

"ಈ ಆಡಳಿತ ಘಟಕವು ಉತ್ತರದಲ್ಲಿ ಕೃಷ್ಣಾ ನದಿ, ದಕ್ಷಿಣಕ್ಕೆ ಮಲಪ್ರಭಾ ನದಿ, ಪೂರ್ವಕ್ಕೆ ತೊರಗಲೆ ನಾಡು ಮತ್ತು ಬೆಳುವಲ-೩೦೦ ಹಾಗೂ ಪಶ್ಚಿಮದಲ್ಲಿ ಕೊಲ್ಹಾಪೂರದ ಶಿಲಾಹಾರರು ಅಂದರೆ ಗಡಹಿಂಗ್ಲಜ ಮತ್ತು ಚಂದಗಡ ಪ್ರದೇಶದವರೆಗೂ ವಿಸ್ತರಿಸಿತ್ತು"[೨೯]. ಇಂದಿನ ಬೆಳಗಾವಿ ಜಿಲ್ಲೆಯ ಇದರ ವ್ಯಾಪ್ತಿಯಲ್ಲಿದ್ದವು. ಇಂಥ ಬಹುಮುಖ್ಯ ಆಡಳಿತ ವಿಭಾಗವಾಗಿದ್ದ ಕೂಹಂಡಿ ೩೦೦೦ರಲ್ಲಿ ಕುಂದರಗಿ (ಕೊಣ್ಣೂರು ಪರಿಸರ) ಕಂಪಣ ಅತಿ ಮುಖ್ಯ ಪ್ರದೇಶವಾಗಿ ಅಸ್ತಿತ್ವದಲ್ಲಿತ್ತು. ಈ ಪರಿಸರದಲ್ಲಿ ಅತಿ ಹೆಚ್ಚು ಪ್ರಭಾವ ಬೀರಿದ ರಾಜಕೀಯ ಮನೆತನವೆಂದರೆ ಸವದತ್ತಿಯ ರಟ್ಟರು.

ಕರ್ನಾಟಕದಲ್ಲಿ ಮೌರ್ಯರು ಆಳಿದರೆಂಬುದಕ್ಕೆ ಸಾಕಷ್ಟು ಪುರಾವೆಗಳಿವೆ. ಬನವಾಸಿಯವರೆಗೆ ಅವರ ರಾಜಕೀಯ ಪ್ರಭಾವವಿತ್ತು. ಕರ್ನಾಟಕದ ಪ್ರಮುಖವಾದ ಪ್ರಾಚೀನ ನೆಲೆಗಳಲ್ಲಿ ಮೌರ್ಯರ ಕಾಲದ ಶಾಸನಗಳು ಕಂಡುಬಂದಿದ್ದು, ಆ ಪರಿಸರದ ವಿವರಗಳನ್ನು ಮಾತ್ರ ತಿಳಿಯಲು ಸಾಧ್ಯವಾಗಿದೆ. ಆದರೆ ಆ ಕಾಲದ ಆಡಳಿತ ಕುರುಹುಗಳ ಬಗೆಗೆ ತಿಳಿಸುವ ಮೌರ್ಯರ ಶಾಸನಗಳು ಈ ಪರಿಸರದಲ್ಲಿ ಲಭ್ಯವಿಲ್ಲ. "ಹೀಗಾಗಿ ಐತಿಹ್ಯಗಳಿಂದಲೇ ನಾವು ಹೆಚ್ಚಿನ ಮಾಹಿತಿ ಪಡೆಯಬಹುದಾಗಿದೆ. ಕೆಲವು ಐತಿಹ್ಯಗಳಿಂದ ಮೌರ್ಯರ ಕಾಲದಲ್ಲಿ ಈ ಪರಿಸರದಲ್ಲಿ ಜೈನಧರ್ಮದ ಬಲವಾಗಿತ್ತೆಂದು ತಿಳಿಯುತ್ತದೆ"[೩೦]. ಆ ಕಾಲದ ಆಡಳಿತ ನಿರ್ವಹಣೆಯ ಬಗೆಗೆ ಅರಿತುಕೊಳ್ಳಲು ಐತಿಹ್ಯಗಳೇ ನಮಗೆ ಪ್ರಮುಖವಾಗಿ ಕಂಡುಬರುತ್ತವೆ. ಮೌಖಿಕ ಆಧಾರಗಳ ಮೂಲಕ ಕೊಣ್ಣೂರು ಪರಿಸರದಲ್ಲಿ ಆಡಳಿತ ನಡೆಸಿದರೆಂಬುದಕ್ಕೆ ಮಾಹಿತಿಗಳಿವೆ.

ಮೌರ್ಯರ ನಂತರ ಶಾತವಾಹನರು ಆಳ್ವಿಕೆ ಮಾಡಿದರು. ದಕ್ಷಿಣ ಭಾರತದಲ್ಲಿ ವಿಶೇಷವಾಗಿ, ಕರ್ನಾಟಕದ ಉತ್ತರ ಭಾಗಗಳಲ್ಲಿ ರಾಜಕೀಯ ಐಕ್ಯತೆಯನ್ನು ಮೂಡಿಸಲು ಪ್ರಯತ್ನಿಸಿದರು. ಬೆಳಗಾವಿ ಸಮೀಪದ ವಡಗಾಂವ-ಮಾಧವಪುರ ನೆಲೆಯಲ್ಲಿ ಶಾತವಾಹನರ ಕಾಲದ ಕುರುಹುಗಳು ಕಂಡುಬಂದಿವೆ. ಅವುಗಳಲ್ಲಿ ಸಣ್ಣ ಇಟ್ಟಿಗೆಗಳು, ಮಡಿಕೆಗಳು ಹಾಗೂ ಗೊಂಬೆ ಆಕಾರದ ಅವಶೇಷಗಳು ಕಂಡುಬಂದಿವೆ.

ಕರ್ನಾಟಕದ ಪ್ರಾಚೀನ ಅರಸು ಮನೆತನ ಎಂಬ ಹೆಗ್ಗಳಿಕೆ ಕದಂಬರಿಗೆ ಸಲ್ಲುತ್ತದೆ. ಅವರು ಬನವಾಸಿಯನ್ನು (ವೈಜಯಂತಿ) ಕೇಂದ್ರ ರಾಜಧಾನಿಯನ್ನಾಗಿ ಮಾಡಿಕೊಂಡು ಅಧಿಕಾರ ನಿರ್ವಹಿಸಿದರು. ಆಡಳಿತದ ಅನುಕೂಲಕ್ಕಾಗಿ ಇನ್ನೂ ಕೆಲವು ಪ್ರದೇಶಗಳನ್ನು ಉಪರಾಜಧಾನಿಗಳನ್ನಾಗಿ ಮಾಡಿಕೊಂಡಿದ್ದರು. ಅವುಗಳಲ್ಲಿ ಬೆಳಗಾವಿ ಜಿಲ್ಲೆಯ ಖಾನಾಪೂರ ತಾಲ್ಲೂಕಿನ ಹಲಸಿ (ಪಲಾಸಿಕ) ಸಹ ಮಹತ್ವ ಪಟ್ಟಣವಾಗಿತ್ತು. ಈ ಮನೆತನಕ್ಕೆ ಸಂಬಂಧಿಸಿದಂತೆ ಬೆಳಗಾವಿ ಜಿಲ್ಲೆಯಲ್ಲಿ ಹಲವಾರು ಶಾಸನಗಳು ಲಭ್ಯವಾಗಿವೆ.

"ಕುಂದರನಾಡಿನ ಪರಿಸರದಲ್ಲಿ ಕದಂಬ ಕಾಲದ ಒಂದು ಶಾಸನಗಳು ಲಭ್ಯವಾಗಿದೆ. ಕೊಣ್ಣೂರು ಗ್ರಾಮದ ಬಂಡೆಗಲ್ಲಿನಲ್ಲಿ ಈ ಶಾಸನ ಕೆತ್ತಲಾಗಿದೆ ಎಂದು ಉಲ್ಲೇಖಿಸಲಾಗಿದೆ"[೩೧]. ಆದರೆ ಈ ಶಾಸನ ಗೋಕಾಕ ಜಲಪಾತ ಪರಿಸರದಲ್ಲಿ ಇರುವ ಬಗೆಗೆ ಮಾಹಿತಿಗಳು ಕ್ಷೇತ್ರ ಕಾರ್ಯಾವಧಿಯಲ್ಲಿ ಲಭ್ಯವಾಗಿದೆ. ಕೊಣ್ಣೂರು ಸಮೀಪದ ಜಲಪಾತದ ಬಲದಂಡೆಯ ಬಂಡೆಯ ಮೇಲೆ ಈ ಶಾಸನವನ್ನು ಕೊರೆಯಲಾಗಿದೆ. ಇದನ್ನು ಚೌಕಾಕಾರದ ಶಿರೋಪಟ್ಟಿಯಲ್ಲಿ ಕೆತ್ತಲಾಗಿದೆ. ಉತ್ತರದ ವಾಕಾಟಕ ಮತ್ತು ಗುಪ್ತರ ಕಾಲದ ಶಾಸನಗಳಂತೆ ಇದೆ. ಬಹುಶಃ ಕದಂಬರಿಗೂ ಹಾಗೂ ಗುಪ್ತ-ವಾಕಾಟಕರಿಗೂ ಇದ್ದ ರಕ್ತ ಸಂಬಂಧಗಳೇ ಇದಕ್ಕೆ ಕಾರಣವಿರಬಹುದು.

ಕರ್ನಾಟಕದ ಇತರ ಪ್ರದೇಶದ ಹಾಗೆ ಬೆಳಗಾವಿ ಜಿಲ್ಲೆಯಲ್ಲಿಯೂ ಬದಾಮಿ ಚಾಲುಕ್ಯರ ಆಳಿದರೆನ್ನಲು ಹಲವಾರು ದಾಖಲೆಗಳಿವೆ. "ಜಿಲ್ಲೆಯ ಹುಕ್ಕೇರಿ, ಗೋಕಾಕ ಮತ್ತು ಗೊಡಚಿಯಲ್ಲಿನ (ರಾಮದುರ್ಗ ತಾಲ್ಲೂಕ) ಶಾಸನಗಳು, ಸವದತ್ತಿ ತಾಲೂಕಿನ ಯಕ್ಕೇರಿ ಹಾಗೂ ಹೂಲಿಯ ಶಾಸನಗಳು ಅವರ ಆಳ್ವಿಕೆಯನ್ನು ಪುಷ್ಟಕರಿಸುತ್ತವೆ"[೩೨]. ಕುಂದರನಾಡಿನ ಪರಿಸರದಲ್ಲಿ ಇವರ ಕಾಲಕ್ಕೆ ಸಂಬಂಧಿಸಿದಂತೆ ನೇರವಾಗಿರುವ ಶಾಸನೋಕ್ತ ಉಲ್ಲೇಖಗಳಿವೆ. ಗೋಕಾಕ ತಾಲ್ಲೂಕಿನ ಮಾಲದಿನ್ನಿ ಶಾಸನದಲ್ಲಿರುವ ಲಿಪಿಯ ಅಕ್ಷರಗಳು ಬಾದಾಮಿ ಚಾಲುಕ್ಯ ಕಾಲದ ಸಾಮ್ಯತೆಯನ್ನು ಪಡೆದಿರುವ ಬಗೆಗೆ ಊಹಿಸಲಾಗಿದೆ. ಗೋಕಾಕನ ತಾಮ್ರಪಟ ಶಾಸನ ಬಾದಾಮಿಯ ಚಾಲುಕ್ಯರ ಕಾಲದ್ದೆಂದು ವಿದ್ವಾಂಸರಾದ ಕೆ. ವ್ಹಿ. ರಮೇಶರವರು ಅಭಿಪ್ರಾಯ ಪಟ್ಟಿದ್ದಾರೆ.

ಬೆಳಗಾವಿ ಜಿಲ್ಲೆಯ ನೇಸರ್ಗಿ, ಗೋಕಾಕ, ಸವದತ್ತಿ, ಅನುಟಿ ಮುಂತಾದ ಕಡೆ ಕುಂದರನಾಡಿನಲ್ಲಿ ರಾಷ್ಟ್ರಕೂಟರ ಕಾಲದ ಅನೇಕ ಶಾಸನಗಳು ಸಿಕ್ಕಿದ್ದು, ಅವು ಚರಿತ್ರೆಯನ್ನು

ಕಟ್ಟಿಕೊಳ್ಳಲು ಸಹಾಯಕವಾಗಿವೆ. ಕುಂದರನಾಡಿನ ಪರಿಸರದಲ್ಲಿ ರಾಷ್ಟ್ರಕೂಟ ಕಾಲದ ಶಾಸನಗಳು ದೊರಕಿವೆ. ಅದರಲ್ಲಿ ಗೋಕಾಕನಲ್ಲಿ ದೊರೆತ ಮೂರು ತಾಮ್ರಪಟ ಶಾಸನ, ರಾಷ್ಟ್ರಕೂಟರ ಆಡಳಿತಕ್ಕೆ ಸಂಬಂಧಿಸಿವೆ. ಈ ಶಾಸನ ಇಡೀ ದಕ್ಷಿಣ ಭಾರತದಲ್ಲಿಯೇ ಅವರಿಗೆ ಸಂಬಂಧಿಸಿದ ಅತ್ಯಂತ ಪ್ರಾಚೀನ ಶಾಸನವಿದ್ದು, ಈ ಪರಿಸರದಲ್ಲಿ ಸಿಗುವ ಸ್ಪಷ್ಟ ಹೆಚ್ಚು ವಿವರಗಳನ್ನು ನೀಡುವ ಶಾಸನಗಳು ರಾಷ್ಟ್ರಕೂಟರ ಕಾಲದವು ಎಂಬುವುದು ಮಹತ್ವವಾದುದು. ಕ್ರಿ.ಶ. ೬ನೆಯ ಶತಮಾನಕ್ಕೆ ಸೇರಿದ ಉಲ್ಲೇಖವಿದೆ. ಈ ಶಾಸನದಲ್ಲಿ 'ದೇಜ್ಜಮಹಾರಾಜ' ಎಂಬ ದೊರೆಯ ಉಲ್ಲೇಖಗಳಿವೆ.

ಬದಾಮಿ ಚಾಲುಕ್ಯರ ವಂಶದವರೆಂದು ಕರೆದುಕೊಳ್ಳುವ ಕಲ್ಯಾಣದ ಚಾಲುಕ್ಯರು ರಾಷ್ಟ್ರಕೂಟರನ್ನು ಪದಚ್ಯುತಿಗೊಳಿಸಿ ಅಧಿಕಾರವನ್ನು ಪಡೆದರು. ಕ್ರಿ.ಶ. ೯೭೩ ರಲ್ಲಿ ಇಮ್ಮಡಿ ತೈಲನು ಪಟ್ಟಕ್ಕೆ ಬಂದನು. "ಸು. ೨೦೦ ವರ್ಷಗಳ ಕಾಲ ಕರ್ನಾಟಕದ ಪ್ರದೇಶವನ್ನು ಅಲ್ಲಿದ್ದ ಈ ಮನೆತನ ಸಾಂಸ್ಕೃತಿಕ ಕ್ಷೇತ್ರಕ್ಕೆ ವಿಶೇಷ ಕೊಡುಗೆ ನೀಡಿದೆ. ಇವರಿಗೆ ಸಂಬಂಧಿಸಿದ ಶಾಸನಗಳು ಬೆಳಗಾವಿ ಜಿಲ್ಲೆಯಲ್ಲಿ ಲಭ್ಯವಾಗಿವೆ. ವಿಶೇಷವಾಗಿ ಆರನೆಯ ವಿಕ್ರಮಾದಿತ್ಯ, ಎರಡನೆಯ ಜಯಸಿಂಹ, ಒಂದನೆಯ ಸೋಮೇಶ್ವರನ ಕಾಲಕ್ಕೆ ಸಂಬಂಧಿಸಿದ್ದವುಗಳಾಗಿವೆ. ಕಲ್ಯಾಣದ ಚಾಲುಕ್ಯರ ಆಧೀನ ಅಧಿಕಾರಿಗಳಾಗಿ ಸವದತ್ತಿಯ ರಟ್ಟರು ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ್ದಾರೆ. ರಟ್ಟರು ಕೂಹಂಡಿ-೩೦೦೦ ಆಡಳಿತ ವಿಭಾಗದ ಅಧಿಪತಿಗಳಾಗಿದ್ದರು"[೩೩]. "ಕುಂದರನಾಡಿನ ಪರಿಸರದಲ್ಲಿ ಕಲ್ಯಾಣ ಚಾಲುಕ್ಯ ಅರಸರ ಹಾಗೂ ಕಾಲದ ಸಾಮಂತರ ಹಲವಾರು ಶಾಸನಗಳು ಲಭ್ಯವಾಗಿವೆ. ಈ ಮೂಲಾಧಾರಗಳೆಲ್ಲಾ ಆ ಕಾಲದ ಚರಿತ್ರೆಯನ್ನು ನಿರೂಪಿಸುವ ಜೊತೆಗೆ ಸಮಕಾಲೀನ ಇತರ ವಿಷಯಗಳನ್ನು ಸಹ ಉಲ್ಲೇಖಿಸುತ್ತವೆ. ಕ್ರಿ.ಶ. ೧೦೩೨ ಕೊಣ್ಣೂರು ಶಾಸನ"[೩೪]ದಲ್ಲಿ ಎರಡನೆಯ ಜಯಸಿಂಹನ ಪುತ್ರ ಒಂದನೆಯ ಸೋಮೇಶ್ವರ (ಅಹಮಲ್ಲ) ಈ ಪ್ರದೇಶದಲ್ಲಿ ಯುವರಾಜನಾಗಿ ಆಳುತ್ತಿದ್ದನೆಂದು, ಆತ ಪರಮಾರಭೋಜನ ವಿರುದ್ಧ ಯುದ್ಧ ಮಾಡಿ, ಅವನ ರಾಜಧಾನಿ ಧಾರಾನಗರವನ್ನು ಸುಟ್ಟು ಹಾಕಿದನು. ಅಲ್ಲದೇ ಮಾಂಡವರನ್ನು ಗೆದ್ದನೆಂದು ಶಾಸನಗಳು ವಿವರಿಸುತ್ತದೆ. "ಕೊಣ್ಣೂರಿನ ಕಲಿಯಮೇಶ್ವರ ದೇವಾಲಯಕ್ಕೆ ಭೂಮಿ, ಮನೆ, ನಿವೇಶನ, ಎಣ್ಣೆಯ ಗಾಣ ಹಾಗೂ ಆರು ಗದ್ಯಾಣ ಹಣವನ್ನು ದಾನ ನೀಡಿದ ಮಾಹಿತಿಯೂ ಇದೆ. ಇಲ್ಲಿಯ ಕ್ರಿ.ಶ. ೧೦೮೨ರ ಶಾಸನವು"[೩೫] ಆರನೆಯ ವಿಕ್ರಮಾದಿತ್ಯನ ಆಳ್ವಿಕೆಯನ್ನು ಕುರಿತು ತಿಳಿಸುತ್ತದೆ.

"ಕಲ್ಯಾಣ ಚಾಲುಕ್ಯರ ಜಯಸಿಂಹನ ಸಹೋದರಿ ಅಕ್ಕಾದೇವಿಯು ಕಿಸುಕಾಡು-೭೦ ವಿಭಾಗದಲ್ಲಿ ನಡೆಸುತ್ತಿದ್ದ ಬಗ್ಗೆ ಬಾಗಲಕೋಟ ಜಿಲ್ಲೆಯ ಹುನಗುಂದ ತಾಲೂಕಿನ ಅರಸಿಬೀದಿ ಶಾಸನದಲ್ಲಿ ಉಲ್ಲೇಖಗಳಿವೆ. ಈಕೆ ಕಿಸುಕಾಡು ಎಪ್ಪತ್ತು ಆಡಳಿತ ವಿಭಾಗದ ರಾಜಧಾನಿ ಕೇಂದ್ರವಾಗಿತ್ತು. ಶಾಸನಗಳಲ್ಲಿ ಇದನ್ನು ವಿಕ್ರಮಪೂರ (ಅರಸಿಬೀದಿ) ಎಂದು ಕರೆಯಲಾಗಿದೆ. ರಾಣಿ ಅಕ್ಕಾದೇವಿಯು ಗೋಕಾಕ ನಗರಕ್ಕೆ ಮುತ್ತಿಗೆ ಹಾಕಿದ ವಿಷಯವು ಅರಸಿಬೀದಿ ಶಾಸನದಿಂದ ತಿಳಿದುಬರುತ್ತದೆ"[೩೬]. ಇದೇ ಸಂದರ್ಭದಲ್ಲಿ ವಿಕ್ರಮಪುರದ ಗುಣದ ಬೆಂಡಗಿ ಜಿನಾಲಯಕ್ಕೆ ದಾನ ನೀಡಿದ ಉಲ್ಲೇಖಗಳು

ಇವೆ. ಈಕೆಗೆ ರಣಭೈರವಿ ಎಂಬ ಬಿರುದಿತ್ತು. ಮುತ್ತಿಗೆಯ ಸಂದರ್ಭದಲ್ಲಿ ಗೋಕಾಗೆಯಲ್ಲಿದ್ದ ಗೋವೆಯ ಕದಂಬರ ಸಾಮಂತನನ್ನು ಸೋಲಿಸಿದ್ದಾಗಿ ಶಾಸನದಿಂದ ತಿಳಿದು ಬರುತ್ತದೆ.

ಬೆಳಗಾವಿ ಜಿಲ್ಲೆ ಮತ್ತು ಕುಂದರಗಿ ಪರಿಸರದಲ್ಲಿ ಸುದೀರ್ಘವಾಗಿ ಆಳಿದ ಪ್ರಾಚೀನ ರಾಜಕೀಯ ಮನೆತನವೆಂದರೆ ಸವದತ್ತಿಯ ರಟ್ಟರ ಮನೆತನ. "ಸವದತ್ತಿ ಅವರ ಕೇಂದ್ರಸ್ಥಾನ ಇದಕ್ಕೆ ಪ್ರಾಚೀನ ಕಾಲದಲ್ಲಿ 'ಸುಗಂಧವರ್ತಿ' ಎಂದು ಕರೆಯುತ್ತಿದ್ದರು"[೩೭]. ಆಧುನಿಕ ಕಾಲದಲ್ಲಿ ಇದನ್ನು ಪರಸಗಡ ಎಂದು, ಈಗೀಗ ಎಲ್ಲಮ್ಮನ ಸವದತ್ತಿ ಎಂದು ಕರೆಯುವ ವಾಡಿಕೆಯಿದೆ. ಸವದತ್ತಿ ಸಂಸ್ಕೃತಿ ರೂಪ 'ಸುಗಂಧವರ್ತಿ' ಈ ಪ್ರದೇಶದಲ್ಲಿ ಆಳಿದ ರಟ್ಟರು, ರಾಜಕೀಯ ಕ್ಷೇತ್ರದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರು. ಕೂಹಂಡಿ-೩೦೦೦ ನಾಡಿನ ಅಧಿಪತಿಗಳಾಗಿದ್ದು ಇವರು ಸಾಮಂತರಾಗಿ ಹಾಗೂ ಸ್ವತಂತ್ರರಾಗಿ ಸು. ೩೦೦ ವರ್ಷಗಳ ಕಾಲ ಆಳ್ವಿಕೆ ನಡೆಸಿದರು. ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ ಹಾಗೂ ಕಲಚೂರಿ ಅರಸರ ಸಾಮಂತರಾಗಿದ್ದರು. ಕಲಚೂರಿಗಳ ಪ್ರಾಬಲ್ಯ ಕ್ಷೀಣಿಸಿದ ಮೇಲೆ ಇವರು ಕೆಲವು ವರ್ಷಗಳ ಕಾಲ ಸ್ವತಂತ್ರರಾಗಿ ಆಳಿದರು. ಕೂಹಂಡಿ-೩೦೦೦ ನಾಡು ಅಂದು ಕುಂತಲ ದೇಶದ ವಿಭಾಗವಾಗಿತ್ತು. ಈ ನಾಡಿನ ವಿಸ್ತಾರ ಉತ್ತರಕ್ಕೆ ಕೃಷ್ಣಾ, ದಕ್ಷಿಣಕ್ಕೆ ಮಲಪ್ರಭಾ ಮತ್ತು ಸವದತ್ತಿಯ ಭಾಗ, ಪೂರ್ವಕ್ಕೆ ತೊರಗಲೆನಾಡು ಮತ್ತು ಬಲುವಲ-೩೦೦ ಆಡಳಿತ ವಿಭಾಗ ಹಾಗೂ ಪಶ್ಚಿಮದಲ್ಲಿ ಮಹಾರಾಷ್ಟ್ರದ ಗಡಹಿಂಗ್ಲಜ ಮತ್ತು ಚಂದಗಡ ಪ್ರದೇಶವರೆಗೆ ವಿಸ್ತರಿಸಿತ್ತು. ಬೆಳಗಾವಿ ಜಿಲ್ಲೆಯ ಯಕ್ಸಂಬಾ, ಭೋಜ, ನೇಸರ್ಗಿ, ಕೊಣ್ಣೂರು, ಗೋಕಾಕ, ಸಂಕೇಶ್ವರ, ಖಾನಾಪೂರ, ಕಲ್ಲೋಳ್ಳಿ, ಅಸುಂಡಿ, ಸವದತ್ತಿ ಮುಂತಾದ ಕಡೆ ಅವರ ಶಾಸನಗಳು ಲಭ್ಯವಾಗಿವೆ. ಇವು ಆ ಮನೆತನದ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡಲು ಸಹಾಯಕವಾಗಿವೆ.

"ಕೊಣ್ಣೂರು ಪರಿಸರದಲ್ಲಿ ರಟ್ಟರ ಕಾಲಕ್ಕೆ ಸಂಬಂಧಿಸಿದ ಹಲವಾರು ಶಾಸನಗಳು ನಮಗೆ ಲಭ್ಯವಾಗಿವೆ. ಗೋಕಾಕ ಜಲಪಾತದ ಹತ್ತಿರವಿರುವ ಮಹಾಲಿಂಗೇಶ್ವರ ದೇವಾಲಯದ ಶಾಸನದಲ್ಲಿ"[೩೮] ರಟ್ಟರು ತಮ್ಮನ್ನು ಲತ್ತಲೂರು ಪುರವಾಧೀಶರೆಂದು ಕರೆದುಕೊಂಡಿದ್ದಾರೆ. ಸ್ವಸಾಮರ್ಥ್ಯದಿಂದ ಸಾಮಂತರಾಗಿ, ಮಹಾಸಾಮಂತರಾಗಿ, ಮಾಂಡಲಿಕರಾಗಿ, ಮಹಾಮಂಡಲಿಕರಾಗಿ ಹಾಗೂ ಕೆಲ ಕಾಲ ಸ್ವತಂತ್ರ ದೊರೆಗಳಾಗಿ ಆಳ್ವಿಕೆ ನಡೆಸಿದರು.

"ರಟ್ಟರು ಮೊದಲ ಶಾಖೆ ಮೈಲಾಪ ತೀರ್ಥನೆಂಬ ಗುರು ಸ್ಥಾಪಿಸಿದ ಕಾರೇಯ ಗಣ (ಪಂಥ)ದ ಪೃಥ್ವಿರಾಮನು ರಟ್ಟರ ಮೂಲ ಪುರುಷ"[೩೯]. ಈತ ಮೂರನೆಯ ಕೃಷ್ಣನ ಕಾಲದಲ್ಲಿ ಮಹಾಸಾಮಂತ ಅಥವಾ ಮಹಾಮಂಟಳೇಶ್ವರನಾಗಿದ್ದ. ಮೇರದನನ್ನು ಕೇವಲ ಪೃಥ್ವಿರಾಮನ ತಂದೆ ಎಂದು ಮಾತ್ರ ಉಲ್ಲೇಖಿಸಲಾಗಿದೆ. ನನ್ನ ದೊರೆಗೆ ನನ್ನಪ್ಪಯ್ಯ ಎಂದು ಹೆಸರು ಇದ್ದು ಸವದತ್ತಿ ರಟ್ಟರ ಆಡಳಿತದ ಸ್ಥಾಪಕನಾದ ಈತನಿಗೆ 'ರಟ್ಟವಂಶೋದ್ಭವಃ ಖ್ಯಾತೋನನ್ನ ಭೂಸನಂದನಃ'

ಎಂದು ಕರೆಯಲಾಗಿದೆ. ಈತನ ನಂತರ ಕತ್ತ ಅಥವಾ ಒಂದನೆಯ ಕಾರ್ತವೀರ್ಯ, ದಾಯಿಮ, ಒಂದನೆಯ ಕಣ್ಣ, ಯರಗ, ಅಂಕ ಅಥವಾ ಅಂಕಪಾಲ, ಒಂದನೆಯ ಸೇನ, ಎರಡನೆಯ ಕಣ್ಣ, ಎರಡನೆಯ ಕಾರ್ತವೀರ್ಯ, ಎರಡನೆಯ ಸೇನ, ಮೂರನೆಯ ಕಾರ್ತವೀರ್ಯ ಆಳ್ವಿಕೆ ನಡೆಸಿದರು. ಇವನು ಬಿಜ್ಜಳನ ಮಗ. ಸೋಮದೇವನ ಸಾಮಂತನಾಗಿದ್ದನು. ಇವನ ನಂತರ ಒಂದನೆಯ ಲಕ್ಷ್ಮೀದೇವ ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿಯೇ ವೇಣುಗ್ರಾಮ (ಬೆಳಗಾವಿ) ಸವದತ್ತಿ ರಟ್ಟರ ರಾಜಧಾನಿಯಾಗಿತ್ತು. ನಂತರ ನಾಲ್ಕನೆಯ ಕಾರ್ತವೀರ್ಯ ಅಧಿಕಾರಕ್ಕೆ ಬಂದನು. ರಟ್ಟರ ವಂಶದಲ್ಲಿಯೇ ಇತನು ಪ್ರಸಿದ್ಧ ದೊರೆ. ಇವನ ಕಾಲದಲ್ಲಿಯೇ ಬೆಳಗಾವಿ ಕಮಲ ಬಸದಿ ನಿರ್ಮಿತವಾಯಿತು. ಕೊಣ್ಣೂರಿನ ಶಾಸನದಲ್ಲಿ ರಟ್ಟರ ಸೇನೆಮಲ್ಲನ ಬಗ್ಗೆ ಉಲ್ಲೇಖಗಳಿವೆ. ಈತ ಆರನೆಯ ವಿಕ್ರಮಾದಿತ್ಯನ ಮಹಾಸಾಮಂತನಾಗಿದ್ದನು. ಇವನ ನಂತರ ಬಂದ ಎರಡನೆಯ ಕಣ್ಣ ಕೂಡ ಆರನೆಯ ವಿಕ್ರಮಾದಿತ್ಯನ ಸಾಮಂತನಾಗಿ ಆಳ್ವಿಕೆ ನಡೆಸಿದನು. ಕೊಣ್ಣೂರಿನ ಮತ್ತೊಂದು ಶಾಸನದಲ್ಲಿ ರಟ್ಟರ ಮೂರನೆಯ ಕಾರ್ತವೀರ್ಯನ ಉಲ್ಲೇಖಗಳಿವೆ.

"ಕಲಚೂರಿಗಳು ಕರ್ನಾಟಕದಲ್ಲಿ ಕಲ್ಯಾಣ ಚಾಲುಕ್ಯ ದೊರೆಗಳ ಸಾಮಂತರಾಗಿ ತದನಂತರ ಸ್ವತಂತ್ರರಾಗಿ ಆಳಿದರು. ಕಲ್ಯಾಣದ ಚಾಲುಕ್ಯರ ಸಂಬಂಧಿಕರೂ ಆಗಿದ್ದ ಇವರು ಬಿಜ್ಜಳನ ಕಾಲದಲ್ಲಿ ಪ್ರಾಬಲ್ಯಕ್ಕೆ ಬಂದರು. ಬೆಳಗಾವಿ ಜಿಲ್ಲೆಯಲ್ಲಿ ಇವರ ಕಾಲದ ಸಾಕಷ್ಟು ಶಾಸನಗಳು ಲಭ್ಯವಾಗಿದ್ದು, ಅದೇ ರೀತಿಯಾಗಿ ಕೊಣ್ಣೂರು ಪರಿಸರದಲ್ಲಿಯೂ ಇವರನ್ನು ಉಲ್ಲೇಖಿಸುವ ಕೆಲವು ಶಾಸನಗಳು ಲಭ್ಯವಾಗಿವೆ. ಗೋಕಾಕ್ ಜಲಪಾತದ ಹತ್ತಿರವಿರುವ ಮಹಾಲಿಂಗೇಶ್ವರ ದೇವಾಲಯದಲ್ಲಿರುವ ಶಾಸನಗಳಲ್ಲಿ ಕಲಚೂರಿ ದೊರೆಗಳನ್ನು ಕುರಿತು ಉಲ್ಲೇಖಗಳಿವೆ"[೬೦]. ಕಲಚೂರಿಗಳ ಕಾಲದ ಕೆಲವು ಅಧಿಕಾರಿಗಳನ್ನು ಪ್ರಸ್ತಾಪಿಸಲಾಗಿದೆ. ಅದರಲ್ಲಿಯೂ ವಿಶೇಷವಾಗಿ ಕಲಚೂರಿ ಚಕ್ರವರ್ತಿ ಭೂಜಬಲಮಲ್ಲ ಹಾಗೂ ತ್ರಿಭುವನಮಲ್ಲ ಸೋವಿದೇವನ ಉಲ್ಲೇಖಗಳಿವೆ. ಕುಂದರಗಿ ಕಂಪಣದಲ್ಲಿದ್ದ ಕೊಂಡಸೂರಿನ (ಕೊಣ್ಣೂರ)ನಲ್ಲಿ ತಟೇಶ್ವರ ದೇವಾಲಯಕ್ಕೆ ಅಧಿಕಾರಿಯಾದ ಪೆರ್ಗಡೆ ಧನ್ನುಗದೇವನು ದಾನ-ದತ್ತಿಗಳನ್ನು ನೀಡಿದ ಮಾಹಿತಿಗಳಿವೆ.

ರಟ್ಟರ ಅಧಿಕಾರವನ್ನು ಅಂತ್ಯಗೊಳಿಸಿದ ದೇವಗಿರಿಯ ಸೇವುಣರು ಬೆಳಗಾವಿ ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದವರೆನ್ನಲು ಹಲವಾರು ಪುರಾವೆಗಳಿವೆ. ಗೋಕಾಕ ತಾಲ್ಲೂಕಿನ ಮಮದಾಪುರದಲ್ಲಿ ದೊರೆತ ಶಾಸನವು ಸೇವುಣರ ದೊರೆ ಕನ್ನರಸನ (ಕನ್ನರ) ಕಾಲದ್ದು, ಮಾಳವ, ಗೂರ್ಜರನ್ನು ಸೋಲಿಸಿದ್ದಾಗಿ ಹಾಗೂ ದೇವಗಿರಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಿರ್ವಹಿಸಿದರು ದಾಖಲೆಗಳಿವೆ.

ರಟ್ಟರ ನಂತರ ದೇವಗಿರಿ ಯಾದವರು ಬೆಳಗಾವಿ ಪರಿಸರದಲ್ಲಿ ಆಳ್ವಿಕೆಯನ್ನು ನಡೆಸಿದರು. ಇವರ ನಂತರ ವಿಜಯನಗರ ಸಾಮ್ರಾಜ್ಯದವರು ಬಿಜಾಪೂರ ಶಾಹಿ ಸುಲ್ತಾನರು, ಮರಾಠರು ಆಳ್ವಿಕೆ ನಡೆಸಿ ಇಲ್ಲಿ ಹಲವಾರು ಕೋಟೆ-ಕೊತ್ತಲಗಳನ್ನು ಮತ್ತು ದೇವಾಲಯಗಳನ್ನು ನಿರ್ಮಿಸಿದರು.

೧೮೧೮ರ ನಂತರ ಬೆಳಗಾವಿ ಜಿಲ್ಲೆಯಲ್ಲಿ ವಸಾಹತುಶಾಹಿಗಳು ತಮ್ಮ ಪ್ರಾಬಲ್ಯವನ್ನು ಸಾಧಿಸಿದರು. ೧೮೨೪ರಲ್ಲಿ ಕಿತ್ತೂರಿನ ಮೇಲೆ ದಾಳಿ ಮಾಡಿ ಆ ರಾಜ್ಯವನ್ನು ವಶಪಡಿಸಿಕೊಂಡರು. ಮುಂದೆ ೧೯೦೦ರ ನಂತರ ಬ್ರಿಟಿಷರ ವಿರುದ್ಧ ಹಲವಾರು ಹೋರಾಟಗಳು ತೀವ್ರಸ್ವರೂಪವನ್ನು ಪಡೆದುಕೊಂಡವು. ಅಸಹಕಾರ ಚಳುವಳಿ, ಅರಣ್ಯ ಸತ್ಯಾಗ್ರಹ, ಖಾದಿ ಪ್ರಚಾರ, ವಿದೇಶಿ ವಸ್ತುಗಳ ಬಹಿಷ್ಕಾರ ಮತ್ತು ಕ್ವಿಟ್ ಇಂಡಿಯಾ ಚಳುವಳಿಗಳಂತಹ ಬ್ರಿಟಿಷರ ಕಾಲದಲ್ಲಿ ಜರುಗಿದವು. ಇವುಗಳ ಬಗ್ಗೆ ಮುಂದಿನ ಅಧ್ಯಾಯದಲ್ಲಿ ಸವಿವರವಾಗಿ ಚರ್ಚಿಸಲಾಗಿದೆ.

**ಕೊನೆ ಟಿಪ್ಪಣಿಗಳು :**

೧. ಹರದಗಟ್ಟಿ. ಎಸ್. ಎಂ. (ಸಂ) : ಬೆಳಗಾವಿ ಸಿರಿ : ಕುಂದರನಾಡು ಸ್ವಾತಂತ್ರ್ಯ ಸಂಗ್ರಾಮ : ಪ್ರೊ. ಶಿವಲಿಂಗ ಭಾವಿಕಟ್ಟಿ (ಲೇ) : ಸ್ಮರಣ ಸಂಚಿಕೆ : ಪು.ಸಂ–೧೧೫

೨. ಅದೇ : ಪು.ಸಂ–೧೧೫

೩. ದೇಶಪಾಂಡೆ ನಾರಾಯಣ ಖಂಡೋ ಮತ್ತು ಭದ್ರಕಾಳಿ ಚನಗೌಡ (ಸಂ), ಸುವರ್ಣ ಚರಕ : ಪು.ಸಂ–೫೬

೪. ಅದೇ : ಪು.ಸಂ–೫೬

೫. ಅದೇ : ಪು.ಸಂ–೫೬

೬. ಅದೇ : ಪು.ಸಂ–೫೬

೭. ಅದೇ : ಪು.ಸಂ–೫೮

೮. ಅದೇ : ಪು.ಸಂ–೬೮

೯. ಹಂಡಗಿ ಸಂಗಮೇಶ ಮತ್ತು ದಾನಪ್ಪಗೌಡರ ಎನ್. ಪಿ (ಸಂ) : ಕುಂದರ ನಾಡಿನ ಕುಂದಣ : ಸ್ಮರಣ ಸಂಚಿಕೆ : ಪು.ಸಂ–೦೧

೧೦. ಸೂರ್ಯನಾಥ ಕಾಮತ್ : ಬೆಳಗಮ್ ಡಿಸ್ಟ್ರಿಕ್ಟ್ ಗ್ಯಾಝೆಟೀಯರ : ಕರ್ನಾಟಕ ಸರ್ಕಾರ, ಬೆಂಗಳೂರು : ಪು.ಸಂ–೫೪

೧೧. ಪಂಚಮುಖಿ ಆರ್. ಎಸ್. : ಆರ್ಕಿಯಾಲಜಿ ಆಫ್ ಕರ್ನಾಟಕ : ಪು.ಸಂ–೧೬

೧೨. ಷೇಕ್ ಅಲಿ. ಬಿ. (ಸಂ) : ಕರ್ನಾಟಕ ಚರಿತ್ರೆ – ಸಂ–೧ : ಪು.ಸಂ–೭

೧೩. ಪಪ್ಪು ಆರ್. ಎಸ್. ಮತ್ತು ದೇವ್ ಎಸ್. ಜಿ. : ಮ್ಯಾನ್ ಲ್ಯಾಂಡ್ ರಿಲೇಶನ್ಸ್ ಡ್ಯುರಿಂಗ್ ಪೇಲಿಯೋಲಿಥಿಕ್ ಟೈಮ್ಸ್ ಇನ್ ದ ಕಲಾದಗಿ ಬೇಸಿನ್ : ಪು.ಸಂ–೭

೧೪. ಪಂಚಮುಖಿ ಆರ್. ಎಸ್. : ಆರ್ಕಿಯಾಲಜಿ ಆಫ್ ಕರ್ನಾಟಕ : ಪು.ಸಂ–೧೭

೧೫. ಪಪ್ಪು ಆರ್. ಎಸ್. ಮತ್ತು ದೇವ್ ಎಸ್. ಜಿ. : ಮ್ಯಾನ್ ಲ್ಯಾಂಡ್ ರಿಲೇಶನ್ಸ್ ಡ್ಯುರಿಂಗ್ ಪೇಲಿಯೋಲಿಥಿಕ್ ಟೈಮ್ಸ್ ಇನ್ ದ ಕಲಾದಗಿ ಬೇಸಿನ್ : ಪು.ಸಂ–೭

೧೬. ಜೆಮ್ಸ್ ಎಮ್. ಕಾಂಬೆಲ್ : ಬೆಳಗಮ್ ಡಿಸ್ಟ್ರಿಕ್ಟ್ ಗ್ಯಾಝೆಟೀಯರ : ಪು.ಸಂ–೧೮

೧೭. ಪಂಚಮುಖಿ ಆರ್. ಎಸ್. : ಆರ್ಕಿಯಾಲಜಿ ಆಫ್ ಕರ್ನಾಟಕ : ಪು.ಸಂ–೧೮

೧೮. ಪಪ್ಪು ಆರ್. ಎಸ್. ಮತ್ತು ದೇವ್ ಎಸ್. ಜಿ. : ಮ್ಯಾನ್ ಲ್ಯಾಂಡ್ ರಿಲೇಶನ್ಸ್ ಡ್ಯುರಿಂಗ್ ಪೇಲಿಯೋಲಿಥಿಕ್ ಟೈಮ್ಸ್ ಇನ್ ದ ಕಲಾದಗಿ ಬೇಸಿನ್ : ಪು.ಸಂ–೭

೧೯. ಜೆಮ್ಸ್ ಎಮ್. ಕಾಂಬೆಲ್ : ಬೆಳಗಮ್ ಡಿಸ್ಟ್ರಿಕ್ಟ್ ಗ್ಯಾಝೆಟೀಯರ : ಪು.ಸಂ–೧೯

೨೦. ಪಪ್ಪು ಆರ್. ಎಸ್. ಮತ್ತು ದೇವ್ ಎಸ್. ಜಿ. : ಮ್ಯಾನ್ ಲ್ಯಾಂಡ್ ರಿಲೇಶನ್ಸ್ ಡ್ಯುರಿಂಗ್ ಪೇಲಿಯೋಲಿಥಿಕ್ ಟೈಮ್ಸ್ ಇನ್ ದ ಕಲಾದಗಿ ಬೇಸಿನ್ : ಪು.ಸಂ–೭

೨೧. ಅಕ್ಕಿ ಚಂದ್ರಶೇಖರ ಮತ್ತು ಮಹಾಲಿಂಗ ಮಂಗಿ : ಗೋಕಾಕ ಸಿರಿ ಸಂಪದ : ಪು.ಸಂ–೧೬

೨೨. ಜೆವ್ಸ್ ಎವ್. ಕಾಂಬೆಲ್ : ಬೆಳಗವ್ ಡಿಸ್ಟ್ರಿಕ್ಟ್ ಗ್ಯಾರೆಝಟೀಂಯರ : ಪು.ಸಂ–೩೫–೩೬

೨೩. ಪಪ್ಪು ಆರ್. ಎಸ್. ಮತ್ತು ದೇವ್ ಎಸ್. ಜಿ. : ಮ್ಯಾನ್ ಲ್ಯಾಂಡ್ ರಿಲೇಶನ್ಸ್ ಡ್ಯುರಿಂಗ್ ಪೇಲಿಯೋಲಿಥಿಕ್ ಟೈಮ್ಸ್ ಇನ್ ದ ಕಲಾದಗಿ ಬೇಸಿನ್ : ಪು.ಸಂ–೫೯

೨೪. ಅದೇ : ಪು.ಸಂ–೬೧

೨೫. ಜೆಮ್ಸ್ ಎಮ್. ಕಾಂಬೆಲ್ : ಬೆಳಗಮ್ ಡಿಸ್ಟ್ರಿಕ್ಟ್ ಗ್ಯಾಝೆಟೀಯರ : ಪು.ಸಂ–೩೫

೨೬. ಮುತಾಲಿಕ್. ಆರ್. ಆರ್. : ಹುಕ್ಕೇರಿ ತಾಲೂಕು ದರ್ಶನ : ಪು.ಸಂ–೭

೨೭. ಅದೇ : ಪು.ಸಂ–೭

೨೮. ಹಿರೇಮಠ ಆರ್. ಸಿ ಮತ್ತು ಕಲಬುರ್ಗಿ ಎಂ ಎಂ., : ಕನ್ನಡ ಶಾಸನ ಸಂಪದ : ಪು.ಸಂ–೧೩೬

೨೯. ಪಾಟೀಲ್.ಎಸ್. ಬಿ. : ಕೂಹಂಡಿ ನಾಡು : ಪು.ಸಂ–೧೭

೩೦. ಗೊಂಜಾಳ ಎಸ್. ಆರ್. : ಬೆಳಗಾವಿ ಬೆಳಕು : ಪು.ಸಂ–೪

೩೧. ಗೋಪಾಲ್.ಬಿ.ಆರ್. : ಕಾರ್ಪಸ್ ಆಪ್ ಕದಂಬ ಇನ್‌ಸ್ಕ್ರಿಪ್ಷನ್ಸ್ : ಪು.ಸಂ–೧೭೪–೧೭೫

೩೨. ಅನ್ಯವಲ್ ರಿಪೋರ್ಟ ಆಫ್ ಇಂಡಿಯನ್ ಎಪಿಗ್ರಾಫಿ : ೧೯೪೦–೪೧, ಅಪೆಂಡಕ್ಸ್, ಇ.ನಂ–೮೮, ಕಲ್ಕತ್ತಾ,

೩೩. ಕಾಮತ್ ಸೂರ್ಯನಾಥ : ಕರ್ನಾಟಕದ ಸಂಕ್ಷಿಪ್ತ ಇತಿಹಾಸ : ಪು.ಸಂ–೮೭

೩೪. ಕರ್ನಾಟಕ ಇನ್ಸ್ಕ್ರಿಪ್ಷನ್ಸ್ : ಸಂಪಟ–೦೬ : ಪು.ಸಂ–೨೨

೩೫. ಅನ್ಯವಲ್ ರಿಪೋರ್ಟ ಆಫ್ ಇಂಡಿಯನ್ ಎಪಿಗ್ರಾಫಿ : ೧೯೫೨–೫೩, ಅಪೆಂಡಕ್ಸ್, ಬಿ.ನಂ–೫೩, ಕಲ್ಕತ್ತಾ,

೩೬. ದೇವರಕೊಂಡಾರೆಡ್ಡಿ. (ಸಂ): ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೦೯ : ಪು.ಸಂ–೧೧೦

೩೭. ಪಾಟೀಲ್ ಎಸ್. ಬಿ. : ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ : ಪು.ಸಂ–೭೪

೩೮. ಅನ್ಯವಲ್ ರಿಪೋರ್ಟ ಆಫ್ ಇಂಡಿಯನ್ ಎಪಿಗ್ರಾಫಿ : ೧೯೫೨–೫೩, ಅಪೆಂಡಕ್ಸ್, ಬಿ.ನಂ–೫೨, ಕಲ್ಕತ್ತಾ,

೩೯. ಬಾಂಬೆ ಕರ್ನಾಟಕ ಇನ್ಸ್ಕ್ರಿಪ್ಷನ್ಸ್ : ೧೯೨೮–೨೯ : ಸಂಖ್ಯೆ–೯೧

೪೦. ಅನ್ಯವಲ್ ರಿಪೋರ್ಟ ಆಫ್ ಇಂಡಿಯನ್ ಎಪಿಗ್ರಾಪಿ : ೧೯೫೨–೫೩, ಅಪೆಂಡಕ್ಸ್, ಬಿ.ನಂ–೫೩, ಕಲ್ಕತ್ತಾ,

# ಅಧ್ಯಾಯ – ೩
# ಕುಂದರನಾಡಿನ ಸ್ವಾತಂತ್ರ್ಯ ಚಳುವಳಿ: ಚಾರಿತ್ರಿಕ ಹಿನ್ನೆಲೆ ಮತ್ತು ಸ್ವರೂಪ

## ೩.೧ ಚಾರಿತ್ರಿಕ ಹಿನ್ನೆಲೆ :

ಭಾರತೀಯ ಸಾಮಾಜಿಕ ಮತ್ತು ರಾಜಕೀಯ ವಿಷಮತೆ ಮತ್ತು ಶಿಥಿಲತೆಯ ಪ್ರಯೋಜನವನ್ನು ಪಾಶ್ಚಾತ್ಯ ಆಕ್ರಮಣಕಾರರು ಮಧ್ಯಯುಗದಲ್ಲಿ ಚೆನ್ನಾಗಿ ಪಡೆದುಕೊಂಡರು. ಕಂಪನಿ ಸರಕಾರವು ಭಾರತೀಯರನ್ನು ಗುಲಾಮರಂತೆ ನಡೆಸಿಕೊಳ್ಳುತ್ತಿತ್ತು. ಬ್ರಿಟಿಷರದು ಸಾಂಸ್ಕೃತಿಕ ಹಿನ್ನೆಲೆಯ ಆಡಳಿತವಾಗಿರಲಿಲ್ಲ. ಕಂಪನಿ ಸರಕಾರದ ಚಟುವಟಿಕೆಗಳು ವ್ಯಾಪಾರಕ್ಕೆ ಮಾತ್ರ ಸೀಮಿತವಾಗಿದ್ದವು. ಇದಲ್ಲದೆ ಬ್ರಿಟಿಷರು ಯೂರೋಪಿಯನ್ ಸ್ಪರ್ಧಿಗಳೊಡನೆ ಸಶಸ್ತ್ರ ಹೋರಾಟ ಪ್ರಾರಂಭಿಸಿ, ವ್ಯಾಪಾರದಲ್ಲಿ ತಮ್ಮ ಏಕ ಸ್ವಾಮ್ಯವನ್ನು ಸ್ಥಾಪಿಸಿಕೊಂಡು ಭಾರತದಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡರು. ಇವೇ ಸಂಗತಿಗಳು ಭಾರತೀಯರನ್ನು ರೊಚ್ಚಿಗೆಬ್ಬಿಸಲು ಕಾರಣವಾದವು. ಬ್ರಿಟಿಷರು ಭಾರತಕ್ಕೆ ಬಂದುದು ವ್ಯಾಪಾರ ವಹಿವಾಟಕ್ಕಾಗಿ. ಇವರಿಗಿಂತ ಮೊದಲು ಸುಮಾರು ನೂರು ವರ್ಷಗಳ ಮೊದಲು ಪೋರ್ಚುಗೀಜರು ಬಂದಿದ್ದರು. "ಕ್ರಿ.ಶ. ೧೬೦೫ ರಲ್ಲಿ ಸರ್. ಥಾಮಸ್. ರೋ. ಜಾಹಂಗೀರನ ಆಸ್ಥಾನಕ್ಕೆ ಇಂಗ್ಲೆಂಡಿನ ಸೇರಿಕೊಂಡ. ಮುಂದೆ ಸೂರತದಲ್ಲಿ ಅರಸನ ಅನುಮತಿ ಪಡೆದು ವ್ಯಾಪಾರಿ ಕೋಟೆಯೊಂದನ್ನು ತೆರೆದನು"[1]. ೧೬೬೧ ರಲ್ಲಿ ಮದ್ರಾಸ್ ರೇವು ಪಟ್ಟಣವನ್ನು ಬ್ರಿಟಿಷರು ವಶಪಡಿಸಿಕೊಂಡರು. ಮುಂದಿನ ನೂರು ವರ್ಷಗಳಲ್ಲಿ ಅವರ ವ್ಯಾಪಾರ ವಿರಾಟ ಸ್ವರೂಪವನ್ನು ಪಡೆದು ದೇಶದ ಪ್ರಮುಖ ನಗರಗಳನ್ನು ವ್ಯಾಪಿಸಿಕೊಂಡಿತು. ಔರಂಗಜೇಬನ ಆಳ್ವಿಕೆಯ ಕೊನೆಗಾಲದಲ್ಲಿ ಅವನ ಅಧಿಕಾರಿಗಳ ವಿರುದ್ಧ ಕಂಪನಿಯವರು ಕೈಮಾಡಲು ಯತ್ನಿಸಿ ವಿಫಲರಾಗಿ ಶರಣಾಗಿದ್ದರು. ಇದಲ್ಲದೆ ಇನ್ನು ಮುಂದೆ ಹೀಗೆ ವರ್ತಿಸುವುದಿಲ್ಲವೆಂದು ಮುಚ್ಚಳಿಕೆಯನ್ನು ಕೂಡ ಬರೆದುಕೊಟ್ಟಿದ್ದರು. ಮೊಗಲರ ಚಕ್ರಾಧಿಪತ್ಯ ಭದ್ರವಾದ ಬಳಿಕ ಬ್ರಿಟಿಷರ ಆಶೆ ಗರಿಗೆದರಿತು. ಬ್ರಿಟೀಷರ ಆಡಳಿತಕ್ಕೆ ಬೇಸತ್ತು ಅನೇಕ ದಂಗೆಗಳು ಭಾರತೀಯ ಇತಿಹಾಸದಲ್ಲಿ ದಾಖಲಾಗಿವೆ. ಡಾಲಹೌಸಿಯ ದತ್ತು ವಿರೋಧ ನೀತಿಯನ್ನು ಚನ್ನಮ್ಮಾ ಪ್ರತಿಭಟಿಸಿ ಬ್ರಿಟಿಷರ ವಿರುದ್ಧ ಯುದ್ಧ ಸಾರಿದಳು. ಈ ದತ್ತಕ ವಿರೋಧಿ ಕಾನೂನಿನಿಂದ ಸಂತಾನವಿಲ್ಲದ ರಾಜ್ಯಗಳನ್ನು ತಮ್ಮ ತೆಕ್ಕೆಗೆ ಎಳೆದುಕೊಳ್ಳಲು ಅವರು ಸಂಚು ಹೂಡಿದ್ದರು. ಅದನ್ನು ಪ್ರತಿಭಟಿಸಿ ಹಲವು ಹೋರಾಟಗಳು ನಡೆದವು. ಅದರಂತೆ ೧೭೫೭ ರ ಪ್ಲಾಸಿ ಕದನ, ೧೮೫೭ ರ ಸಿಪಾಯಿ ದಂಗೆ ಬ್ರಿಟಿಷರಿಗೆ ಚುರುಕು ಮುಟ್ಟಿಸಿದ್ದವು.

೧೮೫೭ರಲ್ಲಿ ನಡೆದ ಮಹಾ ಸಮರವನ್ನು ಭಾರತದ ಸ್ವಾತಂತ್ರ್ಯ ಪ್ರಾಪ್ತಿಯಲ್ಲಿ ಮಹತ್ವದ ಘಟ್ಟವೆಂದು ಭಾವಿಸಬಹುದು. ಅದು ಜಗದ್ ವ್ಯಾಪಿ ಬ್ರಿಟಿಷ ಸಾಮ್ರಾಜ್ಯಶಾಹಿಯ ಅವಸಾನದ ಆರಂಭ ಕಾಲವೆಂದೇ ಗ್ರಹಿಸಲಾಗುತ್ತದೆ. ೧೮೫೭ ರಲ್ಲಿ ಆದದ್ದು ದಂಗೆಯಲ್ಲ ಸ್ವಾತಂತ್ರ್ಯ ಸಮರ. ವೀರ ಸಾವರಕರ್ ಅವರು ಈ ಸ್ವಾತಂತ್ರ್ಯ ಹೋರಾಟದ ವಸ್ತು ನಿಷ್ಠ ಕಥನವನ್ನು ೧೯೦೮ ರಲ್ಲಿ ಮರಾಠಿಯಲ್ಲಿ ಬರೆದ "ಸತ್ತಾವನ್ ಚೆ ಸ್ವಾತಂತ್ರ್ಯ ಸಮರ"ಎಂಬ ಕೃತಿಯಲ್ಲಿ ವಿವರಿಸಿದ್ದಾರೆ. ಜಗತ್ತಿನ ಅತಿ ಚಾಣಾಕ್ಷರೆನಿಸಿಕೊಂಡ ಬ್ರಿಟಿಷರು ಭಾರತದಲ್ಲಿ ಇಂತಹ ಒಂದು ಮಹಾನ್ ಕ್ರಾಂತಿ ಆಗಬಹುದೆಂಬ ಸುಳಿವನ್ನು ತಿಳಿದುಕೊಳ್ಳಲಾಗಲಿಲ್ಲ. ಇದು ಆಶ್ಚರ್ಯದ ಮಾತು. ನಾನಾ ಸಾಹೇಬ ಪಡ್ನವೀಸನನ್ನು ತಮ್ಮ ಆಪ್ತ ಗೆಳೆಯ ಎಂದು ಭಾವಿಸಿದ್ದ ಬ್ರಿಟಿಷರು ಕ್ರಾಂತಿ ಸ್ಫೋಟಗೊಂಡ ಮೇಲೆ ನಾನಾಸಾಹೇಬನ ಕೈಗೆ ಖಾನಪುರವನ್ನು ಬಿಟ್ಟು ಕೊಡುತ್ತಾರೆ. ಈ ಹೋರಾಟಗಾರರು ಮಾಡುವ ಗುಪ್ತ ಸಂಘಟನೆಯ ಬಗ್ಗೆ ಹತ್ತಿರದಲ್ಲಿಯೇ ಇದ್ದರೂ ಬ್ರಿಟಿಷರಿಗೆ ಗೊತ್ತಾಗಲಿಲ್ಲ. ನಾನಾಸಾಹೇಬನು ಬಿಳಿಯರಿಗೆ ಆದರ, ಗೌರವ ತೋರಿಸುತ್ತಿದ್ದ. ಇಂಥವನು ಏಕಾಏಕಿಯಾಗಿ ಗುಪ್ತ ಸಂಘಟನೆಯಲ್ಲಿ ತೊಡಗುತ್ತಾನೆಂದು ಅವರಿಗೆ ಅನಿಸಿರಲಿಲ್ಲ. ಯಾರಾದರೂ ನಾನಾಸಾಹೇಬನ ಬಗ್ಗೆ ಮತ್ತು ಅವನ ಚಟುವಟಿಕೆಗಳ ಬಗ್ಗೆ ಬ್ರಿಟಿಷರಿಗೆ ತಿಳಿಸಿದರೆ ಹಾಗೆ ಹೇಳಲು ಬಂದವನನ್ನೇ ಬ್ರಿಟಿಷರು ಅಪಹಾಸ್ಯಕ್ಕೆ ಗುರಿ ಮಾಡುತ್ತಿದ್ದರು. ಈ ಚಳುವಳಿಯಲ್ಲಿ ಹಳ್ಳಿಯ ಜನರು ಕೂಡಾ ಸಕ್ರೀಯವಾಗಿ ಪಾಲ್ಗೊಂಡು ಚಳುವಳಿಗಾರರಿಗೆ ಚಪಾತಿ ಹಂಚುವುದರ ಮೂಲಕ ಹೋರಾಟದ ಸ್ವರೂಪವನ್ನೇ ತೀವ್ರಗೊಳಿಸುತ್ತಾರೆ.

ಡಾ. ಗಿಲ್ಬರ್ಟ್ ಹ್ಯಾಡೋ ೧೮೫೦ ರ ಮಾರ್ಚನಲ್ಲಿ ತನ್ನ ಸಹೋದರಿಗೆ ಹೀಗೆ ಪತ್ರ ಬರೆಯುತ್ತಾನೆ. "ಇಡೀ ಭಾರತದಲ್ಲಿ ವಿಚಿತ್ರ ಘಟನೆಗಳು ನಡೆಯುತ್ತಿವೆ. ಅದು ಎಲ್ಲಿಂದ, ಯಾರಿಂದ, ಏತಕ್ಕಾಗಿ ಆರಂಭವಾಗಿದೆಯೋ ಗೊತ್ತಿಲ್ಲ. ಅದು ಧಾರ್ಮಿಕ ವಿಚಾರಕ್ಕೆ ಸಂಬಂಧಿಸಿದ್ದೋ, ಗುಪ್ತ ಸಂಘಟನೆಯ ಕಾರ್ಯಾಚರಣೆಯೋ ಎಂಬುದು ಗೊತ್ತಿಲ್ಲ. ಭಾರತೀಯ ಪತ್ರಿಕೆಗಳಂತೂ ಅದರ ಕುರಿತು ಏನೇನೋ ಬರೆಯುತ್ತಿವೆ. ಅದನ್ನು ಚಪಾತಿ ಚಳುವಳಿ ಎನ್ನುತ್ತಿವೆ"[೨]. ಈ ಚಪಾತಿ ಚಳುವಳಿ ಕುರಿತು ಆಂಗ್ಲರು ಅನೇಕ ಅಂತೆ ಕಂತೆಗಳನ್ನು ಸೇರಿಸಿ ಇಂಗ್ಲೆಂಡಿಗೆ ತಿಳಿಸುತ್ತಿದ್ದರು. ಆಗ್ರಾ ವಿಭಾಗದ ಕಮೀಷನರ್ ಜಾರ್ಜ ಹಾರ್ವೆ ಈ ಚಪಾತಿಗಳು ಒಂದೇ ರಾತ್ರಿಯಲ್ಲಿ ೧೬೦-೨೦೦ ಮೈಲು ದೂರ ಕ್ರಮಿಸುತ್ತವೆ ಎಂದು ಅಚ್ಚರಿಪಟ್ಟಿದ್ದ. ದೆಹಲಿಯ ಥಾನೇದಾರ್ ಮೈನೂದ್ದೀನ್ ಹಸನ್‌ಖಾನ್ ಚಪಾತಿಗಳನ್ನು ಕಂಡು ದಂಗು ಬಡೆದಿದ್ದ. ಅವನು ಎಷ್ಟೇ ಪ್ರಯತ್ನ ಪಟ್ಟರೂ ಅದರ ಹಿಂದಿನ ರಹಸ್ಯ ಗುರುತಿಸಲಾಗಲಿಲ್ಲ. ಇವರ ತಂದೆ ಹೇಳಿದ ಬಹು ಹಿಂದಿನ ಮಾತನ್ನು ಅಧಿಕಾರಿಗೆ ಹೇಳಿ ಸುಮ್ಮನಾಗುತ್ತಾನೆ. 'ಮರಾಠಾ ಶಕ್ತಿ ಕುಸಿದ ನಂತರ ಹೀಗೆ ಚಪಾತಿಗಳು ಹಳ್ಳಿಯಿಂದ ಹಳ್ಳಿಗೆ ಹರಡಿದ್ದವು. ಈ ರೀತಿ ಚಪಾತಿಯನ್ನು ಹಂಚುವುದೆಂದರೆ ಸಧ್ಯದಲ್ಲೇ ತುಮುಲಗಳು ಏಳಲಿವೆ ಎಂಬುದರ ಸಂಕೇತ'. ಸೈನಿಕರನ್ನು ದೇಶಪ್ರೇಮ ಬೆಸೆದರೆ, ಜನಸಾಮಾನ್ಯರನ್ನು ಚಪಾತಿ ಬೆಸೆಯಿತು. ಆ ಮೂಲಕ ಅವರಲ್ಲಿಯೂ ದೇಶಪ್ರೇಮದ ಕಿಡಿ ಹೊತ್ತಿತು. ಕೀರ್ತನಕಾರರು,

ಲಾವಣಿಕಾರರು ಎಲ್ಲರೂ ಒಟ್ಟಾಗಿ ಜನರನ್ನು ಕ್ರಾಂತಿಗೆ ಸಜ್ಜುಗೊಳಿಸಿದರು. ಚಪಾತಿ ಚಳುವಳಿ ಜನರೇ ಪ್ರಭುತ್ವದ ಎದುರಲ್ಲಿ ಅನ್ಯಾಯ ಪ್ರತಿಭಟನೆಗೆ ರೂಪಿಸಿದ ಮಾರ್ಗವಾಗಿತ್ತು. ಸಿಪಾಯಿ ದಂಗೆಯಂತಹ ಪ್ರಸಿದ್ಧ ಹೋರಾಟಗಳ ಹಿಂದೆ ಇಂತಹ ಹಲವು ಹೋರಾಟಗಳು ಅಲ್ಲಲ್ಲಿ ನಡೆದಿದ್ದು ಅವು ಸ್ವಾತಂತ್ರ್ಯ ಹೋರಾಟದ ಮಹಾಗಾಥೆಯಲ್ಲಿ ಸೂಕ್ತ ದಾಖಲಾತಿ, ಸ್ಥಾನಮಾನ ಪಡೆಯಬೇಕಾಗಿದೆ.

ನಾನಾಸಾಹೇಬನು ಬೇಸಿಗೆಯಲ್ಲಿ ಯುದ್ಧ ಸಾರಿದರೆ ಬ್ರಿಟಿಷರನ್ನು ಸುಲಭವಾಗಿ ಜಯಿಸಬಹುದೆಂದು ನಿರ್ಣಯಿಸಿದನು. ಬಿಸಿಲೆಂದರೆ ಆಂಗ್ಲರಿಗೆ ಮರಣ ಪ್ರಾಯ. ಮೇಲೆ ಸೂರ್ಯನ ತಾಪ, ಎದುರುಗೆ ಭಾರತೀಯರ ಕೆಂಗಣ್ಣಿನ ತಾಪ, ಹಾಗೆಯೇ ಆಂಗ್ಲರೊಳಗೆ ಅವರು ಮಾಡಿದ ಪಾಪದ ತಾಪ. ಈ ತಾಪತ್ರಯದಲ್ಲಿ ಆಂಗ್ಲರು ಬೆಂದು ಹೋಗಲಿ ಎಂದು ನಿಶ್ಚಯಿಸಿ ನಾನಾಸಾಹೇಬನು ಕಡಿಮೆ ಅವಧಿಯಲ್ಲಿಯೇ ಹೆಚ್ಚು ಹೆಚ್ಚು ರಾಜರನ್ನು ಸಂಸ್ಥಾನಿಕರನ್ನು ಭೇಟ್ಟಿಯಾಗಿ ಕ್ರಾಂತಿಗೆ ಅವರನ್ನು ಹುರಿಗೊಳಿಸುತ್ತಾನೆ. ಇಷ್ಟರಲ್ಲಿಯೇ ಕಲಕತ್ತಾದಲ್ಲಿ ಒಂದು ಕ್ರಾಂತಿಯ ಕಿಡಿ ಹೊತ್ತಿಕೊಳ್ಳುತ್ತದೆ. ಬ್ರಿಟೀಷರು ಕಾಡತೂಸಿಗೆ ಬಳಸಿದ ದನದ ಮತ್ತು ಹಂದಿಯ ಕೊಬ್ಬು ಸೈನಿಕರ ಆಕ್ರೋಶಕ್ಕೆ ಕಾರಣವಾಯಿತು. ಸೈನಿಕರು ಕಾಡತೂಸು ಬಳಸುವುದಿಲ್ಲವೆಂದು ವಿರೋಧಿಸಿದರು. ಈ ಬೆಂಕಿ ನಿಧಾನವಾಗಿ ಬ್ಯಾರಕಪುರ ತಲುಪಿತು.

ಮಂಗಲಪಾಂಡೆ ತೀವ್ರವಾಗಿ ಬ್ರಿಟಿಷರ ವಿರುದ್ಧ ಪ್ರತಿಭಟಿಸಿ ಹೋರಾಟಕ್ಕೆ ಸಿದ್ಧನಾದ. ಮಂಗಲಪಾಂಡೆನ ಮಾತಿಗೆ ಸೈನಿಕರೆಲ್ಲಾ ಸಂಘಟನೆ ಮಾಡಿಕೊಂಡು ಬ್ರಿಟಿಷರ ವಿರುದ್ಧ ದಂಗೆ ಏಳಲು ಸಿದ್ಧರಾದರು. ಭಾರತೀಯ ಸ್ವಾತಂತ್ರ್ಯ ಆಂದೋಲನದಲ್ಲಿ ಈ ಸಿಪಾಯಿ ಕಾಳಗವು ಮರೆಯಲಾರದ ಮಹತ್ವದ ಘಟನೆಯಾಗಿದೆ. ಕ್ರಾಂತಿಯ ರೂಪರೇಷದ ಪ್ರಕಾರ ಸೈನಿಕರು ತಮ್ಮ ತಮ್ಮ ಪ್ರದೇಶಗಳಲ್ಲಿ ನೆಲೆಯೂರಿ ಆಂಗ್ಲರನ್ನು ಸಂಪೂರ್ಣ ಸದೆ ಬಡಿಯಬೇಕು. ಅಲ್ಲಿಗೆ ಬೇರೆ ಎಲ್ಲಿಂದಲೊ ಸಹಾಯ ಬಂದರೆ ಸಹಾಯ ಮಾಡಿದವರ ವಿರುದ್ಧವು ಕೂಡಾ ಈ ಸಿಪಾಯಿಗಳು ದಂಗೆ ಮಾಡುತ್ತಿದ್ದರು. ಏಕ ಕಾಲಕ್ಕೆ ನಡೆದ ಈ ಬದಲಾವಣೆಯಿಂದ ಬಿಳಿಯರ ಮುಖ ಇನ್ನೂ ಬಿಳಿಚಿಕೊಳ್ಳುವಂತಾಯಿತು. ಆದರೆ ದೊಡ್ಡ ಪ್ರಮಾಣದಲ್ಲಿ ಸಶಸ್ತ್ರ ಆಂಗ್ಲ ಸೈನ್ಯ ಈ ಕ್ರಾಂತಿಯನ್ನು ಸೆದೆ ಬಡೆಯಿತು. ಬೇರೆ ಬೇರೆ ಭಾಗಗಳಿಂದ ಬಂದ ಸೈನಿಕರನ್ನು ಶಿಸ್ತಿನಡಿಯಲ್ಲಿ ಬಂಧಿಸಿ ಬ್ರಿಟಿಷರು ಅವರಿಗೆ ಕಠಿಣ ಶಿಕ್ಷೆ ವಿಧಿಸಿದರು. ಹೇಗೊ ವಾಮಮಾರ್ಗದಿಂದ ಬ್ರಿಟಿಷರು ಸಿಪಾಯಿಗಳನ್ನು ಬಂಧಿಸಿ ಚಳುವಳಿ ನಡೆಯದಂತೆ ಮಾಡಿದರು.

ಜಗತ್ತಿನ ಜನರನ್ನು ಹೆದರಿಸಿ ಆನಂದಿಸುತ್ತಿದ್ದ ಬಿಳಿಯರಿಗೆ ೧೮೫೭ ರ ಕ್ರಾಂತಿ ಒಂದು ದೊಡ್ಡ ಆಘಾತವೆನಿಸಿತ್ತು. ಭಾರತೀಯರೆಂದರೆ ಅನಾಗರಿಕರು, ಕೈಲಾಗದವರು, ಹೇಡಿಗಳು ಎಂಬುದನೆಲ್ಲಾ ಬ್ರಿಟನ್‌ದಲ್ಲಿ ಬಿತ್ತಿದ್ದರು. ಈಗ ಒಮ್ಮಿಂದೊಮ್ಮೆಲೇ ಆ ಹೇಡಿಗಳೇ ರಣರಂಗದಲ್ಲಿ ನಿಂತು ತಮ್ಮವರ ರುಂಡ ಚೆಂಡಾಡುವುದನ್ನು ಅವರಿಂದ ಊಹಿಸಲು ಸಾಧ್ಯವಾಗಲಿಲ್ಲ.

ಮೊದಮೊದಲು ಈ ವಿಚಾರವನ್ನು ಯಾರಿಗೂ ಗೊತ್ತಾಗದಂತೆ ಮುಚ್ಚಿಟ್ಟಿದ್ದರು. ಸುದ್ಧಿ ಅಲ್ಲಿಂದ ಇಲ್ಲಿಂದ ಸೇರುತ್ತಾ ಲಂಡನ್ನಿಗೆ ಮುಟ್ಟಿದ ಕೂಡಲೇ ಅಲ್ಲಿಯ ಜನರ ನಿದ್ದೆ ಹಾರಿ ಹೋಯಿತು. ದಿನಕ್ಕೊಂದಾದರು ಕೆಟ್ಟ ಸುದ್ಧಿ ಇದ್ದೇ ಇರುತ್ತಿತ್ತು. ತಮ್ಮವರ ಸುದ್ದಿಗಾಗಿ ರಾತ್ರಿಯೂ ಅವರು ಎಚ್ಚರಾಗಿರುತ್ತಿದ್ದರು. ಬ್ರಿಟಿಷರ ಹೆದರಿಕೆ ದ್ವೇಷದಲ್ಲಿ ರೂಪಗೊಳ್ಳತೊಡಗಿತು. ಭಾರತೀಯರನ್ನು ಹೀನಾಯವಾಗಿ ಕಾಣುವ ನಾಟಕಗಳನ್ನು ಲೇಖನಗಳನ್ನು ಬರೆದು ಪ್ರಕಟಿಸುತ್ತಿದ್ದರು. ಏನೇ ಆದರೂ ಭಯವನ್ನು ಅವರಿಂದ ಮುಚ್ಚಿಡಲು ಸಾಧ್ಯವಾಗಲಿಲ್ಲ. "ಜಗತ್ತನ್ನೇ ಗೆದ್ದ ಹಮ್ಮಿನ ಆಂಗ್ಲರ ಸೇನೆ ೧೮೫೭ ರಲ್ಲಿ ಬೀದಿ ನಾಯಿಗಳಿಗಿಂತ ಕಡೆಯಾಗಿತ್ತು. ತಮ್ಮ ಅಸ್ತಿತ್ವಕ್ಕಾಗಿ ವಾಮ ಮಾರ್ಗವನ್ನು ಅನುಸರಿಸಿ ಈ ದಂಗೆಯನ್ನು ಹತ್ತಿಕ್ಕುವಲ್ಲಿ ಮತ್ತೆ ಬ್ರಿಟಿಷರು ಜಯಶಾಲಿಗಳಾದರು. ಭಾರತೀಯ ಸಂಸ್ಥಾನಿಕರ ಒಳಜಗಳಗಳು ಬ್ರಿಟಿಷರಿಗೆ ತಮ್ಮ ಆಧಿಪತ್ಯವನ್ನು ವಿಸ್ತರಿಸಲು ಅನುವು ಮಾಡಿಕೊಟ್ಟಂತಾಯಿತು"[೩].

ಭಾರತ ಸ್ವಾತಂತ್ರ್ಯ ಆಂದೋಲನದ ಮಹತ್ವದ ಘಟ್ಟಗಳಲ್ಲಿ ಕ್ರಿ.ಶ. ೧೯೩೦-೩೨ ರಲ್ಲಿ ಜರುಗಿದ ಕೆಲವು ಸಂಗತಿಗಳು ರೋಮಾಂಚನಕಾರಿಯಾಗಿವೆ. ೧೯೩೦ ರಲ್ಲಿಯ ಉಪ್ಪಿನ ಸತ್ಯಾಗ್ರಹವು ಒಂದರ್ಥದಲ್ಲಿ ಬ್ರಿಟಿಷ ಸರಕಾರದ ನೈತಿಕ ಪರಾಭವವಾಗಿತ್ತು. ಗಾಂಧೀಜಿಯವರ ಕರೆಯ ಮೇರೆಗೆ ಅಖಿಲ ಭಾರತದ ತುಂಬ ಚಳುವಳಿಗಳು ಜರುಗಿದವು. ಆಗಿನ ವೈಸ್ರಾಯ್ ಆದ ಲಾರ್ಡ ಆಯರ್ವಿನ್ ಅವರು ಉಪಾಯವೊಂದನ್ನು ಮಾಡಿ ಚಳುವಳಿಯನ್ನು ಹತ್ತಿಕ್ಕಲು ದುಂಡುಮೇಜಿನ ಸಭೆಯನ್ನು ಕರೆಯುವದಾಗಿ ಹೇಳಿದರು. ಗಾಂಧೀಜಿಯವರೊಂದಿಗೆ ಒಪ್ಪಂದ ಮಾಡಿಕೊಂಡು ಲಂಡನ್ನಿನಲ್ಲಿ ದುಂಡುಮೇಜಿನ ಸಭೆಯನ್ನು ಕರೆದು ಅದರಲ್ಲಿ ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಡುವುದಾಗಿ ಘೋಷಿಸಲಾಗುವುದೆಂದು ಹೇಳಿದನು. ಆ ಪ್ರಕಾರ ಭಾರತೀಯರ ಪರವಾಗಿ ದುಂಡು ಮೇಜಿನ ಪರಿಷತ್ತಿಗೆ ಪ್ರತಿನಿಧಿಯಾಗಿ ಗಾಂಧೀಜಿಯವರೊಬ್ಬರೆ ಹೋದರು. ಆಗ ಇಂಗ್ಲೆಂಡಿನಲ್ಲಿ ಅಂದಿನ ಪ್ರಧಾನ ಮಂತ್ರಿಗಳಾದ ಚರ್ಚಿಲ್‌ರಿಗೂ ಮತ್ತು ಬ್ರಿಟಿಷರಿಗೂ ಭಾರತಕ್ಕೆ ಸ್ವಾತಂತ್ರ್ಯ ಕೊಡುವ ಮನಸ್ಸು ಇರಲಿಲ್ಲ. ಆದ್ದರಿಂದ ಗಾಂಧೀಜಿಯವರು ಬರೀಗೈಯಿಂದಲೇ ಭಾರತಕ್ಕೆ ಬರಬೇಕಾಯಿತು. ಇಂಗ್ಲೇಂಡ ಸರಕಾರ ಭಾರತಕ್ಕೆ ದ್ರೋಹವನ್ನು ಬಗೆಯಿತು. ಅಲ್ಲದೇ ಗಾಂಧೀಜಿಯವರನ್ನು ಕರೆಯಿಸಿ ಅಪಮಾನ ಮಾಡಿತು. ಈ ಅಪಮಾನದ ಸೇಡನ್ನು ತೀರಿಸಿಕೊಳ್ಳಲು ಕಾಂಗ್ರೆಸ ಮುಖಂಡರು ತಯಾರಾದರು. ಗಾಂಧೀಜಿಯವರ ನೇತೃತ್ವದಲ್ಲಿ ದೇಶದ ತುಂಬ ಚಳುವಳಿಗಳು ಜರುಗಿದವು.

ಬ್ರಿಟಿಷ ಸರಕಾರವು ದುಂಡುಮೇಜಿನ ನಾಟಕ ಮಾಡಿ ತಮ್ಮ ಯುದ್ಧದ ಸಿದ್ಧತೆ ಮಾಡಿಕೊಂಡು ಕಾಂಗ್ರೆಸ್ಸನ್ನು ನಿರ್ನಾಮಗೊಳಿಸಬೇಕೆಂದು ನಿರ್ಧರಿಸಿತ್ತು. ಹಿಂದೂಸ್ತಾನದಲ್ಲಿ ಮತ್ತೆ ಅವರ ದಬ್ಬಾಳಿಕೆ ಪ್ರಾರಂಭವಾಯಿತು. ಗಡಿನಾಡ ಪ್ರಾಂತ, ಉತ್ತರ ಪ್ರದೇಶ ಹಾಗೂ ಬಂಗಾಲಗಳಲ್ಲಿ ಹೊಸ ಹೊಸ ರಾಜಾಜ್ಞೆಗಳನ್ನು ಹೊರಡಿಸಲಾಯಿತು. ಗಡಿನಾಡಿನಲ್ಲಿ ಖಾನ ಅಬ್ದುಲ್ ಗಫಾರಖಾನರನ್ನು ಬಂಧಿಸಲಾಯಿತು. ಅನೇಕ ಕಡೆ ಗೋಲಿಬಾರ ನಡೆದವು. ಈ ಗೋಲಿಬಾರಿನಲ್ಲಿ

ಹಲವು ಜನ ಸ್ವಾತಂತ್ರ್ಯ ಹೋರಾಟಗಾರರು ಗುಂಡಿಗೆ ಬಲಿಯಾದರು. ಜವಾಹರಲಾಲ ನೆಹರು ಅವರನ್ನು ಬಂಧಿಸಲಾಯಿತು. ಬಂಗಾಲದಲ್ಲಿ ಯುದ್ಧ ಕಾಲದಲ್ಲಿಯೂ ಬರಲಾರದಂತಹ ಉಗ್ರವಾದ ರಾಜಾಜ್ಞೆ ಹೊರಡಿಸಿ ದಬ್ಬಾಳಿಕೆ ನಡೆಸಲಾಯಿತು. ಈ ರಾಜಾಜ್ಞೆಯ ಪ್ರಕಾರ ಯಾವುದೇ ಮನೆಯನ್ನು ಯಾವುದೇ ಕಾಲಕ್ಕೆ ಪೂರ್ವ ಸೂಚನೆಯಿಲ್ಲದೆ ವಶಪಡಿಸಿಕೊಳ್ಳುವ ಅಧಿಕಾರ ಮ್ಯಾಜಿಸ್ಟ್ರೇಟರಿಗೆ ಕೊಡಲಾಗಿತ್ತು. ಬೇಕಾದವರನ್ನು ವಾರಂಟ ಇಲ್ಲದೆ ಬಂಧಿಸಿ ಒಂದೆರಡು ದಿನ ಬಂಧನದಲ್ಲಿಡುವ ಅಧಿಕಾರ ಪೋಲೀಸರಿಗೆ ಕೊಡಲಾಗಿತ್ತು. ಇದು ಮೇಲುನೋಟಕ್ಕೆ ಪ್ರಬಲ ಬ್ರಿಟಿಷ ಆಡಳಿತದ ದಮನಕಾರಿ ನೀತಿ ಎನಿಸಿದ್ದರೂ, ಆಳದಲ್ಲಿ ಅದು ಅವರ ಭಯ-ಆತಂಕಗಳ ಫಲರೂಪವಾಗಿತ್ತು.

ಬ್ರಿಟಿಷರು ತಾವು ಮಾತು ಕೊಟ್ಟಂತೆ ನಡೆಯುತ್ತಿರಲಿಲ್ಲ. ಭಾರತಕ್ಕೆ ಸ್ವಾತಂತ್ರ ಸಿಗಬಹುದೆಂಬ ಮಹತ್ವಾಕಾಂಕ್ಷೆಯಿಂದ ಗಾಂಧೀಜಿಯವರು ದುಂಡು ಮೇಜಿನ ಪರಿಷತ್ತಿಗೆ ಹೋಗಿದ್ದರು. ಆದರೆ ಬ್ರಿಟಿಷರ ಕುಟೀಲ ನೀತಿಯಿಂದ ಅವರಿಗೆ ಅತ್ಯಂತ ಖೇದವೆನಿಸಿತು. ಬ್ರಿಟಿಷರು ನಡೆಸಿದ ಈ ಅನ್ಯಾಯದ ಘಟನೆಗಳನ್ನು ಕಂಡು ಕೇಳಿದ ಗಾಂಧೀಜಿಯವರಿಗೆ ಅತ್ಯಂತ ಕೆಡುಕೆನಿಸಿತು. ಗಾಂಧೀಜಿಯವರು ಈ ಎಲ್ಲ ಪರಿಸ್ಥಿತಿಯನ್ನು ಉಲ್ಲೇಖಿಸಿ ವೈಸ್ರಾಯರಿಗೆ ಪತ್ರ ಬರೆದರು. ದೇಶದೊಳಗೆ ಬ್ರಿಟಿಷರ ದಬ್ಬಾಳಿಕೆ ನಿಲ್ಲದಿದ್ದರೆ ಗಾಂಧಿ ಆಯರ್ವಿನ್ ಒಪ್ಪಂದನ್ನು ಮುರಿದು ಕಾಂಗ್ರೆಸ್ ಮತ್ತೆ ತನ್ನ ಹೋರಾಟವನ್ನು ಪ್ರಾರಂಭಿಸುತ್ತದೆ. ಬ್ರಿಟಿಷ ಸರಕಾರಕ್ಕೆ ಏನಾದರೂ ಹಾನಿಯಾದರೆ ಅದಕ್ಕೆ ಕಾಂಗ್ರೆಸ್ ಹೊಣೆಗಾರರಾಗುವುದಿಲ್ಲ ಎಂದು ಗಾಂಧೀಜಿಯವರು ಬ್ರಿಟಿಷ ಸರಕಾರಕ್ಕೆ ಪತ್ರ ಬರೆದರು. ಇದಕ್ಕೆ ಉತ್ತರವೆಂಬಂತೆ ಜನೇವರಿ ೪ನೆಯ ತಾರೀಖಿನಂದು ಬೆಳಗ್ಗೆ ಗಾಂಧೀಜಿಯವರನ್ನು ಮತ್ತು ಕಾಂಗ್ರೆಸ್ ಅಧ್ಯಕ್ಷರಾದ ಸರದಾರ್ ವಲ್ಲಭಭಾಯಿ ಪಟೇಲರನ್ನು ಬಂಧಿಸಲಾಯಿತು. ಅದರಂತೆ ಎಲ್ಲ ಪ್ರಾಂತಗಳಲ್ಲಿ ಏಕಕಾಲಕ್ಕೆ ಕಾಂಗ್ರೆಸ ಮುಂಖಡರನ್ನೂ ಬಂಧಿಸಲಾಯಿತು. ಹೊಸ ರಾಜಾಜ್ಞೆಯ ಪ್ರಕಾರ ಎಲ್ಲ ಕಾಂಗ್ರೆಸ ಕಮೀಟಿ, ಆಶ್ರಮ, ರಾಷ್ಟ್ರೀಯ ಶಾಲೆ, ಹಾಗೂ ರಾಷ್ಟ್ರೀಯ ಸಂಸ್ಥೆಗಳು ಅಕ್ರಮವೆಂದು ಘೋಷಿಸಿತು. ಬೆಳಗಾವಿ ಜಿಲ್ಲೆಯ ಕುಮರಿ ಆಶ್ರಮವನ್ನು ಜಪ್ತ ಮಾಡಿ ತನ್ನ ವಶಕ್ಕೆ ತಗೆದುಕೊಂಡಿತು. ಕಾಂಗ್ರೆಸ ಕಮೀಟಿಯು ಸರದಾರ್ ವಲ್ಲಭಭಾಯಿ ಪಟೇಲರ ಬಂಧನವಾಗಬಹುದೆಂದು ಮೊದಲೇ ಊಹಿಸಿತ್ತು. ಆದ್ದರಿಂದ ಆ ಕಾಂಗ್ರೆಸ ಅಧ್ಯಕ್ಷ ಸ್ಥಾನ ಬರಿದು ಬೀಳಬಾರದೆಂದು ಮತ್ತು ಒಬ್ಬರನ್ನು ಬಂಧಿಸಿದರೆ ಅವರ ಸ್ಥಾನದಲ್ಲಿ ಮತ್ತೊಬ್ಬರು ಬರಬೇಕೆಂಬುದನ್ನು ಗೊತ್ತು ಮಾಡಿದರು. ಹೀಗೆ ಗೊತ್ತು ಮಾಡಿದ ಮಹನೀಯರಲ್ಲಿ ಕುಂದರನಾಡಿನ ಸ್ವಾತಂತ್ರ್ಯ ಹೊರಾಟಗಾರರಾದ ಗಂಗಾಧರರಾವ್ ದೇಶಪಾಂಡೆ ಅವರ ಹೆಸರು ಇದ್ದುದು ಅಭಿಮಾನದ ಸಂಗತಿ. ಗಂಗಾಧರರಾವ್ ದೇಶಪಾಂಡೆ ಅವರು ರಾಷ್ಟ್ರಮಟ್ಟದ ಮುಖಂಡರೆಂದು ಎಲ್ಲರ ಗಮನ ಸೆಳೆದಿದ್ದರು.

ಕಾಂಗ್ರೆಸ ನಾಯಕರನ್ನು ಬಂಧಿಸಿದ ಬಳಿಕ ಕೆಲವು ಕಾಂಗ್ರೆಸ ನಾಯಕರು ಮತ್ತು ಕಾರ್ಯಕರ್ತರು ತಲೆ ಮರೆಸಿಕೊಂಡು ಹೋರಾಟವನ್ನು ಪ್ರಾರಂಭಿಸಿದರು. ಸಭೆ ಮೆರವಣಿಗೆಗಳು

ಪ್ರಾರಂಭವಾದವು. ಸೆರೆ, ಸಿಂಧಿ ಅಂಗಡಿಗಳನ್ನು ನಿಷೇಧಿಸುವುದು, ಪರದೇಶಿ ವಸ್ತು, ಬಟ್ಟೆಬರೆಗಳನ್ನು ಬಹಿಷ್ಕರಿಸುವುದು ಕಾಂಗ್ರೆಸ್ಸಿನ ಕೆಲಸವಾದರೆ, ಬ್ರಿಟಿಷ ಸರಕಾರವು ಕಾಂಗ್ರೆಸ್ಸಿನ ಯಾವುದೇ ಸುದ್ದಿಯನ್ನು ಮುದ್ರಿಸಬಾರದೆಂದು ಆಜ್ಞೆ ವಿಧಿಸಿತ್ತು. ಇದರಿಂದ ಗುಪ್ತವಾಗಿ ಕೈಬರಹದ ಪತ್ರಿಕೆಗಳನ್ನು ತೆಗೆಯುವುದು ಮತ್ತು ದೇಶದಲ್ಲಿ ನಡೆಯುವ ಕಾಂಗ್ರೆಸ್ಸಿಗರು ನಡೆಸುವ ಚಟುವಟಿಕೆಗಳನ್ನು ಪ್ರಚಾರಗೊಳಿಸುವುದು ಕಾಂಗ್ರೆಸ್ಸಿಗರ ಕೆಲಸವಾಯಿತು. ಇದಲ್ಲದೆ ನ್ಯಾಶನಲ್ ಪೋಸ್ಟ್ ಸರ್ವೀಸ್ ಕಾರ್ಯಗಳು ಚುರುಕುಗೊಂಡವು. ಬೆಳಗಾವಿಯಲ್ಲಿಯ ಕುಮರಿ ಅಶ್ರಮವನ್ನು ಈ ಕಾರಣಕ್ಕಾಗಿಯೇ ಬ್ರಿಟಿಷರು ವಶ ಪಡಿಸಿಕೊಂಡರು. ಕಾಂಗ್ರೆಸ ಅಧಿವೇಶನ, ಪ್ರಾಂತೀಯ ಪರಿಷತ್ತು, ಜಿಲ್ಲಾ ಮಟ್ಟದ ಪರಿಷತ್ತುಗಳನ್ನು ಕೂಡಿಸುವುದು ಕಾಂಗ್ರೆಸ ಕಾರ್ಯಕ್ರಮಗಳಲ್ಲಿ ಒಂದಾಗಿತ್ತು. ಪೋಲಿಸರು ಇವು ನೆರವೇರದಂತೆ ಮುಂಜಾಗ್ರತೆ ವಹಿಸುತ್ತಿದ್ದರು.

ಈ ಸಂದರ್ಭದಲ್ಲಿ ಒಂದು ಆಶ್ಚರ್ಯದ ಸಂಗತಿಯು ದಿಲ್ಲಿಯಲ್ಲಿ ನಡೆದು ಹೋಯಿತು. ದಿಲ್ಲಿಯ ಚಾಂದನಿ ಚೌಕದಲ್ಲಿ ಕಾಂಗ್ರೆಸ ಅಧಿವೇಶನ ಸೇರುವುದೆಂದು ಪ್ರಕಟಗೊಳಿಸಲಾಗಿತ್ತು. ಈ ಅಧೀವೇಶನಕ್ಕೆ ಪಂಡಿತ ಮದನಮೋಹನ ಮಾಳವೀಯಾ ನಿಯೋಜಿತ ಅಧ್ಯಕ್ಷರಾಗಿದ್ದರು. ಕಾಂಗ್ರೆಸ್ಸಿನ ಅಧ್ಯಕ್ಷತೆ ವಹಿಸಲು ಅವರು ಹೊರಟಾಗ ಅವರನ್ನು ದಾರಿಯಲ್ಲೇ ಬಂಧಿಸಲಾಯಿತು. ಇದಲ್ಲದೆ ಅಧಿವೇಶನಕ್ಕೆ ಬರುವ ಬೇರೆ ಬೇರೆ ಪ್ರಾಂತಗಳ ಪ್ರತಿನಿಧಿಗಳನ್ನು ಮತ್ತು ಕಾರ್ಯಕರ್ತರನ್ನೂ ಬಂಧಿಸಿದರು. ಆದರೂ ಅಧಿವೇಶನವು ಶ್ರೀ ರಣಘೋಷ ದಾಸ ಇವರ ನೇತೃತ್ವದಲ್ಲಿ ನಡೆಯಿತು. ಪೊಲೀಸನವರ ಸರ್ಪಗಾವಲಿನಲ್ಲಿಯೂ ಅವರ ಕಣ್ಣ ತಪ್ಪಿಸಿ ಸುಮಾರು ಐನೂರು ಜನ ಕಾರ್ಯಕರ್ತರು ಅಧಿವೇಶನಕ್ಕೆ ಬಂದಿದ್ದರು. ಹೆಚ್ಚು ಜನ ಪೊಲೀಸರು ಬಂದು ಪ್ರತಿನಿಧಿಗಳನ್ನು ಚದುರಿಸುವ ಪೂರ್ವದಲ್ಲಿಯೇ ನಾಲ್ಕೈದು ಠರಾವುಗಳನ್ನು ಪಾಸ ಮಾಡಿ ಕಾಂಗ್ರೆಸ್ಸಿಗರು ಕಾಂಗ್ರೆಸ್ಸಿನ ಕಾರ್ಯ ಕಲಾಪಗಳನ್ನು ಮಾಡಿ ಮುಗಿಸಿದ್ದರು. ಈ ಅಧೀವೇಶನಕ್ಕೆ ಕರ್ನಾಟಕದಿಂದ ಪ್ರತಿನಿಧಿಯಾಗಿ ಬಾ. ಯ. ದೇಶಪಾಂಡೆಯವರು ಗುಪ್ತ ರೀತಿಯಿಂದ ಹೋಗಿ ಬಂದದ್ದು ಒಂದು ವಿಶೇಷ.

ಬ್ರಿಟಿಷರು ಭಾರತೀಯರನ್ನು ಎಂದಿಗೂ ಪ್ರೀತಿ ಮತ್ತು ಸೌಹಾರ್ದತೆಯಿಂದ ಕಾಣಲಿಲ್ಲ. ಭಾರತದಲ್ಲಿಯೇ ಭಾರತೀಯ ಪ್ರಜೆಗಳು ಎರಡನೆಯ ದರ್ಜೆಯ ಪ್ರಜೆಗಳಾಗಿಯೊ ಅಥವಾ ಗುಲಾಮರಾಗಿಯೊ ಬಾಳಬೇಕಾದ ವಾತಾವರಣ ನಿರ್ಮಾಣವಾಗಿತ್ತು. ಕಂಪನಿ ಸರಕಾರವು ಜನರ ಸುಖ ದುಃಖಗಳನ್ನು ಗಮನಿಸದೇ ಅತಿಯಾದ ಕರಭಾರದಿಂದ ಜನರು ನಲಗುವಂತೆ ಮಾಡಿತ್ತು. ಸರಕಾರವನ್ನು ಟೀಕಿಸುವ ಮತ್ತು ವಿರೋಧಿಸುವ ಯಾವ ಹಕ್ಕು ಪ್ರಜೆಗಳ ಕೈಯಲ್ಲಿ ಇರಲಿಲ್ಲ. ಸಂಸ್ಥಾನಿಕರು ತಮ್ಮ ಆಸ್ತಿಯನ್ನು ಮಾರುವ ಅಥವಾ ಬೇರೆಯವರಿಗೆ ವರ್ಗಾಯಿಸುವ ಹಕ್ಕನ್ನು ಕೂಡಾ ಹೊಂದಿರಲಿಲ್ಲ. ಯಾವುದೇ ವ್ಯವಹಾರಕ್ಕೂ ಬ್ರಿಟಿಷ ಅಧಿಕಾರಿಗಳ ಅನುಮತಿಗಳನ್ನು ಕೇಳಿ ಪಡೆಯಬೇಕಾಗಿತ್ತು.

ಪ್ರಜ್ಞಾವಂತ ಭಾರತೀಯ ತರುಣರು ಬ್ರಿಟಿಷರ ಈ ಕುಟಿಲ ನೀತಿಯನ್ನು ವಿರೋಧಿಸಿದರು. ಲೋಕಮಾನ್ಯ ತಿಲಕ್, ಸರದಾರ್ ವಲ್ಲಭಭಾಯಿ ಪಟೇಲ್, ಲಾಲಾ ಲಜಪತರಾಯ್, ಸುಭಾಷಚಂದ್ರ ಭೋಸ್ ಮುಂತಾದವರು ಬ್ರಿಟಿಷರ ವಿರುದ್ಧ ಉಗ್ರ ಪ್ರತಿಭಟನೆಯನ್ನು ಮಾಡಿದರು. ಮಹಾತ್ಮಾ ಗಾಂಧೀಜಿಯವರು ಇಂಗ್ಲೆಂಡಿನಲ್ಲಿ ಬ್ಯಾರಿಷ್ಟರ್ ಪದವಿಯನ್ನು ಪಡೆದು ದಕ್ಷಿಣ ಆಫ್ರಿಕಾದಲ್ಲಿ ವಕೀಲಿ ವೃತ್ತಿಯನ್ನು ಪ್ರಾರಂಭಿಸಿದ್ದರು. ಆ ದೇಶದಲ್ಲಿ ನಡೆಯುವ ವರ್ಣಭೇದ ನೀತಿಯು ಗಾಂಧೀಜಿಯವರ ಮನಸ್ಸನ್ನು ಕಲುಕಿತು. ಶ್ವೇತ ವರ್ಣೀಯರು ಕಪ್ಪು ವರ್ಣದ ನಿಗ್ರೋ ಜನರನ್ನು ಹಿಂಸಿಸುತ್ತಿದ್ದರು. ಅಲ್ಲದೆ ಅವರನ್ನು ಪ್ರಾಣಿಗಳಂತೆ ದುಡಿಸಿಕೊಳ್ಳುತ್ತಿದ್ದರು. ಈ ವರ್ಣಭೇದ ನೀತಿ ಮನುಕುಲಕ್ಕೆ ಅಂಟಿದ ಒಂದು ಕರಾಳ ಕಪ್ಪು. ಹೇಗಾದರೂ ಮಾಡಿ ಇದನ್ನು ಹೊಡೆದೋಡಿಸಬೇಕೆಂದು ಗಾಂಧಿ ಕಪ್ಪು ಜನಾಂಗದ ನಿಗ್ರೋಗಳ ಪರವಾಗಿ ಹೋರಾಡುತ್ತಾರೆ.

ಈ ವರ್ಣಭೇದ ನೀತಿಯು ಜಗತ್ತಿನ ತುಂಬ ಒಂದಿಲ್ಲೊಂದು ವೇಷದಲ್ಲಿ ತಾಂಡವವಾಡುತ್ತಿದೆ. ಭಾರತದಲ್ಲಿಯೂ ಕೂಡಾ ಈ ಅಸಮಾನತೆಯು ತನ್ನ ಕರಾಳ ಛಾಯೆಯನ್ನು ಬೀಸಿದ್ದು ಗಾಂಧೀಜಿಯವರಿಗೆ ಗೊತ್ತಾಗುತ್ತದೆ. ಭಾರತೀಯರನ್ನು ಬಂಧ ಮುಕ್ತಗೊಳಿಸುವುದಕ್ಕಾಗಿ ತಮ್ಮ ವಕೀಲಿ ವೃತ್ತಿಗೆ ಶರಣುಹೊಡೆದು ಭಾರತಕ್ಕೆ ಬರುತ್ತಾರೆ. ಭಾರತದಲ್ಲಿ ಈಗಾಗಲೇ ಸ್ವಾತಂತ್ರ್ಯಕ್ಕೆ ಹೋರಾಡುವ ನೂರಾರು ಜನ ತರುಣರ ತಂಡ ಸಿದ್ಧಗೊಂಡಿತ್ತು. ಈ ತರುಣರಲ್ಲಿ ಹೇಗಾದರೂ ಮಾಡಿ ಸ್ವಾತಂತ್ರ್ಯವನ್ನು ಪಡೆಯಬೇಕೆಂಬ ಉತ್ಕಟ ಇಚ್ಛೆವುಳ್ಳರು ಹಿಂಸಾ ಮಾರ್ಗದಿಂದಾದರೂ ಸರಿ ಹೋರಾಟಕ್ಕೆ ಬದ್ಧ ಕಂಕಣರಾದರು.

ಹೀಗಾಗಿ ಮಂದಗಾಮಿಗಳ ಮತ್ತು ತೀವ್ರಗಾಮಿಗಳೆಂದು ಸ್ವಾತಂತ್ರ್ಯ ಹೋರಾಟಗಾರರನ್ನು ಗುರುತಿಸಲಾಯಿತು. ಧಂಗೆ, ಚಳುವಳಿ, ಹರತಾಳಗಳಲ್ಲಿ ಜನರು ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಂಡರು. ಈ ಹೋರಾಟವು ಅಖಂಡ ಭಾರತವನ್ನು ವ್ಯಾಪಿಸಿತು. ವಿದ್ಯಾವಂತರು, ಬುದ್ಧಿಜೀವಿಗಳಾದ ಭಾರತೀಯರು ಸಭೆ ಸಮಾರಂಭಗಳನ್ನು ನಡೆಸಿ ಬ್ರಿಟಿಷರ ಅನ್ಯಾಯಗಳನ್ನು ಬಯಲಿಗೆಳೆಯ ಹತ್ತಿದರು. ಗಾಂಧೀಜಿಯವರಂತೂ ೧೯೪೨ ರಲ್ಲಿ ಬ್ರಿಟಿಷರೇ 'ಭಾರತವನ್ನು ಬಿಟ್ಟು ತೊಲಗಿರಿ' ಎಂಬ ಕರೆಯನ್ನೇ ಕೊಟ್ಟರು. ಗಾಂಧೀಜಿಯವರ ಮಂತ್ರ ಸದೃಶ್ಯವಾದ ಈ ಕರೆಯಿಂದ ದೇಶದ ಎಲ್ಲಾ ದಿಕ್ಕುಗಳಲ್ಲಿ ಸ್ವಾತಂತ್ರ್ಯದ ಕಿಚ್ಚು ಹೊತ್ತಿ ಉರಿಯತೊಡಗಿತು. ದೇಶದ ಮೂಲೆ ಮೂಲೆಗಳಲ್ಲಿ ಜನರು ಆಂದೋಲನ ಕುರಿತು ಚರ್ಚಿಸುತ್ತಿದ್ದರು.

೧೯೪೨ ರಲ್ಲಿ ಗಾಂಧೀಜಿಯವರು ಚಲೇಜಾವ ಚಳುವಳಿಯನ್ನು ಹುಟ್ಟು ಹಾಕಿದರು. ಈ ಆಂದೋಲನ ಪ್ರಾರಂಭಿಸುವ ಮೊದಲು ಅನೇಕ ವಿಚಾರಗಳು ಅವರ ಮನಸ್ಸಿನಲ್ಲಿ ಚಿಂತನ ಮಂಥನಕ್ಕೆ ಒಳಗಾಗಿದ್ದವು. ಆ ವಿಚಾರಗಳನ್ನು ಹಂಚಿಕೊಳ್ಳುವುದಕ್ಕಾಗಿ ತಮಗೆ ಆಪ್ತರೆನಿಸಿದ ವಿನೋಭಾ ಭಾವೆಯವರನ್ನು ತಮ್ಮ ಬಳಿಗೆ ಕರೆಸಿಕೊಳ್ಳುತ್ತಾರೆ. ಗಾಂಧೀಜಿಯವರು ತಮ್ಮ

ಮನೋಗತವನ್ನು ವಿನೋಭಾ ಅವರ ಮುಂದೆ ಈ ರೀತಿ ಹೇಳುತ್ತಾರೆ. "ಈ ಸಾರಿ ಜೈಲಿನಲ್ಲಿ ಕಾಲಿಟ್ಟ ಕೂಡಲೆ ಉಪವಾಸ ಪ್ರಾರಂಭ ಮಾಡತಕ್ಕದ್ದು. ಸೆರೆಮನೆಯಲ್ಲಿ ಬಂಧಿಸ್ತರಾಗಿ ಕೂಡುವ ಮಾತು ಹಳೆಯದಾಗಿದೆ. ಬ್ರಿಟಿಷರ ಮಾತು ಮಾನ್ಯ ಮಾಡತಕ್ಕದ್ದಲ್ಲ. ಮತ್ತು ನಾವು ಅವರಿಗೆ ಇಲ್ಲಿಂದ ಹೊರಟು ಹೋಗಲು ಹೇಳುತ್ತಿದ್ದೇವೆ. ಅಂದ ಮೇಲೆ ಜೈಲಿನಲ್ಲಿ ಹೋದ ಕೂಡಲೇ ಉಪವಾಸ ಪ್ರಾರಂಭ ಮಾಡಲು ಯಾವ ಅಭ್ಯಂತರವಿದೆ"[೪]. ಇದು ಧೀರ ನಿಲುವು, ದೃಢ ನಿರ್ಧಾರವಾದರೂ ಅಹಿಂಸಾತ್ಮಕವೇ ಆಗಿತು.

ಉಪವಾಸದಂತಹ ದಿವ್ಯ ಕ್ರಮವನ್ನು ಅನುಸರಿಸುವವರು ಸಾಮಾನ್ಯರಲ್ಲ. ಯಾರ ಮನಸ್ಸಿನಲ್ಲಿ ದೇಶಪ್ರೇಮ ತುಂಬಿ ತುಳುಕುತ್ತಿದೆಯೊ ಅಂತವರು ಮಾತ್ರ ಬಲಿದಾನ ಮಾಡಬಲ್ಲರು. ಒಬ್ಬ ವ್ಯಕ್ತಿಯೂ ಕೂಡಾ ಇಂತಹ ವಿಧಾಯಕ ಕಾರ್ಯಕ್ಕೆ ತಯಾರಾಗಬಹುದು. ಆದರೆ ಪ್ರೇಮ ಪೂರ್ವಕ ಉಪವಾಸ ಮಾಡಿ ಮೃತ್ಯುವನ್ನು ಆಲಂಗಿಸುವುದು ಜನಾಂದೋಲನ ಆಗಬಲ್ಲುದೇ? ಜನರು ಸೈನ್ಯದಲ್ಲಿ ಭರ್ತಿಯಾಗುವಂತೆ ಅಹಿಂಸಾ ಚಳುವಳಿಯಲ್ಲಿಯೂ ಅವರು ಭರ್ತಿಯಾಗಬಲ್ಲರೇ? ಎಂಬ ಆಲೋಚನೆಗಳು ಗಾಂಧೀಜಿಯವರಿಗೆ ಬರುತ್ತಿದ್ದದು. ಆದರೆ ಈ ಪ್ರಯೋಗ ತಮ್ಮಿಂದಲೇ ಆಗಬೇಕೆಂದು ಅವರಿಗೆ ಅನ್ನಿಸುತ್ತಿತ್ತು. ಗಾಂಧೀಜಿಯವರ ಈ ವಿಚಾರ ಜನರಿಗೆ ಗೊತ್ತಾದ ಬಳಿಕ ಜನ ಗಾಬರಿಯಾದರು. ಏಕೆಂದರೆ ಬಾಪೂ ಒಂದು ಸಲ ನಿರ್ಣಯ ತೆಗೆದುಕೊಂಡರೆ ಅದರಿಂದ ಹಿಂದೆಗೆಯುವುದಿಲ್ಲ ಎಂಬುದು ಎಲ್ಲರಿಗೂ ಗೊತ್ತಿತ್ತು. ಹೇಗಾದರೂ ಮಾಡಿ ಅವರು ಉಪವಾಸ ಕೈಕೊಳ್ಳಬಾರದೆಂದು ಜನ ಆಲೋಚನೆ ಮಾಡಿದರು. ಒಂದು ವೇಳೆ ಗಾಂಧೀಜಿಯವರು ಉಪವಾಸವನ್ನು ಕೈಕೊಂಡರೆ ಜನಸಾಮಾನ್ಯರು ಅವರಂತೆ ನಡೆಯಲು ಅಸಮರ್ಥವಾಗುತ್ತಾರೆ. ಇದರಿಂದ ಚಳುವಳಿಯ ಸ್ವರೂಪ ಬದಲಾಗುತ್ತಿದೆ. ಎಂದೆಲ್ಲಾ ಆಲೋಚನೆ ಮಾಡುತ್ತಿದ್ದರು. ಗಾಂಧೀಜಿಯವರು ತಮ್ಮ ವಿಚಾರ ವಿನಿಮಯಕ್ಕಾಗಿ ವಿನೋಭಾಜಿಯವರನ್ನು ಕರೆಸಿಕೊಳ್ಳುತ್ತಾರೆ. ಅವರ ಮುಂದೆ ತಮ್ಮ ನಿರ್ಧಾರವನ್ನು ಮಂಡಿಸುತ್ತಾರೆ. ವಿನೋಭಾ ಗಾಂಧೀಜಿಗೆ ಹೇಳಿದರು. "ಹೌದು ಮಾಡಬಲ್ಲೆ ಯಾವ ಕೆಲಸವನ್ನು ಜ್ಞಾನಿ ಜನರು ಜ್ಞಾನಪೂರ್ವಕ ಮಾಡುತ್ತಾರೋ ಅದೇ ಕೆಲಸವನ್ನು ಅನುಯಾಯಿಗಳು ಶ್ರದ್ಧೆಯಿಂದ ಮಾಡಬಲ್ಲರು. ಶ್ರೀ ರಾಮನು ಜ್ಞಾನಪೂರ್ವಕ ಮಾಡುವ ಕೆಲಸವನ್ನು ಅವನ ಶಿಷ್ಯ ಹನುಮಂತನು ಶ್ರದ್ಧಾಪೂರ್ವಕ ಮಾಡುತ್ತಾನೆ"[೫]. ವಿನೋಭಾ ಅವರು ಇಷ್ಟು ಹೇಳಿ ಹೊರಟು ಹೋಗುತ್ತಾರೆ. ಅಗಷ್ಟ ೯ ರಂದು ಬೆಳಗಾಗುವುದರ ಒಳಗೆ ಗಾಂಧೀಜಿಯವರನ್ನು ಬಂಧಿಸುತ್ತಾರೆ. ಆದರೆ ಆ ಕಾಲಕ್ಕೆ ಗಾಂಧೀಜಿಯವರಲ್ಲಿ ಉಪವಾಸ ಮಾಡುವ ವಿಚಾರ ಇರಲಿಲ್ಲ. ಪ್ರಸಂಗ ಬಂದರೆ ನೋಡಿದರಾಯಿತೆಂದು, ಮತ್ತು ಸರಕಾರದೊಂದಿಗೆ ಏನಾದರೂ ಪತ್ರ ವ್ಯವಹಾರ ನಡೆಯಬಹುದೆಂದು ಅವರಿಗೆ ಅನಿಸಿತ್ತು.

ಇತ್ತ ಅದೇ ದಿವಸ ವಿನೋಭಾ ಅವರನ್ನು ಬಂಧಿಸುತ್ತಾರೆ. ವಿನೋಭಾ ಅವರು ಸೆರೆಮನೆಯಲ್ಲಿ ಕಾಲಿಟ್ಟ ಕೂಡಲೇ ಜೈಲರನಿಗೆ ಹೇಳಿದ ಮಾತುಗಳು ಅವರ ದೇಶ ಪ್ರೇಮಕ್ಕೆ ಸಾಕ್ಷಿಯಾಗಿವೆ.

"ನಿಮಗೆ ನನ್ನ ಪರಿಚಯವಿದೆ. ನಾನು ಜೈಲಿನ ಎಲ್ಲ ನಿಯಮಗಳನ್ನು ಸೂಕ್ಷ್ಮ ರೀತಿಯಿಂದ ಪಾಲನ ಮಾಡುವವ. ಅದರಂತೆ ಇತರರಿಗೂ ಪಾಲನ ಮಾಡಲು ಹಚ್ಚುವವನಿದ್ದೇನೆ. ಆದರೆ ಈ ಸಾರೆ ಅದರಂತೆ ಆಗಲಿಕ್ಕಿಲ್ಲ. ಬೆಳಿಗ್ಗೆ ನಾನು ತಿಂದು ಬಂದಿದ್ದೇನೆ. ಆದ್ದರಿಂದ ಮಧ್ಯಾಹ್ನ ಊಟದ ಪ್ರಶ್ನೆ ಇಲ್ಲ. ಸಾಯಂಕಾಲದಿಂದ ನಾನು ಏನೂ ತಿನ್ನುವುದಿಲ್ಲ. ಎಲ್ಲಿಯವರೆಗೆ ತಿನ್ನುವುದಿಲ್ಲ ಎಂಬುದು ನನಗೆ ಗೊತ್ತಿಲ್ಲ. ನಿಮ್ಮ ಶಿಸ್ತು ಮುರಿಯುವುದಕ್ಕಾಗಿ ನಾನು ಇದನ್ನು ಮಾಡಿತ್ತಿಲ್ಲ. ಆದರೆ ನನ್ನವು ಕೆಲವು ವಿಶಿಷ್ಟ ಶಿಸ್ತು ಇವೆ. ಅವನ್ನು ಪಾಲಿಸುವುದಕ್ಕಾಗಿ ಹೀಗೆ ಮಾಡುತ್ತೇನೆ"[೬]. ಹೀಗೆ ಹೇಳಿ ವಿನೋಭಾ ಅವರು ಜೈಲಿನಲ್ಲಿ ಪ್ರವೇಶ ಮಾಡುತ್ತಾರೆ.

ವಿನೋಬಾ ಜೈಲಿನಲ್ಲಿ ಉಪವಾಸ ಕೈಕೊಳ್ಳುತ್ತಾರೆಂದು ಗಾಂಧೀಜಿಯವರು ಅವರಿಗೆ ಉಪವಾಸ ಕೈಕೊಳ್ಳಬಾರದೆಂಬ ಸಂದೇಶವನ್ನು ಕಳಿಸುತ್ತಾರೆ. ವಿನೋಭಾ ತಮ್ಮ ನಿರ್ಧಾರದಲ್ಲಿ ಹಿಂದೆಗೆಯದ ವ್ಯಕ್ತಿಯೆಂಬುದು ಎಲ್ಲರಿಗೂ ಗೊತ್ತಿತ್ತು. ಆದ್ದರಿಂದ ಉಪವಾಸ ಕೈ ಬಿಡಬೇಕೆಂದು ಗಾಂಧೀಯವರೆ ತಮ್ಮ ಹಸ್ತಾಕ್ಷರದಿಂದ ಪತ್ರದಲ್ಲಿ ಬರೆದು ಕಳಿಸಿಕೊಡುತ್ತಾರೆ. ಆ ಪತ್ರ ಜೈಲರ್ ಮುಖಾಂತರ ಬಂದರೂ ವಿನೋಬಾ ಸ್ವೀಕರಿಸುವದಿಲ್ಲವೆಂದು ವಿನೋಬಾಗೆ ಅತ್ಯಂತ ಹತ್ತಿರದವರಾದ ಕಿಶೋರಲಾಲಜಿಯವರ ಕಡೆಯಿಂದ ಕಳಿಸಿಕೊಡುತ್ತಾರೆ. ವಿನೋಬಾ ಪತ್ರ ನೋಡಿ ಗಾಂಧೀಜಿ ಸಂದೇಶಕ್ಕೆ ಗೌರವ ಸೂಚಿಸಿ ಉಪವಾಸವನ್ನು ಕೈ ಬಿಡುತ್ತಾರೆ.

'ಭಾರತ ಬಿಟ್ಟು ತೊಲಗಿರಿ' ಗಾಂಧೀಜಿಯವರ ಈ ಕರೆಗೆ ಸರದಾರ ವಲ್ಲಭಭಾಯಿ ಪಟೇಲರು ಸಂಪೂರ್ಣ ಬೆಂಬಲ ಸೂಚಿಸಿ ಈ ರೀತಿಯಾಗಿ ತಮ್ಮ ಭಾಷಣದಲ್ಲಿ ಹೇಳುತ್ತಾರೆ. "ನಾವು ಈಗ ಮಾಡಲಿರುವ ಕೃತಿಯೇ ನಮ್ಮನ್ನು ಟೀಕಿಸುವವರಿಗೆ ಉತ್ತರ ಕೊಡಲು ಸಮರ್ಥವಾಗಿದೆ. ಮುಂದುವರೆದು ಅವರು ಹೀಗೂ ಹೇಳಿದ್ದಾರೆ. ನಿಮಗೆ ಬೇಕಾಗಿದ್ದರೆ ಮುಸಲ್ಮಾನರಿಗೆ ಸ್ವರಾಜ್ಯ ಕೊಡಿರಿ, ಹರಿಜನರಿಗೆ ಕೊಡಿರಿ, ಸಂಸ್ಥಾನಿಕರಿಗೆ ಕೊಡಿರಿ, ಹೆಚ್ಚಿಗೇನು ಹೇಳುವುದು? ಬೇಕಾದರೆ ಹಿಂದೂಸ್ಥಾನದಲ್ಲಿಯ ಕಳ್ಳ ಕಾಕರಿಗೆ ಕೊಡಿರಿ. ಆದರೆ ನೀವು ಒಮ್ಮೆ ಇಲ್ಲಿಂದ ಹೊರಟು ಹೋಗಿರಿ"[೭] ಭಾರತದಿಂದ ತೊಲಗಿರಿ ಎಂಬ ಗೊತ್ತುವಳಿಯಿಂದ ಜನತೆಯ ಮೇಲೆ ಅನೇಕ ರೀತಿಯ ಪರಿಣಾಮಗಳಾದವು. ಈ ಗೊತ್ತುವಳಿಯು ಸ್ವೀಕಾರವಾದ ಎರಡನೇ ದಿನವೇ ಪಂಡಿತ ಜವಾಹರಲಾಲರ ಹಸ್ತದಿಂದ ಆಝಾದ ಮೈದಾನದಲ್ಲಿ ಧ್ವಜವಂದನೆಯ ಕಾರ್ಯಕ್ರಮ ನಡೆಯುವದಿತ್ತು. ಆದರೆ ಸರಕಾರ ಅಲ್ಲಿಯ ಧ್ವಜದ ಕಂಭವನ್ನೇ ಕಿತ್ತು ಹಾಕಿತ್ತು. ಆದರೆ ಶ್ರೀಮತಿ ಅಸಫ್ ಅಲಿಯ ಹಸ್ತದಿಂದ ಗೊತ್ತಾದ ವೇಳೆಗೆ ಧ್ವಜವಂದನೆ ನೆರವೇರಿತು. ಬೆಳಗಿನ ಜಾವದಲ್ಲಿ ಮುಖಂಡರನ್ನು ಬಂಧಿಸಿದ ಸುದ್ದಿ ಪ್ರಕಟವಾಗಿತ್ತು. ಸರಕಾರವು ಮೆರೆವಣಿಗೆ ಸಭೆಗಳನ್ನು ನಿಷೇಧಿಸಿತು. ಲಾಟಿ ಶಸ್ತ್ರ ಹಿಡಿಯುವುದನ್ನು ಪ್ರತಿಬಂಧಿಸಿತು. ಕೆಲವು ಭಾಗಗಳಲ್ಲಿ ಅಂತೂ ರಾತ್ರಿ ಸಂಚಾರಕ್ಕೆ ತಡೆಯಾಜ್ಞೆಯನ್ನು ಹೊರಡಿಸಲಾಗಿತ್ತು. ಪೋಲೀಸ ಅಧಿಕಾರಿಗಳು ಲಾಠಿಚಾರ್ಜ ಮಾಡುವುದು, ಅಶ್ರುವಾಯುಗಳನ್ನು ಸಿಡಿಸುವುದು ಮುಕ್ತ ರೀತಿಯಿಂದ ನಡೆಸಿದರು. ಜನರಿಂದ ಸತ್ಯ, ಅಹಿಂಸೆಗಳ ಬಂಧನ ಅಪೇಕ್ಷಿಸುವ

ಕಾಲ ಮೀರಿ ಹೋಗಿತ್ತು. ಜನತೆ ಕಸಿವಿಸಿಗೊಂಡಿತ್ತು. "ಸರಕಾರದ ಪಾಶವೀ ಶಕ್ತಿ ತಾಂಡವವಾಡ ತೊಡಗಿತ್ತು. ಜನತೆಯು ಉಗಿಬಂಡಿಗಳಿಗೆ ಕಲ್ಲು ಒಗೆಯುವುದು, ಲೂಟಿ ಮಾಡುವುದು, ಬೆಂಕಿ ಹಚ್ಚುವ ಕೆಲಸವನ್ನು ಮಾಡುತ್ತಿತ್ತು. ಶಾಲಾ ಕಾಲೇಜುಗಳು ಮುಚ್ಚಿದ್ದವು. ರೇಲ್ವೆ ಹಳಿಗಳನ್ನು ಕಿತ್ತುವ ವಿಚಾರ ದೇಶದ ತುಂಬಾ ಕಾಳ್ಗಿಚ್ಚಿನಂತೆ ಹಬ್ಬಿತು. ವರ್ತಮಾನ ಪತ್ರಗಳಲ್ಲಿ ಇಂತಹ ಸುದ್ದಿಗಳು ಬಿತ್ತರಗೊಂಡವು. ಈ ವಿಷಯದಲ್ಲಿ ಬಿಹಾರ ಪ್ರಾಂತವು ಅಗ್ರಗಣ್ಯವಾಗಿತ್ತು. ಅಹಮದಾಬಾದ, ಮುಂಬೈಗಳಲ್ಲಿ ಕೆಲವು ಗಿರಣಿಗಳು ಮುಚ್ಚಿದ್ದವು. ಮುಂಬೈಯಲ್ಲಿ ದೀಪದ ಕಂಭಗಳನ್ನು ಕಿತ್ತಿ ಬಿಸಾಕಲಾಗಿತ್ತು. ದಾದರನಲ್ಲಿ ಒಂದು ಪೆಟ್ರೋಲ ವಾಹಕ ಮೋಟಾರನ್ನು ಸುಡಲಾಗಿತ್ತು. ಲೋಕಲ್ ಗಾಡಿಗಳಂತೂ ನಿಂತಲ್ಲಿ ನಿಂತೇ ಬಿಟ್ಟಿದ್ದವು. ಈ ಗೊಂದಲದಲ್ಲಿ ೧೯೪೨ ಅಗಷ್ಟ ೯ ರಂದು ಎಂಟು ಜನ ಸಾವನ್ನಪ್ಪಿದರು. ೧೬೯ ಜನರು ಗಾಯಗೊಂಡರು. ೨೭ ಜನ ಪೋಲೀಸರು ಗಾಯಗೊಂಡಿದ್ದರು. ಸೈನಿಕರು ಕನಿಷ್ಠ ಹತ್ತುಹನ್ನೆರಡು ಸಲವಾದರೂ ಜನರ ಮೇಲೆ ಗೋಲಿಬಾರ ಮಾಡಿದರು. ಈ ರೀತಿ ಮಾಡಿದವರಿಗೆ ಸರಕಾರವು ಅತ್ಯಂತ ಕಠಿಣ ಶಿಕ್ಷೆಯನ್ನು ವಿಧಿಸುತ್ತಿತ್ತು. ಕಾಂಗ್ರೆಸ್ಸಿಗೆ ಸಹಾಯ ಮಾಡುವ ಸ್ಥಾನಿಕ ಸಂಸ್ಥೆಗಳನ್ನು ಜಪ್ತಿ ಮಾಡಿ ಸರಕಾರವು ತನ್ನ ವಶಕ್ಕೆ ಪಡೆದುಕೊಂಡಿತು"[೮].

ಚಲೇಜಾವ್ ಚಳುವಳಿಯೇ ಸ್ವಾತಂತ್ರ್ಯದ ಕೊನೆಯ ಹೋರಾಟ ಎಂದು ಭವಿಷ್ಯ ನುಡಿದು ಅದಕ್ಕಾಗಿಯೇ 'ಮಾಡು ಇಲ್ಲವೇ ಮಡಿ' ಎಂಬ ಸೂತ್ರವನ್ನು ಗಾಂಧೀಜಿಯವರು ಯುವ ಜನಾಂಗಕ್ಕೆ ಸಂದೇಶ ನೀಡಿದರು. ಇದು ಯುವ ಜನತೆಯಲ್ಲಿ ವಿದ್ಯುತ್ ಶಕ್ತಿಯ ಸಂಚಾರದಂತೆ ಕೆಲಸಮಾಡಿತು. ನಾವು ಬೇಡಬೇಡವೆಂದರು ಬ್ರಿಟಿಷರು ತುಸು ದಿನಗಳಲ್ಲಿಯೇ ಸ್ವರಾಜ್ಯ ಕೊಟ್ಟು ಭಾರತದಿಂದ ತೊಲಗುವರೆಂದು ಸರದಾರ್ ವಲ್ಲಭಭಾಯಿ ಪಟೇಲರು ಆತ್ಮ ವಿಶ್ವಾಸದಿಂದ ಹೇಳಿದರು. ಸಾಮಾನ್ಯರಿಗೆ ಕಾಣಿಸದ ಸಂಗತಿಗಳು ದೂರ ದೃಷ್ಟಿಯುಳ್ಳ ಚತುರ ರಾಜಕಾರಣಿಗಳಿಗೆ ಹತ್ತೆಂಟು ವರುಷದ ಮುಂದಿನ ಚಿತ್ರವು ಸಾಕ್ಷಾತ್ಕಾರವಾಗುವುದು. ೧೯೪೨ ರ ಚಲೇಜಾವ್ ಚಳುವಳಿಯೇ ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಕೊನೆಯ ಹೋರಾಟವಾಯಿತು. ಈ ಹೋರಾಟದ ತೀವ್ರತೆಯು ೧೯೪೪ ರ ಮಧ್ಯಕ್ಕೆ ಕಡಿಮೆಯಾಗಿ ಗಾಂಧೀಜಿಯವರ ಬಿಡುಗಡೆಯಾಯಿತು. ಸ್ವಾತಂತ್ರ್ಯ ಸಂಗ್ರಾಮದ ಬೆಳ್ಳಿ ಚುಕ್ಕಿ ಸುಭಾಷ್‌ಚಂದ್ರ ಭೋಸ್‌ರು ಬ್ರಿಟಿಷರ ಬಂಧನದಿಂದ ಉಪಾಯವಾಗಿ ಪಾರಾಗಿ ಅಫಘಾನಿಸ್ತಾನ್ ಮಾರ್ಗದಿಂದ ಯೂರೋಪಕ್ಕೆ ಹೋಗುತ್ತಾರೆ. ಅಲ್ಲಿ ಹಿಟ್ಲರ್, ಮುಸಲೋನಿ, ಅವರನ್ನು ಕಂಡು ಅವರೊಂದಿಗೆ ಮಾತು ಕತೆ ನಡೆಸಿ ಭಾರತಕ್ಕೆ ಬರುತ್ತಾರೆ. ಬ್ರಿಟಿಷರ ಹಿಡಿತದಲ್ಲಿದ್ದ ಭಾರತೀಯ ಸೈನಿಕರಲ್ಲಿ ದೇಶಪ್ರೇಮದ ಬೀಜವನ್ನು ಬಿತ್ತುತ್ತಾರೆ. ಅವರಲ್ಲಿ ಅಶಾಂತಿ, ಅಸಂತೋಷಗಳನ್ನು ಗುರುತಿಸಿ ತಮ್ಮತ್ತ ಸೆಳೆದುಕೊಳ್ಳುತ್ತಾರೆ. ದೇಶದ ಸ್ವಾತಂತ್ರ್ಯ ಫೌಜ ಕಟ್ಟುತ್ತಾರೆ. ಅದಕ್ಕೆ 'ಆಝಾದಹಿಂದ್ ಫೌಜ್' ಎಂಬ ಹೆಸರನ್ನಿಟ್ಟು ಸಶಸ್ತ್ರ ಸೇನಾಪಡೆಯೊಂದನ್ನು ನಿರ್ಮಿಸುತ್ತಾರೆ. ಜಪಾನಿ ಸೈನ್ಯದೊಂದಿಗೆ ಬ್ರಹ್ಮದೇಶದಲ್ಲಿ ನುಗ್ಗಿ ಭಾರತದ ಪೂರ್ವಗಡಿಯಲ್ಲಿಯ ಮಣಿಪುರದ ಮೇಲೆ ದಾಳಿ ಮಾಡುತ್ತಾರೆ. ದ್ವಿತೀಯ ಮಹಾಯುದ್ಧದಲ್ಲಿ ಹಿಟ್ಲರನಿಗೆ ಜಯ ದೊರಕಿದರೂ ಅದು ಕೊನೆಯ ತನಕ ಉಳಿಯಲಿಲ್ಲ.

ಅವನು ಎರಡು ಕಡೆಗೆ ಯುದ್ಧ ಕ್ಷೇತ್ರ ವಿಸ್ತರಿಸಿದ್ದರಿಂದ (ಭೂಮಧ್ಯ ಸಮುದ್ರ ಮತ್ತು ರಷ್ಯಾ) ಯುದ್ಧದ ಸ್ವರೂಪವೇ ಬದಲಾಯಿತು. ಜಪಾನದ ಹಿರೋಷಿಮಾ ಮತ್ತು ನಾಗಾಸಾಕಿ ಮೇಲೆ ಬಾಂಬ ದಾಳಿಯಾದಾಗ ಕ್ಷಣಾರ್ಧದಲ್ಲಿ ಲಕ್ಷಾವಧಿ ಜನ ಅದಕ್ಕೆ ಆಹುತಿಯಾದರು. ಇದೇ ಯುದ್ಧದ ಅಂತ್ಯಕ್ಕೆ ಕಾರಣವಾಯಿತು. ಮುಸಲೋನಿ, ಹಿಟ್ಲರ್ ಇವರು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ.

ಭಾರತಿಯ ಸೈನ್ಯ ಪಡೆಯ ಸಾವಿರಾರು ಜನರು ಜಪಾನದ ಸೈನ್ಯಕ್ಕೆ ಶರಣು ಬಂದಾಗ ಸುಭಾಷಚಂದ್ರ ಭೋಸರು ಅದಕ್ಕೆ ನಾಯಕರಾಗಿ ಸೈನ್ಯವನ್ನು ಮುನ್ನಡೆಸಿದರು. ಭಾರತಿಯ ಸೈನ್ಯ ಪಡೆಯಲ್ಲಿ ಒಳಗೊಳಗೆ ಅಲ್ಲೋಲಕಲ್ಲೋಲ ಉಂಟಾಯಿತು. ಸೈನ್ಯದ ಮೇಲೆ ಬ್ರಿಟಿಷರ ಹಿಡಿತ ತಪ್ಪಲಾರಂಭಿಸಿತು. ನೌಕಾಪಡೆಯಲ್ಲಿಯೂ ಇದೇ ಸ್ಥಿತಿಯುಂಟಾಗಿತ್ತು. ಗಾಂಧೀಜಿಯವರ ಚಲೇಜಾವ್ ಚಳುವಳಿಯಿಂದಾಗಿ ರಾಜ್ಯಯಂತ್ರ ಮುರಿದು ಹೋಗದಿದ್ದರೂ ಸಾಕಷ್ಟು ಶಿಥಿಲಗೊಂಡಿತು. ಅಂತೆಯೇ ಜನರ ಮೇಲಂತೂ ಸರಕಾರದ ವಿಶ್ವಾಸ ಎಂದೊ ಹಾರಿ ಹೋಗಿತ್ತು. ಬ್ರಿಟಿಷರಿಗೆ ತಮ್ಮ ಸೈನ್ಯವನ್ನು, ನೌಕಾಪಡೆಯನ್ನು ನಿಯಂತ್ರಣದಲ್ಲಿಡಲು ಕಠಿಣವಾಗಿತ್ತು. ಇದು ಸ್ವಾತಂತ್ರ್ಯ ಚಳುವಳಿಕಾರರಿಗೆ ಇನ್ನೂ ಅನುಕೂಲವಾಯಿತು. ಗಾಂಧೀಜಿಯವರು ಅಹಿಂಸೆಯನ್ನೇ ಅಸ್ತ್ರವನ್ನಾಗಿ ಬಳಸಿಕೊಂಡು ಸೂರ್ಯ ಮುಳುಗದ ಸಾಮ್ರಾಜ್ಯಶಾಹಿ ಬ್ರಿಟಿಷರನ್ನು ಭಾರತದಿಂದ ತೊಲಗಿಸಲು ಪ್ರಯತ್ನಿಸಿದರು. ಇವರ ಹಿಂದೆ ಅಖಂಡ ಭಾರತದ ಸ್ವಾತಂತ್ರ್ಯ ಹೋರಾಟಕಾರರ ಹಿರಿಯ ದಂಡು ಶಕ್ತಿಯಾಗಿ ನಿಂತಿತ್ತು.

ಚಳುವಳಿಗಾರರು ಕಂಪನಿ ಸರಕಾರದ ವಿರುದ್ಧ ಅಸಹಕಾರ ಚಳುವಳಿಯನ್ನು ಶುರು ಮಾಡಿದ್ದರು. ೧) ಟೆಲಿಫೋನ ತಂತಿ ಕತ್ತರಿಸುವುದು, ೨) ರೇಲ್ವೆ ದಾರಿಗಳ ಮತ್ತು ಸೇತುವೆಗಳ ನಾಶ, ಉಗಿಬಂಡಿಗಳನ್ನು ಗಂಡಾಂತರ ಸರಪಳಿ ಎಳೆದು ನಿಲ್ಲಿಸುವುದು, ೩) ಟಿಕೇಟ್ ಇಲ್ಲದೆ ಪ್ರವಾಸ ಮಾಡುವುದು, ೪) ಸರಕಾರಿ ಕಛೇರಿಗಳಿಗೆ ಹೋಗಿ ನೌಕರರಿಗೆ ರಾಜೀನಾಮೆ ಕೊಡಲು ಒತ್ತಾಯಿಸುವುದು, ೫) ಹರತಾಳ ಆಚರಿಸುವುದು, ೬) ಸಿಂದಿಯ ಅಂಗಡಿಗಳ ಮೇಲೆ ಪಿಕೆಟಿಂಗ, ೭) ಸರಕಾರದ ಯುದ್ಧ ಕಾರ್ಯದಲ್ಲಿ ಅಡ್ಡಿ ಆತಂಕ ಒಡ್ಡುವುದು. ಈ ಎಲ್ಲ ಕೆಲಸ ಕಾರ್ಯಗಳು ಕಾಂಗ್ರೆಸ್ಸ್ ವರ್ಕಿಂಗ ಕಮೀಟಿಯವರದೇ ಎಂದು ಭಾವಿಸಿ ಬ್ರಿಟಿಷ ಸರಕಾರ ಬಿಗಿ ಧೋರಣೆಯನ್ನು ತಾಳಿತು.

ಗಾಂಧೀಜಿಯವರು ಭಾರತದಿಂದ ತೊಲಗಿರಿ ಎಂದು ಬ್ರಿಟಿಷರಿಗೆ ಆದೇಶ ನೀಡಿ ಅಹಿಂಸಾತ್ಮಕ ಚಳುವಳಿಯನ್ನು ಪ್ರಾರಂಭಿಸಿದರು. 'ಮಿಸ್ಟರ್ ಚರ್ಚಿಲ್'ರು ೧೯೪೨ ರಲ್ಲಿ ಪಾರ್ಲಿಮೆಂಟ್‌ನಲ್ಲಿ ಒಂದು ಭಾಷಣ ಮಾಡಿದರು. ಅದರಲ್ಲಿ ಗಾಂಧೀಜಿಯವರ ಚಳುವಳಿ ಅಯಶಸ್ವಿಯಾಯಿತೆಂದು ಸಾರಿದರು. ಬ್ರಿಟಿಷ ಪಾರ್ಲಿಮೆಂಟ್‌ನಲ್ಲಿ ಚರ್ಚಿಲ್‌ರಿಗೆ ಧಿಕ್ಕಾರ ಮತ್ತು ನಿಷೇಧ ಹೇರಲಾಯಿತು. ಸಾವರಕರ್ ಅವರು ಹಿಂದೂಸ್ಥಾನದ ಭವಿತವ್ಯವು ಚರ್ಚಿಲ್‌ರ ಕೈಯಲ್ಲಿ ಉಳಿದಿಲ್ಲವೆಂದು ಸ್ಪಷ್ಟವಾಗಿ ಹೇಳಿದರು.

ಗಾಂಧೀಜಿಗೆ ಅಹಿಂಸೆಯ ಮೇಲೆ ಅತ್ಯಂತ ವಿಶ್ವಾಸ. ಅಹಿಂಸೆ ಮತ್ತು ನಿಷ್ಠೆಯಿಂದ ನಾವು ಕಾರ್ಯ ಮಾಡಿದರೆ ಆ ದಯಾಮಯನಾದ ಭಗವಂತನು ಖಂಡಿತ ಫಲ ಕೊಡುತ್ತಾನೆ. ಎಂಬ ಅಚಲವಾದ ವಿಶ್ವಾಸ ಅವರಿಗಿತ್ತು. ಗಾಂಧೀಜಿಯವರು 'ನಮ್ಮ ಯುದ್ಧ ಬ್ರಿಟಿಷರ ವಿರುದ್ಧ ಇರದೇ ಇವರ ಸಾಮ್ರಾಜ್ಯಶಾಹಿ ವಿರುದ್ಧವಾಗಿದೆ. ಭಾರತದಿಂದ ಬ್ರಿಟಿಷ ಸತ್ತೆಯನ್ನು ಹೊರಹಾಕುವ ನಮ್ಮ ನಿರ್ಧಾರ ಕ್ರೋಧೋತ್ಪನ್ನವಾದುದಲ್ಲ. ಬ್ರಿಟಿಷರಿಗೆ ಈ ಯುದ್ಧದಲ್ಲಿ ಕೇವಲ ಧನ, ಜನ, ಸಹಾಯ ಒದಗಿಸುತ್ತಾ ಕೂಡುವುದು ಭಾರತದಂತಹ ರಾಷ್ಟ್ರದಲ್ಲಿ ಶೋಭಿಸಲಾರದು. ನಾವು ಸ್ವತಂತ್ರ್ಯರಾಗದೇ ಈ ಯುದ್ಧ ನಮ್ಮದೇ ಎಂದು ಅನಿಸಲಿಕ್ಕಿಲ್ಲ. ಈ ರೀತಿ ನಮಗೆ ಅನಿಸದ ಹೊರತು ನಮ್ಮ ದೇಶದಲ್ಲಿ ನಿಜವಾದ ಸ್ವಾರ್ಥ ತ್ಯಾಗ ಶೌರ್ಯದ ಭಾವನೆಗಳು ಹೊರ ಹೊಮ್ಮಿ ಬರಲಾರವು. ನನ್ನ ಮನಸ್ಸಿನಲ್ಲಿ ಕೇವಲ ಬ್ರಿಟಿಷರ ವಿಷಯಕ್ಕೆ ಏಕೆ ಯಾರ ವಿಷಯಕ್ಕೂ ಎಂದೂ ದ್ವೇಶವಿಲ್ಲ, ಇಂದಿಗೂ ಇಲ್ಲ. ಬ್ರಿಟಿಷ ಸತ್ತೆಯನ್ನು ಹಿಂದೂಸ್ತಾನದಿಂದ ಹೊರಗೆ ಹಾಕುವ ಈ ಕಾಲಕ್ಕೂ ಕೂಡಾ ನಾನು ಮೊದಲಿಗಿಂತಲೂ ಹೆಚ್ಚು ಅವರ ಸಮೀಪದ ಮಿತ್ರನಾಗಿದ್ದೇನೆ'. ಹೀಗೆ ಗಾಂಧೀಜಿಯವರು ಬ್ರಿಟಿಷರ ವಿರುದ್ಧ ಹೋರಾಡಲಿಲ್ಲ. ಅವರ ಸತ್ತೆಯ ವಿರುದ್ಧ ಹೋರಾಡಿದ್ದರು. ಆ ಕಾರಣಕ್ಕಾಗಿ ಸ್ವಾತಂತ್ರ್ಯದ ಕೊನೆಯ ಚಳುವಳಿಯಾದ ಬ್ರಿಟಿಷರೇ 'ಭಾರತ ಬಿಟ್ಟು ತೊಲಗಿರಿ' ಎಂಬ ಹೋರಾಟಕ್ಕೆ ಅವರು ಬಳಸಿದ ಮಂತ್ರದಂಡವೆಂದರೆ 'ಅಹಿಂಸೆ'. ಈ ಅಹಿಂಸೆಯ ಮೂಲಕ ಸ್ವಾತಂತ್ರ್ಯವನ್ನು ಪಡೆದೇ ತೀರುತ್ತೇವೆಂಬ ಬಲವಾದ ವಿಶ್ವಾಸ ಗಾಂಧೀಜಿಯವರಲ್ಲಿತ್ತು. ಅದನ್ನೇ ಅವರು ತಮ್ಮ ಶಿಷ್ಯ ಕೋಟಿಯಲ್ಲಿ ಬಿತ್ತರಿಸಿದರು. ಇದರ ಪ್ರಭಾವವು ಸಮಗ್ರ ಭಾರತೀಯರ ಮೇಲಾಯಿತೆಂದು ಹೇಳಲಾಗುವುದಿಲ್ಲ. ಬಿಸಿ ರಕ್ತದ ಕೆಲವು ತರುಣರು ಬೇಗನೆ ಸ್ವಾತಂತ್ರ್ಯವನ್ನು ಪಡೆಯಬೇಕೆಂಬ ಆತುರದಲ್ಲಿ ದಂಗೆಯೆದ್ದರೆಂಬ ಮಾತನ್ನು ಅಲ್ಲಗಳೆಯುವಂತಿಲ್ಲ.

ಈ ಹೋರಾಟವು ಶಸ್ತ್ರಾಸ್ತ್ರ ಸಜ್ಜಿತ ಸರಕಾರ ಮತ್ತು ನಿಶಸ್ತ್ರ ಜನತೆಯ ನಡುವೆ ನಡೆದ ಘೋರ ಸಂಗ್ರಾಮವಾಗಿತ್ತು. ಈ ಸರಕಾರದ ರಾಜ್ಯಯಂತ್ರ ವನ್ನು ಶಿಥೀಲಗೊಳಿಸುವ ನಿರ್ಣಯವನ್ನು ಜನತೆ ತೆಗೆದುಕೊಂಡಿತ್ತು. ಬಿಹಾರ ಹಾಗೂ ಪೂರ್ವ ಸಂಯುಕ್ತ ಪ್ರಾಂತಗಳಲ್ಲಿ ರೇಲ್ವೆ ಸಂಚಾರ ನಿಂತು ಹೊಗಿತ್ತು. ಆಸ್ಸಾಂನಿಂದ ಮುಂಬೈವರೆಗೆ ಅದರಲ್ಲಿಯೂ ಕಲಕತ್ತಾ, ಅಲಹಾಬಾದ, ಪಾಟ್ನಾ, ಪುಣೆಗಳಲ್ಲಿ ವೀರಶ್ರೀ ಮೈವೆತ್ತಿ ನಿಂತಿತ್ತು. ವೀರಮಾತೆಯ ಮಾತಂಗಿನಿಯ ಕತೆ ಅತ್ಯಂತ ರೋಮಾಂಚನಕಾರಿಯಾಗಿದೆ. ಮಿದನಾಪುರ ಭಾಗದ ಜನತೆ ೨೯ ಸೆಪ್ಟೆಂಬರ್ ೧೯೪೨ ರಂದು ಎಲ್ಲ ಸರಕಾರಿ ಅಧಿಕಾರಿಗಳನ್ನು ಸೆರೆ ಹಿಡಿಯುವ ನಿರ್ಣಯ ತೆಗೆದುಕೊಂಡಿತ್ತು. ೨೮ ರ ರಾತ್ರಿಯೇ ರಸ್ತೆಯ ಮೇಲೆ ಗಿಡಗಳನ್ನು ಕಡಿದು ಇಡಲಾಗಿತ್ತು. ದಾರಿ ಕಟ್ಟಾಗಿತ್ತು. ಅರವತ್ತು ಸೇತುವೆಗಳು ಮೊದಲೇ ನಾಶವಾದವು. ನದಿಯಲ್ಲಿ ಸಾಮಾನು ಸಾಗಿಸುವ ನಾವೆಗಳು ಕಣ್ಮರೆಯಾದವು. ಇಪ್ಪತ್ತೇಳು ಮೈಲಿನ ಉದ್ದದ ಮಾರ್ಗದ ಮೇಲಿನ ೧೯೪ ಕಂಭಗಳು ಕಿತ್ತು ಹಾಕಲ್ಪಟ್ಟವು. ಜನತೆ ದಂಡಯಾತ್ರೆಗೆ ಹೊರಟಂತಿತ್ತು. ಈ ದಂಡ ಯಾತ್ರೆಯ ಸ್ವಾಗತಕ್ಕೆ ಸರಕಾರಿ ದಂಡು ಸಿದ್ಧವಾಗಿತ್ತು. ಆಶ್ಚರ್ಯದ ಸಂಗತಿಯೆಂದರೆ ಜನತೆಯ ಈ ದಂಡಯಾತ್ರೆಯ ಒಂದು ತಂಡಕ್ಕೆ ೭೩ ವರ್ಷದ ಮುದುಕಿ

ವೀರ ಮಾತೆ ಮಾತಂಗಿನಿ ನೇತೃತ್ವ ವಹಿಸಿದ್ದಳು. ಅವಳು ಧೈರ್ಯದಿಂದ ಸೈನಿಕರ ಮುಂದೆ ಹೋಗಿ ನಿಂತಳು. ದಂಡಿನ ಸೈನಿಕರಿಗೆ ಸರಕಾರಿ ನೌಕರಿಯನ್ನು ಬಿಟ್ಟು ಬಿಡಲು ವಿನಂತಿಸಿಕೊಂಡಳು. ಆದರೆ ಆ ಮುದುಕಿಗೆ ಅದೇ ಕ್ಷಣದಲ್ಲಿ ಸೈನಿಕರಿಂದ ಬಂದೂಕಿನ ಗುಂಡಿನ ಉತ್ತರ ದೊರೆಯಿತು. ಕೈಯಲ್ಲಿದ್ದ ಧ್ವಜವನ್ನು ಎತ್ತಿ ಹಿಡಿದೇ ಆ ಮಾತೆಯು ದೇಶಕ್ಕಾಗಿ ಪ್ರಾಣವನ್ನೇ ಸಮರ್ಪಿಸಿದಳು. ಸ್ವಾತಂತ್ರ್ಯ ಹೋರಾಟಗಾರರಿಗೆ ಈ ಘಟನೆಯು ಅವರ ಒಳಕಿಚ್ಚನ್ನು ಇನ್ನೂ ಹೆಚ್ಚಿಸಿತು.

ಭಾರತೀಯರ ಮೇಲೆ ಬ್ರಿಟಿಷ ಸರಕಾರ ಮಾಡಿದ ಯುದ್ಧವನ್ನು ಕುರಿತು ಆ ಸರಕಾರದ ಯುದ್ಧ ಸದಸ್ಯನಾದ ಮ್ಯಾಕ್ಸವೆಲ್ ಕೇಂದ್ರ ವಿಧಾನ ಸಭೆಯಲ್ಲಿ ೧೯೪೩ ರಲ್ಲಿ ಕೊಟ್ಟ ವರದಿ ಹೀಗಿದೆ.

**"೫೩೮ ಬಾರಿ ಜನತೆಯ ಮೇಲೆ ಗೋಲಿಬಾರ ಮಾಡಲಾಯಿತು.**

**೯೫೦ ಜನರು ಈ ಗೋಲಿಬಾರಿಗೆ ತುತ್ತಾದರು.**

**೧೩೬೦ ಜನ ಗಾಯಗೊಂಡರು.**

**೩೫೦೦ ಸ್ಥಳಗಳಲ್ಲಿ ತಾರ್ ಹಾಗೂ ಟೆಲಿಫೋನ ತಂತಿ ಕತ್ತರಿಸಲಾಯಿತು.**

**೬೦೨೯ ಜನರನ್ನು ಬಂಧಿಸಲಾಯಿತು.**

**೨೦೦ ಸ್ಟೇಷನ್ನಗಳನ್ನು ಸುಡಲಾಯಿತು.**

**೫೫೦ ಅಂಚೆ ಕಛೇರಿಗಳ ಮೇಲೆ ದಾಳಿಯಾಯಿತು.**

**೭೦ ಪೊಲೀಸ ಕಚೇರಿಗಳು ಸಂಪೂರ್ಣ ಭಸ್ಮವಾದವು.**

**೮೫ ಸರಕಾರಿ ಕಟ್ಟಡಗಳು ಅಗ್ನಿಗೆ ಆಹುತಿಯಾದವು"[೯].**

ಇದರಿಂದ ಕುಪಿತಗೊಂಡ ಬ್ರಿಟಿಷರು ಸ್ವಾತಂತ್ರ್ಯ ಹೋರಾಟಗಾರರ ಮೇಲೆ ಅತ್ಯಂತ ಕಠಿಣ ಕ್ರಮ ಕೈಕೊಂಡರು. ಅಖಂಡ ಭಾರತದ ತುಂಬಾ ಬ್ರಿಟಿಷರ ವಿರುದ್ಧ ಜನ ಚಳುವಳಿಯನ್ನು ಮಾಡಿದ್ದು ಅದಕ್ಕೆ ಅನೇಕ ಮಹನೀಯರು ಪ್ರಾಣವನ್ನೇ ಸಮರ್ಪಿಸಿ ಹುತಾತ್ಮರಾಗಿದ್ದಾರೆ. ಹೀಗೆ ನಡೆದ ಹೋರಾಟಗಳಲ್ಲಿ ಕರ್ನಾಟಕದ ಕುಂದರನಾಡಿನ ಸ್ವಾತಂತ್ರ್ಯ ಹೋರಾಟವು ಒಂದು ಅಪೂರ್ವವಾದ ಮತ್ತು ಜನ ನಿರಂತರ ನೆನಪಿನಲ್ಲಿ ಇಡಬೇಕಾದ ಘಟನೆಯಾಗಿದೆ.

೧೯೪೨ ರಲ್ಲಿ ಅಖಿಲ ಭಾರತ ಕಾಂಗ್ರೆಸ ಕಮೀಟಿಯ ಅಧಿವೇಶನವು ಮುಂಬೈಯಲ್ಲಿ ಜರುಗಿತು. ಈ ಅಧಿವೇಶನದ ಘಟನೆಯನ್ನು ಭಾರತೀಯ ಸ್ವಾತಂತ್ರ್ಯ ಚಳುವಳಿಯ ಸುವರ್ಣ ಪುಟದಲ್ಲಿ ಬರೆಯುವಂತಹದು. ಗಾಂಧೀಜಿಯವರು ಬ್ರಿಟಿಷರೇ 'ಭಾರತದಿಂದ ತೊಲಗಿರಿ.' ಎಂಬ ಆದೇಶವನ್ನು ಕೊಟ್ಟ ನಂತರ ಭಾರತೀಯರಲ್ಲಿ ಹೊಸ ಚೈತನ್ಯ ಸಂಚರಿಸಿತು. ಈ ಅಧಿವೇಶನದಲ್ಲಿ ಭಾಗವಹಿಸಿದ ಕರ್ನಾಟಕದ ಸಿಂಹವೆಂದೇ ಪ್ರಸಿದ್ಧರಾದ ಕುಂದರನಾಡಿನ ಗಂಗಾಧರರಾವ್ ದೇಶಪಾಂಡೆಯವರು ಗಾಂಧೀಜಿಯವರಿಗೆ ತುಂಬಾ ಹತ್ತಿರದವರು. ರಾಷ್ಟ್ರೀಯ

ಅನೇಕ ಮುಖಂಡರು ಮುಂಬೈಯ ಈ ಅಧಿವೇಶನದಲ್ಲಿ ಭಾಗವಹಿಸಿ ಗಾಂಧೀಜಿಯವರ ಮಾತುಗಳನ್ನು ಆಲಿಸುತ್ತಿದ್ದರು. ಅಖಿಲ ಭಾರತ ಕಾಂಗ್ರೆಸ್ ಕಮಿಟಿಯು ಅಧಿವೇಶನದಲ್ಲಿ ಒಂದು ಮಹತ್ವದ ಗೊತ್ತುವಳಿಯನ್ನು ಸ್ವೀಕಾರ ಮಾಡುವುದಿತ್ತು. ಭಾರತದ ಸ್ವಾತಂತ್ರ್ಯಕ್ಕಾಗಿ ಭಾರತೀಯರು ಮಾಡುವ ಈ ಹೋರಾಟವು ಅಂತಿಮ ಹೋರಾಟವಾಗಿತ್ತು. ಸೇನಾಪತಿ ಬಾಪಟ, ತಾತ್ಯಾಸಾಬ್, ರಾಮಚಂದ್ರ ವಡವಿ, ಗಂಗಾಧರರಾವ್ ದೇಶಪಾಂಡೆ ಮುಂತಾದವರು ಮುಂಚೂಣಿಯಲ್ಲಿದ್ದು ಮುಂದಿನ ನಡೆ ಯಾವುದೆಂಬುವುದರ ಬಗ್ಗೆ ಗಂಭೀರವಾಗಿ ಚಿಂತಿಸುತ್ತಿದ್ದರು. ಇದೊಂದು ಅವಿಸ್ಮರಣೀಯ ಘಟನೆ. ಸೇನಾಪತಿ ಭಾಪಟ ಮತ್ತು ತಾತ್ಯಾರವರು ಗಾಂಧೀಜಿ ಸಾರಿದ "ಬ್ರಿಟಿಷರೇ ಭಾರತದಿಂದ ತೊಲಗಿರಿ" ಎಂದು ಹೇಳಿದ್ದು ಮಹಾಭಾರತ ಯುದ್ಧದ ಸಂದರ್ಭವನ್ನು ನೆನಪಿಸುತ್ತದೆ. ಸೇನಾಪತಿ ಬಾಪಟ ಅವರು ಹೀಗೆ ಹೇಳುತ್ತಾರೆ. "ಕೌರವ ಪಾಂಡವರ ಸೈನ್ಯದ ಮಧ್ಯದಲ್ಲಿ ನಿಂತು ಪ್ರತ್ಯಕ್ಷ ಗೋಪಾಲಕೃಷ್ಣನು ಗೀತಾ ಹೇಳುತ್ತಿದ್ದಾನೆ. ಈ ಯುಗದಲ್ಲಿ ನಾವು ಹುಟ್ಟಿದೆವು, ಹೋರಾಡಿದೆವು ಮತ್ತು ಈ ಯುದ್ಧದಲ್ಲೂ ಭಾಗ ತೆಗೆದುಕೊಳ್ಳುತ್ತಿದ್ದೇವೆ. ಇದು ನಮ್ಮ ಎಂಥ ದೊಡ್ಡ ಭಾಗ್ಯ"[೧೦]. ಈ ಅಭಿಪ್ರಾಯವು ಕೇವಲ ಭಾಪಟ ಅವರ ಅಭಿಪ್ರಾಯವಾಗಿರದೇ ಆ ಅಧಿವೇಶನದಲ್ಲಿ ಭಾಗ ವಹಿಸಿದ ಎಲ್ಲರ ಅಭಿಪ್ರಾಯವಾಗಿತ್ತು. ಅಧಿವೇಶನ ಮುಗಿದ ಬಳಿಕ ದೇಶ ವಿದೇಶಗಳಿಂದ ಬಂದ ಭಾರತದ ನಾನಾ ಭಾಗಗಳಿಂದ ಆಗಮಿಸಿದ ಪತ್ರಕರ್ತರು, ಚಳುವಳಿಗಾರರು ಇಷ್ಟೊಂದು ಶಾಂತ ರೀತಿಯಿಂದ ನಡೆದ ಸಭೆಯನ್ನು ಕಂಡು ಆಶ್ಚರ್ಯ ಚಕಿತರಾದರು. ಗಾಂಧೀಜಿಯವರೊಂದಿಗೆ ಅನೇಕ ರಾಷ್ಟ್ರೀಯ ಮುಂದಾಳುಗಳು ಮಾತುಕತೆ ನಡೆಸಿದ್ದರು. ಬೆಳಗಿನ ಜಾವ ಇದ್ದಕ್ಕಿದ್ದಂತೆ ಒಂದು ಸುದ್ಧಿ ಬಂತು. ಕಾಂಗ್ರೆಸ್ಸ ಕಾರ್ಯಸಮಿತಿಯ ಎಲ್ಲ ಸದಸ್ಯರನ್ನೂ ಬೆಳಗಿನ ಜಾವದಲ್ಲೇ ಬಂಧಿಸಿದ್ದಾರೆ. ಈ ಸುದ್ಧಿಯ ಬೆನ್ನ ಹಿಂದೆ ಇನ್ನೊಂದು ಆಘಾತಕಾರಿ ಸುದ್ಧಿಯೂ ಬಂತು. "ದಾರಿಯ ಮೇಲೆ ಹೋಗುವವರನ್ನು ಪೋಲೀಸರು ಹಿಡಿದು ಹೊಡೆಯುತ್ತಿದ್ದಾರೆ. ವಾತಾವರಣವನ್ನು ನೋಡಿಕೊಳ್ಳಲು ಗಂಗಾಧರರಾಯರು ರಾಮಚಂದ್ರ ವಡವಿಯವರನ್ನು ಗಿರಗಾವ್ ಚರ್ಚದವರೆಗೆ ನಡೆಯುತ್ತ ಹೋಗಿ ಅಲ್ಲಿ ಏನು ಪರಿಸ್ಥಿತಿ ಇದೆ ಎಂಬುದನ್ನು ತಿಳಿದು ಬರಲು ಕಳುಹಿಸಿತ್ತಾರೆ"[೧೧].

ಗಾಂಧೀಜಿಯವರ ಅಧಿವೇಶನದ ಮಾತುಗಳ ಪರಿಣಾಮ ಗಿರಗಾವ್‌ದ ಸುತ್ತಮುತ್ತ ಹಿರಿಯರ ಹಾಗೂ ಮಕ್ಕಳ ಎದೆಗಳಲ್ಲಿ ಅಚ್ಚೊತ್ತಿದಂತೆ ಮೂಡಿತ್ತು. ರಸ್ತೆಯ ಎರಡೂ ಬದಿಗೆ ಚಿಕ್ಕ ಮಕ್ಕಳ ಹಾಗೂ ದೊಡ್ಡವರ ವಾನರ ಸೇನೆಯ ಈ ಪ್ರವಾಹವನ್ನು ನಿಗ್ರಹಿಸುವುದು ಪೋಲೀಸರಿಗೆ ಕಠಿಣವಾಗಿತ್ತು. ಮುಂಜಾನೆ ಹತ್ತು ಗಂಟೆ ಸಮಯದಲ್ಲಿಯೇ ಎಲ್ಲ ಮನೆಗಳು ಅಂತಸ್ತುಗಳು ಪ್ರೇಕ್ಷಕರಿಂದ ತುಂಬಿ ಹೋಗಿದ್ದವು. ಪೋಲೀಸರು ಯಾರನ್ನೂ ಹೊಡೆಯದೇ ಬಿಟ್ಟಿರಲಿಲ್ಲ. ಅದು ಬ್ರಿಟಿಷ ಸರಕಾರದ ಧೋರಣೆಯೂ ಆಗಿತ್ತು. ಗಾಂಧಿ ಹೆಸರಿನಿಂದ ಆಗುವ ಜಯಜಯಕಾರದ ವಾತಾವರಣ ದುಮುಗುಡುತ್ತಿತ್ತು. ಹೀಗೆ ಮುಂಬೈಯಲ್ಲಿ ಗಾಂಧೀಜಿ ನೀಡಿದ ಕರೆ ಮತ್ತು ಅದರ ಪ್ರಭಾವ ಕುಂದರನಾಡಿನ ಸ್ವಾತಂತ್ರ್ಯ ಹೋರಾಟಗಾರರ ಮೇಲೆ ಅತ್ಯಂತ ಗಾಢವಾದ ಪ್ರಭಾವ ಬೀರಿತ್ತು.

## ೩.೨ ಸ್ವಾತಂತ್ರ್ಯ ಪೂರ್ವಸ್ಥಿತಿ: ಟಿಳಕ ಯುಗದ ಬೆಳವಣಿಗೆಗಳು

ಭಾರತ ಸ್ವಾತಂತ್ರ್ಯ ಚಳುವಳಿಯ ಹೋರಾಟದಲ್ಲಿ ಬೆಳಗಾವಿ ಜಿಲ್ಲೆಯು ಪಾತ್ರ ಬಹಳ ಮುಖ್ಯವಾಗಿದೆ. ಅದರಲ್ಲಿ ವಿಶೇಷವಾಗಿ ಹುದಲಿ ಮತ್ತು ಕುಂದರನಾಡಿನ ಪ್ರದೇಶವು ಚಳುವಳಿಯ ಕಾವನ್ನು ತೀವ್ರವಾಗಿ ಮೈಗೆ ಹಚ್ಚಿಕೊಂಡಿತ್ತು. ಬೆಳಗಾವಿಯನ್ನೊಳಗೊಂಡು ಉತ್ತರ ಕರ್ನಾಟಕದ ಬಹುಭಾಗವು ಅಂದು ಮುಂಬೈ ಕರ್ನಾಟಕದ ಭಾಗವಾಗಿತ್ತು. ಬೆಳಗಾವಿ ಮತ್ತು ಸುತ್ತಮುತ್ತಲಿನ ಭಾಗದ ಯುವಕರು ಉನ್ನತ ಶಿಕ್ಷಣಕ್ಕೆಂದು ಪೂನಾ, ಮುಂಬಯಿಗಳಿಗೆ ಹೋಗುತ್ತಿದ್ದರು. "ಗಂಗಾಧರರಾಯ ದೇಶಪಾಂಡೆಯವರು ಕಾಲೇಜು ಮತ್ತು ಕಾನೂನು ಅಧ್ಯಯನಕ್ಕೆಂದು ಪೂನಾಕ್ಕೆ ಹೋಗಿದ್ದರು. ಅಲ್ಲಿ ಅವರು ಟಿಳಕರ, ಗೋಖಲೆಯವರ ಪ್ರಭಾವಕ್ಕೆ ಬಂದರು. ಕಾಲೇಜು ಕಲಿಯುವಾಗ ಎಂದರೆ ೧೮೯೦-೧೮೯೧ ರಲ್ಲಿ ಕಾನೂನು ವಿದ್ಯಾರ್ಥಿಯಾಗಿದ್ದಾಗ ೧೮೯೩ರಲ್ಲಿ ಅವರು ಹಲವು ಸಲ ಬಾಲಗಂಗಾಧರ ಟಿಳಕ, ಗೋಖಲೆ, ಅಗರಕರ ಅವರನ್ನು ಭೇಟಿಯಾಗಿ ಚರ್ಚಿಸುತ್ತಿದ್ದರು. ಅವರ ಸಭೆಗಳಿಗೆ ಹಾಜರಾಗುತ್ತಿದ್ದರು. ಕೇಸರಿ ಪತ್ರಿಕೆಯನ್ನು ಓದುತ್ತಿದ್ದರು. ಇದರಿಂದಾಗಿ ಅವರು ಸ್ವರಾಜ್ಯ ವಿಚಾರಗಳ ಪ್ರತಿಪಾದಕರಾಗಿ, ರಾಷ್ಟ್ರೀಯ ಹೋರಾಟದ ದೀಕ್ಷೆ ಪಡೆದರು"[೧೨]. ಬೆಳಗಾವಿ ಜಿಲ್ಲೆಯಲ್ಲಿಯೇ ಪ್ರಮುಖರಾದ ಮತ್ತು ಕರ್ನಾಟಕದ ಸಿಂಹವೆಂದೇ ಪ್ರಸಿದ್ಧರಾದ ಗಂಗಾಧರರಾವ ದೇಶಪಾಂಡೆಯವರು ಲೋಕಮಾನ್ಯ ಟಿಲಕರ ಪ್ರಭಾವಕ್ಕೆ ಒಳಗಾಗಿ ತಮ್ಮ ವಕೀಲ ವೃತ್ತಿಯನ್ನು ಬಿಟ್ಟು ಕರ್ನಾಟಕದಲ್ಲಿ ಚಳುವಳಿಯ ಕಹಳೆಯನ್ನು ಊದಿದರು. ಇವರಿಗೆ ಸಹಾಯಕರಾಗಿ ಶ್ರೀ ಗೋವಿಂದರಾವ ಯಾಳಗಿ, ಹನುಮಂತರಾವ ದೇಶಪಾಂಡೆ ವಾಮನರಾವ್ ದೇಸಾಯಿ, ಅಣ್ಣೂ ಗುರೂಜಿ, ಬಾಸ್ಕರ ಕಾಳೆ, ಬಸವಂತಪ್ಪಾ ಯಮಕನಮರಡಿ, ಗೋಪಾಲರಾವ್ ಯಕ್ಕುಂಡಿ ಮುಂತಾದವರು ಚಳುವಳಿಯಲ್ಲಿ ತೊಡಗಿದ್ದರು.

"ಸ್ವದೇಶಿ ವಸ್ತುಗಳ ಪ್ರಚಾರ ಮತ್ತು ವಿದೇಶಿ ವಸ್ತುಗಳ ಬಹಿಷ್ಕಾರ ಮಾಡುವದರಿಂದ ಜನರಲ್ಲಿ ದೇಶಪ್ರೇಮ ಮೂಡುವುದರ ಜೊತೆಗೆ ನಮ್ಮ ರೈತಾಪಿ ಜನರು ಬೆಳೆದ ಸ್ವದೇಶಿ ವಸ್ತುಗಳ ಮಾರಾಟದಿಂದ ಸಿಗುವ ಲಾಭವು ಭಾರತೀಯರಿಗೆ ಆಗುತ್ತದೆ. ಇದು ಇನ್ನೊಂದು ರೀತಿಯಲ್ಲಿ ಬ್ರಿಟಿಷ ಆಡಳಿತ ಯಂತ್ರಕ್ಕೆ ಚುರುಕು ಮುಟ್ಟಿಸುತ್ತದೆ. ಆಗಾಗ ಸಿಂಧಿ ಅಂಗಡಿಗಳ ಪಿಕೇಟಿಂಗವು ಬೆಳಗಾವಿ ಜಿಲ್ಲೆಯಲ್ಲಿ ನಡೆಯುತ್ತಿತ್ತು"[೧೩]. ಈ ಕಾರಣಕ್ಕಾಗಿ ರಾಮಚಂದ್ರ ನಾರಾಯಣ ಜೋಶಿ ಇವರಿಗೆ ೧೫ ದಿನ ಶಿಕ್ಷೆಯಾಗುತ್ತದೆ. ಬಾಂಬ ತಯಾರು ಮಾಡುವುದು, ಕ್ರಾಂತಿಕಾರರೊಂದಿಗೆ ಸಂಪರ್ಕ ಬೆಳೆಸುವುದು ಮುಂತಾದ ಗುಪ್ತ ಸಂಘಟನೆಯಲ್ಲಿ ಸ್ವತಃ ಗಂಗಾಧರರಾಯರು, ಯಾಳಗಿ ಬಂಧುಗಳು, ಹನುಮಂತರಾವ ದೇಶಪಾಂಡೆಯರು ಭಾಗವಹಿಸಿದ್ದರು. ಸಾರ್ವಜನಿಕ ಗಣೇಶ, ಶಿವಾಜಿ ಉತ್ಸವಗಳನ್ನು ಪ್ರತಿವರ್ಷ ನೆರವೇರಿಸಿ ಪುಣೆ ಮುಂಬಯಿ ಕಡೆಯಿಂದ ಭಾಷಣಕಾರರನ್ನು ಕರೆಯಿಸಿ ಅವರ ವ್ಯಾಖ್ಯಾನ ಮಾಡಿಸುತ್ತಿದ್ದರು. ಬೆಳಗಾವಿ ಭಾಗದಲ್ಲಿ ಕೇಸರಿ, ಸಕಾಳ, ಸಂದೇಶ ಎಂಬ ಪತ್ರಿಕೆಗಳು ಬರುತ್ತಿದ್ದವು. ಇವುಗಳಿಗೆ ಲೋಕಮಾನ್ಯ ತಿಲಕ, ಶ್ರೀ ಶಿವರಾಮಪಂತ ಪರಾಂಜಪೆ, ಅಚ್ಯುತರಾವ ಕೋಲಟಕರ ಇವರು ಸಂಪಾದಕರಾಗಿದ್ದರು. ಈ ಭಾಗದ ಜನರಿಗೆ ಚಳುವಳಿಯ

ಸುದ್ದಿ ಸಮಾಚಾರ ತಿಳಿಯಲೆಂಬ ಕಾರಣಕ್ಕಾಗಿ ಹುಬ್ಬಳ್ಳಿಯಲ್ಲಿ ಡಾ. ಹರಡಿಕರರು ಕನ್ನಡ ಕೇಸರಿ ಎಂಬ ಹೆಸರಿನ ಸಾಪ್ತಾಹಿಕ ಪತ್ರಿಕೆಯನ್ನು ನಡೆಸುತ್ತಿದ್ದರು. ಸ್ವದೇಶಿ ಚಳುವಳಿಯ ಅಂಗವಾಗಿ ಪೈಸಾ-ಫಂಡ್ ಕೂಡಿಸುವ ಕೆಲಸವು ಪ್ರಾರಂಭವಾಯಿತು. ಪ್ರತಿಯೊಬ್ಬರಿಂದ ಒಂದೊಂದು ಪೈಸಾದಂತೆ ಫಂಡ ಸಂಗ್ರಹಿಸಿ ತಳೆಗಾವದಲ್ಲಿ ಪೈಸಾಫಂಡ ಸ್ವದೇಶಿ ಗ್ಲಾಸವರ್ಕ್ಸ ಎಂಬ ಹೆಸರಿನ ಕಾಜಿನ ಕಾರ್ಖಾನೆ ಪ್ರಾರಂಭ ಮಾಡಲಾಯಿತು. ಈ ಭಾಗದ ಜನರ ಸ್ವಾತಂತ್ರ ಚಟುವಟಿಕೆಗಳನ್ನು ಮೆಚ್ಚಿಕೊಂಡ ಲೋಕಮಾನ್ಯ ಟಿಳಕರು ಬೆಳಗಾವಿಗೆ ಮೂರು ನಾಲ್ಕು ಸಾರಿ ಬಂದು ಹೋಗಿದ್ದಾರೆ.

"ಗಂಗಾಧರರಾಯರ ಮೇಲೆ ಟಿಳಕರ ಪ್ರಭಾವ ಅತ್ಯಂತ ಗಾಢವಾಗಿತ್ತು. ಕುಂದರನಾಡಿನ ಹೋರಾಟಕ್ಕೆ ಗಂಗಾಧರರಾಯರಿಗೆ ಅದು ಪ್ರೇರಣೆಯೂ ಆಗಿತ್ತು. ಟಿಳಕರ ಹೇಳಿದ ವೀರನವಾಲಿ ಪ್ರಕರಣ ಭಾರತೀಯರನ್ನು ಬಡಿದೆಬ್ಬಿಸುವ ಸಂಗತಿಯನ್ನು ಗಂಗಾಧರರಾಯರು ಹೀಗೆ ನೆನಪಿಸಿಕೊಳ್ಳುತ್ತಾರೆ"[೧೪].

ಟಿಳಕರು ೧೯೦೭ರಲ್ಲಿ ಗುರ್ಲಹೊಸೂರಿಗೆ ಬಂದಿದ್ದರು. ಪಂಜಾಬದಲ್ಲಿಯ ಮಹಿಳೆಯ ಮಾನಭಂಗಕ್ಕಾಗಿ ಪುಣೆಯ ತಿಲಕರು ಗುರ್ಲ ಹೊಸೂರಿನಲ್ಲಿ ನಿದ್ರೆ ಕಳೆದುಕೊಂಡು ಕಣ್ಣೀರು ಸುರಿಸುತ್ತಾರೆ. ಸಿಟ್ಟಿನಿಂದ ಕುದಿಯುತ್ತಾರೆ. ಇದು ಟಿಲಕರಲ್ಲಿರುವ ರಾಷ್ಟ್ರ ಪ್ರೇಮದ ಪ್ರತೀಕ. ಇಡೀ ಭಾರತವೇ ತಮ್ಮ ಮನೆಯೆಂಬ ಭಾವ ಟಿಳಕರಲ್ಲಿತ್ತು. ಆ ಕಾರಣಕ್ಕಾಗಿ ಅವರ ಮನ ಭಾರತದ ಯಾವ ಮೂಲೆಯಲ್ಲಿಯೂ ಅತ್ಯಾಚಾರ ನಡೆದರೆ ಅದನ್ನು ಪ್ರತಿಭಟಿಸುವ ಮನೋಭಾವ ಅವರದು. ಇಂತಹ ದೇಶಾಭಿಮಾನದ ಕಿಡಿಗಳ ಪ್ರಭಾವ ಮುಂಬರುವ ಸ್ವಾತಂತ್ರ್ಯ ಚಳುವಳಿಕಾರರಲ್ಲಿ ಗಂಗಾಧರರಾವ ದೇಶಪಾಂಡೆ ಅವರ ಮುಖಾಂತರ ಇಡೀ ಕುಂದರನಾಡಿನಲ್ಲಿ ನಿಗಿನಿಗಿ ಕೆಂಡವಾಗಿ ಪ್ರಜ್ವಲಿಸಿತು.

ಕುಂದರನಾಡಿನ ಚಳುವಳಿಯ ತೀವ್ರ ಸ್ವರೂಪಕ್ಕೆ ಟಿಳಕರ ಬದುಕು ಮೂಲ ಪ್ರೇರಣೆಯಾಗಿದೆ. ಇದಕ್ಕೆ ಬೆಳಗಾವಿಯಲ್ಲಿಯ ಒಂದು ಘಟನೆಯನ್ನು ಉದ್ಧರಿಸಬಹುದು.

'ಟಿಳಕರು ಬೆಳಗಾವಿಯ ಸಮ್ಮೇಳನ ಮುಗಿಸಿಕೊಂಡು ಶ್ರೀ ಯಾಳಗಿಯವರ ಮನೆಗೆ ಬರುತ್ತಾರೆ. ರಾತ್ರಿ ಊಟ ಮುಗಿಸಿಕೊಂಡು ವಿಶ್ರಾಂತಿಗಾಗಿ ಕೋಣೆಗೆ ಹೋದಾಗ ಕೆಲವು ತರುಣರು ಯಾಳಗಿಯವರ ಮನೆಗೆ ಬಂದು ಟಿಳಕರನ್ನು ಕಾಣುತ್ತಾರೆ. ಅವರ ಬಿಡುವಿಲ್ಲದ ಕಾರ್ಯ ಕಂಡು ಟಿಳಕರಿಗೆ ಆಯಾಸವಾಗಿರಬೇಕೆಂದು ಬಗೆದು ಅವರಿಗೆ ಬೇಗನೆ ನಿದ್ರೆ ಬರಲೆಂದು ಮತ್ತು ಅದರಿಂದ ಅವರು ಉಲ್ಲಾಸಿತರಾಗಬಹುದೆಂದು ಸೇವಾ ಮನೋಭಾವದಿಂದ ಆ ಯುವಕರು ಟಿಳಕರ ತಲೆಗೆ ಎಣ್ಣೆ ಹಚ್ಚಿ ತಿಕ್ಕುತ್ತಾರೆ. ಟಿಳಕರು ಸಾಕು-ಸಾಕು ಎಂದರೂ ಆ ತರುಣರು ತಿಕ್ಕುವುದನ್ನು ಬಿಡುವುದಿಲ್ಲ. ಇನ್ನಷ್ಟು ತಿಕ್ಕುತ್ತೇವೆ ತಲೆ ಶಾಂತವಾಗಲಿ' ಎಂದು ತರುಣರು ಹೇಳುವುದೇ ತಡ ಟಿಳಕರು "ನಿಮ್ಮ

ತರುಣರ ತಲೆಗಳೆಲ್ಲ ಶಾಂತವಾಗಿರುವುದರಿಂದಲೇ ಬಂಗಾಲದಲ್ಲಿ ಕರ್ಜನವಾಯಿಲಿ, ಫೂಲ್ಲರ್ ಮೊದಲಾದ ಕೊಲೆಗಡುಕ ದುಷ್ಟ ಬ್ರಿಟಿಷ್ ಅಧಿಕಾರಿಗಳು ಇನ್ನೂ ಜೀವಂತ ಉಳಿದಿದ್ದಾರೆ. ಇನ್ನೂ ನನ್ನ ತಲೆಯನ್ನಷ್ಟು ಶಾಂತ ಮಾಡಬೇಡಿರಿ”[೫] ಎಂದು ಗದರಿಸುತ್ತಾರೆ. ಇದು ಟಿಳಕರ ರಾಷ್ಟ್ರಾಭಿಮಾನದ ಸ್ವರೂಪವನ್ನು ತಿಳಿಸುತ್ತದೆ.

ಟಿಳಕರ ಸಂಪರ್ಕಕ್ಕೆ ಬಂದ ಗಂಗಾಧರರಾವ ದೇಶಪಾಂಡೆ, ಅಣ್ಣೂ ಗುರೂಜಿ, ರಾಮಚಂದ್ರ ವಡವಿ, ಮಂಡಲೀಕಜಿ ಕಾತಗಡೆ ಮುಂತಾದವರು ಬಹಳಷ್ಟು ಬದಲಾವಣೆ ಹೊಂದುತ್ತಾರೆ. ಟಿಳಕರು ಮಂಡಾಲೆಯಲ್ಲಿ ೬ ವರ್ಷ ಕಠಿಣ ಶಿಕ್ಷೆ ಅನುಭವಿಸಿ ಹೊರ ಬಂದ, ಮೇಲೆ ಅವರ ಅನುಯಾಯಿಗಳು ಪುಣೆಯಲ್ಲಿ ಭವ್ಯ ಮೆರವಣಿಗೆ ಮಾಡಬೇಕೆಂದು ನಿರ್ಣಯಿಸುತ್ತಾರೆ. ಆದರೆ ಕೆಲ ವಿರೋಧಿಗಳು, ಕುಚೋದ್ಯಗಾರರು ಮೆರವಣಿಗೆಯ ಮೇಲೆ ಶೆಗಣಿ ಒಗೆದು ಅಪಮಾನ ಮಾಡುವ ಹೊಂಚು ಹಾಕುತ್ತಾರೆ. ಇದು ಕೇಸರಿ ಆಫೀಸಿಗೆ ತಿಳಿದ ತಕ್ಷಣ ಟಿಳಕರಿಗೆ ಅಪಮಾನವಾಗುವದೆಂದು ಭಾವಿಸಿ ಮೆರವಣಿಗೆಯನ್ನು ರದ್ದುಪಡಿಸುತ್ತಾರೆ. ಇದು ಟಿಳಕರಿಗೆ ಗೊತ್ತಾಗುತ್ತದೆ. ಅವರು ಸಿಟ್ಟಿನಿಂದ ಮಿತ್ರರನ್ನು ಕರೆದು ಯಾವುದೇ ಪರಿಸ್ಥಿತಿ ಉಂಟಾದರೂ ಮೆರವಣಿಗೆ ಆಗಲೇಬೇಕು. ಯಾರಿಗೆ ನೀವು ಹೆದರುತ್ತೀರಿ ಬ್ರಿಟಿಷ್ ಸರ್ಕಾರಕ್ಕೆ ಹೆದರಬೇಕು ನಾನು ನೋಡುತ್ತೇನೆ ಯಾರು ವಿರೋಧಿಸುವರು ಎಂಬುದನ್ನು. ಇದು ಒಬ್ಬ ವ್ಯಕ್ತಿಯ ಮೆರವಣಿಗೆ ಅಲ್ಲ ಒಬ್ಬ ದೇಶಭಕ್ತನ ೬ ವರ್ಷ ಕರಿನೀರಿನ ಕಾರಾಗೃಹ ಸಹಿಸಿ ಬಂದ ದೇಶಭಕ್ತನ ಮೆರವಣಿಗೆ, ದೇಶಭಕ್ತರಿಗೆ ಮಾನ-ಮರ್ಯಾದೆ ಮಾಡುವುದನ್ನು ಕಲಿಸಬೇಕಾಗಿದೆ. ಹೇಡಿಗಳಂತೆ ಅಂಜಿ ಕಾರ್ಯಕ್ರಮ ರದ್ದುಪಡಿಸತಕ್ಕದಲ್ಲ ಎಂದು ಖಡಾ-ಖಂಡಿತವಾಗಿ ಹೇಳಿ ಮೆರವಣಿಗೆಯನ್ನು ಮಾಡಿಸಿಯೇ ಬಿಡುತ್ತಾರೆ. ಅವಮಾನ ಮಾಡಬಯಸಿದ ಹೇಡಿಗಳು ಸೂರ್ಯನ ಮುಂದೆ ಮಂಜು ಕರಗುವಂತೆ ಕರಗಿ ಹೋಗುತ್ತಾರೆ.

ಟಿಳಕರ ವ್ಯಕ್ತಿತ್ವ ವಿಭಿನ್ನವಾದುದು. ಒಬ್ಬ ರಾಷ್ಟ್ರನಾಯಕನಿಗೆ ಇರಬೇಕಾದ ಎಲ್ಲ ಗುಣ-ಲಕ್ಷಣಗಳು ಅವರಲ್ಲಿದ್ದವು. ನಾಯಕನಾದವನಿಗೆ ಸಮಯಪ್ರಜ್ಞೆ, ಸ್ಥಿತಪ್ರಜ್ಞೆ ಎರಡೂ ಇರಬೇಕು. ಟಿಳಕರಿಗೆ ಸ್ವಾತಂತ್ರ್ಯ ಚಳುವಳಿಯ ಹೋರಾಟಕ್ಕಾಗಿ ಕ್ರಿ. ಶ. ೧೯೩೦ ರಿಂದ ೩೨ರ ಅವಧಿಯಲ್ಲಿ ಅವರಿಗೆ ೬ ವರ್ಷ ಜೈಲು ಶಿಕ್ಷೆಯನ್ನು ಮುಂಬೈ ಹೈಕೋರ್ಟ ವಿಧಿಸಿತು. ಇದನ್ನು ಕೇಳಿ ಇಡೀ ದೇಶವೇ ದುಃಖ ಸಾಗರದಲ್ಲಿ ಮುಳುಗಿತು. ಟಿಳಕರನ್ನು ಕಾಣಲು ಜನ ಜಾತ್ರೆಯಂತೆ ಜೈಲಿಗೆ ಬಂದರು. ಇವರ ಧೈರ್ಯ ಮತ್ತು ಸಾಹಸವನ್ನು ಕಂಡು ಪೊಲೀಸರು ಅವರನ್ನು ಕೊಂಡಾಡುತ್ತಾರೆ. ಶಿಕ್ಷೆ ವಿಧಿಸಿದ ಕೂಡಲೇ ಪೊಲೀಸರು ಅವರನ್ನು ಯರವಡ ಜೈಲಿಗೆ ಒಯ್ಯುವುದಕ್ಕಾಗಿ ಬೋರಿಬಂದರ ಸ್ಟೇಷನ್ನಿಗೆ ಬರುತ್ತಾರೆ. ರೈಲು ಬರಲು ಇನ್ನೂ ೨೦ ನಿಮಿಷ ಕಾಲಾವಕಾಶವಿತ್ತು. ಇದು ತಿಳಿದ ಕೂಡಲೇ ಟಿಳಕರು ಪೊಲೀಸರಿಗೆ 'ಗಾಡಿ ಬರುವವರೆಗೆ ನಾನು ಈ ಬಾಕಿನ ಮೇಲೆ ಅಡ್ಡಾಗುತ್ತೇನೆ' ಎಂದು ಹೇಳಿ ಮಲಗುತ್ತಾರೆ. ಆಶ್ಚರ್ಯದ ಸಂಗತಿಯೆಂದರೆ ತಕ್ಷಣ ಅವರಿಗೆ ನಿದ್ದೆ ಹತ್ತುತ್ತದೆ.

ಪೊಲೀಸರು ರೈಲು ಬಂದ ತಕ್ಷಣ ಅವರನ್ನು ತಡವಿ ಎಚ್ಚಿಸುವವರೆಗೂ ಟಿಳಕರು ಗಾಢ ನಿದ್ರೆಯಲ್ಲಿರುತ್ತಾರೆ. "ದೇಶಕ್ಕಾಗಿ ಸರ್ವಸ್ವವನ್ನು ಸಮರ್ಪಿಸುವ ಅವರ ಮನಸ್ಸಿನಲ್ಲಿ ಯಾವ ಹೆದರಿಕೆ ಮತ್ತು ಅಳುಕು ಇರಲಿಲ್ಲ. ಎಂಥಾ ಕಷ್ಟ ಬಂದರೂ ಕೂಡ ಅದನ್ನು ನಗು-ನಗುತ ಸ್ವೀಕರಿಸುವ ಸ್ಥಿತಪ್ರಜ್ಞೆಯ ಮನಸ್ಸು ಅವರದ್ದು. ಇದಕ್ಕೆ ಕಾರಣವೆಂದರೆ ಟಿಳಕರಲ್ಲಿ ಆಧ್ಯಾತ್ಮ ಮನೋಭಾವವಿತ್ತು. ಅವರು ಭಗವದ್ಗೀತೆ ಸಂಪೂರ್ಣವಾಗಿ ಅಧ್ಯಯನ ಮಾಡಿದ್ದರಲ್ಲದೆ ಅದರ ಮೇಲೆ ಟೀಕೆಯನ್ನು ಬರೆದಿದ್ದಾರೆ. ಆದ್ದರಿಂದ ಅವರಲ್ಲಿ ಸ್ಥಿತಪ್ರಜ್ಞೆ ಭಾವ ಮೂಡಿ ಬಂದಿತ್ತು. ಇಂತಹ ಮನಸ್ಸು ತರುಣರಿಗೆ ಬೇಕಾಗಿದ್ದರಿಂದ ಕುಂದರನಾಡಿನ ಚಳುವಳಿಕಾರರಿಗೆ ತಿಲಕರು ಆದರ್ಶರಾಗುತ್ತಾರೆ"[೧೬].

ಯುವಕರಲ್ಲಿ ಸ್ವಾತಂತ್ರ್ಯದ ಅರಿವನ್ನು ಮೂಡಿಸುವದಕ್ಕಾಗಿ ನಾಡಿನ ಮುಖಂಡರು ಮಹಾತ್ಮಾ ಗಾಂಧಿ, ಲಾಲಾ ಲಜಪತರಾಯ, ಶೌಕತ ಅಲಿ, ಅಮಹಮ್ಮದ ಅಲಿ, ರವೀಂದ್ರನಾಥ ಟ್ಯಾಗೋರ, ರಾಜಗೋಪಾಲಚಾರ್ಯ, ಡಾ. ರಾಜೇಂದ್ರಪ್ರಸಾದ ಮುಂತಾದ ರಾಷ್ಟ್ರನಾಯಕರು ಬೆಳಗಾವಿಗೆ ಬಂದು ಭಾಷಣ ಮಾಡಿದರು. ಅದರಂತೆ ನ. ಚಿ. ಕೇಳಕರ, ಡಾ. ವಿ. ಗೋಖಲೆ, ನಾರಾಯಣರಾವ ಬಾಮಣಗಾವಕರ, ವಿ. ರ. ವಾಮನರಾವ ಜೋಷಿ, ಶಂಕರರಾವ ದೇವ, ಅಪ್ಪಮುತ್ರೆ ಮೊದಲಾದ ಮಹಾರಾಷ್ಟ್ರದ ಮುಂದಾಳುಗಳು ಡಾ. ಹರ್ಡಿಕರ, ಕಾರ್ನಾಡ ಸದಾಶಿವರಾವ, ದಿವಾಕರ, ಹುಕ್ಕೇರಿಕರ, ಕೃಷ್ಣರಾಯ ಮುದವೀಡು, ಶ್ರೀನಿವಾಸರಾವ ಕೌಜಲಗಿ, ದೇವಣ್ಣ ಕೊಪ್ಪಿಕರ ಮೊದಲಾದ ಕರ್ನಾಟಕದ ಧುರೀಣರು ಇವರೆಲ್ಲ ಕರ್ನಾಟಕದ ಬೆಳಗಾವಿಯಲ್ಲಿ ಭಾಷಣ ಮಾಡಿದರು.

"ನಾರಾಯಣರಾವ ಬಾಮಣಗಾವಕರರವರು ಖ್ಯಾತ ಹೋರಾಟಗಾರರು. ೧೯೦೧ ರಲ್ಲಿ ಇವರು ಬೆಳಗಾವಿಗೆ ಬಂದಿದ್ದರು. ಲಿಂಗಾಯತ ಸಮುದಾಯದ ಮುಖಂಡರಾದ್ದರಿಂದ ಜಿಲ್ಲೆಯ ಲಿಂಗಾಯತ ಜನತೆಯಲ್ಲಿ ಕಾಂಗ್ರೆಸ್ಸಿನ ಬಗ್ಗೆ ಅರಿವು ಮೂಡಿಸುವುದು ಮತ್ತು ಪ್ರಚಾರ ಮಾಡುವುದು ಅವರ ಮುಖ್ಯ ಉದ್ದೇಶವಾಗಿತ್ತು. ಆದರೆ ಕಂಪನಿ ಸರಕಾರದ ಪರವಾಗಿ ಕೆಲಸ ಮಾಡುತ್ತಿರುವ ಬೆಳಗಾವಿಯ ಕಲೆಕ್ಟರರು ಬೆಳಗಾವಿಯಲ್ಲಿ ಇವರ ಭಾಷಣ ಜರುಗಬಾರದೆಂದು ಸುತ್ತಮುತ್ತಲಿನ ೫ ಕಿ.ಮೀ. ಪ್ರದೇಶದಲ್ಲಿ ೧೪೪ ನೇ ಕಲಂ ಜಾರಿ ಮಾಡಿ ಸಭಾಬಂಧಿ ಆಜ್ಞೆಯನ್ನು ಹೊರಡಿಸಿದರು"[೧೭]. ಆಗ ಬೆಳಗಾವಿಯ ಕಾಂಗ್ರೆಸ್ ಮುಖಂಡರಾದ ಗೋವಿಂದರಾವ ಯಾಳಗಿ ಮುಂತಾದವರು ಆ ಸಭೆಯನ್ನು ಬೆಳಗಾವಿಯ ದಕ್ಷಿಣಕ್ಕೆ ೭ ಮೈಲು ದೂರದಲ್ಲಿರುವ ದೇಸನೂರ ಗ್ರಾಮದಲ್ಲಿ ಯಶಸ್ವಿಯಾಗಿ ನೆರವೇರಿಸಿ ಬಾಮಣಗಾಂವಕರವರ ಭಾಷಣ ಮಾಡಿಸಿದರು.

ಸ್ವಾತಂತ್ರ್ಯ ಹೋರಾಟಗಾರರು ಈ ಚಳುವಳಿಯಲ್ಲಿ ಸಕ್ರೀಯವಾಗಿ ಭಾಗವಹಿಸಿದ್ದರು. ಅಲ್ಲದೇ ಜಾಹೀರ ಸಭೆಗಳಲ್ಲಿ ಸ್ವಯಂ ಸೇವಕರು ಕೈಯಲ್ಲಿ ಟೊಪ್ಪಗೆ ಹಿಡಿದುಕೊಂಡು ಟಿಳಕ ಸ್ವರಾಜ್ಯ ನಿಧಿಯನ್ನು ಕೂಡಿಸಿದರು. ಮಹಿಳೆಯರು ತಮ್ಮ ಮೈಮೇಲಿನ ಆಭರಣಗಳನ್ನು ತೆಗೆದು ಟೊಪ್ಪಿಗೆಗಳಲ್ಲಿ ಹಾಕುತ್ತಾರೆ. ಬೆಳಗಾವಿ ಜಿಲ್ಲೆಯು ತಮ್ಮ ಪಾಲಿನ ಟಿಳಕ ಸ್ವರಾಜ್ಯ ನಿಧಿಯನ್ನು

ಯಥೇಚ್ಛವಾಗಿ ಕೂಡಿಸಿ ಮುಖಂಡರ ಕೈಗೆ ನೀಡಿದರು. ಇದಲ್ಲದೆ ಕಾಂಗ್ರೆಸ್ ಸದಸ್ಯರ ಸಂಖ್ಯೆಯನ್ನು ಕೂಡ ಹೆಚ್ಚಿಸಿದರು.

ರಾಷ್ಟ್ರ ನಾಯಕರ ಮಾರ್ಗದರ್ಶನದ ಮೇರೆಗೆ ಕುಂದರನಾಡಿನ ಪ್ರಮುಖ ಚಳುವಳಿಗಾರರಾದ ಗಂಗಾಧರರಾವ ದೇಶಪಾಂಡೆ ಪುಂಡಲೀಕಜೀ ಕಾತಗಡೆ, ರಾಮಚಂದ್ರ ವಡವಿ, ವಾಮನರಾವ ಬಿದರಿ, ದಾದಾ ಕಾಲೆ, ಗಂಗಪ್ಪ ಯಮಕನಮರ್ಡಿ, ವಾಮನರಾವ ಕುಲಕರ್ಣಿ ಮುಂತಾದವರು ಹುದಲಿ, ಸುಲದಾಳ, ಅಕ್ಕತಂಗೇರಹಾಳ, ಉರಬಿನಹಟ್ಟಿ ಮುಂತಾದವುಗಳಲ್ಲಿ ವಿಧಾಯಕ ಕಾರ್ಯಗಳನ್ನು ಕೈಕೊಂಡರು. ವಾಮನರಾವ ಬಿದರಿ, ಅಣ್ಣಾ ಬಸಪ್ಪ, ಅಣ್ಣೂ ಗುರೂಜಿ ಮೊದಲಾದವರು ತಿರುಗಾಡಿ ಕೈನೂಲು ಖರೀದಿ ಮಾಡಿ ಹುದಲಿಯ ಆಶ್ರಮಕ್ಕೆ ತರುತ್ತಿದ್ದರು. ಆಶ್ರಮದಲ್ಲಿ ಅದರ ಬಟ್ಟೆ ತಯಾರಾಗಿ ಮಾರಾಟಕ್ಕೆ ಹೋಗುತ್ತಿತ್ತು. ಗಂಗಾಧರರಾಯರು ಕುಮರಿಯ ತೋಟದಲ್ಲಿ ಸಾಬರಮತಿ ಆಶ್ರಮದಂತೆ ಒಂದು ಆಶ್ರಮವನ್ನೇ ಕಟ್ಟಿದ್ದರು. ಈ ಆಶ್ರಮವು ಕುಂದರನಾಡಿನ ಹೋರಾಟಗಾರರಿಗೆ ಆಶ್ರಯದ ನೆಲೆಯಾಗಿತ್ತು.

ಬೆಳಗಾವಿ, ಪಾಶ್ಚಾಪೂರ, ನಂದಗಡ, ಸಂಕೇಶ್ವರ್, ಕಿತ್ತೂರ, ನಿಪ್ಪಾಣಿ ಮುಂತಾದ ಕಡೆಗೆ ಶಿಂಧಿ ಸೆರೆ ಅಂಗಡಿ ಪಿಕೇಟಿಂಗ್ ಉಗ್ರವಾಗಿ ನಡೆಯುತ್ತಿತ್ತು. ಗೋಕಾಕದಲ್ಲಿಯೂ ಕೂಡ ಸೆರೆ–ಸಿಂಧಿ ಅಂಗಡಿ ಪಿಕೇಟಿಂಗ ಜೋರಾಗಿ ನಡೆದಿತ್ತು. ಶ್ರೀ ಬಸ್ಮೇ ವಕೀಲರು ಇದಕ್ಕೆ ಮುಂದಾಳತ್ವ ವಹಿಸಿದ್ದರು. ಚಳುವಳಿಯ ಆ ಸಂದರ್ಭದಲ್ಲಿ ರಾಷ್ಟ್ರನಾಯಕರ ವಿರುದ್ಧ ಯಾರಾದರೂ ಅಪಸ್ವರವೆತ್ತಿದರೆ ಚಳುವಳಿಕಾರರು ಅವರನ್ನು ಸುಮ್ಮನೆ ಬಿಡುತ್ತಿರಲಿಲ್ಲ. ಜಾಹೀರ ಸಭೆಯಲ್ಲಿ ಶ್ರೀ ಕತ್ತಿಯವರು ಲೋಕಮಾನ್ಯ ಟಿಳಕರ ಮೇಲೆ ಟೀಕೆ ಮಾಡಿದಾಗ ಸಭೆಯಲ್ಲಿ ದಂಗೆಯೆದ್ದಿತು. ಬ್ರಿಟಿಷ ಪರವಾಗಿ ಕೆಲಸ ಮಾಡುವ ಜನರಿಗೆ ಏಟು ಬಿದ್ದವು. ಈ ದಂಗೆಯಲ್ಲಿ ಭಾಗವಹಿಸಿದ್ದಕ್ಕಾಗಿ ಬಾಳಪ್ಪ ಕುರಬೆಟ್ಟ, ಕೇಶವರಾವ ಜೋಶಿ, ತಮ್ಮಣ್ಣ ಮಹಾಜನ, ಉಮರಕಚ್ಚಿ, ಸೋಮಶೇಖರ ಸಾಹೇಬ ಮೊದಲಾದ ೧೪ ಜನರಿಗೆ ಆರು ತಿಂಗಳ ಶಿಕ್ಷೆಯಾಯಿತು.

ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದವರು ತಮ್ಮ ವೈಯಕ್ತಿಕ ಹಿತಾಸಕ್ತಿಗಳನ್ನು ಗಮನಿಸದೆ ರಾಷ್ಟ್ರೀಯ ಹೋರಾಟಕ್ಕೆ ಏನೆಲ್ಲವನ್ನು ತ್ಯಾಗ ಮಾಡಿದರು. ದತ್ತೋಪಂತ ಬೆಳವಿ, ಮಜಲಿ, ಕೃಷ್ಣರಾವ ಕರಗುಪ್ಪಿ, ಕೇಶವರಾವ ಅಜರೇಕರ ನಾರಾಯಣರಾವ ಜೋಷಿ ಮುಂತಾದವರು ಒಂದು ವರ್ಷ ವಕೀಲಿ ವೃತ್ತಿಯನ್ನು ಬಿಟ್ಟು ಆಂದೋಲನದಲ್ಲಿ ಭಾಗವಹಿಸಿದ್ದರು. ಶ್ರೀ ವೆಂಕರಟರಾವ ಜಾಲಿಹಾಳರವರು ತಮ್ಮ ಪೊಲೀಸ ಜಮಾದಾರಿಕೆಗೆ ರಾಜೀನಾಮೆ ಕೊಟ್ಟು ಚಳುವಳಿಯಲ್ಲಿ ಭಾಗವಹಿಸಿದ್ದರು. ಶ್ರೀ ಧೊಂಡೊ ಯಲ್ಲೊ ಕುಲಕರ್ಣಿ ಅವರು ತಲಾಟಿ ಕೆಲಸಕ್ಕೆ ರಾಜೀನಾಮೆ ಸಲ್ಲಿಸಿ ಚಳುವಳಿಯಲ್ಲಿ ಸೇರಿ ಸೇವಾದಲ ಕಾರ್ಯಕರ್ತರಾದರು. ವೆಂಕಣ್ಣ ನಗರ ಪಾರಿಸವಾಡ ಅವರು ತಮ್ಮ ಶಿಕ್ಷಕ ನೌಕರಿಗೆ ತಿಲಾಂಜಲಿ ಕೊಟ್ಟು ದೇಶಭಕ್ತಿಯ ದೀಕ್ಷೆಯನ್ನು ಸ್ವೀಕರಿಸಿದರು.

ರಾಷ್ಟ್ರಸ್ತರದ ಹೋರಾಟದ ಪ್ರೇರಣೆ ಪಡೆದು ಕುಂದರನಾಡಿನಲ್ಲಿ ದಿನದಿಂದ ದಿನಕ್ಕೆ ಹೋರಾಟ ಚುರುಕುಗೊಂಡಿತು. ಜನರು ತನು, ಮನ, ಧನಗಳಿಂದ ತ್ಯಾಗಕ್ಕೆ ಸಿದ್ಧರಾದರು.

"ಗಾಂಧೀಜಿಯವರು ಆಂದೋಲನವು ಸಂಪೂರ್ಣ ಅಹಿಂಸೆಯಿಂದ ಸಾಗಬೇಕೆಂದು ಕರೆಕೊಟ್ಟಿದ್ದರು. ಚಳುವಳಿ ಹಿಂಸಾಚಾರಕ್ಕೆ ತಿರುಗಿಸಿದರೆ ಸರ್ಕಾರ ಅದನ್ನು ಹತ್ತಿಕ್ಕುವುದೆಂದು ಗಾಂಧೀಜಿಯವರಿಗೆ ಮನವರಿಕೆಯಾಗಿತ್ತು. ಆದ್ದರಿಂದ ಕ್ರಿ. ಶ. ೧೯೨೨ ರಲ್ಲಿ ಉತ್ತರ ಪ್ರದೇಶದ ಗೋರಖಪುರ ಹತ್ತಿರ ಚೌರಿ-ಚೌರಾ ಎಂಬಲ್ಲಿ ಗಲಭೆಯಾಗಿ ಹಿಂಸಾಚಾರಕ್ಕೆ ತಿರುಗಿದಾಗ ಗಾಂಧೀಜಿಯವರನ್ನು ರಾಜದ್ರೋಹ ಕಾರಣಕ್ಕಾಗಿ ೬ ವರ್ಷ ಶಿಕ್ಷೆ ವಿಧಿಸಿ ಯರವಡಾ ಜೈಲಿನಲ್ಲಿ ಇಟ್ಟರು"[೧೮]. ಆ ಕಾರಣಕ್ಕಾಗಿ ಗಾಂಧೀಜಿ ಅಹಿಂಸೆಯೇ ಸ್ವಾತಂತ್ರ್ಯದ ಮಂತ್ರಯೆಂದು ಸ್ಪಷ್ಟಪಡಿಸಿದರು.

**ನಾಗಪುರ ಸತ್ಯಾಗ್ರಹ :**

ಕ್ರಿ ಶ. ೧೯೨೩ ರಲ್ಲಿ ಕಾಂಗ್ರೆಸ್ ಧ್ವಜ ಹಾರಿಸಲು ಸರಕಾರ ಪ್ರತಿಬಂಧಿಸಿತ್ತು. ಚಳುವಳಿಕಾರರು ಕಾಂಗ್ರೆಸ್ ಧ್ವಜ ಹಾರಿಸಲು ಪ್ರತಿಜ್ಞೆ ಮಾಡಿದ್ದರು. ಈ ಝೇಂಡಾ ಸತ್ಯಾಗ್ರಹಕ್ಕೆ ದೇಶದ ಅನೇಕ ಪ್ರಾಂತಗಳಿಂದ ಸಾವಿರಾರು ಮುಖಂಡರು ನಾಗಪುರಕ್ಕೆ ಬಂದಿದ್ದರು. ಕರ್ನಾಟಕದಿಂದ ಡಾ. ಹರ್ಡಿಕರರವರು ಮುಖಂಡರಾಗಿ ಹೋಗಿದ್ದರು. ಇದರಲ್ಲಿ ಬೆಳಗಾವಿ ಜಿಲ್ಲೆಯ ದಾಮು ಅಣ್ಣಾ ಲೇಂಗಡೆ, ದಯಾನಂದ ಅರಳಿಕಟ್ಟಿ, ಪಾಶ್ಚಾಪುರದ ಕಲ್ಲೋ ಬಾಳಾಜಿ ದೀಕ್ಷೀತ್ ಮತ್ತು ಫಕರುದ್ದೀನ ಅರಳಿಕಟ್ಟಿ, ಅಥಣಿಯ ಗುರುನಾಥ ಜೇರ, ಚಿಕ್ಕೋಡಿಯ ಅಣ್ಣಾಜೀ ಬಾಳಕೃಷ್ಣ ಕುಲಕರ್ಣಿ ಮುಂತಾದವರು ನಾಗಪುರಕ್ಕೆ ಹೋಗಿ ಸತ್ಯಾಗ್ರಹ ಮಾಡಿದ್ದರಿಂದ ಒಂದೂವರೆ ವರ್ಷದ ಶಿಕ್ಷೆಯನ್ನು ಅನುಭವಿಸಬೇಕಾಯಿತು.

**ಬೆಳಗಾವಿ ಅಧಿವೇಶನ :**

ಭಾರತೀಯ ರಾಷ್ಟ್ರೀಯ ೩೬ ನೇ ಅಧಿವೇಶನವು ೧೯೨೪ರಲ್ಲಿ ಬೆಳಗಾವಿಯಲ್ಲಿ ಕೂಡಿತ್ತು. ಮಹಾತ್ಮಾ ಗಾಂಧೀಜಿಯವರು ಈ ಅಧಿವೇಶನಕ್ಕೆ ಅಧ್ಯಕ್ಷರಾಗಿದ್ದರು. ಅವರು ತಮ್ಮ ಜೀವಮಾನದಲ್ಲಿ ಒಂದೇ ಒಂದು ಸಲ ಕಾಂಗ್ರೆಸ ಕಮೀಟಿಯ ಅಧ್ಯಕ್ಷರಾದದ್ದು. ಅದು ಬೆಳಗಾವಿ ಜಿಲ್ಲೆಯ ಅಧಿವೇಶನದಲ್ಲಿ ಟಿಳಕವಾಡಿಯಲ್ಲಿ ರೇಲ್ವೆ ಪಶ್ಚಿಮ ಬದಿಗೆ ಅಧಿವೇಶನಕ್ಕಾಗಿ ಭವ್ಯ ಮಂಟಪ ಹಾಕಲಾಗಿತ್ತು. ಪ್ರತಿನಿಧಿಗಳ ಸಲುವಾಗಿ ಗುಡಿಸಲುಗಳನ್ನು ನಿರ್ಮಿಸಲಾಗಿತ್ತು. ಅಧಿವೇಶನ ಪೂರ್ವದಲ್ಲಿ ಅಲ್ಲಲ್ಲಿ ಸೇವಾದಳದ ತರಬೇತಿ ಕೇಂದ್ರಗಳು ನಡೆದು ಕರ್ನಾಟಕದ ಬೇರೆ ಬೇರೆ ಜಿಲ್ಲೆಗಳಿಂದ ೧೨೦೦ ಸ್ವಯಂ ಸೇವಕರು ಅಧಿವೇಶನದ ವ್ಯವಸ್ಥೆಗೆ ಟೊಂಕಕಟ್ಟಿ ನಿಂತಿದ್ದರು. ಡಾ. ಹರ್ಡಿಕರರು ಇದಕ್ಕೆ ಮುಂದಾಳತ್ವವನ್ನು ವಹಿಸಿದ್ದರು. ಬೆಳಗಾವಿ ಜಿಲ್ಲೆಯಲ್ಲಿ ಅನೇಕ ಸ್ಥಳಗಳಲ್ಲಿ ಜಾಹಿರ ಸಭೆಗಾಗಿ ಜನರು ಸಾವಿರಾರು ಸಂಖ್ಯೆಯಲ್ಲಿ ಸೇರುತ್ತಿದ್ದರು. ಇದಲ್ಲದೆ ಸ್ವಾತಂತ್ರ್ಯದ ಪ್ರತಿಜ್ಞೆಯನ್ನು ಸ್ವೀಕರಿಸುತ್ತಿದ್ದರು. ಈ ದೃಶ್ಯವನ್ನು ಕಂಡು ದೇಶದಲ್ಲಿ ಸಾಕಷ್ಟು ಉತ್ಸಾಹವಿದೆ ಎಂದು ಗಾಂಧೀಜಿಯವರಿಗೆ ಗೊತ್ತಾದ ಬಳಿಕ ಅವರು ಅತ್ಯಂತ ಹರ್ಷಿತರಾಗುತ್ತಾರೆ. ಈ ಚಳುವಳಿಕಾರರು ತಾವೇ ಸೇನಾಪತಿಗಳಾಗಿ ಕ್ರಿ. ಶ. ೧೯೩೦ರ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದಾರೆ.

ಗಾಂಧೀಜಿಯವರು ದಿನಾಲು ಕಾಲ್ನಡಿಗೆಯಿಂದ ನಡೆಯುತ್ತ ದಾರಿಯಲ್ಲಿಯ ಹಳ್ಳಿ ಪಟ್ಟಣಗಳಲ್ಲಿ ಕೂಡುತ್ತಿದ್ದ ಪ್ರಚಂಡ ಸಭೆಗಳಲ್ಲಿ, ಭಾಷಣ ಮಾಡಿ ಜನರನ್ನು ಹುರಿದುಂಬಿಸುತ್ತಿದ್ದರು. ಎಪ್ರಿಲ್ ೧೩ನೇ ತಾರೀಖಿನ ದಿನದಂದು ಅವರು ದಾಂಡಿ ತಲುಪುತ್ತಾರೆ. ಉಪ್ಪನ್ನು ತಯಾರಿಸುತ್ತಾರೆ. ಈ ಸುದ್ದಿ ತಿಳಿದದ್ದೆ ತಡ ದೇಶದಲ್ಲಿ ಲಕ್ಷಾವಧಿ ಜನರು ಅವರ ಅನುಕರಣೆ ಮಾಡಿ ಕಾಯಿದೆ ಭಂಗ ಮಾಡುತ್ತಾರೆ.

ಬೆಳಗಾವಿ ಜಿಲ್ಲೆಯ ಸತ್ಯಾಗ್ರಹಿಗಳಿಗೆ ಮತ್ತು ಅವರ ಚಟುವಟಿಕೆಯ ಕಾರ್ಯಗಳಿಗೆ ಒಂದು ನೆಲೆ ಬೇಕಾಗಿತ್ತು. ಸತ್ಯಾಗ್ರಹದಲ್ಲಿ ಪಾಲ್ಗೊಂಡ ಸಾವಿರಾರು ಜನ ಬೆಳಗಾವಿಗೆ ಬರತೊಡಗಿದರು. ಬೆಳಗಾವಿಯಲ್ಲಿ ಈಗ ರೇಡಿಯೋ ಟಾಕೀಜ್ ಇರುವ ಸ್ಥಳದಲ್ಲಿ ಶ್ರೀಕೃಷ್ಣ ಸಿನೇಮಾ ಕಟ್ಟಡವಿತ್ತು. ಅದನ್ನೇ ಸತ್ಯಾಗ್ರಹಿಗಳ ಅನುಕೂಲಕ್ಕಾಗಿ ಕೊಡಲಾಗಿತ್ತು. ಅದರ ಒಡೆಯರಾದ ಶ್ರೀಕೃಷ್ಣರಾವ ವೈದ್ಯೆಯವರು ಕಾಂಗ್ರೆಸ್ ಚಳುವಳಿಗಾಗಿಯೇ ಅದನ್ನು ಬಿಟ್ಟುಕೊಟ್ಟಿದ್ದರು. ಈ ಶಿಬಿರದಲ್ಲಿ ನಾಮುಂದು ನೀಮುಂದು ಎಂದು ಸತ್ಯಾಗ್ರಹಿಗಳು ನಿರ್ದಿಷ್ಟಪಡಿಸಿದ ಎಪ್ರೀಲ್ ೧೩ರಂದು ತಾಲೂಕಾ ಸ್ಥಳಗಳಿಗೆ ಹೋಗಿ ಜನರಲ್ಲಿ ಜಾಗೃತಿ ಮೂಡಿಸಿದರು. ಜಿಲ್ಲೆಯಲ್ಲಿ ಆಂದೋಲನವನ್ನು ನಡೆಸುವ ಯೋಜನೆಯನ್ನು ತಯಾರಿಸಿ ಅದರಂತೆ ಎಪ್ರೀಲ್ ೧೩-೧೯೩೦ ರಿಂದ ಕಾರ್ಯ ಪ್ರಾರಂಭ ಮಾಡಿತು. ಈ ದಿನವೇ ಚಂದಗಡದ ಸಭೆಯಲ್ಲಿ ಭಾಷಣ ಮಾಡಿ ಉಪ್ಪು ಮಾರಿದ್ದಕ್ಕಾಗಿ ಶ್ರೀಗಳಾದ ಜಯದೇವ ಕುಲಕರ್ಣಿ, ವಿನಾಯಕರಾವ ಕರಗುಪ್ಪಿಕರ ಹಾಗೂ ದಾದಾ ಬಂದೇಕರರನ್ನು ಉಪ್ಪನ್ನು ಕೊಂಡದ್ದಕ್ಕಾಗಿ ವಿಷ್ಣು ಬಲ್ಲಾಳ, ಕೃಷ್ಣ ಸುತಾರವರನ್ನು ಬಂಧಿಸಿ ಹಿಂಡಲಗಿ ಸೆರೆಮನೆಯಲ್ಲಿ ಕಳುಹಿಸಲಾಯಿತು.

"ಬೆಳಗಾವಿ ಜಿಲ್ಲೆಯಲ್ಲಿ ಚಳುವಳಿಯನ್ನು ಪ್ರಚಾರಗೊಳಿಸಲು ಪ್ರಮುಖವಾದ ಐದು ತಂಡಗಳನ್ನು ನಿರ್ಮಿಸಲಾಗಿತ್ತು"[೧೯]. ಇವರು ಬೆಳಗಾವಿ ಮತ್ತು ಕುಂದರನಾಡಿನ ಸುತ್ತ-ಮುತ್ತ ತಮ್ಮ ಚಳುವಳಿಯ ಕಾರ್ಯವನ್ನು ಮಾಡುತ್ತಿದ್ದರು. ಶ್ರೀ ಅಣ್ಣೂ ಗುರೂಜಿಯವರು ಕುಲಕರ್ಣಿ ಕೆಲಸಕ್ಕೆ ರಾಜೀನಾಮೆ ಕೊಟ್ಟು ಸತ್ಯಾಗ್ರಹ ಹೋರಾಟದಲ್ಲಿ ಧುಮುಕಿದರು. "ಐದು ತಂಡಗಳ ಐದು ಪ್ರಮುಖ ನಾಯಕರ ಹೆಸರುಗಳು ಹೀಗಿವೆ. ೧) ಬೆಳಗಾವಿ ನಿಪ್ಪಾಣಿ ಮಾರ್ಗ - ಶ್ರೀ ವಾಮನರಾವ ಬಿದರಿ ೨) ಬೆಳಗಾವಿ-ನೇಸರಗಿ-ಯರಗಟ್ಟಿ ಮಾರ್ಗ - ರಾಮಚಂದ್ರ ವಡವಿ ೩) ಬೆಳಗಾವಿ-ಬೈಲಹೊಂಗಲ-ಸವದತ್ತಿ ಮಾರ್ಗ - ಶ್ರೀ ಅಣ್ಣೂ ಗುರೂಜಿ ೪) ಬೆಳಗಾವಿ-ಚಂದಗಡ ಮಾರ್ಗ - ಶ್ರೀ ಕೃಷ್ಣರಾವ ವೈದ್ಯ ೫) ಬೆಳಗಾವಿ ಪಟ್ಟಣ - ಶ್ರೀ ಬಾಬುರಾವ ಠಾಕೂರ, ಶಿವರಾವ ಕೊಪ್ಪಳ, ಡಾ. ಕೋವಾಡಕರ ಹೀಗೆ ತಂಡಗಳನ್ನು ಮಾಡಿ ಇಡೀ ಬೆಳಗಾವಿ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿಗೆ ಒಂದು ಮೂರ್ತ ಸ್ವರೂಪವನ್ನು ತಂದು ಕೊಡುತ್ತಾರೆ"[೨೦].

ಈ ಹಿಂದೆ ನಿಯೋಜಿಸಿದ ಚಳುವಳಿಯ ಪಥಕಗಳಿಗೆ ಯಾಳಗಿಯವರು ಕ್ರಿಯಾಯೋಜನೆಯನ್ನು ರೂಪಿಸುತ್ತಿದ್ದರು. ಈ ಪಥಕಗಳ ಯೋಜನೆಯನ್ನು ಶ್ರೀಕೃಷ್ಣರಾವ

ಯಾಳಗಿಯವರ ಸಲಹೆಯಂತೆ ನಿರ್ಮಿಸಲಾಗಿತ್ತು. ಕಾಲ್ನಡಿಗೆಯಿಂದ ದಿನಾಲು ಮೂರು ನಾಲ್ಕು ಹಳ್ಳಿಗಳಿಗೆ ಹೋಗಿ ಅಲ್ಲಿ ಜಾಹೀರ ಸಭೆ ಮಾಡುವುದು ಪಾರತಂತ್ರ್ಯದ ಬವಣೆಯನ್ನು ಬಣ್ಣಿಸಿ ಹೇಳುವುದು, ಅನ್ಯಾಯದ ಕಾಯಿದೆಗಳನ್ನು ಮುರಿಯುವ ಅವಶ್ಯಕತೆಗಳನ್ನು ಜನರಲ್ಲಿ ಬಿಂಬಿಸುವುದು. ಉಪ್ಪು ಮಾರುವುದು ಮುಂತಾದ ಕಾರ್ಯಕ್ರಮಗಳನ್ನು ಈ ಪಥಕಗಳು ನಡೆಸಿದ್ದರಿಂದ ಜನತೆಯಲ್ಲಿ ನವಚೈತನ್ಯ ಸಂಚರಿಸಿ ಅವರಲ್ಲಿ ದೇಶಾಭಿಮಾನ ಉಕ್ಕೇರುತ್ತಿತ್ತು.

ಸ್ವಾತಂತ್ರ್ಯ ಪೂರ್ವದಲ್ಲಿ ಒಗ್ಗಟ್ಟಾಗಿ ಆಂದೋಲನ ನಡೆಸಿ ಜನಜಾಗೃತಿಯನ್ನುಂಟು ಮಾಡಲಾಗುತ್ತಿತ್ತು. ಇದರಲ್ಲಿ ಪ್ರಭಾತಫೇರಿಯ ಪಾತ್ರ ಬಹಳ ಮುಖ್ಯವಾಗಿತ್ತು. ಪ್ರತಿಯೊಂದು ಊರಲ್ಲಿ ಪ್ರಭಾತ ಪೇರಿಗಳು ಪ್ರಾರಂಭವಾದವು. ರಾಷ್ಟ್ರೀಯ ಪದಗಳನ್ನು ಹಾಡುತ್ತ ನೂರಾರು ಜನರು ನಗರ ಸಂಕೀರ್ತನೆ ಮಾಡುತ್ತಿದ್ದರು. ಈ ಪ್ರಭಾತಫೇರಿಯಲ್ಲಿ ಚಿಕ್ಕವರು, ಬಾಲಕರು, ಬಾಲಕಿಯರು, ತರುಣರು ಅತ್ಯಂತ ಹುಮ್ಮಸ್ಸಿನಿಂದ ಭಾಗವಹಿಸುತ್ತಿದ್ದರು. ಅಂತೆಯೇ ಉತ್ಸಾಹಕ್ಕೆ ಸೀಮೆ ಇಲ್ಲದಾಗಿತ್ತು. ಬೆಳಗಾವಿಯಲ್ಲಂತೂ ಮುಂಜಾವಿನ ಈ ನಗರ ಸಂಕೀರ್ತನ ನೋಡುವುದು ಕಣ್ಣಿಗೊಂದು ಹಬ್ಬವಾಗಿತ್ತು. ಬೀದಿಗಳನ್ನು ತಳಿರು ತೋರಣಗಳಿಂದ ಅಲಂಕರಿಸಿ ಅಂಗಳದಲ್ಲಿ ರಂಗವಲ್ಲಿಯನ್ನು ಹಾಕಲಾಗುತ್ತಿತ್ತು. ನಗರದ ಬೇರೆ-ಬೇರೆ ಭಾಗಗಳಿಂದ ಹೊರಟ ೧೦/೧೨ ಪ್ರಭಾತಫೇರಿ ಪಡೆಗಳು ಒಂದೆಡೆ ಸೇರಿ ಸಾವಿರಾರು ಸ್ವಯಂ ಸೇವಕರು ಸಾಲಾಗಿ ನಿಂತು ಗಂಭೀರ ಸ್ವರದಿಂದ ರಾಷ್ಟ್ರಗೀತೆಗಳನ್ನು ಹಾಡುತ್ತಿದ್ದರು. ಜನ ಇದರಿಂದ ರೋಮಾಂಚನಗೊಳ್ಳುತ್ತದಲ್ಲದೆ ದೇಶಕ್ಕಾಗಿ ಹೋರಾಡುವ ಪಣ ತೊಡುತ್ತಿತ್ತು. ಈ ಪ್ರಭಾತಫೇರಿಗಳಲ್ಲಿ ಮಹಿಳೆಯರು, ಮಕ್ಕಳು, ಮುದುಕರು ಎಲ್ಲರೂ ಭಾಗವಹಿಸುತ್ತಿದ್ದರು. ಈ ಆಂದೋಲನವನ್ನು ಹತ್ತಿಕ್ಕಲು ಬ್ರಿಟಿಷ ಸರಕಾರವು ೧೪೪ ನೇ ಕಲಂನ್ನು ಜಾರಿಗೊಳಿಸಿ ಉಗ್ರ ಉಪಾಯವನ್ನು ಕೈಕೊಂಡಿತ್ತು. ಸ್ತ್ರೀಯರನ್ನು, ಬಾಲಕರನ್ನು ಎರಡು ಮೂರು ಕಡೆ ಅಡ್ಡಗಟ್ಟಿ ಲಾಠಿ ಪ್ರಹಾರ ಮಾಡಲಾಯಿತು. ಜನ ವಿಧ-ವಿಧ ಶಿಕ್ಷೆಯನ್ನು ಅನುಭವಿಸಿದರು. ಆದರೂ ಅವರ ಸ್ವಾತಂತ್ರ್ಯದ ಕಿಚ್ಚು ನಂದಲಿಲ್ಲ. ಬೆಳಗಾವಿ, ಪಾಶ್ಚಾಪೂರ, ಸಂಪಗಾವಿ, ಮುರಗೋಡ ಮುಂತಾದ ಊರುಗಳಲ್ಲಿ ಸಂಕೀರ್ತನೆಯೂ ದಿನಾಲು ೩/೪ ತಾಸು ನಡೆಯುತ್ತಿತ್ತು. ಇದಕ್ಕೆ ಮುಖ್ಯ ಕಾರಣವೆಂದರೆ ಜನ ಗಾಂಧೀಜಿಯವರ ಮೇಲೆ ಇಟ್ಟ ಅಪಾರವಾದ ಶ್ರದ್ಧೆ ಮತ್ತು ನಿಷ್ಠೆ.

ಚಳುವಳಿಯ ಸ್ವರೂಪವು ತೀವ್ರವಾಗುತ್ತ ನಡೆದಿತ್ತು. ಪೋಲಿಸರು ಲಾಠಿ ಚಾರ್ಜನಿಂದಾಗಿ ಚಳುವಳಿಯನ್ನು ಹತ್ತಿಕ್ಕಲು ಪ್ರಯತ್ನಿಸುತ್ತಿದ್ದರು. ಇಂಥ ಸಂದರ್ಭಗಳಲ್ಲಿ ದೇಶಪ್ರೇಮಿಗಳು ಪ್ರಭಾತಪೇರಿಯಲ್ಲಿ ದೇಶಭಕ್ತಿಗೀತೆಗಳನ್ನು ಹಾಡುತ್ತ ತಮ್ಮ ಕಾರ್ಯಗಳನ್ನು ಮುಂದುವರೆಸಿದ್ದರು. ದಿ. ೭-೯-೧೯೩೦ ರಂದು ಬೆಳಗಾವಿಯ ವಡಗಾವಿಯಲ್ಲಿ ಪ್ರಭಾತಪೇರಿ ಪ್ರಾರಂಭವಾಗಿತ್ತು. ಪೊಲೀಸರು ಅದನ್ನೆಲ್ಲ ತಡೆಹಿಡಿಯಲು ಪ್ರಯತ್ನಿಸುತ್ತಿದ್ದರು. ಈ ಸಂಗತಿಯು ಚಳುವಳಿಕಾರರಿಗೆ ಗೊತ್ತಾದ ಕೂಡಲೆ ಅವರೆಲ್ಲ ಗುಂಪಾಗಿ ಬೆಳಗಾವಿ ಶಹಾಪೂರ, ಅನಗೋಳ ಭಾಗದಿಂದ ಧಾವಿಸಿ

ಬರಲಾರಂಭಿಸಿದರು. ಸಂಸ್ಥಾನದ ಕಾರಭಾರಿ ಸಾಹೇಬನೊಬ್ಬ ಪ್ರಭಾತಪೇರಿ ಸಮಯದಲ್ಲಿ ಅಲ್ಲಿಗೆ ಬಂದು ಪ್ರಭಾತಪೇರಿ ಮಾಡುತ್ತಿರುವ ಜನರ ಮೇಲೆ ಕುದುರೆ ಸವಾರರನ್ನು ಅಟ್ಟಿ ಚಳುವಳಿಯನ್ನು ತಡೆಯುವ ಪ್ರಯತ್ನ ಮಾಡುತ್ತಿದ್ದರು. ಇದಲ್ಲದೆ ಶ್ರೀ ವಿನಾಯಕರಾವ ಕರಗುಪ್ಪಿಕರ, ಗೋಪಾಳರಾವ ಮಿರಜಕರ, ರಾಮಚಂದ್ರ ಬೊಂಗಾಳೆ ಮುಂತಾದವರನ್ನು ಬಂಧಿಸಿ ಜೈಲಿನಲ್ಲಿಟ್ಟರು. ಕೂಡಿದ ಜನಜಂಗುಳಿಯು ಜೈಲಿನತ್ತ ಓಡಿ ಅವರನ್ನು ಬಿಡಿಸಲು ಹೋರಾಟ ಮಾಡುವ ಸ್ಥಿತಿಯಲ್ಲಿದ್ದಾಗ ಪರಿಸ್ಥಿತಿಯು ವಿಕೋಪಕ್ಕೆ ಹೋಗುವದೆಂದು ಬಗೆದು ಶ್ರೀ ನಾರಾಯಣರಾವ ಜೋಶಿ ಮತ್ತು ಕೃಷ್ಣರಾವ ಯಾಳಗಿಯವರು ಘಟನಾ ಸ್ಥಳಕ್ಕೆ ಬಂದು ಸಂಸ್ಥಾನದ ಕಾರಭಾರಿಯವರ ಜೊತೆ ಮಾತುಕತೆ ನಡೆಸಿ ಪರಿಸ್ಥಿತಿಯನ್ನು ತಿಳಿಗೊಳಿಸಿದರು. ಜನರ ಉದ್ರಿಕ್ತ ಭಾವವನ್ನು ಸಮಂಜಸ ರೀತಿಯಾಗಿ ಅವರ ಮನವೊಲಿಸಿ ಅದನ್ನು ಕಡಿಮೆಗೊಳಿಸಿ ಮತ್ತೆ ಯಥಾ ರೀತಿ ಕೆಲಸಗಳು ಸಾಂಗವಾಗಿ ನಡೆಯುವಂತೆ ನೋಡಿಕೊಂಡರು.

ದೇಶಾದ್ಯಂತ ನಡೆಯುವ ಚಳುವಳಿಯ ಸುದ್ದಿಗಳು ಬೆಳಗಾವಿ ಹಾಗೂ ಕುಂದರನಾಡಿನಲ್ಲಿಯೂ ಅವು ಬಂದು ತಲುಪುತ್ತಿದ್ದವು. ದಿ. ೧೨-೧-೧೯೩೧ ರಂದು ಎರವಡಾ ಜೈಲಿನಲ್ಲಿ ಸೊಲ್ಲಾಪುರದ ನಾಲ್ವರಿಗೆ (ಚಳುವಳಿಯ ಮುಖಂಡರಿಗೆ) ಕಂಪನಿ ಸರ್ಕಾರವು ಫಾಸಿ ಕೊಟ್ಟಿತು. ಈ ಸುದ್ದಿ ಬೆಳಗಾವಿಗೆ ಬಂದ ತಕ್ಷಣ ಬೆಳಗಾವಿಯ ಸಮಸ್ತ ಜನ ಸಂಪೂರ್ಣ ಹರತಾಳವನ್ನು ಆಚರಿಸಿತು. ಮಧ್ಯಾಹ್ನ ೪.೩೦ ಗಂಟೆಗೆ ಶೋಕ ಪ್ರದರ್ಶನದ ಮೌನ ಮೆರವಣಿಗೆ ಹೊರಡುವದೆಂದು ನಿಶ್ಚಯಿಸಲಾಯಿತು. ಆದರೆ ಪೊಲೀಸರು ಮೆರವಣಿಗೆಯನ್ನು ಪ್ರತಿಬಂಧಿಸಿ ಜಿಲ್ಲಾ ನ್ಯಾಯಾಧೀಶರು ಹೊರಡಿಸಿದ ಆಜ್ಞೆಯನ್ನು ಜಾಹಿರಗೊಳಿಸಿದರು. ಆದರೆ ಜನರು ಸರ್ಕಾರದ ಈ ಆಜ್ಞೆಗೆ ಹೆದರದೆ ಸುಮಾರು ೫/೬ ಸಾವಿರ ಜನ ಮೆರವಣಿಗೆಯಲ್ಲಿ ಭಾಗವಹಿಸಿದ್ದರು. ಮೆರವಣಿಗೆಯು ಖಡೇಬಜಾರ ಪೊಲೀಸ ಸ್ಟೇಷನ್ ಹತ್ತಿರ ಬರುತ್ತಲೇ ಸುಮಾರು ೫೦ ಜನ ಲಾಠಿಧಾರಿಗಳು ಬಂದೂಕಧಾರಿಗಳು, ಪೊಲೀಸರು ಚಳುವಳಿಯನ್ನು ತಡೆಯಲು ಬಂದಿದ್ದರು. ಅವರ ಹಿಂದೆ ಜಿಲ್ಲಾ ಮ್ಯಾಜಿಸ್ಟ್ರೇಟ ಹಿರೇಮಠ, ಸಿಟಿ ಮ್ಯಾಜಿಸ್ಟ್ರೇಟ ಇಸಾನಿ, ಹೇಮ ಇನ್‌ಸ್ಪೆಕ್ಟರ್ ವೆಸ್ಟಗೇಟ್ ಮತ್ತು ಶಿವಶೆಟ್ಟಿ ಫೌಜದಾರರು ಹಾಜರಿದ್ದರು. ಮೆರವಣಿಗೆಯಿಂದ ಬಿಟ್ಟು ಜನರಿಗೆ ಹೋಗಲು ಸೂಚಿಸುತ್ತ ಈ ಅಧಿಕಾರಿಗಳು ೧೦ ನಿಮಿಷ ಕಾಲಾವಧಿಯನ್ನು ಕೊಟ್ಟರು. ಆದರೂ ಯಾರೊಬ್ಬರೂ ಕೂಡ ಚಳುವಳಿಯಿಂದ ಹಿಂದೆಗೆಯಲಿಲ್ಲ. ಆಗ ನ್ಯಾಯಾಧೀಶರ ಆದೇಶದ ಮೇರೆಗೆ ಪೊಲೀಸರು ಲಾಠಿ ತಿರುವುತ್ತ ಜನರ ಮೇಲೆ ಏರಿ ಹೋಗುತ್ತಾರಲ್ಲದೆ ಅವರನ್ನು ಸಿಕ್ಕಾಪಟ್ಟೆ ಹೊಡೆಯುತ್ತಾರೆ. ಈ ಹೊಡೆತಕ್ಕೆ ಸುಮಾರು ೩೦೦/೪೦೦ ಜನರು ತುತ್ತಾಗಿದ್ದಾರೆ. ಪೊಲೀಸರು ಲಾಟಿಗಳ ತುದಿಗೆ ಮೊಳೆ ಹೊಡೆದದ್ದರಿಂದ ಪ್ರತಿ ಹೊಡೆತಕ್ಕು ಚಳುವಳಿಗಾರರಿಗೆ ಗಾಯಗಳಾಗಿದ್ದವು. ಸುಮಾರು ೨೦/೨೫ ಜನರಿಗೆ ಹೆಚ್ಚು ಗಾಯಗಳಾಗಿ ಸುಮಾರು ೮/೧೦ ಜನರು ಅಸ್ವಸ್ಥರಾದರು. ಗಾಯಗೊಂಡವರಿಗೆಲ್ಲ ಡಾ. ಸವನೂರ ನರಗುಂದಕರ ಮತ್ತು ಭೋಜ ಇವರ ದವಾಖಾನೆಯಲ್ಲಿ ಹಾಗೂ ನಗರ ಪಾಲಿಕೆಯ ಆಸ್ಪತ್ರೆಯಲ್ಲಿ ಉಪಚಾರ ಮಾಡಲಾಯಿತು.

ಕೃಷ್ಣ ಕೆಫೆಯ ಮಾಲೀಕರು ಚಳುವಳಿಗಾರೆಲ್ಲರಿಗೂ ಚಹಾ, ಕಾಫಿ, ಹಾಲು, ಸೋಡಾ ಇತ್ಯಾದಿ ಪೇಯಗಳನ್ನು ಪುಕ್ಕಟೆಯಾಗಿ ಕೊಟ್ಟರು. ಹೀಗೆ ಹೊಡೆತ ತಿಂದವರಲ್ಲಿ ಶ್ರೀ ಜೀವನರಾವ ಯಾಳಗಿ, ಜಯದೇವ ಕುಲಕರ್ಣಿ, ಸದಾಶಿವರಾವ ಪರಾಂಜಪೆ, ವಿನಾಯಕರಾವ ಕರಗುಪ್ಪಿ, ಮೊದಲಾದ ಕಾರ್ಯಕರ್ತರು ಇದ್ದರು. ಶ್ರೀ ಜಯದೇವ ಕುಲಕರ್ಣಿಯವರ ನೇತೃತ್ವದಲ್ಲಿ ಶಹಾಪುರದ ಸ್ವಯಂ ಸೇವಕರು ಅಭೂತಪೂರ್ವ ಧೈರ್ಯವನ್ನು ತೋರಿದರು.

ನಮ್ಮ ದೇಶದಲ್ಲಿ ನಮ್ಮ ರಾಷ್ಟ್ರಗೀತೆಯನ್ನು ಹಾಡಿದರೆ ಮತ್ತು ಪ್ರಭಾತಪೇರಿ ತೆಗೆದರೆ ಬ್ರಿಟಿಷರು ಕೆಂಡ ಕಾರುತ್ತಿದ್ದರು. ಅವರಿಗೆ ದೇಶವನ್ನು ಬಿಟ್ಟು ಹೋಗುವ ಮನಸ್ಸು ಇರಲಿಲ್ಲ. ಆದಕಾರಣಕ್ಕಾಗಿ ಹೇಗಾದರೂ ಮಾಡಿ ಚಳುವಳಿಗಳನ್ನು ಹತ್ತಿಕ್ಕಿ ಜನರಲ್ಲಿ ಮನಸ್ತಾಪವನ್ನುಂಟು ಮಾಡಿ ಮತಭೇದಗಳನ್ನು ಸೃಷ್ಟಿಸಿ ಜನರ ಮನಸ್ಸನ್ನು ಒಡೆದು ಆಳುವ ಕುಟೀಲ ನೀತಿಯನ್ನು ಅನುಷ್ಠಾನಕ್ಕೆ ತರಲು ಅವರು ಪ್ರಯತ್ನಿಸುತ್ತಿದ್ದರು. ದಿ. ೧೬-೧೨-೧೯೩೦ ರಂದು ಬೆಳಗಾವಿಯಲ್ಲಿಯೇ ಇನ್ನೊಂದು ಘಟನೆಯು ಕೂಡ ಲಾಠಿ ಚಾರ್ಜಕ್ಕೆ ತುತ್ತಾದುದನ್ನು ಗಮನಿಸಬಹುದು. "ಚಳುವಳಿಕಾರರು ಬೆಳಗಾವಿಯ ಸಮಾದೇವಿ ಗಲ್ಲಿಯಲ್ಲಿ ರಾಷ್ಟ್ರಗೀತೆಗಳನ್ನು ಹಾಡುತ್ತಾ ಪ್ರಭಾತಪೇರಿ ಹೊರಟಾಗ, ಪೋಲೀಸರು ನಿರ್ದಯದಿಂದ ಅವರ ಮೇಲೆ ಲಾಠಿ ಪ್ರಹಾರ ಮಾಡುತ್ತಾರೆ"[೨೧]. ಅದರಲ್ಲಿ ಸುಮಾರು ೨೦ ಜನ ಗಾಯಾಳುಗಳಾಗುತ್ತಾರೆ. ಶ್ರೀ ಗುಂಡಪ್ಪ ಶೆಟ್ಟಿ, ಲ.ಸ. ಅಜಗಾಂವಕರ ಇವರಿಗೆ ಭಾರಿ ಪೆಟ್ಟು ಬಿದ್ದುದರಿಂದ ಇವರನ್ನು ಡಾ. ಹೆರೆಕರ ಆಸ್ಪತ್ರೆಗೆ ಸಾಗಿಸಲಾಗುತ್ತದೆ. ಇದಲ್ಲದೆ ಶ್ರೀ ಲಕ್ಷ್ಮೀಬಾಯಿ ಸೋಹನಿ ಅವರ ನೇತ್ರತ್ವದಲ್ಲಿ ಸಾಗಿದ ಮಹಿಳಾ ಪ್ರಭಾತಪೇರಿಯ ಮೇಲೆಯೂ ಪೋಲೀಸರು ಕೈ ಮಾಡುತ್ತಾರೆ. ಇದು ಪೋಲೀಸರ ನಿರ್ದಯಕ್ಕೆ ಮತ್ತು ಅವರ ಉದ್ಧಟತನಕ್ಕೆ ಸಾಕ್ಷಿಯಾಗುತ್ತದೆ.

"ಬ್ರಿಟಿಷ ಸರ್ಕಾರಕ್ಕೆ ಎಳೆಂಟು ಜನ ಕೂಡಿ ಚರ್ಚೆ ಮಾಡುವುದು ಸರಿ ಬರುತ್ತಿರಲಿಲ್ಲ. ಅದನ್ನು ಚಳುವಳಿಯೆಂದೇ ತಿಳಿದು ಅವರ ಮೇಲೆ ಲಾಠಿ ಚಾರ್ಜ ಮಾಡುವುದು ಅವರ ಸ್ವಭಾವವೇ ಆಗಿತ್ತು. ಇಂಥ ಒಂದು ಘಟನೆಯು ಬೆಳಗಾವಿ ಜಿಲ್ಲೆಯ ಬೈಲಹೊಂಗಲದಲ್ಲಿ ನಡೆಯುತ್ತದೆ"[೨೨]. ಬೈಲಹೊಂಗಲದಲ್ಲಿ ಬೆಳಗಾವ ಜಿಲ್ಲೆಯ ದಕ್ಷಿಣ ಭಾಗದ ರೈತರು ಒಂದು ಸಮಾವೇಶವನ್ನು ಕರೆದು ಅಲ್ಲಿ ರೈತರ ಸಮಸ್ಯೆಗಳನ್ನು ಕುರಿತು ಚರ್ಚೆ ಮಾಡುವವರಿದ್ದರು. ರೈತರ ತೊಂದರೆ ಸಮಸ್ಯೆಗಳನ್ನು ಕುರಿತು ಚರ್ಚೆ ಮಾಡುವವರಿದ್ದರು. ರೈತರ ತೊಂದರೆಗಳ ಬಗ್ಗೆ ಸರ್ಕಾರಕ್ಕೆ ಮನವಿ ಮಾಡಿಕೊಳ್ಳುವುದು ಅವರ ಉದ್ದೇಶವಾಗಿತ್ತು. ಆದರೆ ಸರ್ಕಾರ ಇದನ್ನು ತಪ್ಪಾಗಿ ಭಾವಿಸಿ ಇಲ್ಲಿಯ ಜನರು ಸ್ವರಾಜ್ಯವನ್ನು ಕೇಳುವುದಕ್ಕಾಗಿ ಈ ಸಮಾರಂಭವನ್ನು ಹಮ್ಮಿಕೊಂಡಿದ್ದಾರೆಂದು ಭಾವಿಸಿದರು. ಇದರಿಂದ ಅಧಿಕಾರಿಗಳು ಸಮಾವೇಶ ನಡೆಯಬಾರದೆಂದು ಆದೇಶ ಹೊರಡಿಸುತ್ತಾರೆ. ಮುಖಂಡರು ಅಧಿಕಾರಿಗಳಿಗೆ ತಾವು ರೈತರ ಸಮಸ್ಯೆಗಳನ್ನು ಕುರಿತು ಚರ್ಚೆ ಮಾಡುವದಾಗಿ ತಿಳಿಸಿದರು. ಅಧಿಕಾರಿಗಳು ಕಳೆದ ಈ ಸಭೆಯ ಮೇಲೆ ಲಾಠಿ ಚಾರ್ಜ ಮಾಡಿಸುತ್ತಾರೆ. ಈ ಸಮಾವೇಶದಲ್ಲಿ ಭಾಗಿಯಾದ ರೈತರಿಗೆ ಲಾಠಿಯಿಂದ ಪೋಲೀಸರು ಬೇಕಾಬಿಟ್ಟಿಯಾಗಿ ಹೊಡೆಯುತ್ತಾರೆ

ಅಲ್ಲದೆ ಅಂಗಡಿ ಮುಂಗಟ್ಟುಗಳ ಮೇಲೆ ಕುಳಿತ ಜನರನ್ನು ಕೂಡ ಥಳಿಸುತ್ತಾರೆ. ಹೀಗೆ ಪೋಲೀಸರು ಮತ್ತು ಬ್ರಿಟಿಷರು ಜನಸಾಮಾನ್ಯರ ಮೇಲೆ ದೌರ್ಜನ್ಯವನ್ನು ಎಸಗತೊಡಗಿದರು.

ಕರ್ನಾಟಕದಾದ್ಯಂತ ಚಳುವಳಿಯು ನಡೆದರೂ ಕೂಡ ಬೆಳಗಾವಿ ಚಳುವಳಿಯ ಪಾಲು ಸಿಂಹಪಾಲು. ಮುಂಬೈ ಕರ್ನಾಟಕದಲ್ಲಿ ಚಳುವಳಿಯಲ್ಲಿ ಭಾಗವಹಿಸಿ ಜೈಲಿಗೆ ಹೋದ ಒಟ್ಟು ಸತ್ಯಾಗ್ರಹಿಗಳಲ್ಲಿ ಅರ್ಧಕ್ಕಿಂತ ಹೆಚ್ಚು ಬೆಳಗಾವಿ ಜಿಲ್ಲೆಯವರೇ ಇದ್ದಾರೆ. ಕಂಪನಿ ಸರಕಾರ ಎಷ್ಟೇ ದುಷ್ಟವಾದ ರಾಕ್ಷಸಿ ಶಕ್ತಿಯನ್ನು ಪ್ರದರ್ಶನ ಮಾಡಿದರೂ ಚಳುವಳಿಕಾರರಿಗೆ ಚಿತ್ರಹಿಂಸೆ ನೀಡಿದರೂ ಬೆಳಗಾವಿಯ ಜನ ಅದಕ್ಕೆ ಸೊಪ್ಪು ಹಾಕಲಿಲ್ಲ. ಈ ಜಿಲ್ಲೆಯಿಂದ ಸುಮಾರು ೭೫೦ ಜನ ಜೈಲನ್ನು ಭೋಗಿಸಿದ್ದಾರೆ. ಇದಲ್ಲದೆ ವಿಚಾರಣಾಧೀನ ಕೈದಿಗಳ ಸಂಖ್ಯೆ ಇನ್ನೂ ಹೆಚ್ಚು. ಬೆಳಗಾವಿ ಜಿಲ್ಲೆಯ ಈ ಅಭೂತಪೂರ್ವ ಚಳುವಳಿಯನ್ನು ನೋಡಿ ಮುಂಬೈ ಸರಕಾರದ ಆಗಿನ ಕಂದಾಯ ಸಚಿವರು 'ಕರ್ನಾಟಕವು ಗುಜರಾತಕ್ಕಿಂತ ಕೆಟ್ಟದ್ದು' ಎಂದು ಹೇಳಿದರು. ಇದಕ್ಕೆ ಮಹಾತ್ಮಾ ಗಾಂಧೀಜಿಯವರು ತಮ್ಮ ಮೆಚ್ಚುಗೆಯನ್ನು ಗಂಗಾಧರರಾಯರಿಗೆ ಬರೆದು ತಿಳಿಸಿದ್ದಾರೆ.

ಕರ್ನಾಟಕದ ವಿಶೇಷವಾಗಿ ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರ ನಿಲುವು ಇತರ ಹೋರಾಟಗಾರರಿಗಿಂತ ಭಿನ್ನವೆಂದೇ ಹೇಳಬೇಕು. ಇವರ ಹೋರಾಟಕ್ಕೆ ವಯಸ್ಸಿನ ಬಂಧನವು ನಿಲ್ಲಲಾರದು. ಇದಕ್ಕೆ ಉದಾಹರಣೆ ಎಂದರೆ ಹೋರಾಟಗಾರರಾದ ಬೆಳಗಾವಿಯವರು ಚಳುವಳಿಯ ಕಾಲಕ್ಕೆ ಬೆಳಗಾವಿ ಜಿಲ್ಲಾ ಕಾಂಗ್ರೆಸ್ ಕಛೇರಿಯು ಬಸವನ ಬೀದಿಯ ಒಂದು ಮನೆಯಲ್ಲಿತ್ತು. ಪೋಲಿಸರು ಬೀಗಮುದ್ರೆ ಹಾಕಿ ಅದನ್ನು ಕಾಯುತ್ತಿದ್ದರು. ಜಿಲ್ಲಾ ಕಾಂಗ್ರೆಸ್ ಕಮೀಟಿಗೆ ಆಗ ದತ್ತೋಪಂತ ಬೆಳವಿ ಎಂಬುವರು ಅಧ್ಯಕ್ಷರಾಗಿದ್ದರು. ಕಾಂಗ್ರೆಸ್ ಸಂಘಟನೆಯ ಅಕ್ರಮ ಎಂದು ಸಾರಿದ ಕೂಡಲೆ ಎಲ್ಲಾ ಅಧ್ಯಕ್ಷರನ್ನು ಸರಕಾರ ಬಂಧಿಸಿತ್ತು. ಬೆಳವಿ ವಕೀಲರು ವಯೋವೃದ್ಧರಾಗಿರುವುದರಿಂದ ರಾಜೀನಾಮೆ ಕೊಟ್ಟು ಈ ಗೊಂದಲದಿಂದ ಅವರು ಪಾರಾಗಲಿ ಎಂದು ಸರಕಾರ ಪರ್ಯಾಯವಾಗಿ ಸೂಚಿಸಿತ್ತು. ಅದಕ್ಕೆ ಬೆಳವಿಯವರು ಒಪ್ಪುವುದಿಲ್ಲ. 'ತಾನು ವಯೋವೃದ್ಧನಾಗಿರುವುದರಿಂದ ತಾನಾಗಿ ಸತ್ಯಾಗ್ರಹ ಮಾಡಿ ಜೈಲಿಗೆ ಹೋಗುವ ಇಚ್ಛೆಯಿಲ್ಲ ಎಂದು ಆದರೆ ತಾನು ಕಾಂಗ್ರೆಸ್ ಕಮೀಟಿಯ ಅಧ್ಯಕ್ಷನಿದ್ದ ಕಾರಣದಿಂದಲೇ ಸರಕಾರ ಬಂಧಿಸುವದಾದರೆ ಬಂಧಿಸಲಿ ತಾನು ರಾಜೀನಾಮೆ ಕೊಡಲಾರೆ ಎಂದು ಅವರು ಸಾರಿದರು. ಕರ್ನಾಟಕದಲ್ಲಿ ಇದೊಂದೇ ಅಪವಾದ ಎನ್ನುವಂತೆ ಸರಕಾರ ಅವರನ್ನು ಕಡೆಯ ತನಕ ಬಂಧಿಸಲಿಲ್ಲ'. ಬೆಳವಿಯವರ ಹಟಕ್ಕೆ ಸರಕಾರವೇ ಮಣಿದಿದ್ದು ಒಂದು ಅಪರೂಪದ ಸಂಗತಿ.

ಚಳುವಳಿ ಮಾಡಿ ಜೈಲಿಗೆ ಹೋದವರಲ್ಲಿ ಮತಬೇಧ ಹುಟ್ಟಿಸಿ ಅವರು ಒಂದಾಗದಂತೆ ನೋಡಿಕೊಳ್ಳುವ ಕೆಟ್ಟ ಹುನ್ನಾರ ಕಂಪನಿ ಸರಕಾರದ್ದು. ಸೆರೆಮನೆಯಲ್ಲಿ ಬಂಧಿಯಾದ ಕೈದಿಗಳನ್ನು ಗೌರವದಿಂದ ನೋಡಿಕೊಳ್ಳಬೇಕೆಂದು ಸರಕಾರಕ್ಕೆ ಏನೆಲ್ಲ ಎಚ್ಚರಿಕೆ ಕೊಟ್ಟರು. ಸರಕಾರ ಅದನ್ನು

ಗಮನಿಸಲಿಲ್ಲ. ಆ ಕಾರಣಕ್ಕಾಗಿ ಜಿತೇನ್‌ದಾಸ ಎಂಬ ರಾಜಕೀಯ ಕೈದಿ ೬೩ ದಿನಗಳವರೆಗೆ ಉಪವಾಸ ಮಾಡಿ ಹುತಾತ್ಮರಾಗುತ್ತಾರೆ. ಮುಂದೆ ಸರಕಾರದವರು ಎಲ್ಲ ಕೈದಿಗಳಲ್ಲಿಯೂ ವರ್ಗೀಕರಣ ಮಾಡುತ್ತಾರೆ. ಅದಕ್ಕನುಲಕ್ಷಿಸಿ ಈ ಚಳುವಳಿಯಲ್ಲಿ ರಾಜಕೀಯ ಕೈದಿಗಳನ್ನು ಅ.ಬ.ಕ. ಎಂದು ವಿಂಗಡಿಸಿ ಜೈಲಿನಲ್ಲಿ ಬೇರೆ ಇಡಲಾಗಿತ್ತು. ಅವರನ್ನು ನಡೆಸಿಕೊಳ್ಳುವ ರೀತಿ, ಆಹಾರ, ಕೆಲಸ ಮುಂತಾದವುಗಳಲ್ಲೆಲ್ಲ ಬೇರೆ ಬೇರೆ ಕ್ರಮಗಳೇ ಇದ್ದವು. ಜೈಲಿನಲ್ಲಿಯ ಗುನ್ಹೇಗಾರ ಮುಸಲ್ಮಾನ ಕೈದಿಗೆ ಖುರಾನದ ಪುಸ್ತಕವನ್ನು ಓದಲು ಕೊಡುತ್ತಿದ್ದರು. ಆದರೆ ರಾಜಬಂಧಿಯಾದ ಹಿಂದೂ ಕೈದಿಗಳಿಗೆ ಗೀತಾ ಪುಸ್ತಕವನ್ನು ಓದಲು ಕೊಡುತ್ತಿರಲಿಲ್ಲ. ಶ್ರೀ ಜಯದೇವ ಕುಲಕರ್ಣಿ, ಗೋಪಾಳರಾವ ಕಕಮರಿ, ರಾಚಪ್ಪ ಸೋನವಾಳಕರ ಇವರು ಜೈಲಿನಲ್ಲಿ ತಮಗೆ ಗೀತಾ ಪುಸ್ತಕವನ್ನು ಓದಲು ಕೊಡುತ್ತಿರಲಿಲ್ಲವೆಂದು ಹೇಳುತ್ತಾರೆ. ಇವರು ಜೈಲಿನಲ್ಲಿ ತಮಗೆ ಗೀತಾ ಪುಸ್ತಕ ಓದಲು ಬೇಕೆಂದು ಹಠ ಹಿಡಿದರೂ ಸರಕಾರ ಅದನ್ನು ಪೂರೈಸುವುದಿಲ್ಲ. ಇದಲ್ಲದೆ ಈ ಹಿಂದೂಗಳು ಜೈಲಿನಲ್ಲಿ ಪ್ರಾರ್ಥನೆ ಮಾಡಿದರೂ ಕೂಡ ಜೈಲಾಧಿಕಾರಿಗಳು ಅದಕ್ಕೂ ನಿರ್ಬಂಧ ಹೇರುತ್ತಿದ್ದರು. ಹೀಗಾಗಿ ಹಿಂದೂ ಹೋರಾಟಗಾರರು ತಮಗೆ ಗೀತೆ ಬೇಕೆಂದು ೫ ದಿನಗಳವರೆಗೆ ಉಪವಾಸ ಸತ್ಯಾಗ್ರಹವನ್ನು ಕೈಕೊಳ್ಳುತ್ತಾರೆ. ಜೈಲರರು ಅನೇಕ ಬೆದರಿಕೆಗಳನ್ನು ಹಾಕಿದರೂ ಇವರು ಅದಕ್ಕೆ ಹೆದರುವುದಿಲ್ಲ. ಸುಬುದ್ಧಿ ಹಿರೇಮಠ ಎಂಬುವವರಿಗೆ ಫಟಕಿ ಹೊಡೆಯುವ ಬೆದರಿಕೆ ಹಾಕುತ್ತಾರೆ. ಹಿರೇಮಠರು ಅದಕ್ಕೂ ಮಣಿಯುವುದಿಲ್ಲ. ಜೈಲಾಧಿಕಾರಿಯು ಸತ್ಯಾಗ್ರಹಿಗಳ ಕಠೋರ ನಿರ್ಧಾರಕ್ಕೆ ಸೋತು ಸುಮ್ಮನಿರಬೇಕಾಯಿತು. ಕೊನೆಗೆ ಜೈಲಿನಲ್ಲಿ ಪ್ರಾರ್ಥನೆ ಮಾಡುವುದು ನಿರಂತರ ನಡೆಯಿತು.

ಕಂಪನಿ ಸರಕಾರ ಕಾಂಗ್ರೆಸ್ ಅಧಿವೇಶನಗಳಿಗೆ ಬಹಿಷ್ಕಾರ ಹಾಕುತ್ತಿತ್ತು. ಚಳುವಳಿಕಾರರು ಹೇಗಾದರೂ ಮಾಡಿ ಅಧಿವೇಶನದಲ್ಲಿ ಭಾಗವಹಿಸಬೇಕೆಂದು ಪ್ರಯತ್ನಿಸುತ್ತಿದ್ದರು. ೧೯೩೨ರ ಏಪ್ರೀಲ್ ತಿಂಗಳಲ್ಲಿ ದಿಲ್ಲಿಯ ಚಾಂದಿನಿ ಚೌಕದಲ್ಲಿ ಕಾಂಗ್ರೆಸ್ ಅಧಿವೇಶನ ಜರುಗುತ್ತಲಿತ್ತು. ಈ ಅಧಿವೇಶನ ನಡೆಯಬಾರದೆಂದು ಬ್ರಿಟಿಷರು ಏನೆಲ್ಲ ಪ್ರಯತ್ನ ಮಾಡಿದರೂ ಅಧಿವೇಶನ ನಡೆದೆ ಹೋಯಿತು. ಕರ್ನಾಟಕದಿಂದ ೫ ಜನ ಪ್ರತಿನಿಧಿಗಳು ಈ ಅಧಿವೇಶನದಲ್ಲಿ ಭಾಗವಹಿಸಿದ್ದರು. ಇವರೆಲ್ಲರೂ ಬೆಳಗಾವಿ ಜಿಲ್ಲೆಯವರೆ ಸರ್ವಶ್ರೀ ಬಾಬಾಸಾಹೇಬ ಸೋಮಣ್ಣ, ಅಣ್ಣೂ ಗುರೂಜಿ, ರಾವಸಾಹೇಬ ಸತ್ತಿ, ಅಣ್ಣಾಸಾಹೇಬ ಸಿದ್ಧಾಂತಿ, ಶ್ರೀಮತಿ ಅಂಬಕ್ಕ ಬಳೆಗಾರ ಮುಂತಾದವರು ದಿಲ್ಲಿಗೆ ತೆರಳುತ್ತಾರೆ. ಪೋಲೀಸರು ಈ ಐವರನ್ನು ಬಂಧಿಸುತ್ತಾರೆ. ಆದರೆ ಈ ಚಳುವಳಿಕಾರರು ತಾವು ಹರಿದ್ವಾರ, ಋಷಿಕೇಷ ನೋಡಲು ಬಂದ ಯಾತ್ರಿಕರು ಎಂದು ಹೇಳಿ ಬಿಡುಗಡೆ ಹೊಂದಿ ಅಧಿವೇಶನಕ್ಕೆ ಹಾಜರಾಗುತ್ತಾರೆ. ಅಧಿವೇಶನ ಐದು, ಹತ್ತು ನಿಮಿಷ ನಡೆದು ಗೊತ್ತುವಳಿ ಸ್ವೀಕರಿಸಿದ ಬಳಿಕ ವಂದೇ ಮಾತರಂ ಗೀತೆಯಾಗುತ್ತದೆ. ಈ ಗೀತೆಯನ್ನು ಕೇಳಿದ ಕೂಡಲೇ ಪೋಲೀಸರು ಲಾಠಿಚಾರ್ಜ ಮಾಡಿ ಚಳುವಳಿಕಾರರನ್ನು ಚದುರಿಸುತ್ತಾರೆ. ಹೀಗೆ ಬ್ರಿಟಿಷರಿಗೂ ಮತ್ತು ಚಳುವಳಿಕಾರರಿಗೂ ಹೋರಾಟ ನಿರಂತರವಾಗಿ ಸಾಗಿದ್ದನ್ನು ಭಾರತೀಯ ಸ್ವಾತಂತ್ರ್ಯ ಚಳುವಳಿಯ ಪುಟಗಳಲ್ಲಿ ನಾವು ಮೇಲಿಂದ ಮೇಲೆ ಕಾಣುತ್ತೇವೆ.

ಗಾಂಧೀಜಿಯವರ ಮುಖಂಡತ್ವದಲ್ಲಿ ನಡೆಯುತ್ತಿದ್ದ ರಾಷ್ಟ್ರವ್ಯಾಪಿ ಚಳುವಳಿಗೆ ಪೂರಕವಾಗಿ ಬೆಳಗಾವಿಯ ಕುಂದರನಾಡಿನ ಚಳುವಳಿಯು ನಡೆದು ಬಂದಿದೆ. ಗಾಂಧೀಜಿಯವರ ಸಂದೇಶವನ್ನು ಹೃದಯಪೂರ್ವಕ ಒಪ್ಪಿ ಅವರ ವಿಚಾರಗಳನ್ನು ಅನುಷ್ಠಾನಗೊಳಿಸುವಲ್ಲಿ ಈ ಭಾಗದ ಚಳುವಳಿಕಾರರು ಯಶಸ್ಸನ್ನು ಸಾಧಿಸಿದ್ದಾರೆ. ದಿ. ೧೩ ಅಗಷ್ಟ ೧೯೩೨ ರಂದು ಬ್ರಿಟಿಷ ಪ್ರಧಾನಿ ವ್ಯಾಕ ಡೋನಾಲ್ಡನು ಜಾತಿಯ ಪ್ರತಿನಿಧಿತ್ವವನ್ನು ಜಾರಿಗೊಳಿಸಿ ಹರಿಜನರಿಗೆ ಪ್ರತ್ಯೇಕ ಸ್ವತಂತ್ರ ಮತದಾರ ಸಂಘ ಕೊಡಬೇಕೆಂದು ನಿರ್ಣಯ ತೆಗೆದುಕೊಳ್ಳಲಾಯಿತು. ಅವರು ಸಾಮಾನ್ಯ ಮತದಾರ ಸಂಘದಿಂದಲೂ ಮತ್ತು ವಿಶೇಷ ಮತದಾರ ಸಂಘದಿಂದಲೂ ಚುನಾವಣೆಗೆ ಸ್ಪರ್ಧಿಸುವ ಅವಕಾಶವನ್ನು ಕಲ್ಪಿಸಲಾಗಿತ್ತು. ಇದರಿಂದ ಹಿಂದೂ ಸಮಾಜದಿಂದ ಹರಿಜನರನ್ನು ಖಾಯಂ ಆಗಿ ಬೇರ್ಪಡಿಸುವ ದುರುದ್ದೇಶ ಕಂಪನಿ ಸರ್ಕಾರಕ್ಕೆ ಇತ್ತು. ಮುಸ್ಲಿಂ ಲೀಗ ಸಂಘದ ಮುಖಂಡರಾದ ಜಿನ್ನಾರಿಗೆ ಮುಸಲ್ಮಾನ ಮತದಾರ ಸಂಘವನ್ನು ಸ್ವತಂತ್ರ ಮತದಾರ ಸಂಘಕ್ಕೆ ಮುಖಂಡರನ್ನಾಗಿ ಮಾಡಿ ಚುನಾವಣೆ ನಡೆಸುವ ಮೂಲಕ ಆಡಳಿತ ನಡೆಸಬೇಕೆಂಬುದು ಬ್ರಿಟಿಷರ ಉದ್ದೇಶವಾಗಿತ್ತು. ಇದರಿಂದ ಹಿಂದೂಸ್ಥಾನವನ್ನು ವಿಘಟಿಸಿ ಒಡೆದು ಆಳುವ ನೀತಿಯಿಂದಾಗಿ ಭಾರತವನ್ನು ಯಾವ ಕಾಲಕ್ಕೂ ಬಿಟ್ಟು ಹೋಗಬಾರದೆಂಬ ದುರುದ್ದೇಶ ಅವರದಾಗಿತ್ತು. ಇದನ್ನು ಮನಗಂಡು ಗಾಂಧೀಜಿಯವರು ಸಪ್ಟೆಂಬರ ೨೦-೧೯೩೨ ರಂದು ಎರವಡಾ ಜೈಲಿನಲ್ಲಿದ್ದಾಗ ಉಪವಾಸ ಕೈಕೊಂಡರು. ಅವರಿಗೆ ಭಾರತವನ್ನು ಹೀಗೆ ಛಿದ್ರಗೊಳಿಸುವ ಮನಸ್ಸು ಇರಲಿಲ್ಲ. ಸರಕಾರ ವಲ್ಲಭಾಯಿ ಪಟೇಲ, ಮದನಮೋಹನ ಮಾಳ್ವಿಯಾ, ರಾಜಗೋಪಾಲಚಾರ್ಯ, ಡಾ. ಬಿ. ಆರ್. ಅಂಬೇಡ್ಕರ್ ಹರಿಜನ ಮುಖಂಡರು ಮುಂತಾದವರೆಲ್ಲ ಎರವಡಾ ಜೈಲಿಗೆ ಹೋಗಿ ಗಾಂಧೀಜಿಯವರನ್ನು ಭೇಟಿಯಾಗಿ ಉಪವಾಸ ನಿಲ್ಲಿಸಬೇಕೆಂದು ಮನವಿ ಮಾಡಿಕೊಂಡರು. ಗಾಂಧೀಜಿಯವರ ಕಟು ಹಾಗೂ ಸತ್ಯ ನಿರ್ಣಯವನ್ನು ಕಂಡು ಅಂಬೇಡ್ಕರರು ಕೂಡ ಗಾಂಧೀಜಿಯವರ ಅಭಿಪ್ರಾಯಕ್ಕೆ ಸಮ್ಮತಿಯನ್ನು ಸೂಚಿಸಿ ಹರಿಜನರಿಗಾಗಿಯೇ ಪ್ರತ್ಯೇಕ ಮತದಾರ ಸಂಘ ಬೇಡವೆಂಬ ನಿರ್ಣಯಕ್ಕೆ ಬದ್ಧರಾದರು. ೧೯೩೨ರಲ್ಲಿ ಗಾಂಧೀಜಿಯವರು ಕೈಕೊಂಡ ಉಪವಾಸಕ್ಕೆ ಬೆಂಬಲವನ್ನು ಸೂಚಿಸುತ್ತ ಬೆಳಗಾವಿ ಜಿಲ್ಲೆಯ ಹಿಂಡಲಗಾ ಜೈಲಿನಲ್ಲಿದ್ದ ಜಯದೇವ ಕುಲಕರ್ಣಿ ಹಾಗೂ ಗುದ್ಲೆಪ್ಪ ಹಳ್ಳಕೇರಿ ಸಹಿತ ಉಪವಾಸ ಕೈಕೊಳ್ಳುತ್ತಾರೆ. ಭಾರತೀಯ ಸಮಗ್ರ ಚಳುವಳಿಯಲ್ಲಿ ಜರುಗಿದ ಪ್ರತಿಯೊಂದು ಘಟನೆಗಳಿಗೆ ಬೆಳಗಾವಿ ಜಿಲ್ಲೆಯ ಕುಂದರನಾಡು ಸ್ಪಂದಿಸುತ್ತ ಬಂದಿದೆ.

"ಗಾಂಧೀಜಿಯವರು ಸ್ವಾತಂತ್ರ್ಯಕ್ಕೆ ಮಹತ್ವ ಕೊಟ್ಟಂತೆ ಹರಿಜನ ಉದ್ಧಾರಕ್ಕೂ ಅಷ್ಟೇ ಪ್ರಾಶಸ್ತ್ಯವನ್ನು ಕೊಟ್ಟರು. ಹಳ್ಳಿ ಹಳ್ಳಿಗಳಲ್ಲಿ ಸಂಚರಿಸಿ ದಯನೀಯ ಬದುಕನ್ನು ಬದುಕುತ್ತಿರುವ ಹರಿಜನರ ಸ್ಥಿತಿಗತಿಗಳನ್ನು ಕಂಡು ಅವರಿಗೆ ಸಾಮಾಜಿಕ, ಧಾರ್ಮಿಕ, ರಾಜಕೀಯ ಹಾಗೂ ಶೈಕ್ಷಣಿಕ ನೆಲೆ ದೊರಕಬೇಕೆಂದು ಗಾಂಧೀಜಿಯವರು ಪಣತೊಟ್ಟರು. ಈ ಕಾರಣಕ್ಕಾಗಿ ಆತ್ಮ ಶುದ್ಧೀಕರಣದ ಉದ್ದೇಶದಿಂದ ಮೇ ೮/೧೯೩೩ ರಂದು ಗಾಂಧೀಜಿಯವರು ೨೧ ದಿವಸ ಉಪವಾಸ ಮಾಡುತ್ತಾರೆ"[೩]. ಅವರ ಉಪವಾಸದ ೨೧ ದಿನಗಳಲ್ಲಿ ಇಡೀ ದೇಶದಲ್ಲಿ ಹರಿಜನ ಸೇವೆಯ

ಕಾರ್ಯ ಅತ್ಯಂತ ನಿಷ್ಠೆ ಮತ್ತು ಭರದಿಂದ ಸಾಗುತ್ತದೆ. ಗಾಂಧೀಜಿಯವರು ತಮ್ಮ 'ಯಂಗ್ ಇಂಡಿಯಾ' ವಾರ ಪತ್ರಿಕೆಗೆ 'ಹರಿಜನ' ನಾಮಕರಣ ಮಾಡಿ ಪ್ರಚಾರ ನಡೆಸುತ್ತಾರೆ.

ಗಾಂಧೀಜಿ ಪರ್ಣಕುಟಿ ಆಶ್ರಮದಲ್ಲಿ ಉಪವಾಸ ಮಾಡಿದ ಪ್ರಭಾವ ಬೆಳಗಾವಿ ಜಿಲ್ಲೆಯ ಚಳುವಳಿಕಾರರ ಮೇಲೆ ಆಗದೇ ಇರಲಿಲ್ಲ. ಅವರ ಈ ಉಪವಾಸದ ಕಾಲಕ್ಕೆ ಕುಂದರನಾಡಿನ ಶ್ರೀ ವಾಮನರಾವ ಬಿದರಿ, ಅಣ್ಣೂ ಗುರೂಜಿ, ಜಯದೇವ ಕುಲಕರ್ಣಿ, ಶ್ರೀರಂಗ ಕಾಮತ, ಕೇಶವರಾವ ಗೋಖಲೆ, ಬಾಬುರಾವ ಠಾಕೂರ ಮೊದಲಾದವರು ಜಿಲ್ಲೆಯ ಬೇರೆ ಬೇರೆ ಭಾಗಗಳಲ್ಲಿ ಕಾಲು ನಡಿಗೆಯಿಂದ ಸಂಚರಿಸಿ ಹಳ್ಳಿ ಹಳ್ಳಿಗಳಲ್ಲಿ ಅಸ್ಪೃಶ್ಯತಾ ನಿವಾರಣೆಯ ಪ್ರಚಾರ ಮಾಡಿದರು. ಹರಿಜನರಿಗಾಗಿ ಕುಡಿಯುವ ನೀರಿನ ಬಾವಿ, ಕೆರೆ, ದೇವಾಲಯಗಳು ಮುಕ್ತವಾಗುವಂತೆ ಇವರು ಪ್ರಯತ್ನಿಸಿದರು. ಬೆಳಗಾವಿ ಪಟ್ಟಣದಲ್ಲಿ ಹರಿಜನ ಮಂದಿರ ಪ್ರವೇಶ ಕುರಿತು ಚಳುವಳಿ ನಡೆಯಿತು. ಅಣ್ಣೂ ಗುರೂಜಿ, ಜಯದೇವ ಕುಲಕರ್ಣಿ ಮುಂತಾದವರು ಚಿಕ್ಕೋಡಿ, ಅಥಣಿ, ಗೋಕಾಕ, ಬೈಲಹೊಂಗಲ, ಬೆಳಗಾವಿ ತಾಲೂಕುಗಳ ಹಳ್ಳಿಗಳಿಗೆ ಕಾಲ್ನಡಿಗೆಯಿಂದ ಹೋಗಿ ಗಾಂಧೀಜಿಯವರ ಅಸ್ಪೃಶ್ಯತಾ ನಿವಾರಣಾ ಸಂದೇಶವನ್ನು ಮುಟ್ಟಿಸುತ್ತಾರೆ.

"ನಿಪ್ಪಾಣಿಯಲ್ಲಿ ೧೧-೦೫-೧೯೩೩ ರಂದು ಹರಿಜನರನ್ನು ಸವರ್ಣ ಹಿಂದೂಗಳ ಜೊತೆಗೆ ಮೆರವಣಿಗೆಯಲ್ಲಿ ಕೊಂಡೊಯ್ದು ಹಣುಮಂತನ ಗುಡಿಯಲ್ಲಿ ಹರಿಜನ ಪ್ರವೇಶದ ಕಾರ್ಯಕ್ರಮ ಮಾಡಿದ್ದಕ್ಕಾಗಿ ಶ್ರೀ ಅಣ್ಣೂ ಗುರೂಜಿ, ಜಯದೇವ ಕುಲಕರ್ಣಿ, ವಾಸುದೇವರಾವ ಪೆಂಡಸೆ ಇವರಿಗೆ ೩೦ರೂ ದಂಡ ಇಲ್ಲವೇ ೧ ತಿಂಗಳ ಶಿಕ್ಷೆಯಾಯಿತು"[೪೪]. ಅಷ್ಟೊತ್ತಿಗೆ ಅಣ್ಣೂ ಗುರೂಜಿಯವರು ಎರಡೂವರೆ ವರ್ಷ ಶಿಕ್ಷೆಗೆ ಗುರಿಯಾಗಿ ಹಿಂಡಲಗಿ ಜೈಲಿನಲ್ಲಿದ್ದರು.

**ಸಂಯುಕ್ತ ಕರ್ನಾಟಕ :**

ಇಂದು ನಾಡಿನಾದ್ಯಂತ ಹೆಸರು ಮಾಡಿದ ಸಂಯುಕ್ತ ಕರ್ನಾಟಕವೆಂಬ ದಿನಪತ್ರಿಕೆಗೆ ಜನ್ಮಕೊಟ್ಟು ಚಾಲನೆ ನೀಡಿದವರು ಬೆಳಗಾವಿ ಜಿಲ್ಲೆಯ ಹಾಗೂ ಕುಂದರನಾಡಿನ ಚಳುವಳಿಕಾರರು. ಬೆಳಗಾವಿಯಲ್ಲಿ ಡಾ. ಸವಣೂರ ಹಣಮಂತರಾಯರು ಕರ್ನಾಟಕ ಮಿತ್ರವೆಂಬ ಕನ್ನಡ ಸಾಪ್ತಾಹಿಕ ಪತ್ರಿಕೆಯನ್ನು ಕೆಲವು ದಿವಸ ನಡೆಸಿದರು. ಶ್ರೀ ವೆಂಕಟರಾವ ಪಂಡಿತರು ಅರುಣೋದಯವೆಂಬ ವಾರ ಪತ್ರಿಕೆಯನ್ನು ಪ್ರಾರಂಭಿಸಿದರು. ಮುದುಬೀಡು ಕೃಷ್ಣರಾಯರು ತಮ್ಮ ಕರ್ನಾಟಕ ವೃತ್ತ ಮತ್ತು ಧನಂಜಯವೆಂಬ ಸಾಪ್ತಾಹಿಕ ಪತ್ರಿಕೆಯನ್ನು ಕೆಲವು ವರ್ಷ ಬೆಳಗಾವಿಯಲ್ಲಿಯೇ ಆರಂಭಿಸಿದರು. ಶ್ರೀ ದಿವಾಕರ ನಾರಾಯಣರಾವ ಜೋಶಿ, ದಾತಾರ, ಗೋಖಲೆಯವರು ಹಿಂಡಲಗಿ ಜೈಲಿನಲ್ಲಿ ಇರಬೇಕಾಯಿತು. ಆಗ ಸಂಯುಕ್ತ ಕರ್ನಾಟಕ ಸಾಪ್ತಾಹಿಕ ಪತ್ರಕೆಯನ್ನು ಸೈನಿಕ ಪತ್ರಿಕೆಯನ್ನಾಗಿ ಆರಂಭಿಸಬೇಕೆಂಬ ನಿರ್ಣಯವನ್ನು ತೆಗೆದುಕೊಳ್ಳಲಾಯಿತು. ಶ್ರೀಪಾದರಾವ ಕಿತ್ತೂರವರು ಸಂಯುಕ್ತ ಕರ್ನಾಟಕ ಮುದ್ರಣಾಲಯದ ವ್ಯವಸ್ಥಾಪಕರಾಗಿ ಕೆಲಸ ಮಾಡಿದರು. ಶ್ರೀ ಅನಂತರಾವ ಚಿಕ್ಕೋಡಿಯವರು ಸಂಪಾದಕ ಮಂಡಲದಲ್ಲಿದ್ದರು.

"ಕ್ರಿ. ಶ. ೧೯೩೫ ರಲ್ಲಿ ಬ್ರಿಟಿಷ ಸರ್ಕಾರವು ಭಾರತದಲ್ಲಿ ಪ್ರಾಂತೀಯ ಸ್ವಾಯತ್ತತೆಗೆ ಮಹತ್ವವನ್ನು ಕೊಡಬೇಕೆಂಬ ಕಾನೂನನ್ನು ಜಾರಿಗೊಳಿಸಿತು"[೨೯]. ಈ ಪ್ರಾದೇಶಿಕ ಸ್ವಾಯತ್ತತೆಗೆ ಚುನಾವಣೆ ನಡೆಸುವ ಉಪಕ್ರಮವು ಜಾರಿಗೊಂಡಿದ್ದು ಮತದಾನದ ಹಕ್ಕು ರೂ ೮ ರಿಂದ ೩೨ರವರೆಗೆ ತೆರಿಗೆ ತುಂಬುವವರಿಗೆ ಹಾಗೂ ಮ್ಯಾಟ್ರಿಕ್ ಪಾಸ ಆದವರಿಗೆ ಮಾತ್ರ ಇತ್ತು. ಸರಕಾರ ನಿಯುಕ್ತ ಮಂತ್ರಿ ಮಂಡಳಗಳು ರದ್ದಾಗಿ ಲೋಕನಿಯುಕ್ತ ಮಂತ್ರಿ ಮಂಡಲಗಳು ಜಾರಿಯಲ್ಲಿ ಬರತೊಡಗಿದವು. ಈ ಸೂತ್ರವು ಬೆಳಗಾವಿ ಜಿಲ್ಲೆಗೂ ಅನ್ವಯಿಸಿತು. ಬೆಳಗಾವಿ ಜಿಲ್ಲೆಗೆ ಆಗ ಹುಕ್ಕೇರಿ, ಚಿಕ್ಕೋಡಿ, ಅಥಣಿ, ಗೋಕಾಕ ತಾಲೂಕುಗಳ ಉತ್ತರ ಭಾಗಕ್ಕೆ ೩ ಹಾಗೂ ಬೆಳಗಾವಿ, ಖಾನಾಪೂರ, ಬೈಲಹೊಂಗಲ, ಸವದತ್ತಿ ತಾಲೂಕುಗಳ ದಕ್ಷಿಣ ಭಾಗಕ್ಕೆ ೩ ಹೀಗೆ ೬ ಸ್ಥಳಗಳಿದ್ದವು. ಪ್ರತಿಯೊಬ್ಬ ಮತದಾರರಿಗೆ ೩ ಮತಗಳಿದ್ದು, ಅವುಗಳನ್ನು ಆತ ಒಬ್ಬನೇ ಹುರಿಯಾಳುಗಳಿಗೆ ಕೊಡಬಹುದು ಅಥವಾ ಬೇಕಾದವರಿಗೆ ಬೇಕಾದಂತೆ ಹಂಚಿ ಮತದಾನ ಮಾಡಬಹುದಾಗಿತ್ತು. ಶ್ರೀ ನಾರಾಯಣರಾವ ಜೋಷಿ, ಎಮ್. ಪಿ. ಪಾಟೀಲ ಮತ್ತು ಅಣ್ಣಾಸಾಹೇಬ ಲಠ್ಠೆ ಉತ್ತರಭಾಗಕ್ಕೂ ಕೇಶವರಾವ ಗೋಖಲೆ, ಪರಪ್ಪ ಜಕಾತಿ, ಶ್ರೀ ಕೆ. ಎಸ್. ಪಾಟೀಲ ಇವರು ದಕ್ಷಿಣ ಭಾಗಕ್ಕೂ ಕಾಂಗ್ರೆಸ್ ಹುರಿಯಾಳುಗಳೆಂದು ನಿಲ್ಲಿಸಲಾಯಿತು. ಇವರಿಗೆ ವಿರೋಧವಾಗಿ ಉತ್ತರ ಭಾಗಕ್ಕೆ ಶ್ರೀ ಅಂಗಡಿ, ಪಂಡಿತಪ್ಪ ಚಿಕ್ಕೋಡಿ, ಕರಾಳೆ ಮತ್ತು ವರಾಳೆಯವರು ದಕ್ಷಿಣ ಭಾಗಕ್ಕೆ ಲಾಡ್ ವಕೀಲ, ರಂಗುಬಾಯಿ ಭೋಸಲೆ, ಚಚಡಿ ದೇಸಾಯಿ ಇವರು ಸ್ಪರ್ಧಿಸಿದ್ದರು. ಪ್ರಚಾರ ಭರದಿಂದ ಸಾಗಿತ್ತು. ಆಶ್ಚರ್ಯದ ಸಂಗತಿಯೆಂದರೆ ಕಾಂಗ್ರೆಸ್ ಪರವಾಗಿ ಪ್ರಚಾರ ಮಾಡಲು ಆಗ ಪಂಡಿತ ಜವಾಹರಲಾಲ ನೆಹರೂ ಕೂಡ ಈ ಭಾಗಕ್ಕೆ ಬಂದು ಹೋಗಿದ್ದಾರೆ. ಗೀಗಿ ಪದ, ಕೀರ್ತನೆ, ಪ್ರವಚನ ಮುಂತಾದವುಗಳ ಮೂಲಕ ತೀವ್ರವಾದ ಪ್ರಚಾರವನ್ನು ನಡೆಸಲಾಗಿತ್ತು. ತಿಪ್ಪಣ್ಣ ಶಾಸ್ತ್ರೀ ಕಳ್ಳಿ, ಕರಿಗುದರಿ, ಚಿನ್ಮಯ ಸ್ವಾಮಿ ಓಂಕಾರಮಠ ಇವರು ಕೀರ್ತನದ ರಂಗನ್ನು ಹೆಚ್ಚಿಸಿದರೆ ಗಂಗಾಧರರಾವ ದೇಶಪಾಂಡೆ, ನಾರಾಯಣರಾವ ಜೋಷಿ ಲಠ್ಠೆ, ಎಮ್. ಪಿ. ಪಾಟೀಲ, ವಾಮನರಾವ ಬಿದರಿ, ಅಣ್ಣೂ ಗುರೂಜಿ, ಅಪ್ಪಣ್ಣಗೌಡ ಪಾಟೀಲ, ಮಹಾದೇವಪ್ಪ ಮೆಂಡಗುದ್ಲಿ, ಅನಂತರಾವ ಕಟಕೋಳ, ದೇವು ಪಂಡಿತ, ಗುರುಮಾಸ್ತರ ಝುರೆ, ನಾರಾಯಣ ದೇಶಪಾಂಡೆ, ಅನಂತರಾವ ಚಿಕ್ಕೋಡಿ, ಶ್ರೀರಂಗ ಕಾಮತ, ದತ್ತೋಪಂತ ಅಧ್ಯಾಪಕ, ಬಾಪು ಗೋಖಲೆ, ಬಾಬುರಾವ ಠಾಕೂರ, ಪುಂಡಲೀಕಜೀ ಪ್ರಭು ವೆಂಕಟರೆಡ್ಡಿ ಹೂಲಿ, ಬಸಪ್ಪಣ್ಣ ಅರಗಾವಿ, ಚನ್ನಪ್ಪ ವಾಲಿ, ಶಾಂತಿನಾಥ ಇಂಗಳೆ, ಕೇಶವರಾವ ಗೋಖಲೆ ಮೊದಲಾದವರು ವ್ಯಾಖ್ಯಾನದ ಮೂಲಕ ಪ್ರಚಾರ ಮಾಡಿದರು. ಹಗಲು ರಾತ್ರಿ ಎನ್ನದೆ ಪ್ರಚಾರ ಕಾರ್ಯದಲ್ಲಿ ತೊಡಗಿದರಲ್ಲದೆ ಒಂದೊಂದು ದಿನ ೧೫ ಸಭೆಗಳಲ್ಲಿ ಒಬ್ಬೊಬ್ಬರು ಭಾಷಣ ಮಾಡುತ್ತಿದ್ದರು. ದುಡ್ಡು ಶರೆ ಸಿಂಧಿಯ, ಜಾತೀಯತೆಯ ಯಾವ ಆಮಿಷಗಳು ಆಗ ಇರಲಿಲ್ಲ. ಕಾಂಗ್ರೆಸಿಗೆ ಮತ ಕೇಳುವುದೊಂದೆ ಅವರ ಮುಖ್ಯ ಗುರಿಯಾಗಿತ್ತು. ಹೀಗಾಗಿ ಸ್ವಾತಂತ್ರ ಭಾರತದ ಕನಸು ಈ ರಾಷ್ಟ್ರ ನಾಯಕರಲ್ಲಿ ತುಂಬಿಕೊಂಡಿತ್ತು. ಈ ಚುನಾವಣೆಯಲ್ಲಿ ಕಾಂಗ್ರೆಸಿಗೆ ಪ್ರಚಂಡ ಜಯಭೇರಿ ದೊರೆತದ್ದು ಅವರ ಸ್ವಾತಂತ್ರ ಹೋರಾಟದ ಪ್ರತೀಕವೆಂದೇ ಹೇಳಬೇಕು.

## ೪.೪ ಸ್ವಾತಂತ್ರ್ಯ ಚಳುವಳಿ: ಗಾಂಧೀ ಯುಗದ ಬೆಳವಣಿಗೆಗಳು

ಕುಂದರನಾಡಿನ ಹೋರಾಟಗಾರರು ಬ್ರಿಟಿಷರ ವಿರುದ್ಧ ಆಂದೋಲನವನ್ನು ಪ್ರಾರಂಭಿಸಿದ್ದರು. ಸತ್ಯಾಗ್ರಹಿಗಳ ಚಳುವಳಿಯು ತೀವ್ರ ಸ್ವರೂಪವನ್ನು ಪಡೆದಾಗ ಬ್ರಿಟಿಷ ಅಧಿಕಾರಿಗಳು ಮತ್ತು ಪೊಲೀಸರು ಕಂಗಾಲಾದರು. ಸಿಕ್ಕ - ಸಿಕ್ಕಲ್ಲಿ ಚಳುವಳಿಕಾರರನ್ನು ಪೊಲೀಸರು ಬಂಧಿಸತೊಡಗಿದರು. ಅಗಷ್ಟ ೨ನೇ ತಾರೀಖು ಬೆಳಗಾಗುವುದರಲ್ಲಿ ಬೆಳಗಾವಿ ಪಟ್ಟಣದಲ್ಲಿಯ ಹಾಗೂ ಜಿಲ್ಲೆಯ ಕಾರ್ಯಕರ್ತರನ್ನು ಮತ್ತು ಮುಖಂಡರನ್ನು ಬಂಧಿಸಲಾಯಿತು. ಅಗಷ್ಟ ೫ನೇ ತಾರೀಖಿನಂದು ಜಿಲ್ಲಾ ಕಾಂಗ್ರೆಸ್ ಕಮೀಟಿ ಸಭೆಗೆ ಬಂದ ಪ್ರಮುಖ ಕಾರ್‍ಯಕರ್ತರು ತಮ್ಮ ಮುಂಧೋರಣೆಯಿಂದಾಗಿ ಪೋಲಿಸರ ಕೈಗೆ ಸಿಗಲಿಲ್ಲ. ಮಾರ್ಗದರ್ಶನಕ್ಕೆ ಯಾರೂ ಇರದಿದ್ದರೂ ಸ್ವಯಂ ಸ್ಫೂರ್ತಿಯಿಂದ ವಿದ್ಯಾರ್ಥಿ ಮತ್ತು ಜನತೆ ಮುಂದೆ ಬಂದು ಆಂದೋಲನದ 'ಕಣ ಪೂಜೆ' ಮಾಡಿದರು. ಬೆಳಗಾವಿ ಹಾಗೂ ಜಿಲ್ಲೆಯ ತುಂಬ ಅತ್ಯಂತ ಉಗ್ರವಾದ ಹರತಾಳ ಪ್ರಾರಂಭವಾಯಿತು. ದಿನಾಂಕ ೯ರಂದು ಬೆಳಗಾವಿಯಲ್ಲಿ ವಿದ್ಯಾರ್ಥಿಗಳು ಪ್ರಚಂಡ ಮೆರವಣಿಗೆಯನ್ನು ಹೊರಡಿಸಿದರು. ಕೂಡಲೇ ಪೋಲಿಸರು ಲಾಠಿ ಪ್ರಹಾರ ಮಾಡಿ ಸಭೆಯನ್ನು ಚದುರಿಸಿದರು. ಆರ್. ಎಚ್. ಕುಲಕರ್ಣಿ, ಬಳವಂತ ದೀಕ್ಷಿತ, ಮದಸೂಧನ ಮಾಸೂರ, ವೆಂಕಣ್ಣ ಕರಗುಪ್ಪಿ ಮುಂತಾದ ೮೫ ವಿದ್ಯಾರ್ಥಿಗಳನ್ನು ಅಲ್ಲಿ ಬಂಧಿಸಲಾಯಿತು. ಸಾಯಂಕಾಲ ಆರು ಗಂಟೆಗೆ ಶ್ರೀ ಮಾರುತಿ ದೇವಾಲಯದಲ್ಲಿ ದೊಡ್ಡ ಸಭೆ ಸೇರಿತು. ಶ್ರೀ ದಯಾನಂದ ಅರಳಿಕಟ್ಟಿ, ಶಂಕರಕೃಷ್ಣ ಗಾವಡೆ ಮೊದಲಾದವರು ಭಾಷಣ ಪ್ರಾರಂಭಿಸುವಾಗಲೇ ಪೋಲೀಸರು ಅವರನ್ನು ಬೆದರಿಸಿ ಲಾಠಿ ಪ್ರಹಾರ ಮಾಡಿದರು.

ಚಲೇಜಾವ ಚಳುವಳಿಯನ್ನು ಹಬ್ಬಗೊಡಬಾರದೆಂದು ಸರಕಾರ ಸಕಲ ಉಪಾಯಗಳನ್ನು ಮಾಡಿತು. ಅಗಷ್ಟ ಒಂದನೇ ವಾರದ ಕೊನೆಗೆ ಮತ್ತು ಎರಡನೇ ವಾರದಲ್ಲಿ ಅಲ್ಲಲ್ಲಿ ಸಭೆ, ಪ್ರಭಾತಪೇರಿ, ಮೆರವಣಿಗೆ ನಡೆದವು. ಪೊಲೀಸರು ಜನರನ್ನು ಬಂಧಿಸಿ ಲಾಠಿಯಿಂದ ಹೊಡೆದು ಗುಂಡು ಹಾರಿಸಿ ಚಳುವಳಿಯನ್ನು ಹತ್ತಿಕ್ಕುವ ಪ್ರಯತ್ನವನ್ನು ಮಾಡಿದರು. ಆದರೆ ಜನರಲ್ಲಿ ಹುದುಗಿದ ಸ್ವಾತಂತ್ರ್ಯದ ಪ್ರಬಲ ಇಚ್ಛೆಯು ಬೇರೆ ಸ್ವರೂಪವನ್ನೇ ಪಡೆಯಿತು.

ಕುಂದರನಾಡಿನ ಪ್ರಮುಖ ಹೋರಾಟಗಾರರಾದ ಗಂಗಾಧರರಾವ್ ದೇಶಪಾಂಡೆಯವರು ರಾಮಚಂದ್ರ ವಡವಿ, ಪುಂಡಲೀಕ ಖಾತಗಡೆ, ಗಂಗಪ್ಪಾ ಯಮಕನಮರಡಿ, ಮೋಹನ ಯಮಕನಮರಡಿ, ಅಣ್ಣೂ ಗುರೂಜಿ, ಯಾಳಗಿ, ಭದ್ರಕಾಳಿ ಮುಂತಾದವರಿಗೆ ಮಾರ್ಗದರ್ಶಕರಾಗಿದ್ದರು. ೧೯೪೨ ರಲ್ಲಿ ಜರುಗಿದ ಕುಂದರನಾಡಿನ ಆಂದೋಲನದ ಘಟನೆಗಳನ್ನು ರಾಮಚಂದ್ರ ವಡವಿಯವರು ವಿವರಿಸಿದ್ದಾರೆ. ಅವರು ಜೈಲಿನಲ್ಲಿ ಅನುಭವಿಸಿದ ಘಟನೆಗಳು, ಪೊಲೀಸರಿಂದ ತಪ್ಪಿಸಿಕೊಂಡ ಅನುಭವಗಳು ಕುಂದರನಾಡಿನ ಚರಿತ್ರೆಯಲ್ಲಿ ದಾಖಲಾಗಿವೆ.

ಈ ಆಂದೋಲನದಲ್ಲಿ ಬಹಳಷ್ಟು ಕಾಂಗ್ರೆಸ್ ಕಾರ್ಯಕರ್ತರಿಗೆ ಒಂದು ವರ್ಷ ಎರಡು ವರ್ಷ ಶಿಕ್ಷೆಯಾಯಿತು. ಆದರೆ ಈ ಚಳುವಳಿಯಲ್ಲಿ ಸಕ್ರೀಯವಾಗಿ ಭಾಗವಹಿಸಿದ ಶ್ರೀ ರಾಮಚಂದ್ರ ವಡವಿ ಅವರಿಗೆ ಕೇವಲ ನಾಲ್ಕು ತಿಂಗಳು ಶಿಕ್ಷೆಯಾಯಿತು. ವಡವಿ ಅವರು ಬಿಡುಗಡೆಯಾಗಿ ಜೈಲಿನಿಂದ ಹೊರಗೆ ಬಂದಾಗ ಯಾವ ಕಾಂಗ್ರೆಸ್ಸ ಮುಖಂಡರು ಹೊರಗೆ ಇರಲಿಲ್ಲ. ಶ್ರೀ ಕೃಷ್ಣರಾವ್ ಯಾಳಗಿ ಅವರು ಮಾತ್ರ ಜೈಲಿನಿಂದ ಹೊರಗೆ ಇದ್ದರು. ಇವರು ತಮ್ಮ ಸರಾಫ ಅಂಗಡಿಯಲ್ಲಿ ಕುಳಿತುಕೊಂಡೇ ಕಾಂಗ್ರೆಸಿನ ಎಲ್ಲ ನಾಯಕರಿಗೆ ಸಲಹೆ ಸೂಚನೆಗಳನ್ನು ಕೊಡುತ್ತಿದ್ದರು. ಮತ್ತು ಆರ್ಥಿಕ ಸಹಾಯವನ್ನೂ ನೀಡುತ್ತಿದ್ದರು. ಆದರೆ ವೇದಿಕೆಯ ಮೇಲೆ ಹೋಗಿ ಎಂದೂ ಭಾಷಣ ಮಾಡುತ್ತಿರಲಿಲ್ಲ. ಆದ್ದರಿಂದ ಪೊಲೀಸರ ಕಣ್ಣು ಇವರ ಮೇಲೆ ಇರಲಿಲ್ಲ. ವಡವಿ ಅವರಿಗೆ ಮುಂದೇನು ಮಾಡಬೇಕೆಂದು ಸಲಹೆ ಸೂಚನೆಗಳನ್ನು ಯಾಳಗಿ ಅವರೇ ಕೊಡುತ್ತಿದ್ದರು.

ಯಾಳಗಿಯವರು ಚಾಣಾಕ್ಷತನದಿಂದ ಕಾಂಗ್ರೆಸ್ಸ ಕಾರ್ಯಕರ್ತರು ಮಾಡಬೇಕಾದ ಕಾರ್ಯಗಳನ್ನು ತಿಳಿಸುತ್ತಿದ್ದರು. "ಜೈಲಿನ ಹೊರಗಿದ್ದು ಸಂಘಟನೆ ಮಾಡಿ ಕಾಂಗ್ರೆಸ್ಸ ಕಾರ್ಯಕ್ರಮಗಳನ್ನು ಮುಂದುವರಿಸುವುದು ಒಳ್ಳೆಯದು. ಹೀಗೆ ಕೆಲಸ ಮಾಡುವಾಗ ನೀವು ಬಂಧಿಸಲ್ಪಟ್ಟರೆ ಆಗ ಜೈಲಿಗೆ ಹೋಗಿರಿ. ನೀವಾಗಿಯೇ ಕಾರ್ಯಕ್ರಮ ಮಾಡಿ ಹೋಗುವುದು ಬೇಡ"[೨೬] ಎಂದು ಯಾಳಗಿಯವರು ಹೇಳಿದ ಈ ಮಾತು ವಡವಿಯವರಿಗೆ ಸರಿ ಎಂದು ತೋರಿತು. ಅವರು ಹೊರಗೆ ನಿಂತುಕೊಂಡು ಗುಪ್ತವಾಗಿಯೇ ಸಾಕಷ್ಟು ಕೆಲಸವನ್ನು ಮಾಡಿದರು. ಅವುಗಳಲ್ಲಿಯ ಒಂದೆರಡು ಘಟನೆಗಳನ್ನು ಇಲ್ಲಿ ಉದಾಹರಣೆಯಾಗಿ ಕಾಣಬಹುದು.

ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರೀಯವಾಗಿ ವಡವಿಯವರು ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು. ಇವರ ನಿರಂತರ ಹೋರಾಟವನ್ನು ಗಮನಿಸಿದ ಬ್ರಿಟಿಷ ಸರಕಾರ ಇವರನ್ನು ಬಂಧಿಸಿತ್ತು. "ಜೈಲಿನಲ್ಲಿ ವಡವಿಯವರನ್ನು 'ಬಿ' ಕ್ಲಾಸಿನಿಂದ 'ಸಿ' ಕ್ಲಾಸಿಗೆ ತರುತ್ತಾರೆ. ಇವರಂತೆ ಇನ್ನೂ ಅನೇಕ ಜನರನ್ನು ತಂದು ಕೂಡಿ ಹಾಕುತ್ತಾರೆ. ಅವರಲ್ಲಿ ವಡವಿಯವರ ಮಿತ್ರರಾದ ಪುಂಡಲೀಕಜಿ, ವಾಮನರಾವ್ ದೇಸಾಯಿ, ಬಾ. ಯ. ದೇಶಪಾಂಡೆ (ಅಣ್ಣೂ ಗೂರುಜಿ) ಮುಂತಾದವರಿದ್ದರು. ಈ ಬರಾಕಿನಲ್ಲಿದ್ದವರಿಗೆ ಬ್ರಿಟಿಷ ಅಧಿಕಾರಿಗಳು ಜಮಖಾನೆ ನೇಯುವ ಕೆಲಸವನ್ನು ಒಪ್ಪಿಸಿದ್ದರು. ಜೈಲ್ ಸುಪರಿಂಟೆಂಡೆಂಟರು ಒಂದು ನಿಯಮ ಮಾಡಿದ್ದರು 'ಒಂದೇ ಊರ ರಾಜಕೀಯ ಕೈದಿಗಳನ್ನು ಒಂದೇ ಬರಾಕಿನಲ್ಲಿ ಇಡಬಾರದು. ಮತ್ತು ಅವರಿಗೆ ಒಂದೇ ಕೆಲಸವನ್ನು ಕೊಡಬಾರದು' ಆದರೆ ಈ ನಾಲ್ಕೂ ಜನರನ್ನು ಒಂದೇ ಬರಾಕಿನಲ್ಲಿಟ್ಟು ಎಲ್ಲರಿಗೂ ಒಂದೇ ಕೆಲಸವನ್ನು ಕೊಟ್ಟಿದ್ದರು"[೨೭]. ಅದಕ್ಕೆ ಕಾರಣವೆಂದರೆ ಅವರ ಹಿಸ್ಟರಿ ಪುಸ್ತಕದಲ್ಲಿ ಅವರ ಊರುಗಳ ಹೆಸರುಗಳು ಬೇರೆ ಬೇರೆಯಾಗಿದ್ದವು. ರಾಮಚಂದ್ರ ಅವರ ಊರು ವಡವಿ, ಪುಂಡಲೀಕಜಿ ಅವರದು ಮಿರಜ, ಅಣ್ಣೂ ಗುರೂಜಿ ಅವರದು ಪಾಶ್ಚಾಪೂರ, ವಾಮನರಾಯರದು ಬಿದರಿ. ಆದರೆ ಇವರೆಲ್ಲರೂ ಒಂದೇ ಧ್ಯೇಯಕ್ಕಾಗಿ ದುಡಿಯುತ್ತಿದ್ದುದು ಜೈಲ ಅಧಿಕಾರಿಗೆ ಗೊತ್ತಿರಲಿಲ್ಲ.

"ಜೈಲ ಅಧಿಕಾರಿಯು ಚಳುವಳಿಗಾರರಾದ ಈ ನಾಲ್ಕೂ ಜನಂಗೆ ಕೂಡಿ ಒಂದೇ ಜಮಖಾನೆಯನ್ನು ನೇಯಲು ಒಂದೇ ಮಗ್ಗವನ್ನು ಕೊಟ್ಟಿದ್ದರು. ಇವರು ಜಮಖಾನೆ ನೇಯಲು ಹೋದಾಗ ಆ ಕೆಲಸವನ್ನೇನು ಮಾಡುತ್ತಿರಲಿಲ್ಲ. ಅದರ ಬದಲಾಗಿ ಪುಂಡಲೀಕಜಿಯವರು ಇವರಿಗೆಲ್ಲ ಗೀತಾ ರಹಸ್ಯ ಹೇಳುತ್ತಿದ್ದರು. ಅದರ ಜೊತೆಗೆ ರಾಜಕೀಯ ಮತ್ತು ಸಾಮಾಜಿಕ ಸಂಗತಿಗಳನ್ನೂ ಚರ್ಚಿಸುತ್ತಿದ್ದರು. ಜೈಲು ಸುಪರಿಂಟೆಂಡೆಂಟರಾದ ಪ್ಲಾಂಕೆಟ್ ಅವರು ಮೇಲಿಂದ ಮೇಲೆ ತಪಾಸಣೆಗೆ ಬರುತ್ತಿದ್ದರು"[೨೮]. ಆದರೆ ಜೈಲ್ ಅಧಿಕಾರಿಗೆ ಜೈಲಿನಲ್ಲಿದ್ದ ಇವರ ಕಡೆ ಗಮನವಿರುತ್ತಿರಲಿಲ್ಲ. "ಒಂದು ದಿವಸ ಯಾರೊ ಒಬ್ಬರು ಮೇಣದ ಚೋಳು ಮಾಡಿ ಇವರ ಮಗ್ಗದ ಹತ್ತಿರ ಗೋಡೆಗೆ ಅಂಟಿಸಿದ್ದರು. ಅದು ನಿಜವಾದ ಚೇಳಿನಂತೆ ಕಾಣುತ್ತಿತ್ತು. ಪ್ಲಾಂಕೆಟ್ ರ ದೃಷ್ಟಿ ಆ ಚೇಳಿನ ಕಡೆಗೆ ಬೀಳುತ್ತದೆ. ಆಗ ಅವರು ತಮ್ಮ ಕೈಯೊಳಗಿನ ಬಡಿಗೆಯಿಂದ ಛೇಳನ್ನು ಬಡಿಯುತ್ತಾರೆ. ಆ ಹೊಡೆತ ಚೇಳಿಗೆ ಬಡಿಯದೆ ಪಕ್ಕದ ಗೋಡೆಗೆ ತಾಕಿತು. ಅಷ್ಟರಲ್ಲಿ ಮೇಣದ ಚೇಳು ಕೆಳಗೆ ಬಿದ್ದಿತು. ಆಗ ಪುಂಡಲಿಕಜೀ ಅವರು ಅದು ನಿಜವಾದ ಚೇಳು ಅಲ್ಲ ಮೇಣದಿಂದ ಮಾಡಿದ್ದು ಎಂದು ಹೇಳುತ್ತಾರೆ. ಪ್ಲಾಂಕೆಟ್ ಅವರು ಚೇಳನ್ನು ನೋಡುವುದನ್ನು ಬಿಟ್ಟು ಇವರ ಮಗ್ಗದ ಕಡೆ ಗಮನ ಹರಿಸಿದರು. ಅಲ್ಲದೇ ಈ ನಾಲ್ವರನ್ನು ನೋಡಿ ನೀವು ಜಮಖಾನೆಯನ್ನು ಎಷ್ಟು ನೇಯ್ದಿರುವಿರಿ? ಎಂದು ಕೇಳುತ್ತಾರೆ. ಆಗ ಇವರು ಕೇವಲ ಮೂರು ಇಂಚು ನೇಯ್ದಿರುತ್ತಾರೆ. ಇದನ್ನು ಕೇಳಿದ ಜೈಲರಿಗೆ ಆಶ್ಚರ್ಯವಾಗುತ್ತಿದೆ. ಆಗ ಜೈಲರನು ಎಷ್ಟು ದಿನಗಳಿಂದ ನೇಯುತ್ತಿರುವಿರಿ? ಎಂದು ಕೇಳುತ್ತಾನೆ. ಅದಕ್ಕೆ ಇವರ ಉತ್ತರ ಎರಡು ತಿಂಗಳು ಎಂದಾಗಿತ್ತು. ಈ ಮಾತನ್ನು ಕೇಳಿ ನಾಲ್ವರೂ ಕೂಡಿ ಎರಡು ತಿಂಗಳುಗಳವರೆಗೆ ಕೇವಲ ಮೂರು ಇಂಚು ಜಮಖಾನೆಯನ್ನು ನೇಯ್ದದ್ದು ಕೇಳಿ ಜೈಲರನಿಗೆ ಆಶ್ಚರ್ಯ ಉಂಟಾಗುತ್ತದೆ"[೨೯]. ಆದ್ದರಿಂದ ಜೈಲರ್ ನಿಮಗೆಲ್ಲ 'ದೊಡ್ಡ ನಮಸ್ಕಾರ' ಎಂದು ಹೇಳಿ ಈ ನಾಲ್ವರನ್ನು ಬೇರೆ ಬೇರೆ ಬರಾಕುಗಳಲ್ಲಿ ಇಡುವಂತೆ ಸೂಚಿಸಿ ಹೋಗುತ್ತಾರೆ. ಸ್ವಾತಂತ್ರ್ಯ ಹೋರಾಟಗಾರರಾದ ಇವರಿಗೆ ನೇಯುವುದು ಮುಖ್ಯವಲ್ಲ; ಸ್ವಾತಂತ್ರ್ಯ ಮತ್ತು ಸಾಮಾಜಿಕ ಚಿಂತನ ಮುಖ್ಯವಾಗಿರುವುದರಿಂದ ಇವರ ಮನಸ್ಸು ಅತ್ತಲೇ ತುಡಿಯುತ್ತಲಿತ್ತು.

ಬಿಡುಗಡೆಯಾಗಿ ಹೊರಗೆ ಬಂದ ರಾಮಚಂದ್ರ ವಡವಿಯವರನ್ನು ಗಂಗಾಧರರಾಯರು ನೀವು ಇನ್ನೇನು ಮಾಡುವಿರಿ? ಎಂದು ಕೇಳಿದಾಗ ವಡವಿಯವರು ನೀವು ಹೇಳಿದನ್ನು ಮಾಡುತ್ತೇನೆ ಎಂದರಂತೆ. ಗಂಗಾಧರರಾಯರು ಸೂಚಿಸಿದ ಮೇರೆಗೆ ರಾಮಚಂದ್ರ ವಡವಿಯವರು ಅಂಕೋಲೆಯ ಕರ ನಿರಾಕರಣೆಯ ಆಂದೋಲನದಲ್ಲಿ ಭಾಗವಹಿಸುತ್ತಾರೆ. ಇವರು ಅಂಕೋಲೆಗೆ ಬಂದು ಶ್ರೀ ದ. ಪ. ಕರಮರಕರ್ ಅವರ ಮುಂದಾಳತ್ವದಲ್ಲಿ ಅಂಕೋಲೆಯ ಸುತ್ತಮುತ್ತ ನಡೆಯುವ ಸ್ವಾತಂತ್ರ್ಯ ಚಳುವಳಿಯ ರೂಪರೇಷ ಹಾಕುತ್ತಿದ್ದರು. ವಡವಿಯವರು ಸುರ್ವೆ ಭಾಗದಲ್ಲಿ ಕೆಲಸ ಮಾಡಲು ನಿಯುಕ್ತಗೊಂಡ ಬಳಿಕ ಅದೇ ಊರಲ್ಲಿ ಶ್ರೀ ನಾರಾಯಣ ನಾಯಕರ್ ಅವರ ಮನೆಯಲ್ಲಿ ಇರತೊಡಗಿದರು. ನಾಯಕರರು ಅಲ್ಲಿಯ ಪ್ರತಿಷ್ಠಿತ ಗೃಹಸ್ಥರು. ಸರಕಾರಿ ನೌಕರರಿಗೂ ಅವರ ಬಗ್ಗೆ ಆದರವಿತ್ತು. ಅಲ್ಲಿದ್ದುಕೊಂಡು ಎರಡು ಮೂರು ತಿಂಗಳವರೆಗೆ ಕೆಲಸ ಕಾರ್ಯ ಮಾಡಿದರು.

ಹೀಗೆ ವಡವಿಯವರು ಗಂಗಾಧರರಾವ್ ದೇಶಪಾಂಡೆಯವರ ಮಾರ್ಗದರ್ಶನದ ಮೇರೆಗೆ ನಾಡಿನ ತುಂಬ ಸಂಚರಿಸಿ ಜನರಲ್ಲಿ ಸ್ವಾತಂತ್ರದ ಕಿಚ್ಚು ಹಚ್ಚುವ ಪ್ರಯತ್ನವನ್ನು ರಾಮಚಂದ್ರ ವಡವಿಯವರು ಮಾಡುತ್ತಾರೆ.

ಬ್ರಿಟಿಷ ಸರಕಾರಕ್ಕೆ ಘಟ್ಟದ ಮೇಲಿನ ಜನರಿಂದಲೇ ಈ ಚಳುವಳಿ ನಡೆದಿದೆ ಎಂದು ಗೊತ್ತಾದ ಬಳಿಕ ಪೋಲೀಸರಿಗೆ ನಿಗಾ ಇಡಲು ಅವರು ಸೂಚಿಸುತ್ತಾರೆ. ಊರಲ್ಲಿ ಯಾವುದಾದರೂ ಹೊಸ ಮುಖ ಕಂಡರೆ ಕೂಡಲೇ ಪೊಲೀಸರು ಅವರನ್ನು ಬಂಧಿಸುತ್ತಿದ್ದರು. ಊರಿನವರು ಸ್ವಾತಂತ್ರ್ಯ ಹೋರಾಟಗಾರರನ್ನು ಅಡಗಿಸಿ ಇಡುತ್ತಿದ್ದರು. ಆದರೆ ಒಂದು ದಿನ ರಾಮಚಂದ್ರ ವಡವಿಯವರು ಪೊಲೀಸರ ಕೈಗೆ ಸಿಕ್ಕಿಕೊಳ್ಳುತ್ತಾರೆ. ಪೊಲೀಸರು ಅವರನ್ನು ಕರೆದುಕೊಂಡು ಹೋದ ಸುದ್ದಿ ನಾರಾಯಣರಿಗೆ ತಿಳಿದ ಕೂಡಲೆ ಅವರು ಪೊಲೀಸರ ಪತ್ತಿರ ಬಂದು "ಈತನನ್ನು ಏಕೆ ಹಿಡಿದಿದ್ದೀರಿ ? ಇವನು ನಮ್ಮ ಮನೆಯ ದೇವರ ಪೂಜೆಯನ್ನು ಮಾಡಲು ಬಂದಿದ್ದಾನೆ. ಈತನು ಘಟ್ಟದ ಮೇಲಿನ ಹೆಗಡೆ ರಾಮಭಟ್ಟ. ಅವರ ತಂದೆ ಕಾಯಿಲೆ ಬಿದ್ದುದರಿಂದ ಈ ಹುಡುಗನನ್ನು ಕಳುಹಿಸಿಕೊಟ್ಟಿದ್ದಾರೆ"[೩೦] ಎಂದು ಹೇಳುತ್ತಾರೆ. ಪೊಲೀಸರು ನಾಯಿಕರ ಮಾತನ್ನು ಕೇಳಿ ರಾಮಭಟ್ಟನೆಂದೇ ನಂಬಿ ವಡವಿಯವರನ್ನು ಬಿಡುತ್ತಾರೆ. ಹೀಗೆ ಬ್ರಿಟಿಷರ ವಿರುದ್ಧ ಹೋರಾಡುವ ಸಂದರ್ಭದಲ್ಲಿ ನಮ್ಮ ಚಳುವಳಿಕಾರರು ವೇಷವನ್ನು ಬದಲಾಯಿಸಿಕೊಂಡು ಬ್ರಿಟಿಷ ಅಧಿಕಾರಿಗಳಿಗೆ ಚಳ್ಳೆ ಹಣ್ಣು ತಿನಿಸಿದ್ದಾರೆ.

ಸ್ವಾತಂತ್ರ್ಯ ಚಳುವಳಿಗಾರರು ಅನೇಕ ಸಲ ಪೊಲೀಸರ ಕೈಯಿಂದ ತಪ್ಪಿಸಿಕೊಂಡು ಜಾಣತನದಿಂದ ಚಳುವಳಿಯನ್ನು ಮುಂದುವರೆಸಿದ್ದಾರೆ. ಸಾಮಾನ್ಯವಾಗಿ ಬಹಳಷ್ಟು ಚಳುವಳಿಕಾರರು ಪ್ರಾಣದ ಹಂಗು ತೊರೆದು ನಾನಾ ಕಷ್ಟಗಳನ್ನು ಅನುಭವಿಸಿ ಚಳುವಳಿಯನ್ನು ಮಾಡಿದ್ದಾರೆ. ಆ ಎಲ್ಲ ಚಳುವಳಿಕಾರರು ಅನುಭವಿಸಿದ ನೋವು–ಸಂಕಟಗಳನ್ನು ರಾಮಚಂದ್ರ ವಡವಿಯವರಲ್ಲಿ ನಾವು ಕಾಣಬಹುದು. ರಾಮಚಂದ್ರ ವಡವಿಯವರು ಅನುಭವಿಸಿದ ಸಮಗ್ರ ಅನುಭವವನ್ನು ಉದಾಹರಣೆಯಾಗಿ ಇಲ್ಲಿ ವಿವರಿಸಲಾಗಿದೆ. ರಾಮಚಂದ್ರ ವಡವಿ ಒಮ್ಮೆ ಘಟ್ಟದ ಪೂಜಾರಿಯಾದರೆ ಮತ್ತೊಮ್ಮೆ ಗೌಳಿಗನ ವೇಷದಿಂದ ಪಾರಾದ ಪ್ರಸಂಗವು ಅತ್ಯಂತ ಸ್ವಾರಸ್ಯಕರವಾಗಿದೆ. ವಡವಿಯವರ ಮೇಲೆ ಪೊಲೀಸರ ಕಣ್ಣು ಸದಾ ಇರುತ್ತಿತ್ತು. ಆ ಕಾರಣಕ್ಕಾಗಿ ಒಂದೇ ಸ್ಥಳದಲ್ಲಿದ್ದರೆ ಪೋಲೀಸರಿಗೆ ಸುಳಿವು ಹತ್ತಿ ಅವರನ್ನು ಹಿಡಿಯಬಹುದೆಂದು ತಿಳಿದು ಅವರು ಸ್ಥಳ ಬದಲಾಯಿಸುತ್ತಿದ್ದರು. ಒಮ್ಮೆ ಟಿಳಕವಾಡಿಯ ಶ್ರೀ ಜೀವನರಾಯ ಯಾಳಗಿಯವರ ಮನೆಯಲ್ಲಿದ್ದಾಗ ಒಂದು ವಿಚಿತ್ರ ಘಟನೆ ಸಂಭವಿಸುತ್ತದೆ. ಜೀವನರಾಯರು ಸೆರೆಮನೆಯಲ್ಲಿದ್ದಾಗ ಅವರ ಪತ್ನಿ ಸೌ. ರಮಕ್ಕ ಒಬ್ಬರೇ ಮನೆಯಲ್ಲಿದ್ದರು. ಬೆಳಗ್ಗೆ ಸುಮಾರು ಎಂಟು ಘಂಟೆಯಾಗಿರಬಹುದು. ಗೌಳಿಗ ಬಂದು ಹಾಲು ಕೊಡುತ್ತಿದ್ದ. ಆಗ ವಡವಿಯವರು ಅಲ್ಲೇ ನಿಂತಿದ್ದರು. ಅಷ್ಟರಲ್ಲಿ ನಾಲ್ಕಾರು ಜನ ಪೊಲೀಸರು ಗೇಟಿಗೆ ಬಂದು ಚಳುವಳಿಕಾರರನ್ನು ಶೋಧಿಸುತ್ತಿದ್ದರು. ವಡವಿಯವರಿಗೆ ಈಗ ಸಂಕಟ. ಪೊಲೀಸರ

ಕೈಗೆ ಸಿಕ್ಕರೆ ಏನು ಮಾಡುವುದು? ತಟ್ಟನೆ ಅವರಿಗೆ ವಿಚಾರ ಹೊಳೆಯಿತು. ಗೌಳಿಗನನ್ನು ನಿಲ್ಲಿಸಿ ಅವನು ತೊಟ್ಟಿರುವ ಕೋಟು ರುಮಾಲನ್ನು ಕೇಳಿ ಪಡೆದುಕೊಂಡು ಗೌಳಿಗನ ವೇಷಧರಿಸಿ ಆತನದೇ ಆದ ಎರಡು ಹಾಲಿನ ಪಾತ್ರೆಗಳನ್ನು ಸೈಕಲ್ಲಿಗೆ ತೂಗು ಹಾಕಿಕೊಂಡು ಪೊಲೀಸರ ಎದುರೇ ಹೊರಟು ಹೋಗುತ್ತಾರೆ. ಇದಾದ ಕೆಲವು ಸಮಯದ ನಂತರ ಪೋಲೀಸರು ಆ ಮನೆಯೊಳಗೆ ಪ್ರವೇಶಿಸಿ ಅತ್ತ ಇತ್ತ ಹುಡುಕುತ್ತಾರೆ. ಅಷ್ಟರಲ್ಲಿ ಗೌಳಿಗ ಬಂದು ಕುಳಿತಿದ್ದ. ಈತನಾರು ಎಂದು ಪೊಲೀಸರು ಸೌ. ರಮಕ್ಕ ಅವರನ್ನು ಕೇಳುತ್ತಾರೆ. ಆಗ ರಮಕ್ಕ 'ಈತ ನಮ್ಮ ಮನೆಗೆ ಹಾಲು ಕೊಡುವ ಗೌಳಿ' ಎಂದು ಹೇಳುತ್ತಾರೆ. ಸೈಕಲ್ ಮೇಲಿಂದ ಈಗ ಒಬ್ಬ ಗೌಳಿ ಹೋದನಲ್ಲಾ? ಎಂದು ಪೋಲೀಸರು ಮತ್ತೆ ಕೇಳಿದಾಗ ರಮಕ್ಕ 'ಒಬ್ಬ ಗೌಳಿಯಿಂದ ನಮ್ಮ ಮನೆಗೆ ಹಾಲು ಸಾಲುವುದಿಲ್ಲ. ಇಬ್ಬರು ಮೂವರು ಗೌಳಿಗರು ಹಾಲು ಕೊಡುತ್ತಾರೆ' ಎಂದು ಹೇಳುತ್ತಾಳೆ. ಇದನ್ನು ಕೇಳಿ ಪೊಲೀಸರು ಬೆಪ್ಪಾಗಿ ಬಂದ ದಾರಿಗೆ ಸುಂಕವಿಲ್ಲ ಎಂದು ಹೊರಟು ಹೋಗುತ್ತಾರೆ.

ಸ್ವಾತಂತ್ರ್ಯ ಚಳುವಳಿಕಾರರು ಗುಪ್ತವಾಗಿ ಚಳುವಳಿಯ ಸುದ್ಧಿಯನ್ನು ಪತ್ರಿಕೆಯ ಮೂಲಕ ಹೊರಹಾಕುತ್ತಿದ್ದರು. 'ನವವಾ ಮಹಿನಾ ಬುಲಿಟಿನ್' ಮತ್ತು ಕುಮರಿ ಆಶ್ರಮದ ಮೇಲಿನ ದಾಳಿ ಇವೆರಡೂ ಸಂಗತಿಗಳು ಕಲೆಕ್ಟರ್‌ರ ಕೋಪವನ್ನು ಇಮ್ಮಡಿಗೊಳಿಸಿತು. ಎಲ್ಲ ಕಡೆಯಲ್ಲೂ ಚಳುವಳಿ ಸ್ತಬ್ಧ ಇರುವಾಗ ಬೆಳಗಾವಿಯಲ್ಲಿ ಚಳುವಳಿಯು ಜೋರಾಗಿರುವುದು ಕಲೆಕ್ಟರ್‌ಗೆ ಆಶ್ಚರ್ಯದ ಸಂಗತಿ ಎನಿಸಿತ್ತು. ಈ ಚಳುವಳಿಯ ಹಿಂದೆ ಯಾರಿದ್ದಾರೆ? ಬುಲೆಟಿನ್ ಎಲ್ಲಿಂದ ಹೊರಡುತ್ತದೆ? ಎಂಬುದನ್ನು ಪತ್ತೆ ಹಚ್ಚಬೇಕೆಂದು ಪೋಲೀಸರಿಗೆ ತಾಕೀತು ಮಾಡಿ ತಾನೂ ಆ ಪ್ರಯತ್ನದಲ್ಲಿ ಮುಂದುವರೆದನು. ಇವರ ದೀರ್ಘ ಪ್ರಯತ್ನದಿಂದಾಗಿ ಶಹಾಪುರದಲ್ಲಿ ಶ್ರೀ ಬಾಳೆಕುಂದರಗಿ ಅಥವಾ ಗಾವಡೆಯವರ ಮನೆಯಿಂದ ಬುಲೆಟಿನ್ ಹೊರಡುತ್ತಿದೆ ಎಂದು ಗೊತ್ತಾಗುತ್ತದೆ. ಶಹಾಪೂರವು ಆಗ ಸಾಂಗಲಿ ಸಂಸ್ಥಾನಕ್ಕೆ ಸೇರಿದ್ದರಿಂದ ಬೆಳಗಾವಿ ಪೊಲೀಸರು ಶಹಾಪೂರ ಮ್ಯಾಜಿಸ್ಟ್ರೇಟ್‌ರ ಅಪ್ಪಣೆ ಪಡೆದುಕೊಂಡು ಎರಡು ಮನೆಗಳ ಮೇಲೆ 'ಝಡತಿ ವಾರೆಂಟ್' ಹೊರಡಿಸುತ್ತಾರೆ.

ಶ್ರೀ ಗಾವಡೆ ಒಬ್ಬ ತರುಣ, ಕಾಲೇಜಿನ ವಿದ್ಯಾರ್ಥಿ. ಇವರ ತಂದೆ ಶಹಾಪೂರದಲ್ಲಿ ಲೈಸನ್ಸ ಪಡೆದ ಮದ್ದಿನ ಅಂಗಡಿಯನ್ನು ಇಟ್ಟುಕೊಂಡು ವ್ಯಾಪಾರ ಮಾಡುತ್ತಿದ್ದರು. ತರುಣ ಗಾವಡೆಯವರಿಗೆ ಬಾಂಬ ಮಾಡಬೇಕೆಂಬ ಹುಚ್ಚು. ಅದನ್ನು ತಯಾರಿಸುವ ಎಲ್ಲ ಸಾಮಗ್ರಿಯನ್ನು ಕಲೆಹಾಕಿ ಬಾಂಬ ಮಾಡುವ ಪ್ರಯೋಗ ಮಾಡುತ್ತಿದ್ದನು. ಒಂದು ದಿನ ಇದ್ದಕಿದ್ದಂತೆ ಪೋಲೀಸರು ಗಾವಡೆಯವರ ಮನೆಯನ್ನು ಜಪ್ತಿ ಮಾಡಲು ಬರುತ್ತಾರೆ. ತರುಣ ಗಾವಡೆ ಚಾಣಾಕ್ಷತನದಿಂದ ಪೋಲೀಸರಿಗೆ ಒಮ್ಮೆಲೆ ಮನೆಯೊಳಗೆ ಬರಗೊಡುವುದಿಲ್ಲ. 'ಹಿರಿಯರು ಅಂಗಡಿಯಲ್ಲಿದ್ದಾರೆ. ಅವರನ್ನು ಕರೆದುಕೊಂಡು ಬನ್ನಿರಿ. ಆಮೇಲೆ ಮನೆಯೊಳಗೆ ಪ್ರವೇಶ ಮಾಡಿರಿ' ಎಂದು ಹೇಳುತ್ತಾನೆ. ಅದರಂತೆ ಪೋಲೀಸರು ಅವರ ತಂದೆಯನ್ನು ಕರೆಯಲು ಅಂಗಡಿಗೆ ಹೋದಾಗ ಇತ್ತ ತರುಣ

ಗಾವಡೆ ಮನೆಯಲ್ಲಿಯ ಮದ್ದು ಬಾಂಜಿನ ಸಾಮಾನುಗಳನ್ನು ನಾಶಮಾಡಿ ಪೊಲೀಸರಿಗೆ ಗೊತ್ತಾಗದಂತೆ ಮನೆಯನ್ನು ಓರಣವಾಗಿಡುತ್ತಾನೆ. ಮನೆಯ ತಪಾಸಣಾ ಕಾರ್ಯ ಪ್ರಾರಂಭವಾದಾಗ ಅಲ್ಲಿ ಬುಲಿಟನ್ ಹೊರಡಿಸುವ ಸೈಕ್ಲೋಸ್ಟೈಲ್ ಮಶೀನ್ ಆಗಲಿ, ಮದ್ದು ಮತ್ತು ಬಾಂಜಿನ ಇತರೆ ವಸ್ತುಗಳಾಗಲಿ ಪೊಲೀಸರಿಗೆ ಸಿಗುವುದಿಲ್ಲ. ಅವರು ನಿರಾಶರಾಗಿ ಬಾಳೇಕುಂದರಗಿ ಅವರ ಮನೆಯವರ ಹತ್ತಿರ ಬರುತ್ತಾರೆ.

ಪೊಲೀಸರು ಹೇಗಾದರೂ ಮಾಡಿ ಸೈಕ್ಲೋಸ್ಟೈಲ್ ಮಶೀನನ್ನು ಪತ್ತೆ ಹಚ್ಚಬೇಕೆಂದು ಬಾಳೆಕುಂದರಗಿ ಅವರ ಮನೆಯನ್ನು ಜಪ್ತ ಮಾಡುತ್ತಾರೆ. ಪೊಲೀಸರು ಮನೆಯೆಲ್ಲವನ್ನು ಹುಡುಕುತ್ತಾರೆ. ಎಷ್ಟು ಹುಡುಕಿದರೂ ಅವರಿಗೆ ಏನೂ ದೊರೆಯುವುದಿಲ್ಲ. ಡಿ.ವೈ.ಎಸ್.ಪಿ. ಡಿಸೋಜಾ ಕೂಡಾ ಈ ಶೋಧ ಕಾರ್ಯಕ್ಕೆ ಬರುತ್ತಾರೆ. ಅವರು ಸಹಜವಾಗಿ ವಡವಿಯವರಿರುವ ಹೊರಗಿನ ಕೋಣೆಯೊಳಗೆ ಪ್ರವೇಶ ಮಾಡುತ್ತಾರೆ. ಆಗ ನೂರಾರು ಖಾಲಿ ಪಾಕೀಟುಗಳು ಅವರ ಕೈಗೆ ಸಿಗುತ್ತವೆ. ಇವರು ಯಾವ ಪಾಕೀಟುಗಳೊಳಗಿಂದ ಅಧಿಕಾರಿಗಳಿಗೆ ಬುಲೆಟಿನ್ ಕಳಿಸುತ್ತಿದ್ದರೊ ಅಂತಹ ಪಾಕೀಟುಗಳೇ ಅಲ್ಲಿದ್ದವು. ಪೊಲೀಸರ ಸಂಶಯಕ್ಕೆ ಈಗ ಬಲ ಬರುತ್ತದೆ. ಹರಿದ ಕಾಗದದ ಒಂದು ತುಂಡಿನಲ್ಲಿ ಕಾಂಗ್ರೆಸ್ ಎಂದೂ, ಇನ್ನೊಂದರಲ್ಲಿ ಮುಂಬೈ ಎಂದೂ ಮತ್ತೊಂದರಲ್ಲಿ ಬುಲೆಟಿನ್ ಎಂದೂ ಬರೆದಿತ್ತು. ಆಗ ಈ ಪತ್ರಿಕೆಯು ಇಲ್ಲಿಂದಲೇ ಹೊರಡುತ್ತಿದೆ ಎಂದು ಖಾತ್ರಿಯಾಗುತ್ತದೆ.

ರಾಮಚಂದ್ರ ವಡವಿಯವರು ಬಾಳೆಕುಂದರಗಿ ಅವರ ಮನೆಯಲ್ಲಿ ಇದ್ದುಕೊಂಡು ಚಳುವಳಿಯ ಕಾರ್ಯವನ್ನು ಮಾಡುತ್ತಿದ್ದರು. ಡಿಸೋಜಾ ಅವರಿಗೆ ಬಾಳೆಕುಂದರಗಿಯವರ ಮನೆಯಲ್ಲಿಯೇ ಬುಲಿಟಿನ್ ಹೊರಡುತ್ತದೆ ಎಂಬ ಸಂದೇಹ ಬಂದಿತ್ತು. ಅವರು ಬಾಳೆಕುಂದರಗಿ ಅವರ ಮನೆ ಹೊಕ್ಕು ಈ ಮನೆಯ ಯಜಮಾನ ಯಾರು ಎಂದು ಚೌಕಶಿ ಮಾಡುತ್ತಾರೆ. ಬಾಳೆಕುಂದರಗಿ ಅವರು ಅಂಜುತ್ತಲೇ ಮುಂದೆ ಬಂದು ನಿಲ್ಲುವರು. ಮತ್ತೆ ಡಿಸೋಜಾ ಅವರು ಈ ಕೋಣೆಯಲ್ಲಿ ಯಾರ್‍ಯಾರು ಇರುತ್ತಾರೆ ಎಂದು ಕೇಳುತ್ತಾರೆ. ಆಗ ಬಾಳೆಕುಂದರಗಿ ಅವರಿಗೆ ಧರ್ಮ ಸಂಕಟ. ಒಂದು ವೇಳೆ ವಡವಿಯವರು ಇರುತ್ತಾರೆಂದು ಹೇಳಿದರೆ ತಾವೇ ವಡವಿಯವರನ್ನು ಪೋಲೀಸರಿಗೆ ಒಪ್ಪಿಸಿದಂತಾಗುತ್ತದೆ. ಇನ್ನು ಇಲ್ಲವೆಂದು ಹೇಳಿದರೆ ಡಿಸೋಜಾ ಅವರು ಕೊಡುವ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ. ಇತ್ತ ಹುಲಿ ಅತ್ತ ದರಿ ಎಂಬಂತೆ ಕುಂದರಗಿಯವರು ಸಂಕಟದಲ್ಲಿ ಸಿಲುಕಿಕೊಳ್ಳುತ್ತಾರೆ. ಇದೆಲ್ಲವನ್ನು ಗಮನಿಸುತ್ತ ಒಳಗಿದ್ದ ವಡವಿಯವರು ತನ್ನಂದ ತೊಂದರೆಯಾಗಬಾರದೆಂದು ಬಯಸಿ ಕೋಣೆಯಿಂದ ಹೊರಗೆ ಬಂದು 'ಈ ಕೋಣೆಯಲ್ಲಿ ನಾನು ಇರುತ್ತೇನೆ' ಎಂದು ಹೇಳುತ್ತಾರೆ. ಆಗ ಡಿಸೋಜಾ 'ನೀವು ವಡವಿ ಅಲ್ಲವೇ' ಎಂದು ಕೇಳಿದ್ದಕ್ಕೆ ವಡವಿಯವರು ಸತ್ಯಾಂಶವನ್ನು ಹೇಳುತ್ತಾರೆ. ಡಿಸೋಜಾ ಅವರು ಕೂಡಾ ವಡವಿಯವರ ಬಗ್ಗೆ ಅಪಾರ ಗೌರವವನ್ನು ಹೊಂದಿದ್ದರು. ಅವರಿಗೆ ಮನಸ್ಸಿನಲ್ಲಿ ಸೈಕ್ಲೊಸ್ಟೈಲ್ ಮಶೀನ್ ಪತ್ತೆ

ಹಚ್ಚಬೇಕೆಂಬ ಭಾವನೆಯು ಗಟ್ಟಿಗೊಂಡಿತ್ತು. ಅದಕ್ಕೆಲ್ಲಾ ಹರ ಸಾಹಸವನ್ನೇ ಮಾಡಿದರು. ಆದರೆ ಆ ಯಂಂತ್ರವು ಸಿಗಲಿಲ್ಲ. ಬದಲಾಗಿ ಶ್ರೀ ರಾಮಚಂದ್ರ ವಡವಿಯವರಾದರೂ ಸಿಕ್ಕರಲ್ಲಾ ಎಂಬದೇ ಅವರಿಗೆ ಸಮಾಧಾನವನ್ನುಂಟು ಮಾಡಿತು.

ವಡವಿಯವರು ಸ್ವಾತಂತ್ರ್ಯ ಚಳುವಳಿಯ ಹೋರಾಟಗಾರರಾಗಿದ್ದರೂ ಅವರನ್ನು ಬಂಧಿಸಲಿಕ್ಕೆ ಸಮಂಜಸವಾದ ಯಾವ ಪುರಾವೆಯೂ ಪೊಲೀಸರ ಕೈಯಲ್ಲಿ ಇರಲಿಲ್ಲ. ಅಲ್ಲದೆ ಶಹಾಪೂರ ಆಗ ಸಾಂಗಲಿ ಸಂಸ್ಥಾನದಲ್ಲಿತ್ತು. ಇವರನ್ನು ಬಂಧಿಸಬೇಕಾದರೆ ಶಹಾಪೂರ ಮೇಜಿಸ್ಟ್ರೇಟ್‌ರಿಂದ ವಾರಂಟ್ ತರಬೇಕಾಗಿದ್ದಿತು. ಅದು ಅವರಲ್ಲಿ ಇರಲಿಲ್ಲ. ಆದ್ದರಿಂದ ವಡವಿಯವರನ್ನು ಬಂಧಿಸದೇ ಹಾಗೇ ಹೊರಟು ಹೋಗುತ್ತಾರೆ. ಬಾಳೇಕುಂದರಗಿ ಅವರ ಮನೆಯಿಂದ ಆಗಲೇ ಹೊರಟು ಹೋಗಬೇಕೆಂದು ನಿಶ್ಚಯಿಸಿದ್ದರೂ ಇಬ್ಬರು ಬಿನ್ ಡ್ರೆಸ್ಸಿನ ಪೊಲೀಸರನ್ನು ವಡವಿಯವರ ಮೇಲೆ ನಿಗಾ ಇಡಲು ನಿಯಮಿಸಿದ್ದರು. ವಡವಿಯವರು ಧೋತರ ಉಟ್ಟು ಕೋಟು ಹಾಕಿದ್ದರು. ಅದು ರಾತ್ರಿಯಾದುದರಿಂದ ಅವರ ಮುಖಚರ್ಯೆಯನ್ನು ಪೊಲೀಸರು ಚೆನ್ನಾಗಿ ನೋಡಿರಲಿಲ್ಲ. ಸುಮಾರು ಏಳೆಂಟು ಹುಡುಗರೊಂದಿಗೆ ಕೂಡಿಕೊಂಡು ಬಾಳೆಕುಂದರಗಿ ಅವರು ಪೊಲೀಸರಿಗೆ ಜೋರಾಗಿ ಕೇಳಿಸುವಂತೆ ಸಿನೇಮಾಕ್ಕೆ ಹೋಗುತ್ತೇವೆಂದು ಗಟ್ಟಿಯಾಗಿ ಮಾತಾಡುತ್ತಾರೆ. ಈ ಸಂಧಿಯನ್ನು ಬಳಸಿಕೊಂಡು ಆ ಹುಡುಗರ ಗುಂಪಿನಲ್ಲಿ ಪೋಲೀಸರ ಕಣ್ಣು ತಪ್ಪಿಸಿ ವಡವಿಯವರು ಪಾರಾಗುತ್ತಾರೆ. ಅಲ್ಲಿಂದ ಮುಂದೆ ಧಾರವಾಡಕ್ಕೆ ಬಂದು ತಮ್ಮ ಕಾರ್ಯ ಚಟುವಟಿಕೆಗಳನ್ನು ಮತ್ತೆ ಪ್ರಾರಂಭಿಸುತ್ತಾರೆ. ಆದರೆ ಗಾವಡೆ ಮತ್ತು ಬಾಳೆಕುಂದರಗಿ ಅವರನ್ನು ಪೊಲೀಸರು ಬಂಧಿಸಿ ಸಾಂಗಲಿಗೆ ಕಳುಹಿಸುತ್ತಾರೆ. ಅವರಿಬ್ಬರಿಗೂ ನಾಲ್ಕು ತಿಂಗಳು ಕಠಿಣ ಶಿಕ್ಷೆಯಾಗುತ್ತದೆ.

೧೯೩೨ ರಲ್ಲಿ ಬ್ರಿಟಿಷ ಸರಕಾರದ ನ್ಯಾಯದಾನ ಪದ್ಧತಿ ವಿಚಿತ್ರವಾಗಿತ್ತು. ಕಾಂಗ್ರೆಸ ಕಾರ್ಯಕರ್ತರು ಬರೀ ಸಭೆ ಸಮಾರಂಭಗಳನ್ನು ನಡೆಸಿದರೆ ಶಿಕ್ಷೆ ವಿಧಿಸುತ್ತಿತ್ತು. ಬೆಳಗಾವಿ ಜಿಲ್ಲೆಯೊಳಗಿನ ಚಳುವಳಿ ಕುರಿತು ಶ್ರೀ ಪುಂಡಲೀಕಜಿ ಅವರೊಂದಿಗೆ ಚರ್ಚಿಸಲು ಬಾಬುರಾವ್ ಕೋಠಾವಳಿ ಅವರು ನಿಪ್ಪಾಣಿಯಿಂದ ಹುದಲಿಗೆ ಬರುತ್ತಾರೆ. ಪುಂಡಲೀಕಜಿಯವರೊಂದಿಗೆ ಮಾತು ಕತೆ ಮುಗಿದ ಮೇಲೆ ಅವರು ತಿರುಗಿ ನಿಪ್ಪಾಣಿಗೆ ಹೋಗಬಯಸಿದ್ದರು. ಹುದಲಿಯಲ್ಲಿ ಬಾಸ್ಕರರಾವ್ ಕಾಳೆ, ದಾದಾ ಕಾಳೆ ಇವರ ಸತ್ಯಾಗ್ರಹ ನಡೆಯುವದಿತ್ತು. ಸತ್ಯಾಗ್ರಹ ಮಾಡುವವರನ್ನು ಬಂಧಿಸುವುದಕ್ಕಾಗಿ ಬೆಳಗಾವಿಯಿಂದ ಪೊಲೀಸ ಅಧಿಕಾರಿ ಮತ್ತು ಪೊಲೀಸ ಪಾರ್ಟಿ ಹುದಲಿಗೆ ಬಂದಿತ್ತು. ಈ ಸಭೆಗೆ ಅತಿಥಿಯನ್ನಾಗಿ ಶ್ರೀ ಬಾಬುರಾವ್ ಕೋಠಾವಳಿಯವರನ್ನು ಆಮಂತ್ರಿಸಿ ಅಧ್ಯಕ್ಷ ಪದವಿಯನ್ನು ಅವರಿಗೆ ಕೊಡಬೇಕೆಂದು ತಿರ್ಮಾನಿಸಲಾಯಿತು. ಆದರೆ ಕೋಠಾವಳಿಯವರು ನಿಪ್ಪಾಣಿ ಭಾಗದಲ್ಲಿ ಚಳುವಳಿ ಮಾಡಬೇಕೆಂದು ಬಯಸಿದ್ದರಿಂದ ಅಂದಿನ ಸಭೆಯ ಅಧ್ಯಕ್ಷರಾಗಲು ಸಿದ್ಧರಿರಲಿಲ್ಲ. ಆದರೆ ಪುಂಡಲೀಕಜಿಯವರ ಸಲಹೆ ಮೇರೆಗೆ ಸಭೆಯ ಅಧ್ಯಕ್ಷತೆಯನ್ನು ವಹಿಸಿ ಚಳುವಳಿ ಕುರಿತು ಏನನ್ನೂ ಮಾತನಾಡದೇ ಕೇವಲ ಸಭೆ ಮುಗಿಯಿತೆಂದು ಮಾತ್ರ ಹೇಳುತ್ತಾರೆ.

ಶ್ರೀ ದಾದಾ ಕಾಳೆಯವರು ಮಾತ್ರ ಭಾಷಣ ಮಾಡುತ್ತಾರೆ. ಕಾರ್ಯಕ್ರಮದ ವಂದನಾರ್ಪಣೆಯನ್ನೂ ಕೂಡಾ ರದ್ದುಗೊಳಿಸಲಾಗಿತ್ತು. ಕೊನೆಗೆ ಅಧ್ಯಕ್ಷರು ಎದ್ದು ನಿಂತು ಇಂದಿನ ಕೆಲಸ ಮುಗಿಯಿತು ಎಂದು ಇಷ್ಟೇ ಹೇಳುತ್ತಾರೆ. ವಿಚಿತ್ರವೆಂದರೆ ಪೊಲೀಸರು ಆ ಇಬ್ಬರನ್ನು ಹಿಡಿದುಕೊಂಡು ಬೆಳಗಾವಿಗೆ ಒಯ್ದು ಅವರ ಮೇಲೆ ಖಟ್ಲೆ ಹಾಕುತ್ತಾರೆ. ಸತ್ಯಾಗ್ರಹಿ ವ್ಯಾಖ್ಯಾನಕಾರನಿಗೆ ನಾಲ್ಕು ತಿಂಗಳು ಸಕ್ತ ಮಜೂರಿ ಶಿಕ್ಷೆಯನ್ನು ವಿಧಿಸಲಾಗುತ್ತದೆ. ಅಲ್ಲದೇ ಸಭೆಯಲ್ಲಿ ಏನನ್ನೂ ಮಾತನಾಡದ ಸಭಾಧ್ಯಕ್ಷರಿಗೆ ಎರಡು ವರ್ಷ ಸಶ್ರಮ ಶಿಕ್ಷೆಯನ್ನು ವಿಧಿಸಲಾಯಿತು. ಅವರಿಬ್ಬರನ್ನೂ ಸಂಜೆಯಾಗುವುದರ ಒಳಗೆ ಹಿಂಡಲಗಿ ಸೆರೆಮನೆಯಲ್ಲಿ ಇಡಲಾಯಿತು.

ರಾಮಚಂದ್ರ ವಡವಿಯವರು ಪೊಲೀಸರ ಕೈಯಿಂದ ಪಾರಾದ ಬಗೆಯು ಅತ್ಯಂತ ಸ್ವಾರಸ್ಯಕರವಾಗಿದೆ. ಇವರ ಮೇಲೆ ಪೊಲೀಸ ವಾರಂಟ ಇದ್ದುದರಿಂದ ಹೆಚ್ಚಾಗಿ ಎಚ್ಚರಿಕೆಯಿಂದಲೇ ಇರುತ್ತಿದ್ದರು. ಒಂದು ದಿನ ಹುದಲಿಯಿಂದ ಬೆಳಗಾವಿಗೆ ಬಂದಾಗ ರೇಲ್ವೆ ಸ್ಟೇಷನ್‌ನಲ್ಲಿ ಬಿನ್‌ಡ್ರೆಸ್‌ನಲ್ಲಿ ಒಬ್ಬ ಪೊಲೀಸನಿದ್ದ. ಅವನು ಕಣಬುರಗಿಯವನಾದುದರಿಂದ ವಡವಿಯವರ ಪರಿಚಯ ಅವನಿಗೆ ಚೆನ್ನಾಗಿತ್ತು. ವಡವಿಯವರ ಬೆನ್ನ ಹತ್ತಿ ಆತ ಬರುವುದನ್ನು ಗಮನಿಸಿ ತಾವು ಹೋಗುವ ದಾರಿಯನ್ನು ಬದಲಾಯಿಸಿ ಬೇರೆ ದಾರಿ ಹಿಡಿದು ಹೋಗುತ್ತಾರೆ. ಆದರೆ ಆ ಪೊಲೀಸ ಅಲ್ಲಿಯೂ ಬೆನ್ನು ಹತ್ತಿ ಬರುತ್ತಾನೆ. ಅವನಿಂದ ತಪ್ಪಿಸಿಕೊಳ್ಳಬೇಕೆಂದು ಡಾಕ್ಟರ್ ಕೋವಾಡಕರ್ ಅವರ ಮನೆಯೊಳಗೆ ನುಗ್ಗುತ್ತಾರೆ. ಆಗ ಡಾಕ್ಟರ್ ಮನೆಯಲ್ಲಿ ಇರುವುದಿಲ್ಲ. ಕೇವಲ ಹೆಣ್ಣು ಮಕ್ಕಳು ಮಾತ್ರ ಮನೆಯಲ್ಲಿ ಇದ್ದುದರಿಂದ ಇನ್ನೇನು ಮಾಡಬೇಕೆಂದು ತೋಚದೆ ಹೊರಗೆ ಬರುತ್ತಾರೆ. ಅಷ್ಟರಲ್ಲಿ ಆ ಪೊಲೀಸು ಇವರನ್ನು ಅಡ್ಡಗಟ್ಟಿ ಪೊಲೀಸ ಸ್ಟೇಷನ್ನಕ್ಕೆ ಬರಬೇಕೆಂದು ಒತ್ತಾಯಿಸುತ್ತಾನೆ. ವಡವಿಯವರು 'ಅಲ್ಲಿ ನನ್ನದೇನು ಕೆಲಸವಿಲ್ಲ. ಆದ್ದರಿಂದ ನಾನು ಬರುವುದಿಲ್ಲ' ಎಂದು ಸ್ಪಷ್ಟವಾಗಿ ಹೇಳುತ್ತಾರೆ. ವಾರಂಟ್ ತೆಗೆದುಕೊಂಡು ಬಾ ಆಮೇಲೆ ಬರುತ್ತೇನೆಂದು ಹೇಳಿದವರೇ ಓಡುತ್ತಾ ದೇಶಪಾಂಡೆ ಹನುಮಂತರಾಯರ ಮನೆಯನ್ನು ಪ್ರವೇಶಿಸುತ್ತಾರೆ. ದೇಶಪಾಂಡೆ ಅವರ ಮನೆ ತುಂಬಾ ವಿಶಾಲವಾಗಿತ್ತು. ಆ ಮನೆಯ ಮುಂಚಿ ಬಾಗಿಲು ಒಂದು ರಸ್ತೆಗೆ ಹೊಂದಿಕೊಂಡಿದ್ದರೆ ಹಿತ್ತಲ ಬಾಗಿಲು ಇನ್ನೊಂದು ರಸ್ತೆಗೆ ಹೊಂದಿಕೊಂಡಿತ್ತು. ಆಗ ಪೊಲೀಸರಿಗೆ ಏನು ಮಾಡುವುದು ತೋಚಲಿಲ್ಲ. ಅವನು ಹಿಂದಿರುಗಿ ನೇರವಾಗಿ ಪೊಲೀಸ ಸ್ಟೇಶನ್‌ಗೆ ಹೋಗಿ ವರದಿ ಮಾಡುತ್ತಾನೆ. ವಡವಿ ಅವರು ಹನುಂತರಾಯರ ಮನೆ ಹೊಕ್ಕದ್ದನ್ನು ನೋಡಿದ ಆ ಪೊಲೀಸ ಪೊಲೀಸ ಠಾಣೆಯಲ್ಲಿ ಹಾಗೆಯೇ ವರದಿ ಒಪ್ಪಿಸುತ್ತಾನೆ.

ಅರ್ಧ ಗಂಟೆಯೊಳಗೆ ನಾಲ್ಕಾರು ಪೊಲೀಸರು ಸಬ್‌ಇನ್‌ಸ್ಪೆಕ್ಟರ್ ಸೇರಿ ವಡವಿಯವರನ್ನು ಹಿಡಿಯಲು ಹನುಮಂತರಾಯರ ಮನೆಗೆ ಬರುತ್ತಾರೆ. ಹನುಮಂತರಾಯ ಅತ್ಯಂತ ದಿಟ್ಟ ವ್ಯಕ್ತಿ. ಪೊಲೀಸರಿಗೆ ಸೊಪ್ಪು ಹಾಕುವ ವ್ಯಕ್ತಿ ಅಲ್ಲ. ಪೊಲೀಸ ಇನ್‌ಸ್ಪೆಕ್ಟರ್ ವಡವಿಯವರು ತಮ್ಮಲ್ಲಿ ಇದ್ದರಂತಲ್ಲಾ ಎಂದು ಅತ್ಯಂತ ಸೌಮ್ಯದಿಂದ ಪ್ರಶ್ನಿಸುತ್ತಾರೆ. ಹನುಮಂತರಾಯರಿಗೆ ವಡವಿ ತಮ್ಮ

ಮನೆಯಲ್ಲಿ ಇದ್ದುದು ಗೊತ್ತಿತ್ತು. ಆದರೂ ಅವರನ್ನು ರಕ್ಷಿಸುವುದಕ್ಕಾಗಿ ಹನುಮಂತರಾಯ ಎತ್ತರದ ಧ್ವನಿಯಿಂದ ಪೊಲೀಸರಿಗೆ "ಯಾವ ವಡವಿ ಅವನೇಕೆ ಇಲ್ಲಿ ಬರುತ್ತಾನೆ ಅವನಿಗೂ ನಮಗೂ ಏನು ಸಂಬಂಧ? ಸಿಕ್ಕವರನ್ನು ಸಿಕ್ಕವರ ಮನೆಯಲ್ಲಿ ಕೇಳಲು ನಿಮಗೆ ತಿಳಿಯುವದಿಲ್ಲವೆ?" ಎಂದು ಜೋರಾಗಿ ಗದ್ದರಿಸುತ್ತಾರೆ. ಇವರ ಘರ್ಜನೆಯನ್ನು ಕೇಳಿ ಪೊಲೀಸರು ಸುಮ್ಮನೆ ಅಲ್ಲಿಂದ ಹೊರಟು ಹೋಗುತ್ತಾರೆ. ವಡವಿಯವರು ನಿರಾಳವಾಗಿ ಮತ್ತೆ ತಮ್ಮ ಕಾರ್ಯದಲ್ಲಿ ತೊಡಗುತ್ತಾರೆ.

ರಾಮಚಂದ್ರ ವಡವಿ ಹಾಗೂ ಸಂಗಡಿಗರು ಅತ್ಯಂತ ಚಾಣಾಕ್ಷತನದಿಂದ ಬ್ರಿಟಿಷ ಸರಕಾರದ ತಂತ್ರಗಳನ್ನು ಬುಡಮೇಲು ಮಾಡುತ್ತಿದ್ದರು. ಬ್ರಿಟಿಷ ಸರಕಾರದ ವಿರುದ್ಧ ಹೋರಾಟ ಚಳುವಳಿ ಮಾಡುವುದರ ಜೊತೆಗೆ ಪ್ರಭಾತಪೇರಿ, ಧ್ವಜವಂದನ, ಮೆರವಣಿಗೆ ಮುಂತಾದ ವಿಧಾಯಕ ಕಾರ್ಯಗಳನ್ನು ಮಾಡುತ್ತಿದ್ದರು. ಸರಕಾರವು ಇಂತಹ ಕಾರ್ಯಕ್ರಮವನ್ನು ಮಾಡಿದವರಿಗೆ ಉಗ್ರ ಶಿಕ್ಷೆಯನ್ನು ವಿಧಿಸತೊಡಗಿತ್ತು. ಪ್ರಭಾತಪೇರಿ ಮತ್ತು ಧ್ವಜವಂದನ ಮಾಡಿದವರಿಗೂ ಕೂಡ ವರ್ಷ ಎರಡು ವರ್ಷ ಶಿಕ್ಷೆಯಾಗುತ್ತಿತ್ತು. ಅಲ್ಲದೆ ಸಾವಿರಾರು ರೂಪಾಯಿ ದಂಡವನ್ನು ವಿಧಿಸುತ್ತಿದ್ದರು. ಈ ರೀತಿಯಾದ ಉಗ್ರ ದಬ್ಬಾಳಿಕೆಯನ್ನು ನಡೆಸಿ ಸ್ವಾತಂತ್ರ್ಯ ಚಳುವಳಿಯನ್ನು ಹತ್ತಿಕ್ಕುವ ಉದ್ದೇಶ ಹಾಗೂ ಕಾಂಗ್ರೆಸನ್ನು ನಿರ್ನಾಮ ಮಾಡಬೇಕೆಂಬ ಬಯಕೆ ಬ್ರಿಟಿಷ ಸರಕಾರದ್ದಾಗಿತ್ತು.

**ಹುದಲಿಯಲ್ಲಿ ಕಾನೂನು ಭಂಗ ಚಳುವಳಿ :**

ಭಾರತದ ಇತರ ಕಡೆಗಳಂತೆ ಹುದಲಿಯಲ್ಲಿಯೂ ಕಾನೂನು ಭಂಗ ಕಾರ್ಯಕ್ರಮಗಳು ಪ್ರಾರಂಭವಾದವು. ಗಂಗಪ್ಪಾ ಯಮಕನಮರಡಿ, ಅಲ್ಲಿಸಾಹೇಬ ವಾರಿಮನಿ, ವಿರುಪಾಕ್ಷಪ್ಪಾ ಬೆಲ್ಲದ ಅವರು ಪ್ರಭಾತಪೇರಿ ತೆಗೆದರು. ಬೆಲ್ಲದ ಅವರಿಗೆ ಪ್ರಭಾತಪೇರಿ ಮಾಡಿದ್ದಕ್ಕಾಗಿ ಒಂದು ವರ್ಷ ಶಿಕ್ಷೆ ಹಾಗೂ ಸಾವಿರ ರೂಪಾಯಿ ದಂಡ ವಿಧಿಸಿದರು. ದಂಡ ವಸೂಲಿಗಾಗಿ ಅವರ ಕಿರಾಣಿ ಅಂಗಡಿ ಜಪ್ತಿ ಮಾಡಿದರು. ಅಲಿ ಸಾಹೇಬರಿಗೆ ಒಂದೂವರಿ ವರ್ಷ ಶಿಕ್ಷೆ ಮತ್ತು ಮೂರುನೂರು ರೂಪಾಯಿ ದಂಡ ಹಾಗೂ ಗಂಗಪ್ಪಾ ಅವರಿಗೆ ಆರು ತಿಂಗಳ ಶಿಕ್ಷೆ ಐನೂರು ರೂಪಾಯಿ ದಂಡ ವಿಧಿಸಲಾಯಿತು. ಇದರ ಪರಿಣಾಮದಿಂದ ಹುದಲಿ ಮತ್ತು ಸುತ್ತಮುತ್ತಲಿನ ಊರುಗಳಲ್ಲಿ ಯಾವುದೇ ಚಳುವಳಿ ನಡೆಯಲಾರದಂತೆ ಬ್ರಿಟಿಷ ಸರಕಾರ ನಿಗಾವಹಿಸಿತ್ತು. ಆದರೆ ಸರಕಾರದ ಉದ್ಧೇಶ ಸಫಲವಾಗಲಿಲ್ಲ.

ಜನರ ಮನಸ್ಸಿನಲ್ಲಿ ಆಂದೋಲನದ ತೀವ್ರತೆ ಗಾಢವಾಗಿರುವದರಿಂದ ಮೇಲಿಂದ ಮೇಲೆ ಅವರು ಕಾನೂನು ಭಂಗ ಕಾರ್ಯಕ್ರಮಗಳನ್ನು ಮಾಡುತ್ತಲೇ ಬಂದಿದ್ದಾರೆ. ರಾಮನಗೌಡಾ ಪಾಟೀಲ, ತಿಪ್ಪಣ್ಣಾ ಬೆಟಗೇರಿ ಹಾಗೂ ಹುದಲಿಯ ಏಳೆಂಟು ಜನ ಕೂಡಿ ಸಿಂಧಿ ಗಿಡ ಕಡಿಯುವುದು, ಪ್ರಭಾತಪೇರಿ ಹೊರಡಿಸುವುದು, ಕಾನೂನು ಭಂಗ ಮಾಡುವುದು, ಹೀಗೆ ಆಂದೋಲನದಲ್ಲಿ ಸಕ್ರೀಯವಾಗಿ ಇವರೆಲ್ಲಾ ಭಾಗವಹಿಸಿದ್ದರು. ಪೊಲೀಸರು ಎಲ್ಲರನ್ನು ಬಂಧಿಸಿ ಅವರ ಮೇಲೆ

ಖಟ್ಲೆ ಹಾಕಿದರು. ಖಟ್ಲೆ ಮುದ್ದತ್ತಿನ ದಿವಸ ಎಲ್ಲರನ್ನು ಪೋಲೀಸರ ಕಾವಲಿನಲ್ಲೇ ಕೋರ್ಟಿಗೆ ಹಾಜರು ಪಡೆಸಿದರು. ಬ್ರಿಟಿಷರು ತಮ್ಮ ನೀತಿಯಂತೆ ಒಡೆದು ಆಳುವ ಕ್ರಮವನ್ನು ಇಲ್ಲಿಯೂ ಬಳಸಿದರು. ಎಲ್ಲ ಹೋರಾಟಗಾರರೊಂದಿಗೆ ಕೋರ್ಟಿಗೆ ರಾಮನಗೌಡರನ್ನು ತರದೆ ಅವರೊಬ್ಬರನ್ನೇ ಪ್ರತ್ಯೇಕವಾಗಿ ಇಬ್ಬರು ಪೋಲೀಸರು ಕರೆದುಕೊಂಡು ಬರುತ್ತಿದ್ದರು. ಇತರರಿಗೆ ಇಲ್ಲದ ಸೌಲಭ್ಯಗಳನ್ನು ಅವರಿಗೆ ಕೊಟ್ಟಿದ್ದರು. ಇದಕ್ಕೆ ಮುಖ್ಯ ಕಾರಣವೆಂದರೆ ಏನಾದರೂ ಮಾಡಿ ರಾಮನಗೌಡರಿಗೆ ಕ್ಷಮೆ ಬೇಡಲಿಕ್ಕೆ ಹಚ್ಚಿ ಅವರನ್ನು ಸೆರೆಮನೆಯಿಂದ ಬಿಡುಗಡೆ ಮಾಡಬೇಕು. ಇದರ ಪರಿಣಾಮ ಇತರರ ಮೇಲೆ ಆಗಿ ಅವರು ಕ್ಷಮೆ ಬೇಡುತ್ತಾರೆ. ಇದರಿಂದ ಚಳುವಳಿಯ ಶಕ್ತಿಯು ಕುಗ್ಗುವುದು ಎಂದು ಬಗೆದಿದ್ದರು.

ಪೋಲೀಸರು ರಾಮನಗೌಡರಿಗೆ ಒಂದು ರೀತಿಯಾಗಿ ಹೆದರಿಕೆಯನ್ನುಂಟು ಮಾಡಿದರು. "ನೀವು ವತನದಾರರು. ಸರಕಾರಿ ನೌಕರರಾಗಿ ಚಳುವಳಿಯಲ್ಲಿ ಭಾಗ ತೆಗೆದುಕೊಂಡರೆ ಸರಕಾರದ ವಿರುದ್ಧ ಬಂಡು ಹೂಡಿದಂತಾಗುವುದು. ಸರಕಾರವು ನಿಮ್ಮ ಆಸ್ತಿಯನ್ನೇ ಜಪ್ತಿ ಮಾಡುವುದು. ನಿಮ್ಮ ಮನೆತನದ ಗೌಡಿಕೆಯನ್ನು ಕಸಿದುಕೊಳ್ಳಲಾಗುವದು. ಇದರಿಂದ ನೀವು ಒಬ್ಬರೆ ಕಷ್ಟಕ್ಕೆ ಈಡಾಗುವುದಿಲ್ಲ; ನಿಮ್ಮ ಮನೆಯವರನ್ನೆಲ್ಲಾ ಕಷ್ಟಕ್ಕೆ ಗುರಿ ಮಾಡುವಿರಿ. ಅಲ್ಲದೆ ನಿಮಗೆ ಇತರರಿಗಿಂತ ಭಾರಿ ಶಿಕ್ಷೆ ಕೊಡುವರು"[೨]. ಹೀಗೆ ಅನೇಕ ರೀತಿಯಿಂದ ರಾಮನಗೌಡರಿಗೆ ಬೆದರಿಕೆ ಹಾಕಿದರು. ಆಗ ರಾಮನಗೌಡರು ಅಂಜಿ ಕ್ಷಮೆ ಬೇಡಲು ಸಿದ್ಧರಾದರು. ಸೆರೆಮನೆಯಲ್ಲಿದ್ದ ಇವರ ಸ್ನೇಹಿತರಿಂದ ಈ ಸುದ್ದಿಯು ಹೇಗೊ ರಾಮಚಂದ್ರ ವಡವಿಯವರಿಗೆ ತಲಪುತ್ತದೆ. ಅವರು ಹೇಗಾದರೂ ಮಾಡಿ ಕ್ಷಮೆ ಬೇಡದಂತೆ ಮಾಡಬೇಕೆಂದು ಯೋಚಿಸುತ್ತಾರೆ.

ರಾಮನಗೌಡರು ಈಗಾಗಲೇ ಜೈಲಿನಲ್ಲಿರುವುದರಿಂದ ಮತ್ತು ವಡವಿ ಅವರ ಮೇಲೆ ಅರೆಸ್ಟ ವಾರೆಂಟ್ ಇರುವುದರಿಂದ ಅವರನ್ನು ಭೆಟ್ಟಿಯಾಗುವುದು ಹೇಗೆ? ಎಂದು ಚಿಂತಿಸತೊಡಗಿದರು. ವಡವಿಯವರ ಸ್ನೇಹಿತರೊಬ್ಬರು ಒಂದು ಉಪಾಯ ಹೇಳುತ್ತಾರೆ. ಆದರೆ ಆ ಉಪಾಯವು ಅಷ್ಟೇ ಅಪಾಯಕಾರಿಯೂ ಆಗಿದೆ. ಧೈರ್ಯದಿಂದ ಮತ್ತು ಚಾಣಾಕ್ಷತನದಿಂದ ಕಾರ್ಯ ಕೈಕೊಂಡರೆ ಖಂಡಿತವಾಗಿ ನೀವು ರಾಮನಗೌಡರನ್ನು ಭೆಟ್ಟಿಯಾಗಿ ಅವರ ಮನಸ್ಸನ್ನು ಬದಲಾಯಿಸಬಹುದು ಎಂದು ಹೇಳುತ್ತಾರೆ. "ಕೋರ್ಟಿನ ಮುದ್ದತ್ತಿನ ದಿನ ಶ್ರೀ ರಾಮನಗೌಡರನ್ನು ಕೋರ್ಟಿಗೆ ಕರೆದೊಯ್ಯುವ ಮೊದಲು ಒಂದು ಲಿಂಗಾಯತ ಖಾನಾವಳಿಗೆ ಊಟಕ್ಕೆ ಕರೆದುಕೊಂಡು ಬರುತ್ತಾರೆ. ಅವರ ಸಂಗಡ ಇಬ್ಬರು ಪೋಲೀಸರು ಮಾತ್ರ ಇರುತ್ತಾರೆ. ಆಗ ನೀವೂ ಆ ಖಾನಾವಳಿಗೆ ಊಟಕ್ಕೆಂದು ಹೋಗಿ ಅವರನ್ನು ಭೇಟ್ಟಿಯಾಗಿ ಬರಬಹುದು. ಆದರೆ ಸಂಗಡ ಪೋಲೀಸ ಕಾವಲು ಇರುವುದರಿಂದ ನೀವು ವೇಷ ಬದಲಿಸಿಕೊಂಡು ಹೋಗಬೇಕು. ಆ ಖಾನಾವಳಿಗೆ ಬರುವವರೆಲ್ಲರೂ ಲಿಂಗಾಯತರೇ ಆಗಿರುವುದರಿಂದ ನೀವು ಐಯ್ಯನವರ ವೇಷ ಹಾಕಿಕೊಂಡು ಹೋದರೆ ಪೋಲೀಸರಿಗೆ ಸಂಶಯ ಬರುವುದಿಲ್ಲ"[೩] ಹೀಗೆ ಮಾಡಿದರೆ ಒಳ್ಳೆಯದು ಎಂಬ ಸಲಹೆಯನ್ನು ಕೊಡುತ್ತಾರೆ.

ಪೊಲೀಸರು ಸುಮಾರು ಹತ್ತು ಗಂಟೆಗೆ ರಾಮನಗೌಡರನ್ನು ಊಟಕ್ಕೆ ಕರೆದುಕೊಂಡು ಬರುತ್ತಾರೆ. ಈ ಸಂಗತಿ ವಡವಿಯವರಿಗೆ ಗೊತ್ತಾದ ಕೂಡಲೆ ಅಯ್ಯನ ವೇಷ ಹಾಕಿಕೊಂಡು ಖಾನಾವಳಿಗೆ ಹೋಗುತ್ತಾರೆ. ಪೊಲೀಸರು ಬೀಡಿ ಸೇದುತ್ತಾ ಖಾನಾವಳಿಯ ವರಾಂಡದಲ್ಲಿ ಕುಳಿತಾಗ ಜನರ ಮಧ್ಯದಲ್ಲಿಯೇ ವಡವಿಯವರು ಒಳನುಗ್ಗಿ ರಾಮನಗೌಡರ ಪಕ್ಕಕ್ಕೆ ಕುಳಿತುಕೊಳ್ಳುತ್ತಾರೆ. ವಡವಿಯವರು ಅಯ್ಯನ ವೇಷ ಹಾಕಿಕೊಂಡು ಒಳಬಂದದ್ದನ್ನು ನೋಡಿ ಆಶ್ಚರ್ಯವಾಗುತ್ತದೆ. ತಲೆ ಕೆಳಗೆ ಹಾಕಿಕೊಂಡು ರಾಮನಗೌಡ ಸುಮ್ಮನೆ ಕೂಡುತ್ತಾನೆ. ವಡವಿಯವರು ಅವನ ಯೋಗಕ್ಷೇಮವನ್ನು ವಿಚಾರಿಸಿ 'ಯಾವ ಕಾರಣಕ್ಕೂ ನೀವು ಬ್ರಿಟಿಷರಿಗೆ ಕ್ಷಮೆ ಕೇಳಬಾರದು. ನೀವು ಸೆರೆಮನೆಗೆ ಈ ಸಾರಿ ಹೋಗಲು ಏಕೆ ಅಂಜುತ್ತೀರಿ? ಒಂದು ವೇಳೆ ಸೆರೆಮನೆಗೆ ನೀವು ಹೋದರೂ ಅಲ್ಲಿ ನಮ್ಮ ಜನ ಸಾಕಷ್ಟು ಇರುತ್ತಾರೆ. ಯಾವುದಕ್ಕೂ ಹೆದರಬಾರದು ನೀವು ಕ್ಷಮೆ ಕೇಳಿದರೆ ಹುದಲಿ ಊರಿಗೆ ಕಳಂಕ ಹಚ್ಚಿದಂತಾಗುತ್ತದೆ. ಅಲ್ಲದೆ ನಿಮ್ಮ ಮನೆತನಕ್ಕೂ ಕುಂದು ತರುತ್ತೀರಿ. ಅದರ ಗೌರವವನ್ನು ಕಡಿಮೆ ಮಾಡುತ್ತೀರಿ. ನೀವು ಇಂಥಾ ಮನೆತನದಲ್ಲಿ ಹುಟ್ಟಿ ಹೇಡಿಯಾಗುತ್ತೀರಾ ಎಂದು ಮುಂತಾಗಿ ಹೇಳಿ ಅವನಲ್ಲಿ ಧೈರ್ಯ ತುಂಬುತ್ತಾರೆ. ಒಂದು ವೇಳೆ ಬ್ರಿಟಿಷರು ಆಸ್ತಿಯನ್ನು ಜಪ್ತ ಮಾಡಿದರೆ ಅದನ್ನೇನು ಅವರು ತಲೆಯ ಮೇಲೆ ಹೊತ್ತುಕೊಂಡು ಹೋಗುವುದಿಲ್ಲ. ನೀವೇನು ಕಳವು ಮಾಡಿ ಜೈಲಿಗೆ ಬಂದಿಲ್ಲ. ಅಂದ ಮೇಲೆ ನಿಮ್ಮ ಆಸ್ತಿಗೆ ಕೈ ಹಚ್ಚುವ ಧೈರ್ಯ ಯಾರು ಮಾಡುತ್ತಾರೆ. ಒಂದು ವೇಳೆ ಕ್ಷಮೆ ಬೇಡಿ ಹೇಡಿಯಾಗಿ ನಾವು ಮನೆಗೆ ಹೋದರೆ ನಿಮ್ಮ ಮನೆಯವರು ಮುಖವನ್ನು ಸಹ ನೋಡಲಿಕ್ಕಿಲ್ಲ. ಆದ್ದರಿಂದ ಕ್ಷಮೆ ಬೇಡಿ ನಿಮ್ಮ ಮನೆತನಕ್ಕೆ ಕಳಂಕ ಹಚ್ಚಬೇಡಿ' ಎಂದು ವಡವಿಯವರು ಹೇಳುತ್ತಾರೆ.

ವಡವೀಯವರ ಮಾತನ್ನು ಕೇಳಿದ ಬಳಿಕ ರಾಮನಗೌಡರ ಮನಸ್ಸಿನಲ್ಲಿ ಪರಿವರ್ತನೆ ಉಂಟಾಗುತ್ತದೆ. ಖಟ್ಲೆ ತೀರ್ಪು ಕೇಳಲು ಹುದಲಿಯ ಎಲ್ಲಾ ಜನ ಬಂದಾಗ ರಾಮನಗೌಡರು ಕೊಟ್ಟ ದಿಟ್ಟ ಉತ್ತರದಿಂದ ಅವರಿಗೆಲ್ಲ ಸಂತೋಷವಾಗುತ್ತದೆ. ಮ್ಯಾಜಿಸ್ಟ್ರೇಟ್ ಕೇಳಿದ ಪ್ರಶ್ನೆಗೆ ರಾಮನಗೌಡರು 'ಚಳುವಳಿಯಲ್ಲಿ ಭಾಗ ತೆಗೆದುಕೊಂಡದಕ್ಕೆ ನನಗೆ ವಿಶಾದವಿಲ್ಲ. ಆನಂದವಾಗಿದೆ. ನನ್ನನ್ನು ಬಿಡುಗಡೆ ಮಾಡಿದರೆ ನಾನು ಮತ್ತೆ ಚಳುವಳಿ ಮಾಡುವವನೇ' ಎಂದು ಹೇಳುತ್ತಾರೆ. ಮ್ಯಾಜಿಸ್ಟ್ರೇಟರು ರಾಮನಗೌಡರಿಗೆ ನೋಡಿರಿ ವಿಚಾರಮಾಡಿರಿ. ಶಿಕ್ಷೆ ಕೊಟ್ಟ ನಂತರ ಪಾಶ್ಚಾತ್ತಾಪ ಪಡಬೇಡಿರಿ ಎನ್ನುತ್ತಾರೆ. ಅದಕ್ಕೆ ರಾಮನಗೌಡರು "ಪಾಶ್ಚಾತ್ತಾಪದ ಪ್ರಶ್ನೆಯೇ ಇಲ್ಲ. ನೀವು ಬೇಕಾದಂತಹ ಶಿಕ್ಷೆಕೊಡಿರಿ ನಾನು ಅದನ್ನು ಆನಂದದಿಂದ ಅನುಭವಿಸಲು ಸಿದ್ಧ"[೩೪] ಎಂದು ಹೇಳುತ್ತಾರೆ. ರಾಮಚಂದ್ರ ವಡವೀಯವರು ಹೀಗೆ ರಾಮನಗೌಡರ ಮನಸ್ಸನ್ನು ಪರಿವರ್ತಿಸಿದ್ದು ಬ್ರಿಟಿಷ ಸರಕಾರದ ತಂತ್ರವನ್ನು ಬುಡಮೇಲು ಮಾಡುತ್ತಾರೆ.

**ಒಂಭತ್ತನೇ ತಿಂಗಳು (ನವವಾ ಮಹಿನೆ ಪತ್ರಿಕೆ) :**

೧೯೩೨ ನೇ ಇಸ್ವಿಯಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯ ಸ್ವಾರಸ್ಯಕರ ಸಂಗತಿಗಳಲ್ಲಿ

'ನವವಾ ಮಹಿನೆ' (ಒಂಭತ್ತನೇ ತಿಂಗಳು) ಒಂದು ವಿಶಿಷ್ಟವಾದದ್ದು. ಇದು ಒಂದು ಪತ್ರಿಕೆಯ ಹೆಸರು. ಸ್ವಾತಂತ್ರ್ಯ ಚಳುವಳಿಯ ಸುದ್ದಿಗಳನ್ನು ಈ ಪತ್ರಿಕೆಯಲ್ಲಿ ಬಿತ್ತರಿಸಲಾಗುತ್ತಿತ್ತು ಒಂಬತ್ತು ತಿಂಗಳುಗಳಿಂದ ನಡೆದು ಬಂದ ಅವರ ಹೋರಾಟಕ್ಕೆ ಈ ಬುಲೆಟನ್ ಒಂದು ಮಾಧ್ಯಮವಾಗಿತ್ತು. ಆದರೆ ಇದನ್ನು ಪ್ರಚಾರ ಮಾಡುವುದು ಹೇಗೆ? ಎಂದು ವಿಚಾರಿಸಿ ನಾಟಕಗಳನ್ನು ಪ್ರಚಾರ ಮಾಡುವಂತೆ ಟಾಂಗಾಕ್ಕೆ ಬ್ಯಾನರ್ ಹಚ್ಚಿ ತಾಸೆ ನುಡಿಸುವವನ ಮುಖಾಂತರ ಬೀದಿಯಲ್ಲಿ ಪ್ರಚಾರ ಮಾಡುತ್ತಾರೆ. ಜನರು ಇದೊಂದು ನಾಟಕವಿರಬೇಕೆಂದು ಕೂತೂಹಲದಿಂದ ಬುಲಿಟಿನಗಳನ್ನು ಕೊಂಡು ಒಬ್ಬರಿಗೊಬ್ಬರು ಪ್ರಚಾರ ಮಾಡುವರು. ಇದು ಹೇಗೊ ಪೊಲೀಸರಿಗೆ ಗೊತ್ತಾದ ಬಳಿಕ 'ನವವಾ ಮಹಿನೆ' ಇದು ನಾಟಕವಲ್ಲ. ಚಳುವಳಿಯ ಒಂದು ಪತ್ರಿಕೆ ಎಂಬುದು ತಿಳಿಯುತ್ತದೆ. ಆಗ ಟಾಂಗಾದವನನ್ನು ಮತ್ತು ತಾಸೆ ನುಡಿಸುವವನನ್ನು ಬಂಧಿಸಿ ಅವರಿಗೆ ಶಿಕ್ಷೆ ವಿಧಿಸುತ್ತಾರೆ. ಏನೂ ಅರಿಯದ ಸಾಮಾನ್ಯ ಟಾಂಗವಾಲಾಗೂ ಮತ್ತು ತಾಸೆ ನುಡಿಸಿದವನಿಗೂ ಬ್ರಿಟಿಷ ಸರಕಾರ ಶಿಕ್ಷೆ ವಿಧಿಸಿದ್ದು ಆಶ್ಚರ್ಯದ ಸಂಗತಿ.

ಕಂಪನಿ ಸರಕಾರವು ಚಳುವಳಿಕಾರರನ್ನು ಅನ್ಯಾಯವಾಗಿ ಸತಾಯಿಸುತ್ತಿತ್ತು. ಒಂದು ವಿಚಿತ್ರ ಸಂಗತಿಯೆಂದರೆ ಬೆಳಗಾವಿಯ ಬೋಗಾರವೇಸ್‌ನಲ್ಲಿದ್ದ ಆನಂದಾಶ್ರಮ ಎಂಬ ಖಾನಾವಳಿಯ ಮಾಲೀಕನಿಗೂ ದಂಡ ವಿಧಿಸಲಾಗಿತ್ತು. ಏಕೆಂದರೆ ಹುದಲಿಯ ಗಂಗಾಧರರಾವ್ ಅವರ ಸಹೋದರ ಕಾಲೇಜ ವಿದ್ಯಾರ್ಥಿಗಳನ್ನು ಸ್ವಾತಂತ್ರ್ಯ ಚಳುವಳಿಯ ಬುಲೆಟಿನಗಳನ್ನು ಹಂಚಲು ಬಳಸಿಕೊಳ್ಳುತ್ತಿದ್ದರು. ಬೋಗಾರವೇಸನಲ್ಲಿದ್ದ ಸುಮಾರು ಹತ್ತು ಹದಿನೈದು ವಿದ್ಯಾರ್ಥಿಗಳು ಸ್ವಯಂ ಸೇವಕರಾಗಿ ಕೆಲಸ ಮಾಡುತ್ತಿದ್ದರು. ಈ ಭಾಗದಲ್ಲಿ ಬುಲೆಟಿನ್ ಹೊರಡುವುದು, ಮೇಲಿಂದ ಮೇಲೆ ಕಾರ್ಯಕ್ರಮಗಳು ಜರಗುವುದು, ಸ್ವಯಂ ಸೇವಕರು ಜೈಲಿಗೆ ಹೋಗುವುದು ಮುಂತಾದ ಘಟನೆಗಳನ್ನು ಗಮನಿಸಿದ ಬ್ರಿಟಿಷ ಸರಕಾರ ಈ ಸಂಘಟನೆಗಳನ್ನು ಮುರಿಯಲು ಪ್ರಯತ್ನಿಸುತ್ತಿತ್ತು. ಪೊಲೀಸರು ಆ ವಿದ್ಯಾರ್ಥಿಗಳನ್ನು ಹೊಡೆದು ನೀವು ಎಲ್ಲಿ ಊಟ ಮಾಡುತ್ತೀರಿ? ಏನು ಕೆಲಸ ಮಾಡುತ್ತೀರಿ ? ಈ ಬುಲೆಟಿನ್ ಯಾರು ಹಂಚುತ್ತಾರೆ? ಎಂಬುದನ್ನು ಕುರಿತು ಪ್ರಶ್ನಿಸುತ್ತಾರಲ್ಲದೇ ಅವರನ್ನು ಹೊಡೆಯುತ್ತಾರೆ. ಆಗ ವಿದ್ಯಾರ್ಥಿಗಳು ತಾವು ಆನಂದಾಶ್ರಮದಲ್ಲಿ ಊಟ ಮಾಡುತ್ತೇವೆಂದೂ ಮತ್ತು ಬುಲೆಟಿನ್ ಯಾರು ಹೊರಡಿಸುತ್ತಾರೆಬುಂದು ಗೊತ್ತಿಲ್ಲವೆಂದೂ ಹೇಳುತ್ತಾರಲ್ಲದೇ ಶ್ರೀ ದೇಶಪಾಂಡೆಯವರು ನಮಗೆ ಕೊಡುತ್ತಾರೆ ನಾವು ಹಂಚುತ್ತೇವೆ ಎಂದು ಹೇಳುತ್ತಾರೆ.

ವಿದ್ಯಾರ್ಥಿಗಳು ಹೇಳಿದ ಹೇಳಿಕೆಯ ಮೇರೆಗೆ ಸ್ವಯಂ ಸೇವಕರು ಊಟ ಮಾಡುವ ಸ್ಥಳಕ್ಕೆ ಪೊಲೀಸರು ಹೋಗಿ ಖಾನಾವಳಿಯ ಮಾಲಿಕನನ್ನು ವಿಚಾರಿಸಿ ಮ್ಯಾಜಿಸ್ಟ್ರೇಟ್‌ರ ಮುಂದೆ ಅವನನ್ನು ಹಾಜರು ಪಡಿಸುತ್ತಾರೆ. ನ್ಯಾಯಾಧೀಶರು ಆ ಮಾಲೀಕನಿಗೆ ಇಪ್ಪತ್ತೈದು ರೂಪಾಯಿ ದಂಡವನ್ನು ಹೇರುತ್ತಾರಲ್ಲದೇ ಇನ್ನು ಮೇಲೆ ಚಳುವಳಿಕಾರರಿಗೆ ಊಟವನ್ನು ಕೊಡಬಾರದೆಂದು ಆಜ್ಞಾಪಿಸುತ್ತಾರೆ. ಅವನು ಸ್ವಾತಂತ್ರ್ಯ ಹೋರಾಟಗಾರರಿಗೆ ಊಟ ಕೊಡುತ್ತಿದ್ದನೆಂಬ ಕಾರಣಕ್ಕೆ

ದಂಡ ವಿಧಿಸಿದ್ದು ಇನ್ನೂ ಆಶ್ಚರ್ಯದ ಸಂಗತಿ. ಹೀಗೆ ಕಂಪನಿ ಸರಕಾರವು ತನ್ನ ಮನಸ್ಸಿಗೆ ಬಂದಂತೆ ಆಡಳಿತ ನಡೆಸುತ್ತಿದ್ದುದರಿಂದ ಜನ ಬೇಸತ್ತು ದಂಗೆ ಎದ್ದಿದ್ದರು.

ಸ್ವಾತಂತ್ರ್ಯ ಚಳುವಳಿಯ ಒಂದು ಪ್ರಸಂಗದಲ್ಲಿ ವಡವಿಯವರು ಅನುಭವಿಸಿದ ಆಶ್ಚರ್ಯ ಮತ್ತು ಆತಂಕಕಾರಿ ಸಂಗತಿಯನ್ನು ಅವರು ಹೀಗೆ ಹೇಳಿಕೊಂಡಿದ್ದಾರೆ. ಸುಲ್ತಾನಪುರದ ಕಾರ್ಯಕ್ರಮವನ್ನು ಮುಗಿಸಿಕೊಂಡು ಹುಕ್ಕೇರಿಗೆ ಬರುವಾಗ ಗುಡಸ್ ಹತ್ತಿರ ಒಂದು ಇಳಿಜಾರು ಪ್ರದೇಶದಲ್ಲಿ ಇವರ ಸೈಕಲ್ ಜೋರಾಗಿ ಚಲಿಸಿ ಹತ್ತಿರದಲ್ಲಿರುವ ಒಂದು ಕಲ್ಲಿಗೆ ಅಪ್ಪಳಿಸುತ್ತದೆ. ಆಗ ವಡವಿಯವರು ಕೆಳಗೆ ಬೀಳುತ್ತಾರೆ. ಅವರ ಬಲಗಡೆಯ ಮಂಡೆ ಒಡೆದು ರಕ್ತ ಸೋರುತ್ತದೆ. ಸುಂಕದ ಕಟ್ಟೆಯಲ್ಲಿದ್ದ ಒಬ್ಬ ಜವಾನನು ದೀಪ ತರಲೇನು ಎಂದು ಕೇಳುತ್ತಾನೆ. ಆದರೆ ಆ ದೀಪದ ಬೆಳಕಿನಲ್ಲಿ ಎಲ್ಲಿ ತನ್ನ ಗುರುತು ಜನರಿಗೆ ಸಿಕ್ಕೀತೆಂಬ ಭಯದಿಂದ ಬೇಡ ಎಂದು ಹೇಳುತ್ತಾ ಅಲ್ಲಿಂದ ಪಾರಾಗುತ್ತಾರೆ. ಯಾಕೆಂದರೆ ಪೊಲೀಸರು ಸದಾ ಇವರನ್ನು ಅರೆಸ್ಟ್ ಮಾಡಲು ಕಾತುರದಿಂದ ಕಾಯುತ್ತಿದ್ದರು. ಹುಕ್ಕೇರಿ ರೋಡ್ ಸ್ಟೇಷನ್ನಿನ ಲೇವಲ್ ಕ್ರಾಸ್ಸಿಂಗನ ಹತ್ತಿರ ನಾಲ್ಕು ರಸ್ತೆಗಳು ಬಂದು ಸೇರುತ್ತವೆ. ಅಲ್ಲಿಗೆ ವಡವಿಯವರು ಬರುವಷ್ಟರಲ್ಲಿ ನಾಲ್ಕು ಖಾಲಿ ಲಾರಿಗಳು ನಿಂತದ್ದು ನೋಡಿ ಆ ಲಾರಿ ಮುಖಾಂತರ ಮುಂದೆ ಪ್ರಯಾಣ ಕೈಕೊಳ್ಳಬೇಕೆಂದು ಸೈಕಲ್ಲನ್ನು ರಸ್ತೆಯ ಬಳಿ ಒಂದು ವಡ್ಡಿನ ಕಳಗೆ ಇಟ್ಟು ಹೋಗುತ್ತಾರೆ. ತಿರುಗಿ ಬರುವಾಗ ಆ ಸೈಕಲ್ಲನ್ನು ತೆಗೆದುಕೊಂಡು ಬರುವ ವಿಚಾರ ಅವರದಾಗಿತ್ತು.

ಸ್ಟೇಷನ್ ಬಹಳ ದೂರವಿರಲಿಲ್ಲ. ಒಂದೆರಡು ಫರ್ಲಾಂಗಿರಬಹುದು. ಸ್ಟೇಷನ್ ಮೇಲೆ ದೀಪವಿರಲಿಲ್ಲ. ಪಾನ್, ಬೀಡಿ, ಸಿಗರೇಟ ಮಾರುವವರ ಧ್ವನಿಯೂ ಕೇಳುತ್ತಿರಲಿಲ್ಲ. ಏಕೆಂದರೆ ಬಿನ್ನ್ ಡ್ರೆಸ್ಸನಲ್ಲಿದ್ದ ಪೊಲೀಸರು ಸ್ವಯಂ ಸೇವಕರನ್ನು ಹಿಡಿಯುತ್ತಿದ್ದರು. ಅಷ್ಟರಲ್ಲಿ ಪ್ರಯಾಣಿಕರು ಗಾಡಿಯಿಂದ ಇಳಿದು ಹೊರ ಬರುತ್ತಿದ್ದರು. ಸ್ವಯಂ ಸೇವಕರೂ ಕೂಡಾ ಕೊಡಲಿಗಳನ್ನು ಕೈ ಚೀಲಗಳಲ್ಲಿ ಹಾಕಿ ಆ ಕಾವುಗಳನ್ನು ಮಾತ್ರ ಕೈಯಲ್ಲಿ ಹಿಡಿದುಕೊಂಡು ಹೊರ ಬರುತ್ತಿದ್ದರು. ವಡವಿಯವರು ಅವರನ್ನು ನೋಡಿ ಸಂಜ್ಞೆಯನ್ನು ಮಾಡಿ ಅವರಿಗೆ ಮುಂದೆ ಹೋಗಲು ಸೂಚಿಸುತ್ತಾರೆ. ತಾವು ವಾಮನ್‌ರಾವ್ ಅವರನ್ನು ಕೂಡಿಕೊಂಡು ಆ ಸ್ವಯಂ ಸೇವಕನನ್ನು ಕೂಡಿ ಹೇಗೊ ಪಾರಾಗುತ್ತಾರೆ. ಅಷ್ಟರಲ್ಲಿ ಪೊಲೀಸರ ಪಕಡೊ ಪಕಡೊ ಎಂಬ ಧ್ವನಿ ಜೋರಾಗಿ ಕೇಳಿ ಬರುತ್ತದೆ. ಇಂತಹ ಗದ್ದಲದಲ್ಲಿ ಹೋಗಿ ಕಾರ್ಯಕ್ರಮಕ್ಕೆ ಹಾಜರಾಗುವುದು ನಿರರ್ಥಕವೆಂದು ಭಾವಿಸಿ ವಡವಿಯವರು ಹಿಂದಿರುಗುತ್ತಾರೆ. ಕತ್ತಲೆಯಾದ್ದರಿಂದ ಇವರು ಹಿಂದಿರುಗಿ ಬರುವುದನ್ನು ಯಾರೂ ಗಮನಿಸುವುದಿಲ್ಲ. ಸ್ಟೇಷನ್ನಿನ ವಿರುದ್ಧ ದಿಕ್ಕಿಗೆ ಒಂದು ಜೋಳದ ಹೊಲ. ಎತ್ತರವಾಗಿ ಬೆಳೆದ ಜೋಳದ ಹೊಲದಲ್ಲಿ ವಡವಿಯವರು ಅವಿತುಕೊಂಡು ಕುಳಿತುಕೊಳ್ಳುತ್ತಾರೆ. ಸ್ಟೇಷನ್ ಹತ್ತಿರವಿದ್ದ ಸ್ವಯಂ ಸೇವಕರನ್ನು ಬಂಧಿಸುತ್ತಾರೆ. ಸ್ವಯಂ ಸೇವಕರನ್ನು ಪೊಲೀಸರು ವಡವಿಯವರು ಎಲ್ಲಿದ್ದಾರೆಂದು ಕೇಳುತ್ತಾರೆ. ಸ್ವಯಂ ಸೇವಕರಿಗೆ ಎಲ್ಲಾ ಗೊತ್ತಿದ್ದರೂ ಅವರು ಎಲ್ಲಿ ತಪ್ಪಿಸಿಕೊಂಡರೊ ತಮಗೇನೂ

ಗೊತ್ತಿಲ್ಲವೆಂದು ಹೇಳುತ್ತಾರೆ. ಅಡಗಿದ್ದ ಸ್ವಯಂ ಸೇವಕರ ಮೇಲೆ ಪೊಲೀಸರು ಗುಂಡು ಹಾರಿಸುತ್ತಾರೆ. ವಡವಿ ಮತ್ತು ವಾಮನ್‌ರಾವ್ ಅವರು ಮಾತ್ರ ಯಾರಿಗೂ ಕಾಣಿಸದೇ ಜೋಳದ ಹೊಲದಲ್ಲಿ ಸುಮಾರು ನಾಲ್ಕೈದು ತಾಸು ಅಡಗಿ ಕೂಡುತ್ತಾರೆ. ಡಿ.ವಾಯ್.ಎಸ್.ಪಿ ಮತ್ತು ಎಸ್. ಪಿ. ಮುಂತಾದ ಅಧಿಕಾರಿಗಳು ಪೊಲೀಸರನ್ನು ಕರೆದುಕೊಂಡು ಗಸ್ತು ಹೊಡೆಯುತ್ತಿದ್ದರು. ಇದೊಂದು ಯುದ್ಧ ಭೂಮಿಯ ತರಹ ಕಾಣಿಸುತ್ತಿತ್ತು. ಇವರೇನೊ ಸಾವಿರಾರು ಜನ ಹೋರಾಟಗಾರರು ದಾಳಿ ಮಾಡುತ್ತಾರೆಂಬ ಭಾವನೆ ಪೊಲೀಸರಿಗೆ ಯಾರೊ ತಿಳಿಸಿರಬೇಕು. ಆದ್ದರಿಂದ ನೂರಾರು ಸಶಸ್ತ್ರ ಪೊಲೀಸರು ಅಲ್ಲಿಯೇ ಠಿಕಾಣೆ ಹೂಡಿದರು. ಅವರು ಎಷ್ಟೇ ಪ್ರಯತ್ನ ಮಾಡಿದರೂ ವಡವಿಯವರನ್ನು ಹಿಡಿಯುವುದು ಅಸಾಧ್ಯವಾಗುತ್ತದೆ. ಇಡೀ ರಾತ್ರಿಯೆಲ್ಲಾ ವಡವಿಯವರು ಹೊಲದಲ್ಲಿ ಕಳೆದ ಕಾರಣ ಅವರ ಕಾಲು ನೋವಿನಿಂದ ಹಿಡಿದುಕೊಂಡಿತ್ತು. ಹೇಗೊ ಸಾವರಿಸಿಕೊಂಡು ನಿಧಾನವಾಗಿ ಹೊರಬರುತ್ತಾರೆ. ಒಂದಿಷ್ಟು ಮುಂದೆ ಕ್ರಮಿಸಿದ ನಂತರ ಎಲ್ಲವೂ ಸರಿಹೋಗುತ್ತದೆ. ಅವರೇ ಮುಚ್ಚಿಟ್ಟ ಸೈಕಲ್‌ನ್ನು ತೆಗೆದುಕೊಂಡು ತಿರುಗಿ ಊರಿಗೆ ಬರುತ್ತಾರೆ. ಹುಕ್ಕೇರಿಯಿಂದ ಮುಂದೆ ಕೋಲ್ಲಾಪುರಕ್ಕೆ ಹೋಗಿ ಅಲ್ಲಿ ದತ್ತೋಪಂಥ ಯಾಳಗಿ ಅವರ ಮನೆಯಲ್ಲಿ ಇದ್ದುಕೊಂಡು ವೈದ್ಯೋಪಚಾರವನ್ನು ಪಡೆದುಕೊಂಡು ಬೆಳಗಾವಿಗೆ ಬರುತ್ತಾರೆ. ಹೀಗೆ ಅಹೋರಾತ್ರಿ ಹೋರಾಟಗಳ ಮಧ್ಯದಲ್ಲಿ ಇದ್ದುಕೊಂಡು ಪೊಲೀಸರ ಕಣ್ಣು ತಪ್ಪಿಸಿ ದೇಶದ ಸ್ವಾತಂತ್ರ್ಯಕ್ಕಾಗಿ ಪ್ರಾಣವನ್ನು ಪಣಕ್ಕಿಟ್ಟು ಇವರು ಸೇವೆ ಗೈದದ್ದು ಶ್ಲಾಘನೀಯವಾಗಿದೆ.

## ಗಂಗಾಧರರಾವ ದೇಶಪಾಂಡೆ – ಬೆಳಗಾವಿ ಸಿಂಹ :

ವಡವಿಯವರು ಗಂಗಾಧರರಾವ ದೇಶಪಾಂಡೆಯವರ ಮಾರ್ಗದರ್ಶನದಲ್ಲಿಯೇ ಕಾರ್ಯ ಮಾಡುತ್ತಿದ್ದರು. ಮುಂಬೈ ಅಧಿವೇಶನದಲ್ಲಿ ಗಂಗಾಧರರಾವ್ ದೇಶಪಾಂಡೆಯವರು ಸಾವರಕರ್ ಅವರಿಗೆ 'ತಾವು ಈ ಚಳುವಳಿಯಲ್ಲಿ ಭಾಗವಹಿಸಿದ್ದರೆ ಇನ್ನೂ ಉತ್ತಮವಾದೀತು' ಹೇಳಿದ್ದರು. ಸಾವರಕರ್ ಅವರಿಗೆ ಫೋನ ಹಚ್ಚಲು ವಡವಿಯವರನ್ನು ಉದ್ದೇಶಿಸಿ ಹೇಳುತ್ತಾರೆ. ಅವರ ಹತ್ತಿರದಲ್ಲಿ ಆಗ ಕಾಕಾಸಾಹೇಬ್ ಕಲೇಲಕರ್, ಹ.ಮ. ಜೋಶಿ, ಸಾಳವೀಕರ್ ಮುಂತಾದವರು ಇದ್ದರು. ಆದರೆ ಹೇಗೊ ಏನೋ ಸಾವರ್ಕರ್ ಅವರಿಗೂ, ಗಂಗಾಧರರಾಯರಿಗೂ ದೂರವಾಣಿಯ ಮೂಲಕ ಮಾತುಕತೆ ಆಗುವುದಿಲ್ಲ. ಗಂಗಾಧರರಾಯರು ಸರದಾರ್ ಗೃಹದ ಕೌಂಟರ್‌ಗೆ ಬಂದು ಗೃಹದ ಬಿಲ್ಲನ್ನು ಕೊಟ್ಟು ಸ್ಟೇಷನ್ನಗೆ ಬರುತ್ತಾರೆ. ಅಷ್ಟರಲ್ಲಿ ಪೊಲೀಸ್ ಅಧಿಕಾರಿಗಳು ಗಂಗಾಧರರಾಯ್‌ರನ್ನು ಅರೆಷ್ಟ್ ಮಾಡಲು ಸರದಾರ್ ಗೃಹಕ್ಕೆ ಬರುತ್ತಾರೆ. ಪೊಲೀಸರ ಚಾಕಚಕ್ಯತೆಯನ್ನು ಅರಿತ ಗಂಗಾಧರರಾಯರು ಅವರು ಬರುವ ಮುಂಚೆಯೇ ಜಾಗ ಖಾಲಿ ಮಾಡಿರುತ್ತಾರೆ. ಅವರಿಗೆ ಮುಂಬೈಯಲ್ಲಿ ನಿಧಿ ಸಂಗ್ರಹಿಸಬೇಕಾದ ಮತ್ತು ಚಳುವಳಿಯನ್ನು ಜಾಗ್ರತವಾಗಿಡುವ ತುರ್ತು ಕೆಲಸವಿರುವುದರಿಂದ ಮುಂಬೈಯಲ್ಲೇ ಉಳಿಯುತ್ತಾರೆ. ಅದಾದ ನಂತರ ಗಂಗಾಧರರಾಯರು ಮುಂಬೈಯನ್ನು ಬಿಟ್ಟು ಬೆಳಗಾವಿಗೆ ಬರುತ್ತಾರೆ. ಬೆಳಗಾವಿಯಲ್ಲಿ ಪೊಲೀಸರು ಗಂಗಾಧರರಾಯರನ್ನು ಬಂಧಿಸುತ್ತಾರೆ. ಏಕೆಂದರೆ ಇವರ ಬಂಧನದ ಪ್ರಭಾವ ಸ್ಥಳೀಯ ಕಾರ್ಯಕರ್ತರ ಮೇಲೆ ಆಗಿ

ಅವರು ಚಳುವಳಿಯಲ್ಲಿ ಭಾಗವಹಿಸಬಾರದೆಂಬ ಉದ್ದೇಶ ಪೊಲೀಸರದಿತ್ತು. ಆದರೆ ಪರಿಣಾವವೇ ಬೇರೆಯಾಗುತ್ತದೆ. ಚಳುವಳಿಕಾರರು ಇನ್ನಷ್ಟು ಹುರುಪಿನಿಂದ ಆಂದೋಲನದಲ್ಲಿ ಭಾಗವಹಿಸುತ್ತಾರೆ. ಇದು ಚಳುವಳಿಕಾರರಲ್ಲಿರುವ ರಾಷ್ಟ್ರಪ್ರೇಮದ ಪ್ರತೀಕವಾಗಿದೆ.

ಗಂಗಾಧರರಾಯರ ಜೊತೆ ಇದ್ದ ರಾಮಚಂದ್ರ ವಡವಿಯವರಿಗೂ ಚಳಿವಳಿಯನ್ನು ಹೇಗೆ ಮಾಡಬೇಕು ಮತ್ತು ತರುಣ ಜನರಲ್ಲಿ ರಾಷ್ಟ್ರೀಯತೆಯನ್ನು, ದೇಶಾಭಿಮಾನವನ್ನು ಮೂಡಿಸುವಲ್ಲಿ ಯಾವ ಯಾವ ಯೋಜನೆಗಳನ್ನು ರೂಪಿಸಬೇಕೆಂಬ ಆಲೋಚನೆಗಳು ಹೊಳೆಯುತ್ತಿದ್ದವು. ಅದಕ್ಕಾಗಿ ಸಭೆ ಸಮಾರಂಭಗಳನ್ನು ನಡೆಸಿ ಜನರಲ್ಲಿ ಜಾಗ್ರತೆಯನ್ನು ಮೂಡಿಸುತ್ತಿದ್ದರು. ವರ್ಕಿಂಗ್ ಕಮೀಟಿಯ ಸದಸ್ಯರನ್ನು ಬಂಧಿಸಿದ ಮೂರನೇ ದಿವಸವೇ ಗಂಗಾಧರರಾಯರ ಸಲಹೆ ಮತ್ತು ಆಶೀರ್ವಾದವನ್ನು ಪಡೆದು ಮುಂಬೈಯಿಂದ ಹೊರಟು ಬೆಳಗಾವಿಗೆ ಬರುತ್ತಾರೆ. ಈ ಸಂದರ್ಭದಲ್ಲಿ ವಡವಿಯವರಿಗೆ ಗಂಗಾಧರರಾವ್ ದೇಶಪಾಂಡೆ ಅವರು ಹೇಳಿದ ಮಾತುಗಳು ಅವರ ದೇಶ ಪ್ರೇಮಕ್ಕೆ ಸಾಕ್ಷಿಯಾಗುತ್ತವೆ. "ಮೊನ್ನೆ ಗಾಂಧೀಜಿಯವರ ಭಾಷಣ ನೀನು ಕೇಳಿಯೇ ಇರುವಿ. ಈ ಆಂದೋಲನ ಸೆರೆಮನೆ ತುಂಬುವ ಆಂದೋಲನವಲ್ಲ. ನಿನ್ನ ಬಂಧನವಾಯಿತು. ನೀನು ಜೈಲಿಗೆ ಹೋದಿ ಎಂಬುದನ್ನು ಕೇಳಿ ನನಗೆ ಸಮಾಧಾನವಾಗಲಾರದು. ನೀನು ಪೋಲೀಸರ ಗುಂಡಿನೇಟಿಗೆ ಬಲಿಯಾಗಿ ಸತ್ತಿ ಎಂದು ಕೇಳಿದರೆ ನನಗೆ ಹೆಚ್ಚು ಸಮಾಧಾನವಾದೀತು. ನಿನಗೆ ಏನು ಮಾಡಿ ತೋರಿಸಬೇಕಾಗಿದೆಯೋ ಅದನ್ನು ಮಾಡಿ ತೋರಿಸು. ಸಾಕಷ್ಟು ಅವಕಾಶವಿದೆ. ಇಂದು ಪ್ರತಿಯೊಬ್ಬ ಮನುಷ್ಯ ತನ್ನ ಮುಂದಾಳು ತಾನೇ ಆಗಿದ್ದಾನೆ. ಗಾಂಧೀಜಿಯವರ ತತ್ವಕ್ಕೆ ಅನುಸರಿಸಿ ಎಷ್ಟು ಉಪದ್ವ್ಯಾಪ ಮಾಡಬೇಕಾಗಿದೆಯೊ ಮಾಡು. ಧೈರ್ಯ ಸಾಹಸಗಳನ್ನು ತೋರಿಸು"[೩೫] ಹೀಗೆ ಹೇಳಿ ಅವರು ವಡವಿಯವರಿಗೆ ೩೦೦ ರೂಪಾಯಿಗಳನ್ನು ಕೊಡುತ್ತಾರೆ. ಅವರ ಅಪ್ಪಣೆ ಮೇರೆಗೆ ವಡವಿಯವರು ಪುಣೆಗೆ ಬಂದು ಅಲ್ಲಿಯ ಶಾಲಾ, ಕಾಲೇಜುಗಳ ವಿದ್ಯಾರ್ಥಿಗಳ ಮನಸ್ಸಿನಲ್ಲಿ ಚಳುವಳಿ ಕುರಿತಾದ ವಿಚಾರಗಳನ್ನು ತಿಳಿದುಕೊಳ್ಳುತ್ತಾರೆ. ಇಂಜನೀಯರಿಂಗ ಕಾಲೇಜ ವಿದ್ಯಾರ್ಥಿಗಳು ಚಳುವಳಿಯಲ್ಲಿ ಭಾಗವಹಿಸದಿದ್ದರೂ ಕೂಡಾ ಪೊಲೀಸ್ ಅಧಿಕಾರಿಗಳು ಅವರಿಗೆ ಬೆತ್ತದ ಬಿಸಿ ತೋರಿಸಲು ಪ್ರಯತ್ನಿಸುತ್ತಿದ್ದರು. ವಿದ್ಯಾರ್ಥಿಗಳು ಪೊಲೀಸರಿಗೆ ತಕ್ಕ ಪಾಠವನ್ನು ಕಲಿಸಿ ಪಲಾಯನ ಮಾಡುತ್ತಿದ್ದರು.

ವಡವಿಯವರು ಪುಣೆಯಿಂದ ಮಿರಜಗೆ ಬರುತ್ತಾರೆ. ಆಗ ಯಾವುದೇ ಬಸ್ಸಿನ ಸೌಕರ್ಯವಿಲ್ಲದೇ ಮಾರ್ಕೆಟ್‌ವರೆಗೆ ನಡೆಯುತ್ತಾ ಬರುತ್ತಾರೆ. ಇವರಿಗೆ ಪರಿಚಯವಿದ್ದ ಹಲವಾರು ಜನರು ಚಳುವಳಿಯನ್ನು ಕುರಿತು ವಡವಿಯವರೊಂದಿಗೆ ಚರ್ಚಿಸುತ್ತಾರೆ. ವಡವಿಯವರು ಮಿರಜದಿಂದ ಸಾಂಗಲಿಗೆ ಬಂದು ಅಲ್ಲಿ ಕೈಲಾಸವಾಸಿ ಗಣಪತರಾವ್ ಅಬ್ಯಂಕರ್ ಅವರ ಮನೆಯಲ್ಲಿ ಇರುತ್ತಾರೆ. ಕ್ರೀಯಾಶೀಲ ಹೋರಾಟಗಾರರಾಗಿರುವುದರಿಂದ ಚಳುವಳಿ ಕುರಿತು ಹಲವು ಯೋಜನೆಗಳನ್ನು ಹಾಕುತ್ತಾರೆ. ರಾತ್ರಿಯಲ್ಲಿ ವೇಷ ಬದಲಾಯಿಸಿಕೊಂಡು ಸೈಕಲ್ ಮೇಲಿಂದ ಮಿರಜಗೆ ಹೋಗಿ ಬರುತ್ತಿದ್ದರು. ವೇಷ ಬದಲಾಯಿಸುವುದರಿಂದ ಯಾರು ಇವರನ್ನು ಗುರುತಿಸುತ್ತಿರಲಿಲ್ಲ. ಸಾಮಾನ್ಯವಾಗಿ

ಹಗಲಿನಲ್ಲಿ ಇವರು ಅಭ್ಯಂಕರರ ಮನೆಯಿಂದ ಹೊರಗೆ ಬೀಳುತ್ತಿರಲಿಲ್ಲ. ಲಕ್ಷ್ಮಣ ಶಿವಿರ ಎಂಬ ಚಾಣಾಕ್ಷ ವಿದ್ಯಾರ್ಥಿ ಮಾತ್ರ ಇವರಿಗೆ ಹೊರಗಿನ ಸಂಪರ್ಕ ಇಟ್ಟುಕೊಳ್ಳಲು ಸಹಾಯಕನಾಗಿದ್ದನು. ಸುಮಾರು ಒಂದು ತಿಂಗಳುವರೆಗೆ ಇವರು ಬಟ್ಟೆಯನ್ನೇ ಬದಲಿಸಿರಲಿಲ್ಲ. ವೇಷ ಬದಲಾಯಿಸಿ ತಿರುಗಾಡುವುದು ಗಾಂಧಿ ತತ್ವಕ್ಕೆ ವಿರುದ್ಧವೆಂಬುದು ಇವರ ಅಭಿಪ್ರಾಯವಾಗಿತ್ತು.

ರಾಮಚಂದ್ರ ವಡವಿಯವರು ಗುಪ್ತ ಪತ್ರಿಕೆಯನ್ನು ಹೊರಡಿಸುತ್ತಿದ್ದರು. ಸಾಂಗಲಿಯಲ್ಲಿ ಪ್ರೊ. ಶಹಾ ಅವರ ಮುದ್ರಣಾಲಯದಲ್ಲಿ ಗುಪ್ತ ಪತ್ರಿಕೆಯನ್ನು ಮುದ್ರಿಸಲಾಗುತ್ತಿತ್ತು. ಆದರೆ ಈ ಗುಪ್ತ ಪತ್ರಿಕೆ ಬಹಳ ಕಾಲ ಗುಪ್ತವಾಗಿ ಉಳಿಯುವುದಿಲ್ಲ ಎಂದು ಗೊತ್ತಿತ್ತು. ಆದರೂ ಈ ಪತ್ರಿಕೆಯ ಮೂಲಕ ಜನರಲ್ಲಿ ಸ್ವಾತಂತ್ರ್ಯದ ಕಿಚ್ಚನ್ನು ಹಚ್ಚಬೇಕೆಂಬ ಉತ್ಕಟ ಇಚ್ಛೆ ವಡವಿಯವರದು. ಇವರ ಗುಪ್ತ ಪತ್ರಿಕೆಯು ಹೋರಾಟದ ತೀವ್ರ ಸ್ವರೂಪವನ್ನು ವಿವರಿಸುತ್ತಿತ್ತು. ಸ್ಟೇಷನ್ ಸುಡುವುದು ಹೇಗೆ? ರೇಲ್ವೆ ಹಳಿ ಕೀಳುವ ಬಗೆ ಹೇಗೆ? ರೇಲ್ವೆ ಹಳಿಯ ಫಿಶ್ ಪ್ಲೇಟ್ ಹೇಗೆ ತೆಗೆಯುವುದು? ರೇಲ್ವೆಯಲ್ಲಿ ಕುಳಿತು ಬಹಿರಂಗವಾಗಿ ಸರಪಳಿ ಜಗ್ಗಿ ಪರಿಣಾಮಕ್ಕೆ ಹೇಗೆ ಎದೆಗೊಟ್ಟು ನಿಲ್ಲುವುದು? ಮುಂತಾದ ವಿಷಯಗಳನ್ನು ಇವರು ಗುಪ್ತ ಪತ್ರಿಕೆಯಲ್ಲಿ ಬರೆಯುತ್ತಿದ್ದರು. ವಾರಕ್ಕೊಮ್ಮೆ ಎರಡೆರಡು ಗಂಟುಗಳಲ್ಲಿ ಕಟ್ಟಿ ಬೆಳಗಾವಿ ಜಿಲ್ಲೆಯಾದ್ಯಂತ ಅವುಗಳನ್ನು ಕಳಿಸುತ್ತಿದ್ದರು. ರೇಲ್ವೆ ಗಾರ್ಡ ಇವರಿಗೆ ಪರಿಚಯಸ್ಥನು. ಅವನ ಮುಖಾಂತರ ಪತ್ರಿಕೆಗಳನ್ನು ಆ ಡಬ್ಬಿಯಲ್ಲಿಟ್ಟು ಗಾರ್ಡಗೆ ಹೇಳಿ ಬಿಡುತ್ತಿದ್ದರು. ವಡವಿಯವರ ಅಣ್ಣ ಗೋಪಾಲರಾವ್ ಇವರು ಪತ್ರಿಕೆಯನ್ನು ಹಂಚುವ ಜವಾಬ್ದಾರಿ ಕೆಲಸವನ್ನು ಮಾಡುತ್ತಿದ್ದರು.

ಬ್ರಿಟಿಷ ಸರಕಾರಕ್ಕೆ ಶಹಾ ಅವರ ಮುದ್ರಣಾಲಯದಲ್ಲಿ ಈ ಗುಪ್ತ ಪತ್ರಿಕೆ ಮುದ್ರಿಸಲ್ಪಡುತ್ತದೆಯೆಂಬುದು ಗೊತ್ತಾಗುತ್ತದೆ. ಅವರು ಮುದ್ರಣಾಲಯವನ್ನು ಜಪ್ತ ಮಾಡಿ ತೀವ್ರ ಶೋಧನೆಗೆ ತೊಡಗುತ್ತಾರೆ. ಆದರೆ ಯಾವ ಒಂದು ಪತ್ರಿಕೆಯೂ ಅವರ ಕೈಗೆ ಸಿಗುವುದಿಲ್ಲ. ಗುಪ್ತ ಪತ್ರಿಕೆಯ ಗಂಟುಗಳು ಸಾಂಗಲಿಯ ಅಭ್ಯಂಕರರ ಮನೆಯಲ್ಲಿರುತ್ತಿದ್ದವು.

ಗುಪ್ತಪತ್ರಿಕೆಯನ್ನು ಓದಿದ ಚಳುವಳಿಗಾರರು ಫಿಶ್ ಪ್ಲೇಟ್ ತೆಗೆಯುವ ಪಾನಾಗಳನ್ನು ವೇಲನಕರ್ ಧನಿ ಅವರ ಕಾರಖಾನೆಯಿಂದ ಪಡೆಯುತ್ತಿದ್ದರು. ಅವು ಪಾನಾಗಳು ಬಂದೂಕಿನಷ್ಟು ಉದ್ದವಾಗಿದ್ದವು. ಅವುಗಳನ್ನು ಸೈಕಲ್ ಚಕ್ರಕ್ಕೆ ಕಟ್ಟಿಕೊಂಡು ಮತ್ತೆ ರಾತ್ರಿ ಅಭ್ಯಂಕರರ ಮನೆಯಲ್ಲಿ ಆ ಪಾನಾಗಳನ್ನು ಗುಪ್ತವಾಗಿ ಇಡಲಾಗುತ್ತಿತ್ತು. ಇವರ ಹೋರಾಟದ ಎರಡು ಮೂರು ತಿಂಗಳ ಅವಧಿಯಲ್ಲಿ ಎರಡು ಮೂರು ಮಾಲ್ ಗಾಡಿಗಳು ಹಳಿತಪ್ಪಿ ಬಿದ್ದಿದ್ದವು. ಬೆಳಗಾವಿಯಲ್ಲಿ ನಿಶ್ಚಿತ ತಾರೀಖಿಗೆ ಗುಪ್ತ ಪತ್ರಿಕೆಗಳು ವಿತರಣಗೊಳ್ಳುತ್ತವೆ ಎಂಬುದು ಪೊಲೀಸರಿಗೆ ಸುಳಿವು ಸಿಕ್ಕಿತು. ಅವರು ಬೆಳಗಾವಿ ನಿಪ್ಪಾಣಿ ಭಾಗದಲ್ಲಿ ಶೋಧ ಪ್ರಾರಂಭ ಮಾಡಿದರು. ಜನರನ್ನು ಬಂಧಿಸಿ ಪೊಲೀಸರು ಹೊಡೆಯ ಹತ್ತಿದರು. ಆಶ್ಚರ್ಯದ ಸಂಗತಿಯೆಂದರೆ ಶಹಾ ಅವರ ಮುದ್ರಣಾಲಯವನ್ನು

ಜಪ್ತ ಮಾಡಿ ಅವರನ್ನು ಬಂಧಿಸಿದ ಮೇಲೆಯೂ ಈ ಪತ್ರಿಕೆಯು ಹೊರಡುತ್ತಿತ್ತು. ಹೀಗೆ ಹೋರಾಟವನ್ನು ಅವರು ಹೇಗೋ ಜೋಪಾನವಾಗಿಡುತ್ತಿದ್ದರು.

೧೯೪೨ ಅಗಷ್ಟ ೯ ಅನಂತರ ಗಾಂಧೀಜಿ ಮತ್ತು ಬ್ರಿಟಿಷ ಸರಕಾರ ನಡುವೆ ಸಂಧಾನದ ಮಾತುಕತೆಗಳು ಮುರಿದು ಬಿದ್ದವು. ಯೂರೋಪ ಖಂಡದಲ್ಲಿ ಹೊತ್ತಿದ ಮಹಾಯುದ್ಧದ ಜ್ವಾಲೆ ಎಲ್ಲ ಕಡೆಪಸರಿಸಿತು. ಇದಕ್ಕೆ ಭಾರತವು ಹೊರತಾಗಿರಲಿಲ್ಲ. ಜಪಾನ ದೇಶವು ಪೂರ್ವದ ರಾಷ್ಟ್ರಗಳತ್ತ ಕೈಚಾಚಿ ಹಿಂದೂಸ್ತಾನವನ್ನು ಸೆಳೆಯಿತು. ಬಂಗಾಲ ಉಪಸಾಗರದಲ್ಲಿ ಗುಪ್ತಚಾರರ ಸುಳಿದಾಟ ನಡೆದಿತ್ತು. ಅಲ್ಲಲ್ಲಿ ಬಾಂಬಗಳು ಬೀಳತೊಡಗಿದವು. ಬರ್ಮಾ ದೇಶದಲ್ಲಿ ಜಪಾನರ ದಾಳಿಯಿಂದ ತೊಂದರೆಗೀಡಾದ ಬ್ರಿಟಿಷ ಸೈನ್ಯ ಅಲ್ಲಿಯ ಜನರನ್ನು ಅವರ ಪಾಡಿಗೆ ಬಿಟ್ಟು ಕಾಲ್ದೆಗೆದಿತ್ತು. ಬ್ರಿಟಿಷರ ಈ ಅಸಹಾಯ ಸ್ಥಿತಿ ಗಾಂಧೀಜಿಗೆ ಗೊತ್ತಾಗಿತ್ತು. ಬ್ರಿಟಿಷರು ಭಾರತಕ್ಕೆ ಸ್ವಾತಂತ್ರ್ಯ ಕೊಟ್ಟು ಭಾರತೀಯರಿಂದ ನೆರವು ಪಡೆಯಬಹುದೆಂದು ಗಾಂಧೀಜಿ ಭಾವಿಸಿದ್ದರು. ಆದರೆ ಹಾಗಾಗಲಿಲ್ಲ. ಗಾಂಧೀಜಿ ಅನಿವಾರ್ಯವಾಗಿ 'ಬ್ರಿಟಿಷರೇ ಭಾರತದಿಂದ ತೊಲಗಿರಿ' ಎಂದು ಹೇಳಬೇಕಾಯಿತು. ಅಖಿಲ ಭಾರತ ಕಾಂಗ್ರೆಸ್ ಕಮೀಟಿಯು ಅದನ್ನು ಮಾನ್ಯ ಮಾಡಿತು. ಬ್ರಿಟಿಷ ಸರಕಾರ ಗಾಂಧೀಜಿಯವರನ್ನು ವರ್ಕಿಂಗ ಕಮೀಟಿಯ ಸದಸ್ಯರನ್ನು ಮತ್ತು ಮುಖಂಡರನ್ನು ಬಂಧಿಸಿತು. ಇಡೀ ದೇಶದ ತುಂಬಾ ಕಾಂಗ್ರೆಸ್ ಕಾರ್ಯಕರ್ತರು ಸಿಟ್ಟಿಗೆದ್ದು ಹೋರಾಟಕ್ಕಿಳಿದರು.

ಕುಂದರನಾಡಿನಾದ್ಯಂತ ಹೋರಾಟದ ಸ್ವರೂಪವು ಭೀಕರವಾಗಿತ್ತು. ಗೋಕಾಕ ತಾಲೂಕಾ ಕಾಂಗ್ರೆಸ್ ಕಮೀಟಿಯು ಡಾ. ಕಡಲಗೀಕರ್ ಅವರ ಮನೆಯ ಅಟ್ಟದ ಮೇಲೆ ಸಭೆ ಸೇರಿ ಹಲವು ಮಹತ್ವದ ನಿರ್ಣಯಗಳನ್ನು ತೆಗೆದುಕೊಳ್ಳಲಾಯಿತು. ಈ ಸಭೆಯಲ್ಲಿ ಬಿದರಿ ವಾಮನ್ ರಾವ್ ದೇಸಾಯಿ, ಶ್ರೀಮತಿ ಪದ್ಮಾವತಿಬಾಯಿ ದೇಸಾಯಿ, ಶ್ರೀರಂಗ ಕಾಮತ, ವೆಂಕರೆಡ್ಡಿ ಹೂಲಿ, ಅಪ್ಪಣಗೌಡಾ ಪಾಟೀಲ, ಅಣ್ಣೂ ಗೂರೂಜಿ, ಶೇಖಸಾಹೇಬ, ಹುಚ್ಚಪ್ಪಾ ಹೊಳೆಯಾಚಿ, ಬಾಳಪ್ಪಾ ಹೊಳೆಯಾಚಿ, ಮಲ್ಲಪ್ಪಾ ಕುಂದರಗಿ, ಕಲ್ಲಪ್ಪಾ ಹೊಸಮನಿ, ಸಿದ್ದಪ್ಪಾ ಬಡಿಗೇರ್, ಈರಯ್ಯಾ ಮಠಪತಿ, ಬಸಯ್ಯಾ ಮಠಪತಿ, ಅಪ್ಪಣ್ಣಾ ಭಾವಿಕಟ್ಟಿ, ಬಸವಣ್ಣೆಯ್ಯಾ ಮಠದ, ಯಮನಪ್ಪಾ ಅರಭಾವಿ, ಉದ್ದಪ್ಪಾ ಎತ್ತಿನಮನಿ, ಬಾಳಪ್ಪಾ ಶೆಟ್ಟರ್, ಈರಭದ್ರಪ್ಪಾ ಪತ್ತಾರ, ಉಮರೆಡ್ಡಿ, ಕಲ್ಲಪ್ಪಾ ಬೂದಿ, ಹನುಮಂತಪ್ಪಾ ಮಿರಜಿ, ಸಂಗಯ್ಯಾ ಸ್ವಾಮಿ, ಅನಂತ ಬೆಳವಡಿ, ಗೋಪಾಳರಾವ್ ಬೆಳವಡಿ, ಬಸವಲಿಂಗಪ್ಪಾ ಕಲ್ಯಾಣಿ, ನಿಂಗಪ್ಪಾ ಪಾಟೀಲ, ಭೀಮಸಿ ಪೂಜಾರಿ, ಶಂಕರೆಪ್ಪಾ ಬರಬರಿ, ಚೆಂಬಣ್ಣಾ ಅಂಗಡಿ, ಬಾಳಪ್ಪಾ ಹಾವನಾಳಿ, ಶಿವಶಂಕರೆಪ್ಪಾ ತಡಕೋಡ ಹೀಗೆ ಹಲವಾರು ಮುಖಂಡರು ಸಭೆಯಲ್ಲಿ ಭಾಗವಹಿಸಿದ್ದರು. ಶ್ರೀರಂಗ ಕಾಮತರು ಸಭೆಯಿಂದ ಹೊರಹೋಗಿ ಎರಡು ಗಂಟೆಗಳ ಬಳಿಕ ಮರಳಿ ಬಂದವರೆ ಪೊಲೀಸರ ಮಾಹಿತಿಯೊಂದನ್ನು ತರುತ್ತಾರೆ. ಅದೇ ದಿನ ಮಧ್ಯಾಹ್ನ ಮೂರು ಘಂಟೆಗೆ ಬೆಳಗಾವಿ ಜಿಲ್ಲೆಯ ಎಲ್ಲ ಮುಖಂಡರನ್ನು ಬಂಧಿಸಲು ವಾರೆಂಟ ಹೊರಡಿಸಿದ್ದಾರೆ ಎಂಬ ಸುದ್ಧಿಯನ್ನು ಕೇಳುತ್ತಲೇ ಹೋರಾಟಗಾರರೆಲ್ಲಾ ಬೇರೆ ಬೇರೆ ದಿಕ್ಕಿನತ್ತ ಪ್ರಯಾಣ ಮಾಡುತ್ತಾರೆ.

ಅಕ್ಕತಂಗಿಯರಹಾಳ, ಪಾಶ್ಚಾಪೂರ ಯೋಧರ ಗುಂಪು ಕಡಬಗಟ್ಟಿಯ ಭಯಾನಕ ಗೋರ ಅರಣ್ಯಗಳ ಕಣಿವೆ ಮಾರ್ಗದ ಮುಖಾಂತರ ಸಾಗಿತ್ತು. ಎದೆ ನಡುಗಿಸುವ ಗುಡ್ಡ ಬೆಟ್ಟಗಳ ಕಾಲುದಾರಿ ಸುಳಿವು ಹಿಡಿದು ಏಳುತ್ತಾ ಬೀಳುತ್ತಾ ಮುನ್ನಡೆದು ಕನಸಗೇರಿಗೆ ಬರುತ್ತಾರೆ. ಅಲ್ಲಿಂದ ಆಗ್ನೇಯ ದಿಕ್ಕಿನಲ್ಲಿ ಕಾಡಿನಲ್ಲಿ ನುಸುಳಿ ಈರನಟ್ಟಿ ಗ್ರಾಮವನ್ನು ತಲುಪುತ್ತಾರೆ. ಮತ್ತೆ ಮದುವಾಲ ಸೀಮೆಯಲ್ಲಿ ಹಯ್ದು ದಕ್ಷಿಣ ದಿಕ್ಕಿನತ್ತ ಮುನ್ನಡೆದು ಬಿಕ್ಕಲುಮರಡಿ ತಲುಪಲು' ಏಳು ಹನ್ನೊಂದು ಆಗುತ್ತದೆ. ಹಸಿವು, ನೀರಡಿಕೆ, ಪ್ರಯಾಸ, ಇವುಗಳನ್ನು ಲೆಕ್ಕಿಸದೆ ಬಿಕ್ಕಲುಮರಡಿ ಕಾಡಿನಲ್ಲಿ ಎಲ್ಲರೂ ಜಮಾಯಿಸುತ್ತಾರೆ. ವೆಂಕರೆಡ್ಡಿಯವರ ಜೊತೆ ಶ್ರೀ ಬಿದರಿ ವಾಮನರಾಯರು ಸವದತ್ತಿ ಕಡೆ ಬಸ್ಸ ಹತ್ತಿ ಹೊರಡುತ್ತಾರೆ. ಮುನವಳ್ಳಿ ಬಸ್ಸ ನಿಲ್ದಾಣದಲ್ಲಿ ವೆಂಕರೆಡ್ಡಿ ಹೂಲಿಯವರ ಬಂಧನವಾಗುತ್ತದೆ. ಆಗ ವಾಮನರಾಯರು ಮಾಡಮಗೇರಿ ಕತ್ತರಿಯವರೆಗೆ ನಡೆಯುತ್ತಾ ಬಂದು ಕಡಬಿ ಶಿವಾಪೂರ ತಲುಪಿ ಅಲ್ಲಿ ಪಾರಿಸಪ್ಪನನ್ನು ಕರೆದುಕೊಂಡು ಅರಣ್ಯದೊಳಗೆ ಅಲೆಮಾರಿಯಂತೆ ಅಲೆಯುತ್ತಾ ಅಕ್ಕತಂಗಿಯರಹಾಳ, ಬಿಕ್ಕಮರಡಿಯ ಕ್ಯಾಂಪನ್ನು ಸೇರಿಕೊಳ್ಳುತ್ತಾರೆ.

ಕುಂದರನಾಡಿನ ಸ್ವಾತಂತ್ರ್ಯ ಸಮರದ ಸೇನಾಪತಿ ವಾಮನರಾಯರ ಆದೇಶದಂತೆ ತಾರು, ತಂತಿ ಕತ್ತರಿಸಲು ಗ್ರಾಮೀಣ ಕಾರಖಾನೆಗಳಲ್ಲಿ ತಯಾರಾದ ಶುದ್ಧ ಉಕ್ಕಿನಿಂದ ತಯಾರಿಸಿದ ಹರಿತವಾದ ಕೊಡಲಿ, ಕುಡಗೋಲು, ಗರಗಸ ಆಯುಧಗಳನ್ನು ತಯಾರಿಸಿಕೊಂಡು ಬಾಳಪ್ಪಾ ಹೊಳೆಯಾಚೆ, ಕಲ್ಲಪ್ಪಾ ಹೊಸಮನಿ, ಬಸಯ್ಯಾ ಮಠಪತಿ, ಬಸವಣ್ಣೆಯ್ಯಾ ಮಠದ, ಅಪ್ಪಣ್ಣಾ ಭಾವಿಕಟ್ಟಿ, ಈರಯ್ಯಾ ಮಠಪತಿ, ಮಲ್ಲಪ್ಪ ಕುಂದರಗಿಮುಂತಾದವರು ತಾರಿನ ಕಂಬ, ತಂತಿ ಕತ್ತರಿಸುವ ಕಾರ್ಯಕ್ರಮದಲ್ಲಿ ತೊಡಗಿಕೊಂಡರು. ಚಳುವಳಿಕಾರರು ವೇಷ ಮರೆಯಿಸಿಕೊಂಡು ಪಾಶ್ಚಪೂರ ರೈಲು ನಿಲ್ದಾಣಕ್ಕೆ ಬರುತ್ತಾರೆ. ರೈಲಿನಲ್ಲಿ ಕುಳಿತು ಕುಡಚಿ ರೈಲ್ವೆ ಸ್ಟೇಷನ್ ಬರುವುದರೊಳಗೆ ಹೊತ್ತು ಮುಳುಗುತ್ತದೆ. ಎಲ್ಲರಿಗೂ ಹೊಟ್ಟೆ ತಾಳ ಹಾಕುತ್ತಿತ್ತು. ಎಲ್ಲಿಗಾದರೂ ಹೋಗಿ ಏನನ್ನೂ ತಿಣ್ಣಬೇಕಾದರೆ ಪೊಲೀಸರ ಭಯ. ಅಲ್ಲದೆ ಶಿಸ್ತಿನ ಪಥ್ಯ ಪಾಲಿಸುವ ನಿಷ್ಠೆ. ದೂರದಲ್ಲಿ ಗುಡುಸಲಿನ ಒಳಗೆ ಮಿನುಕು ದೀಪ ಕಾಣುತ್ತದೆ. ಒಂದಿಬ್ಬರು ಹಣಕಿ ಹಾಕಿ ಊಟಕ್ಕೆ ಏನಾದರು ಇದೆಯೇ ಎಂದು ಕೇಳುತ್ತಾರೆ. ಅಲ್ಲಿ ವಯೋವೃದ್ಧನಾದ ಅಜ್ಜನನ್ನು ಕಂಡು ತಮ್ಮ ಅಳಲನ್ನು ತೋಡಿಕೊಳ್ಳತ್ತಾರೆ. ಮುದುಕನು ಝುಣಕ ಮತ್ತು ಅನ್ನ ಮಾಡಿ ಚಳುವಳಿಕಾರರಿಗೆ ಬಡಿಸುತ್ತಾನೆ. ಅಲ್ಲದೆ ಊಟವಾದ ತಕ್ಷಣ ಇಲ್ಲಿಂದ ಬೇರೆ ಕಡೆ ಹೋಗಬೇಕೆಂದು ಆಜ್ಞೆ ಮಾಡುತ್ತಾನೆ.

ಊಟ ಮುಗಿಸಿದ ಚಳುವಳಿಕಾರರು ವಿಶ್ರಾಂತಿಗಾಗಿ ಒಂದು ಮುರುಕು ಧರ್ಮಶಾಲೆಯನ್ನು ಆಶ್ರಯಿಸುತ್ತಾರೆ. ಅಲ್ಲಿ ದಾಸರು, ಡೊಂಬರು, ಬುಡುಬುಡುಕೆಯವರು, ಕವಲೆತ್ತಿನವರು, ಹೆಳವರು ಬೀಡು ಬಿಟ್ಟಿದ್ದರು. ಅಲ್ಲಿಯೇ ಒಂದು ಮೂಲಿಯಲ್ಲಿ ಜಾಗ ಮಾಡಿಕೊಂಡು ಹೇಗೊ ಆ ರಾತ್ರಿಯನ್ನು ಕಳೆಯುತ್ತಾರೆ. ಅಲೆಮಾರಿಗಳ ಜೀವನ ಸಂಗಾತಿಗಳಾದ ಎತ್ತು, ಕತ್ತೆ, ಆಡು, ಕುರಿ, ನಾಯಿ, ಬೆಕ್ಕುಗಳ ಅರಚಾಟದಿಂದ ರಾತ್ರಿ ನಿದ್ರೆಯೂ ಆಗದೇ ನಸುಕಿನಲ್ಲಿ ಬೇಗನೆ ಎದ್ದು ಮತ್ತೆ ಪ್ರಯಾಣ

ಬೆಳೆಸುತ್ತಾರೆ. ಜನ ಈ ಚಳುವಳಿಕಾರರನ್ನು ಗುರುತಿಸಬಾರದೆಂದು ಅವರು ತಮ್ಮ ಮಾತನಾಡುವ ಶೈಲಿಯನ್ನೇ ಬದಲಿಸುತ್ತಿದ್ದರು. ಹಸಿವು, ನೀರಡಿಕೆಯನ್ನು ತಾಳಲಾರದೆ ಯೋಧರು ಪಕ್ಕದ ಯಲ್ಲಾರಟ್ಟಿಗೆ ಬಂದು ಬಸವಣೆಯ್ಯಾ ಮಠದ ಅವರ ಕೈಯಲ್ಲಿ ಹಣಕೊಟ್ಟು ರೊಟ್ಟಿ ತರಲು ಹೇಳುತ್ತಾರೆ. ಎಲ್ಲಿ ಓಣಿಯೆಲ್ಲಾ ಸುತ್ತಿದರೂ ಹಣಕ್ಕೆ ರೊಟ್ಟಿಯನ್ನು ಕೊಡುವುದಿಲ್ಲವೆಂದು ಹೇಳುತ್ತಾರೆ. ಬರಿಗೈಯಿಂದ ಮರಳಿ ಬಂದ ಬಸವಣಯ್ಯನನ್ನು ಕಂಡು ಯೋಧರು ಅನಿವಾರ್ಯವಾಗಿ ಮುಂದೆ ಸಾಗುತ್ತಾರೆ. ಕಷ್ಟದ ಕಾಲಕ್ಕೆ ದೈವ ನೆರವನ್ನು ನೀಡುತ್ತದೆ ಎಂಬುದಕ್ಕೆ ಇಲ್ಲಿಯ ಒಂದು ಘಟನೆ ಸಾಕ್ಷಿಯಾಗುತ್ತದೆ.

ಕಾಲು ದಾರಿಯಿಂದ ಸ್ವಲ್ಪ ಮುಂದೆ ಬರುವುದರಲ್ಲಿ ಕಣ್ಣಿಗೆ ಹಸಿರು ತೋಟ ಗೋಚರಿಸುತ್ತದೆ. ಅಲ್ಲಿ ಬಾಳೆ, ಕಬ್ಬು, ಎಲೆಬಳ್ಳಿ ಮತ್ತು ಸುತ್ತಲೂ ಮಾವಿನಗಿಡ ಬದಿಯಲ್ಲೇ ಕಾವಲಿಯ ನೀರು ಕಂಡಾಗ ಯೋಧರಿಗೆ ಸಂತೋಷವಾಗುತ್ತದೆ. ಕಾವಲಿಯ ನೀರಲ್ಲಿ ಕೈಕಾಲು ಮುಖ ತೊಳೆದು ವಿಶ್ರಮಿಸುವಾಗ ಅನೀರಿಕ್ಷಿತವಾಗಿ ಒಬ್ಬ ಅಜಾನುಭಾವ ಸಭ್ಯಗ್ರಹಸ್ಥ ದೊಡ್ಡದಾದ ಬುತ್ತಿಗಂಟನ್ನು ತೆಗೆದುಕೊಂಡು ಬಂದು ಚಳುವಳಿಕಾರರಿಗೆ ಕೊಡುತ್ತಾನೆ. ಅವರಿಗೆ ತಮ್ಮ ಕಷ್ಟವನ್ನು ನೋಡಿ ಭಾರತಮಾತೆ ಊಟ ಕಳಿಹಿಸಿದಂತಾ ಅನುಭವವಾಗುತ್ತದೆ. ಊಟ ಮಾಡಿ ಭಗವಂತನನ್ನು ಸ್ಮರಿಸಿ ಮತ್ತೆ ತಾರ, ತಂತಿ ಕಡೆಯುವ ತಮ್ಮ ಚಳುವಳಿಯನ್ನು ಮುಂದುವರಿಸುತ್ತಾರೆ. ತೇರದಾಳದಿಂದ ಹಾರೂಗೇರಿವರೆಗಿನ ತಾರು, ತಂತಿಯನ್ನು ಕತ್ತರಿಸಿ ಬ್ರಿಟಿಷ ಸರಕಾರಕ್ಕೆ ಎಚ್ಚರಿಕೆಯ ಗಂಟೆಯನ್ನು ಮೊಳಗಿಸುತ್ತಾರೆ. ಹೀಗೆ ಕುಂದರನಾಡಿನ ಚಳುವಳಿಕಾರರ ಒಂದೊಂದು ತಂಡವು ಬೇರೆ ಬೇರೆ ಭಾಗದಲ್ಲಿ ಚಳುವಳಿಯನ್ನು ಅತ್ಯಂತ ತೀವ್ರ ಸ್ವರೂಪದಲ್ಲಿ ಕೈಕೊಳ್ಳುತ್ತದೆ.

ಕುಂದರನಾಡಿನಲ್ಲಿಯೂ ಅದೇ ರೀತಿ ಹೋರಾಟ ಪ್ರಾರಂಭವಾಯಿತು. ರಾಮಚಂದ್ರ ವಡವಿಯವರು ಈ ಸಮಯದಲ್ಲಿ ಹುಬ್ಬಳ್ಳಿಯಲ್ಲಿದ್ದರು. ಅವರ ಪತ್ನಿಗೆ ಕಾಯಿಲೆ. ಉಪಚಾರಕ್ಕಾಗಿ ತಾಯಿ, ಪತ್ನಿ ಹಾಗೂ ಮಗಳನ್ನು ಹುಬ್ಬಳ್ಳಿಯಲ್ಲಿ ಬಿಟ್ಟು ಬೆಳಗಾವಿಗೆ ಬಂದು ಚಳುವಳಿಯಲ್ಲಿ ಪಾಲ್ಗೊಂಡರು. ಅಗಷ್ಟ ೯ ನೇ ತಾರೀಖು ಎಲ್ಲ ಮುಖಂಡರನ್ನು ಬಂಧಿಸಿದ್ದರು. ಗಂಗಾಧರರಾಯ ಬಂಧನವಾಗಿತ್ತೊ ಇಲ್ಲವೊ ಗೊತ್ತಿಲ್ಲ. ಎಲ್ಲಿ ತಮ್ಮನ್ನು ಬಂಧಿಸುತ್ತಾರೋ ಎಂಬ ಸಂಶಯದಿಂದ ಗುಪ್ತ ರೀತಿಯಲ್ಲಿ ಚಳುವಳಿಯನ್ನು ಮಾಡುತ್ತಾರೆ. ಈ ನಡುವೆ ಹುಬ್ಬಳ್ಳಿಯಲ್ಲಿ ನಾಲ್ಕು ದಿನವಿದ್ದು ತಕ್ಕ ಮಟ್ಟಿಗೆ ಮನೆಯ ವ್ಯವಸ್ಥೆ ಮಾಡಿ ಬೆಳಗಾವಿಗೆ ಬರುವಷ್ಟರಲ್ಲಿ ಅಲ್ಲಿಂದ ಒಂದು ಸಂದೇಶ ಬರುತ್ತದೆ. 'ನಿಮ್ಮ ಮೇಲೆ ವಾರಂಟ್ ಇದೆ. ನೀವು ಪೊಲೀಸರ ಕೈಗೆ ಸಿಗಬಾರದು ಭೂಗತರಾಗಿ ಕೆಲಸ ಮಾಡಬೇಕು'. ಈ ರೀತಿ ಗಂಗಾಧರರಾಯರು ಹೇಳಿ ಕಳುಹಿಸಿದ್ದರೆಂದು ನಿರೋಪದಲ್ಲಿತ್ತು.

ಗಂಗಾಧರರಾಯರು ಕಳುಹಿಸಿದ್ದರೊ ಅಥವಾ ಅವರ ಹೆಸರಿನಿಂದ ಬೇರೆಯವರು ಕಳುಹಿಸಿದ್ದರೊ ತಿಳಿಯಲಿಲ್ಲ. ಒಟ್ಟಿನ ಮೇಲೆ ಬೆಳಗಾವಿಗೆ ಹೊಗಬೇಕು ಭೂಗತನಾಗಿದ್ದುಕೊಂಡೇ ಕಾರ್ಯ ಸಾಧಿಸಬೇಕೆಂದು ಬಯಸಿದರು. ಗಂಗಾಧರರಾಯರು ಈಗಾಗಲೇ ಬಂಧಿತರಾಗಿದ್ದರು.

ಪುಂಡಲಿಕಜೀ ಅವರು ಭೂಗತರಾಗಿ ಮಿರಜ ಕಡೆ ಹೋಗಿ ಅಲ್ಲಿ ಬುಲೆಟಿನ್ ಹೊರಡಿಸ ಹತ್ತಿದರು. ರಾಮಚಂದ್ರ ವಡವಿಯವರು ಒಮ್ಮೆಲೇ ಹುದಲಿಗೆ ಹೋಗದೆ ಬೆಳಗಾವಿಯ ಶ್ರೀ ಬೋಧರಾವ್ ನಾಯಿಕರ ಮನೆಯಲ್ಲಿ ಇದ್ದು ಪರಿಸ್ಥಿತಿಯ ಪರಿಚಯ ಮಾಡಿಕೊಳ್ಳತೊಡಗಿದರು. ಆಂದೋಲನದ ಗತಿ ಎತ್ತ ಸಾಗುವುದೋ ಯಾವ ರೂಪ ಪಡೆಯುವದೋ ಎಂಬುದನ್ನು ನಿರೀಕ್ಷಿಸತೊಡಗಿದರು. ಇವರ ಜೊತೆ ಕಾರ್ಯಕರ್ತರಾದ ಶ್ರೀ ವಾಮನರಾವ್ ದೇಸಾಯಿ, ಬಾ.ಯ. ದೇಶಪಾಂಡೆ (ಅಣ್ಣೂ ಗುರೂಜಿ), ಶ್ರೀರಂಗ ಕಾಮತ, ಚೆನ್ನಪ್ಪಾ ವಾಲಿ ಮೊದಲಾದವರು ಈಗಾಗಲೇ ಭೂಗತರಾಗಿದ್ದರು. ವಡವಿಯವರು ಹುದಲಿಗೆ ರೈಲಿನಿಂದ ಹೋಗಬೇಕೆಂದು ನಿರ್ಧರಿಸಿದರು. ಆದರೆ ದಾರಿಯಲ್ಲಿ ಶ್ರೀ ದಾದಾಸಾಹೇಬ ದೇಶಪಾಂಡೆಯವರು ಭೆಟ್ಟಿಯಾಗಿ 'ನಿಮ್ಮ ಮೇಲೆ ವಾರೆಂಟ ಇದೆ. ಪೊಲೀಸರು ನಿಮ್ಮ ಶೋಧದಲ್ಲಿದ್ದಾರೆ. ನೀವು ರೈಲಿನಿಂದ ಹುದಲಿಗೆ ಹೋಗುವುದು ಸರಿಯಲ್ಲ' ಎಂದು ಹೇಳುತ್ತಾರೆ. ವಡವಿಯವರಿಗೆ ಅದು ಸರಿ ಎನಿಸಿತು. ಆಗ ರೈಲ್ ಪ್ರಯಾಣವನ್ನು ರದ್ದು ಮಾಡಿ ಹದಿನೇಳು ಮೈಲು ಗುಡ್ಡದ ಮಾರ್ಗವನ್ನು ನಡೆಯುತ್ತಲೇ ಸಾಗಿ ಹುದಲಿಗೆ ಬರುತ್ತಾರೆ. ವಾಮರಾವ್ ದೇಸಾಯಿಯವರು ಅಕ್ಕತಂಗೇರಹಾಳದಲ್ಲಿ ಅಣ್ಣೂ ಗುರೂಜಿ ಪಾಶ್ಚಾಪೂರದಲ್ಲಿ ಭೂಗತರಾಗಿದ್ದರು. ಇವರು ಬಂದ ಸುದ್ದಿ ಅವರಿಗೆ ಗೊತ್ತಾದ ಬಳಿಕ ಗುಪ್ತ ರೀತಿಯಿಂದ ಪತ್ರ ವ್ಯವಹಾರಗಳು ನಡೆಯುತ್ತಿದ್ದವು.

೧೯೩೭ ರಲ್ಲಿ ಪ್ರಾರಂಭವಾದ ಜಮನಾಲಾಲ್ ಖಾದೀ ವಿದ್ಯಾಲಯವು ಕುಂದರನಾಡಿನ ಹೋರಾಟಕ್ಕೆ ಪ್ರೇರಣೆಯನ್ನೊದಗಿಸಿತು. ಇಲ್ಲಿ ನಡೆಯುವ ಕಾರ್ಯಕ್ರಮಗಳ ಸ್ವರೂಪ ಬರುಬರುತ್ತಾ ಬದಲಾಯಿತು. ಗಾಂಧೀ ವಿಚಾರಗಳನ್ನು ತಿಳಿದುಕೊಳ್ಳುವುದು ನೂಲುವ, ನೇಯುವ ಕಾರ್ಯವನ್ನು ಕಲಿಸುವುದು. ಇವುಗಳನ್ನು ಸ್ಥಾಪಿಸುವುದರಲ್ಲಿಯೇ ಈ ವಿದ್ಯಾಲಯವು ಪರ್ಯವಸಾನವಾಯಿತು. ವಿದ್ಯಾಲಯದಲ್ಲಿ ಅಧ್ಯಯನ ಮಾಡುವ ನೀಲಕಂಠಯ್ಯಾ ಗಣಾಚಾರಿ, ಪಿ. ಬಿ. ಪಾಟೀಲ, ನಾರಾಯಣ ದೀಕ್ಷಿತ್, ಸೋಮಲಿಂಗಪ್ಪಾ ಮಳಲಿ, ನಿಂಗಪ್ಪಾ ತುಕ್ಕರ್, ಭೀಮಪ್ಪಾ ಎಲೆಗಾರ, ಅ. ಸಾ ಹೂಗಾರ, ಅಪ್ಪಯ್ಯಪ್ಪಾ ವಾರೀಮನಿ, ಭೀಮಪ್ಪಾ ಭೂಸಿ, ಕೆಂಚನಗೌಡಾ ಪಾಟೀಲ ಮುಂತಾದವರಿದ್ದರು. ಇವರು ಮುಂದೆ ವಡವಿಯವರ ಜೊತೆ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರೀಯ ಭಾಗವಹಿಸಿದ್ದರು. ಈ ಶಿಕ್ಷಣ ಸಂಸ್ಥೆಗೆ ಗುಪ್ತವಾಗಿ ಭೇಟ್ಟಿಯಾಗಿ ಮಾರ್ಗದರ್ಶನ ಮಾಡುತ್ತಿದ್ದರು. ಪುಂಡಲೀಕಜೀ ಅವರು ಭೂಗತರಾಗಿದ್ದರೂ ವಿದ್ಯಾರ್ಥಿಗಳಿಗೆ ಭೌದ್ಧಿಕ ವರ್ಗ ಬೋಧಿಸುತ್ತಿದ್ದರು. ಈ ವಿದ್ಯಾಲಯದ ಎರಡನೇ ಪಥಕದ ಸಂಚಾಲಕರು ಸೋಮಲಿಂಗ ಮಳಗಲಿಯವರು. ಇವರ ನೇತೃತ್ವದಲ್ಲಿ ಈ ಪಥಕದ ಯಾವ ವಿದ್ಯಾರ್ಥಿಗಳೂ ತಮ್ಮ ತಮ್ಮ ಊರುಗಳಿಗೆ ಹೋಗದೇ ಹುದಲಿಯಲ್ಲಿದ್ದುಕೊಂಡೇ ಚಳುವಳಿ ಮಾಡಲು ಸಿದ್ಧರಿದ್ದರು. ಅದಕ್ಕಾಗಿ ಒಂದು ಯೋಜನೆಯನ್ನು ರೂಪಿಸಿದರು. ಈ ಯೋಜನೆ ಕಾರ್ಯರೂಪಕ್ಕೆ ಬರುವ ಪೂರ್ವದಲ್ಲಿ ಆ ಎಲ್ಲ ವಿದ್ಯಾರ್ಥಿಗಳು ತಮ್ಮ-ತಮ್ಮ ಊರುಗಳಿಗೆ ಹೋಗಿ ಅಲ್ಲಿಂದಲೇ ಸೆರೆಮನೆ ಸೇರಿದರು. ಶ್ರೀಮತಿ ಭವಾನಿಬಾಯಿ ಕಾನುಗೊ, ಶ್ರೀ ಸೋಮಲಿಂಗ ಮಳಗಲಿ, ಈರಪ್ಪಾ ಮಾವಿನಕಟ್ಟಿ, ಜಿ. ನಾರಾಯಣ ಇವರು ಪ್ರಭಾತಫೇರಿಯಲ್ಲಿ ಭಾಗವಹಿಸಿ ಹುದಲಿಯಿಂದಲೇ ಸೆರೆಮನೆ ಸೇರಿದರು.

ಹುದಲಿಯಲ್ಲಿ ಹಮ್ಮಿಕೊಂಡ ಪ್ರಭಾತಫೇರಿಯು ಅತ್ಯಂತ ಯಶಸ್ವಿಯಾಗಿ ಜರುಗಿತು. ಪ್ರಭಾತಫೇರಿಯ ಮೊದಲ ದಿವಸವೇ ಬಂದೋಬಸ್ತಿಗಾಗಿ ಸಬ್‌ಇನ್‌ಸ್ಪೆಕ್ಟರ್ ಅಪ್ಪಳೆಯವರು ಹತ್ತು ಹದಿನೈದು ಜನ ಪೊಲೀಸರೊಂದಿಗೆ ಬಂದಿದ್ದರು. ಹುದಲಿಯ ಪೊಲೀಸ ಪಾಟೀಲರು ಶ್ರೀ ಬಸನಗೌಡರು ಅವರ ಮುಖಂಡತ್ವದಲ್ಲಿ ಪ್ರಭಾತಫೇರಿಯು ಜರಗುತ್ತಿತ್ತು. ಬಿ. ಆರ್ ಪಾಟೀಲ ಅವರು ಬೆಳಗಾವಿ ತಾಲೂಕಿನ ಬಡಸ ಗ್ರಾಮದವರು, ಇವರು ಚಿಕ್ಕಂದಿನಿಂದ ತಮ್ಮ ಮಾವನವರಾದ ಹುದಲಿಯ ಬಸನಗೌಡರ ಮನೆಯಲ್ಲಿ ಇರುತ್ತಿದ್ದರು. ಇವರಲ್ಲಿಯೂ ರಾಷ್ಟ್ರಪ್ರೇಮ ಇರುವುದರಿಂದ ಪ್ರಭಾತಫೇರಿಯಲ್ಲಿ ಸಕ್ರೀಯ ಭಾಗಿಯಾದರು. ಊರಲ್ಲಿ ಪ್ರಮುಖ ಘಟನೆಗಳೇನಾದರೂ ನಡೆಯುತ್ತಿದ್ದರೆ ಅದು ಬಸನಗೌಡ ಪಾಟೀಲರನ್ನು ಕೇಳಿಯೇ ಆಗಬೇಕು. ಇದಲ್ಲದೆ ಯಾವುದೇ ಅಧಿಕಾರಿಯು ಊರನ್ನು ಪ್ರವೇಶಿಸಬೇಕಾದರೆ ಮತ್ತು ಊರನ್ನು ಕುರಿತು ಯಾವುದೇ ಮಾಹಿತಿ ಸಂಗ್ರಹಿಸಬೇಕಾದರೆ ಪೊಲೀಸ ಪಾಟೀಲರಾದ ಬಸನಗೌಡರನ್ನು ಕೇಳಲೇಬೇಕು. ಹೀಗಾಗಿ ಚಳುವಳಿಗೆ ಎಷ್ಟು ಜನ ಸೇರುತ್ತಾರೆ, ಯಾವ ಯಾವ ಪೊಲೀಸರು ನಿಯುಕ್ತಗೊಳ್ಳುತ್ತಾರೆ ಎಂಬುದೆಲ್ಲಾ ಅವರಿಗೆ ತಿಳಿದಿತ್ತು. ಆಂದೋಲನದಲ್ಲಿ ಯಾವುದೇ ಗದ್ದಲವಾಗದಂತೆ ಇವರು ನೋಡಿಕೊಳ್ಳುತ್ತಿದ್ದರು. ಕಾರ್ಯಕರ್ತರ ಮೇಲೆ ಆರೋಪಗಳು ಬಂದಲ್ಲಿ, ಸಂಕಟ ಎದುರಾದಲ್ಲಿ ತಮ್ಮ ಚಾಣಾಕ್ಷ ಬುದ್ಧಿಯಿಂದ ಅದನ್ನು ಪಾರು ಮಾಡುತ್ತಿದ್ದರು. ಪ್ರಭಾತಫೇರಿ ಹಿಂದಿನ ದಿವಸ ರಾತ್ರಿ ಪೊಲೀಸರ ಹೇಳಿಕೆಯ ಮೇರೆಗೆ ಪೊಲೀಸ ಪಾಟೀಲರು ಪ್ರಭಾತಫೇರಿಯಲ್ಲಿ ಯಾರೂ ಭಾಗ ವಹಿಸಬಾರದೆಂದು, ಭಾಗವಹಿಸಿದರೆ ಅವರನ್ನು ಬಂಧಿಸಿ ಶಿಕ್ಷೆ ವಿಧಿಸಲಾಗುವುದೆಂದು ಊರಲ್ಲಿ ಡಂಗುರ ಸಾರಿದರು. ಕಾರ್ಯಕರ್ತರು ಊರಲ್ಲಿ ತಿರುಗಾಡಿ ಎಲ್ಲರೂ ಪ್ರಭಾತಫೇರಿಯಲ್ಲಿ ಭಾಗವಹಿಸಬೇಕೆಂದು ಮನವಿ ಮಾಡಿಕೊಂಡರು. ಆಶ್ಚರ್ಯ ಸಂಗತಿಯೆಂದರೆ ನೀರಿಕ್ಷಿಸಿದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಜನ ಪ್ರಭಾಫೇರಿಯಲ್ಲಿ ಭಾಗ ವಹಿಸಿದರು. ಇದು ಒಂದು ಅರ್ಥದಲ್ಲಿ ಸರಕಾರದ ಶಕ್ತಿ ಮತ್ತು ಜನ ಶಕ್ತಿಯ ಪರೀಕ್ಷೆಯಂತಿತ್ತು.

ಪ್ರಭಾತಫೇರಿಯ ನಾಯಕತ್ವವನ್ನು ವಹಿಸಿದ ಶ್ರೀ ಬಿ. ಆರ್. ಪಾಟೀಲರು ಬೆಳಿಗ್ಗೆ ಎಂಟು ಗಂಟೆಗೆ ಡ್ರಮ್, ಡೊಳ್ಳು ಬಾರಿಸುತ್ತಾ ಊರಲ್ಲಿ ಫೇರಿ ಹಾಕಿದರು. ಪ್ರಭಾತಫೇರಿಯಲ್ಲಿ ಭಾಗ ವಹಿಸಿದವರಿಗೆ ದಂಡ, ಶಿಕ್ಷೆ ವಿಧಿಸಲಾಗುವುದೆಂದು ಊರಲ್ಲಿ ಡಂಗುರ ಸಾರಿದ್ದರೂ ಜನರು ಸಾವಿರಾರು ಸಂಖ್ಯೆಯಲ್ಲಿ ಭಾಗವಹಿಸಿ ತಮ್ಮ ದೇಶಪ್ರೇಮವನ್ನು ಮೆರೆದರು. ಚಳುವಳಿಕಾರರ ದಂಡು ಊರೆಲ್ಲಾ ಸುತ್ತಾಡಿ ಝುಂಡಾ ಚೌಕಿಗೆ ಬಂದು ವಂದನೆಯನ್ನು ಸಲ್ಲಿಸಿತು. ಪ್ರಭಾತಫೇರಿಯು ಅತ್ಯಂತ ಶಾಂತ ರೀತಿಯಿಂದ ನಡೆದದ್ದು ಪೊಲೀಸರಿಗೆ ದಂಗು ಬಡಿಸಿತು.

ಸಾವಿರಾರು ಜನರು ಭಾಗವಹಿಸಿ ಪ್ರಭಾತಫೇರಿಯನ್ನು ಮಾಡಿದ ಬಳಿಕ ಯಾರನ್ನು ಬಂಧಿಸದಿದ್ದರೆ ಬ್ರಿಟಿಷ ಸರಕಾರಕ್ಕೆ ಏನು ಉತ್ತರ ಕೊಡುವುದು? ಎಂದು ಆಲೋಚಿಸಿ ನಾಲ್ಕೈದು ಜನರನ್ನು ಬಂಧಿಸಬೇಕೆಂದು ನಿರ್ಣಯಿಸಿದರು. ಆದರೆ ಚಳುವಳಿಕಾರರ ಸಂಖ್ಯೆ ಅಪಾರ ಸಂಖ್ಯೆಯಲ್ಲಿರುವುದರಿಂದ ಹದಿನಾಲ್ಕು ಜನರನ್ನು ಬಂಧಿಸುತ್ತಾರೆ. ಶ್ರೀ ಗಂಗಪ್ಪಾ ಯಮಕನಮರಡಿ,

ವಾಸುದೇವ ನಾಗಪ್ಪಾ ಕದಮ, ಚೆನ್ನಬಸಪ್ಪಾ ಮಾಳಗಿ, ಬಸಪ್ಪಾಕೊಂತಿ, ಸಿದ್ಧರಾಯಪ್ಪಾ ತುಕ್ಕಾರ, ಮಲ್ಲಪ್ಪಾ ಹದನಾಯಿಕ, ಬಸಪ್ಪಾ ಬದ್ರಕಾಳಿ, ತಿಪ್ಪಣ್ಣಪೆಟಗೇರಿ, ವಸಂತ ದೇಶಪಾಂಡೆ, ಗೌಡಪ್ಪಾ ಬದ್ರಕಾಳಿ, ಮಾನಪ್ಪಾ ವಾರಿಮನಿ, ಬಂಡೊ ದೇಶಪಾಂಡೆ, ಅಪ್ಪಣ್ಣಾ ಮರಿಲಿಂಗನವರ ಇಷ್ಟು ಜನರನ್ನು ಬಂಧಿಸಿ ಚಾವಡಿಯಲ್ಲಿ ಕೂಡಿಸುತ್ತಾರೆ. ಇನ್ನೂ ಅನೇಕರನ್ನು ಬಂಧಿಸಬಹುದೆಂದು ಜನರು ತಿಳಿದಿದ್ದರು. ಆದರೆ ರಾತ್ರಿ ಗಾಡಿಗೆ ಪೋಲೀಸರು ಹೋಗಬೇಕಾಗಿರುವುದರಿಂದ ಇವರಷ್ಟನ್ನೇ ಕರೆದುಕೊಂಡು ಹೋದರು. ಮರುದಿನ ಬ್ರಿಟಿಷ ಅಧಿಕಾರಿಗಳು ಸೈನಿಕರನ್ನು ಕಳಿಸಿ ಮತ್ತೆ ಹಲವರನ್ನು ಬಂಧಿಸುತ್ತಾರೆ.

ಬಿ. ಆರ್. ಪಾಟೀಲರು ವಯಸ್ಸಿನಲ್ಲಿ ಚಿಕ್ಕವರು, ಹೋರಾಟದಲ್ಲಿ ಮುಂಚೂಣಿಯಲ್ಲಿದ್ದವರು, ಅದಮ್ಯ ದೇಶಪ್ರೇಮವನ್ನು ಹೊಂದಿದವರು. ಇವರಲ್ಲಿ ವ್ಯಾಯಾಮದ ಬಗ್ಗೆ ಹೆಚ್ಚು ಆಸಕ್ತಿ ಇತ್ತು. ಆದ್ದರಿಂದ ಪುಂಡಲೀಕಜಿ ಅವರು ಬಿ. ಆರ್. ಪಾಟೀಲರನ್ನು ವ್ಯಾಯಾಮ ಶಿಕ್ಷಣಕ್ಕಾಗಿ ಅಮರಾವತಿಗೆ ಕಳುಹಿಸುತ್ತಾರೆ. ಅಲ್ಲಿ ಶಿಕ್ಷಣ ಪಡೆದು ಬಂದ ಬಳಿಕ ಹುದಲಿಯಲ್ಲಿ ಸೇವಾ ದಳ ಪ್ರಾರಂಭಿಸಿ ತರುಣರಿಗೆ ವ್ಯಾಯಾಮ, ಡ್ರಿಲ್, ಲಾಟಿ, ಲೇಝಿಮ್ ಹಾಗೂ ಡ್ರಮ್ ಬಾರಿಸುವುದನ್ನು ಕಲಿಸುತ್ತಾರೆ. ಅಲ್ಲದೆ ಅತ್ಯಂತ ಧೈರ್ಯ, ಸಾಹಸಗಳಿಂದ ಹೋರಾಡಿ ಚಳುವಳಿಕಾರರ ಪ್ರೀತಿಗೆ ಪಾತ್ರರಾಗುತ್ತಾರೆ. ಜನರಲ್ಲಿ ಬಿ. ಆರ್. ಪಾಟೀಲ ಹಾಗೂ ಅವರ ಮಾವನ ಮೇಲೆ ಅಪನಂಬಿಕೆಯನ್ನು ತಾಳಿದರು. ಇವರು ಪೋಲೀಸರೊಂದಿಗೆ ಶಾಮೀಲಾಗಿ ತಮಗೆ ಬೇಡದವರ ಹೆಸರುಗಳನ್ನು ಬ್ರಿಟಿಷರಿಗೆ ಕೊಟ್ಟು ಅಂತವರನ್ನು ಬಂಧಿಸುತ್ತಾರೆ. ಚಳುವಳಿಯ ಮುಂಚೂಣಿಯಲ್ಲಿದ್ದ ಬಸನಗೌಡಾ ಪಾಟೀಲ ಮತ್ತು ಬಿ. ಆರ್. ಪಾಟೀಲ ಇವರನ್ನು ಪೋಲೀಸರು ಯಾಕೆ ಬಂಧಿಸಲಿಲ್ಲ. ಆದ್ದರಿಂದ ಪೋಲೀಸರಿಗೂ ಮತ್ತು ಈ ಪಾಟೀಲರಿಗೂ ಏನೊ ಒಳ ಒಪ್ಪಂದ ಆಗಿರಬಹುದೆಂದು ಜನರು ತಿಳಿದರು. ಇದು ಪಾಟೀಲರಿಗೆ ಗೊತ್ತಾದ ಬಳಿಕ ಅವರು ರಾಮಚಂದ್ರ ವಡವಿಯವರನ್ನು ಭೇಟ್ಟಿಯಾಗಿ ನಿಜವಾಗಿ ದೇಶದ ಸ್ವಾತಂತ್ರ್ಯದ ಬಗ್ಗೆ ತಮ್ಮಲ್ಲಿ ಅಪಾರ ಕಾಳಜಿಯಿದ್ದರೂ ಜನರು ಇವರನ್ನು ತಪ್ಪು ತಿಳಿದಿದ್ದಾರೆ. ಈ ಸಂದರ್ಭದಲ್ಲಿ ತಾವು ಏನು ಮಾಡಬೇಕೆಂದು ವಡವಿಯವರನ್ನು ಮಾರ್ಗದರ್ಶನ ನೀಡಲು ವಿನಂತಿಸಿದರು.

## ಕುಂದರನಾಡು ಹೋರಾಟದ ತೀವ್ರ ಸ್ವರೂಪ :

ಗಾಂಧೀಜಿಯವರ ಚಳಿವಳಿ ಹಿಂಸಾತ್ಮಕವೊ ಅಹಿಂಸಾತ್ಮಕವೊ ಎಂಬ ಸಂಶಯ ಕೆಲವು ಕಾರ್ಯಕರ್ತರಲ್ಲಿ ಉಂಟಾಯಿತು. ಕ್ರಿ. ಶ. ೧೯೩೦ ಮತ್ತು ೩೨ ರಲ್ಲಿ ಜರುಗಿದ ಆಂದೋಲನದಲ್ಲಿ ರೈಲು ಹಳಿ ಕಿತ್ತುವುದು, ಸರಕಾರಿ ಕಟ್ಟಡ ಸುಡುವುದು, ಸರಕಾರಿ ಕಾಗದ ಪತ್ರಗಳನ್ನು ನಾಶಮಾಡುವುದು ಇವೆಲ್ಲ ವಿಧ್ವಂಸಕ ಕೃತ್ಯಗಳೆಂದು ಸುದ್ಧಿಯಾಗಿತ್ತು. ಗಾಂಧೀಜಿಯವರು ಬಂಧಿತರಾಗುವ ಪೂರ್ವದಲ್ಲಿ ಈ ಎಲ್ಲ ಕಾರ್ಯಕ್ರಮಗಳನ್ನು ಅವರೇ ಬರೆದಿಟ್ಟಿದ್ದಾರೆಂದು ಜನ ಮಾತಾಡುತ್ತಿದ್ದರು. ವಡವೀ ಮತ್ತು ಪುಂಡಲೀಕಜಿಯವರು ತಾವು ಮಾಡುತ್ತಿರುವ ಕೆಲಸಗಳು ಗಾಂಧೀಜಿಯವರ ಸತ್ಯಾಗ್ರಹದಲ್ಲಿ

ಒಳಗೊಳ್ಳುತ್ತಿವೆಯೊ? ಗಾಂಧೀಜಿಯವರು ಈ ರೀತಿ ಬರೆದಿಡಲು ಸಾಧ್ಯವೇ? ಎಂಬ ಸಂದೇಹ ಪ್ರಾರಂಭವಾಯಿತು. ಆದರೂ ಗುಪ್ತ ರೀತಿಯಿಂದ ಮಾಡುವ ಈ ಕೆಲಸಗಳು ಕೇವಲ ಬ್ರಿಟಿಷ ಸರಕಾರದ ವಿರುದ್ಧವಾಗಿದೆ. ಇದರಿಂದ ಭಾರತೀಯರಿಗಾಗಲಿ, ಬ್ರಿಟಿಷರಿಗಾಗಲಿ ಜನಾಂಗಿಕ ಹಿಂಸೆ ಆಗಲಾರದೆಂದು ಅವರು ನಂಬಿದ್ದರು.

ಗಾಂಧೀಜಿಯವರ ಬಂಧನವಾದ ನಂತರ ದೇಶದ ತುಂಬಾ ಗುಪ್ತ ಸಂಘಟನೆಯ ಚಟುವಟಿಕೆಗಳು ತೀವ್ರಗೊಂಡವು. ಕಾಂಗ್ರೆಸ್ಸ ಕಾರ್ಯಕ್ರಮಗಳ ಸುದ್ದಿಯನ್ನು ವರ್ತಮಾನ ಪತ್ರಿಕೆಗಳಲ್ಲಿ ಪ್ರಕಟಿಸಬಾರದೆಂದು ಸರಕಾರಿ ಆಜ್ಞೆ ಹೊರಟಿತ್ತು. ಆದ್ದರಿಂದ ಸ್ವಾತಂತ್ರ್ಯ ಕುರಿತು ದೇಶದಲ್ಲಿ ಎಲ್ಲಿ ಏನು ನಡೆದಿದೆ ಎಂಬುದು ತಿಳಿಯುವುದು ಕಷ್ಟವಾಗಿತ್ತು. ಸರಕಾರ ಯಾವುದೇ ಕಾನೂನು ಜಾರಿಗೊಳಿಸಿದರೂ ಘಟನೆಗಳು ಸುದ್ದಿಗಳು ಬಾಯಿಂದ ಬಾಯಿಗೆ ಹರಡುತ್ತಲೇ ಇದ್ದವು. ಅವರಲ್ಲಿ ದೊಡ್ಡ ಧಂಗೆ ಏಳುವುದರ ಮೊದಲೇ ಬ್ರಿಟಿಷರು ಇದನ್ನು ಹತ್ತಿಕ್ಕಲು ಪ್ರಯತ್ನಿಸಿದರು. ಅಖಿಲ ಭಾರತ ಸಂಘಟನೆಯಿಂದ ಎಂದು ಹೇಳಿ ಎಲ್ಲಿಂದಲೋ ಒಂದು ಗುಪ್ತ ರೇಡಿಯೋ ಕೇಂದ್ರದಿಂದ ದೇಶದೊಳಗೆ ನಡೆಯುತ್ತಿರುವ ವಿಧ್ವಂಸಕ ಕಾರ್ಯಕ್ರಮಗಳ ಸುದ್ದಿ ಕೇಳಿ ಬರುತ್ತಿದ್ದವು. ಗುಪ್ತ ಸಂಘಟನೆಯಲ್ಲಿ ಕಾಂಗ್ರೆಸ ಮತ್ತು ಸೋಸಿಯಾಲಿಸ್ಟ್ ಪಕ್ಷಗಳ ಜನರಿದ್ದರು. ರಂಗರಾವ್ ದಿವಾಕರ್, ಕರಮರಕರ್ ಇಬ್ಬರು ಭೂಗತರಾಗಿ ಮುಂಬೈಯಲ್ಲಿ ಕೆಲಸ ಮಾಡುತ್ತಿದ್ದರು. ಇವರು ಗುಪ್ತ ಸಂಘಟನೆಯಲ್ಲಿ ಕೆಲಸ ಮಾಡುತ್ತಾರೆಂಬುದು ಕರ್ನಾಟಕದ ಜನರಿಗೆ ಗೊತ್ತಿತ್ತು. ಜಯಪ್ರಕಾಶ ನಾರಾಯಣ, ಅಚ್ಚುತರಾವ್ ಪಟವರ್ಧನ ಇವರು ಅಲ್ಲಿಯೇ ಇದ್ದರು. ರೇಲ್ವೆ ತಂತಿ ಕಡಿಯುವುದು. ಹಳಿ ಕಿತ್ತುವುದು, ಇತರ ವಿಧ್ವಂಸಕ ಕೃತ್ಯಗಳು ಗಾಂಧೀಜಿಯವರ ಅಹಿಂಸೆಯಲ್ಲಿ ಸಮಾವಿಷ್ಟವಾಗುತ್ತವೆ ಎಂದು ಕಿಶೋರಿಲಾಲ್ ಮಶ್ರುವಾಲಾ ಮತ್ತು ಕಾಕಾಸಾಹೇಬ ಕಾಲೇಲಕರ್‌ವರು ಹರಿಜನ ಪತ್ರಿಕೆಯಲ್ಲಿ ಬರೆದಿದ್ದರು. ಗಾಂಧೀಜಿಯವರು ಸಹ 'ಮಾಡು ಇಲ್ಲವೆ ಮಡಿ' ಎಂಬ ಆದೇಶ ಕೊಟ್ಟದ್ದಾರೆ. ಕೇವಲ ಸೆರೆಮನೆಗೆ ಹೋಗಿ ಕೂತರೆ ಈ ಆದೇಶ ಪಾಲಿಸಿದಂತಾಗುವುದಿಲ್ಲ. ಆದ್ದರಿಂದ ವಿಧ್ವಂಸಕ ಕೃತ್ಯಗಳು ಅಹಿಂಸಾ ಚಳುವಳಿಯಲ್ಲಿಯೇ ಸೇರುತ್ತವೆ ಎಂಬ ನಿರ್ಣಯಕ್ಕೆ ವಡವಿಯವರು, ಪುಂಡಲೀಕಜೀಯವರು ಬರುತ್ತಾರೆ.

ಗುಪ್ತ ಸಂಘಟನೆಯ ಮುಖ್ಯ ಕಾರ್ಯ ರೇಲ್ವೆ ಟೆಲಿಫೋನ ತಂತಿ ಕತ್ತರಿಸುವದೆಂದು ನಿರ್ಣಯ ಮಾಡಲಾಗಿತ್ತು. ಅದಕ್ಕಾಗಿ ಬಿ. ಆರ್. ಪಾಟೀಲರನ್ನು ಕರೆಸಿ ಇಪ್ಪತ್ತೈದು ಜನ ತರುಣರನ್ನು ಈ ಕಾರ್ಯಕ್ಕೆ ಅಣಿಗೊಳಿಸಲು ತಿಳಿಸಲಾಯಿತು. ಜನರೆಲ್ಲಾ ಒಗ್ಗಟ್ಟಾಗಿ ಬಂದು ತಂತಿ ಕೀಳುವುದು ಹೇಗೆ ? ರೈಲು ಕಂಬಿಗಳನ್ನು ಕೀಳುವುದು ಹೇಗೆ ? ಕಂಬಿಯ ನಟ್ಟುಗಳನ್ನು ಬಿಚ್ಚುವುದು ಹೇಗೆ ? ಅದಕ್ಕೆ ಬೇಕಾದ ವಿಶಿಷ್ಟ ಪಾನ ಹೇಗೆ ಪಡೆಯಬೇಕು ? ಎಂದು ಆಲೋಚನೆ ಮಾಡುವಷ್ಟರಲ್ಲಿ ಈರಯ್ಯನು ವಾಸು ಎಂಬ ವ್ಯಕ್ತಿಯನ್ನು ಕರೆದುತರುತ್ತಾನೆ. ವಾಸು ಕಪ್ಪು ವರ್ಣದ ಕುಳ್ಳ ಮನುಷ್ಯ. ವಯಸ್ಸು ಇಪ್ಪತ್ತೈದರಿಂದ ಮೂವತ್ತು ಇರಬಹುದು. ಇವನಿಗೆ ಕನ್ನಡ ಬರುತ್ತಿರಲಿಲ್ಲ. ಇಂಗ್ಲೀಷ,

ಹಿಂದಿ ಮತ್ತು ಮಲಯಾಳಿ ಭಾಷೆ ಮಾತಾಡುತ್ತಿದ್ದ. ಆಂದೋಲನ ಪ್ರಾರಂಭವಾಗುವುದಕ್ಕಿಂತ ಒಂದೆರಡು ತಿಂಗಳು ಮೊದಲು ಹುಬಲಿಯಲ್ಲಿ ಶ್ರೀ ಈರಯ್ಯನ ಚಹಾದಂಗಡಿಯಲ್ಲಿ ತಿಂಡಿ ಮಾಡಲು ಬಂದು ಅಲ್ಲೇ ಉಳಿದಿದ್ದ. ಈರಯ್ಯನ ಮುಂದೆ ರೈಲು ಕಂಬಿ ಕೀಳುವುದು ಹೇಗೆ ಎಂಬುದು ತನಗೆ ಗೊತ್ತಿದೆ ಎಂದು ಹೇಳಿಕೊಂಡಿದ್ದ. ಅವನು ರೈಲ್ವೆ ಇಲಾಖೆಯಲ್ಲಿ ಕೆಲಸ ಮಾಡಿದ್ದರಿಂದ ಕಂಬಿ ಕೀಳುವುದು ಗೊತ್ತಿತ್ತು. ಅದಲ್ಲದೇ ಅದಕ್ಕೆ ಬೇಕಾಗುವ ಸಲಕರಣೆಗಳನ್ನು ಆತ ದೊರಕಿಸಿಕೊಡುವುದಾಗಿ ಹೇಳಿದ.

ವಾಸುನ ಬಗ್ಗೆ ಕಾರ್ಯಕರ್ತರಲ್ಲಿ ಸಂಶಯ ಪ್ರಾರಂಭವಾಯಿತು. ಕುಮರಿ ಆಶ್ರಮದಲ್ಲಿ ಗಾಂಧಿ ತತ್ವಜ್ಞಾನವನ್ನು ಕಲಿಯಲಿಕ್ಕೆ ಬಂದಿರುವೆವು ಎಂದು ಹೇಳಿ ಅನೇಕ ಜನರು ಬೇಹುಗಾರರು ಅಲ್ಲಿ ಬರುತ್ತಿದ್ದರು ಮತ್ತು ಸಂಘಟನೆಯ ಗುಪ್ತ ಚಟುವಟಿಕೆಗಳನ್ನು ತಿಳಿದುಕೊಂಡು ಬ್ರಿಟಿಷರಿಗೆ ತಿಳಿಸಿದರೆ ಹೇಗೆ ? ಅಪರಿಚಿತನಾದ ಈ ವಾಸು ಬ್ರಿಟಿಷರ ಪರವಾಗಿದ್ದರೆ ಹೇಗೆ ? ಎಂಬೆಲ್ಲಾ ಸಂದೇಹಗಳು ಪ್ರಾರಂಭವಾದವು. ಆದರೂ ಬಂದದ್ದೆಲ್ಲಾ ಬರಲಿ ಎಂದು ದಿಟ್ಟತನದಿಂದ ಕೆಲಸಕ್ಕೆ ಅಣಿಯಾಗುತ್ತಾರೆ. ರಾತ್ರಿ ಹತ್ತು ಗಂಟೆಗೆ ಜನ ಉಂಡು ಮಲಗಿದ ಮೇಲೆ ಊರ ಹೊರಗಿರುವ ನಿರ್ವಾಣೆಪ್ಪಾ ದೇವಸ್ಥಾನದಲ್ಲಿ ಎಲ್ಲರು ಸೇರುತ್ತಾರೆ. ವಾಸು ಮತ್ತು ಬಿ. ಆರ್. ಪಾಟೀಲರ ಜೊತೆಗೂಡಿ ಬೆಳಗಾವಿ ಕಡೆಗೆ ಮೂರು ಮೈಲು ದೂರಸಾಗಿ ಅಲ್ಲಿ ತಂತಿ ಕಡೆಯುವ ಕೆಲಸ ಪ್ರಾರಂಭಿಸುತ್ತಾರೆ. ಕೆಲವರು ಕಂಬಗಳನ್ನು ಕಡಿಯುತ್ತಾರೆ. ಕೆಲವರು ತಂತಿ ಕತ್ತರಿಸುತ್ತಾರೆ. ಈ ಕಾರ್ಯ ಮಾಡುವಾಗ ಸಪ್ಪಳವು ಜೋರಾದರೂ ಪೊಲೀಸರ ಗಮನ ಅತ್ತ ಹೋಗುವುದಿಲ್ಲ. ತಂತಿ ಕಡೆಯುವ ಸ್ಥಳದ ಎರಡೂ ಬದಿಗೆ ಕಾವಲಕ್ಕಾಗಿ ನಾಲ್ಕೈದು ಜನರನ್ನು ನಿಲ್ಲಿಸಲಾಗಿತ್ತು. ಕಂಬ ಏರಿ ತಂತಿ ಕಡೆಯುವಾಗ ಕಂಬದ ಮೇಲಿನ ಕಪ್ಪು ಒಡೆದು ಹರಿತವಾದ ಅದರ ತುಂಡುಗಳು ಬಸಪ್ಪಾ ಪಾಡಿ ಎಂಬಾತನ ಕೈಗೆ ಜೋರಾಗಿ ಬಿದ್ದು ಕೈಯಿಂದ ರಕ್ತ ಚಿಮ್ಮುತ್ತದೆ. ಅವರ ಜೊತೆಗಿದ್ದ ಕಾರ್ಯಕರ್ತನೊಬ್ಬ ತನ್ನ ತಲೆಗೆ ಸುತ್ತಿದ ರುಮಾಲನ್ನು ಬಿಚ್ಚಿ ರಕ್ತ ಸೋರಬಾರದೆಂದು ಗಟ್ಟಿಯಾಗು ಸುತ್ತುತ್ತಾನೆ. ಊರಲ್ಲಿ ಬಂದು ಆತನಿಗೆ ತಾತ್ಪೂರ್ತಿಕ ಉಪಚಾರ ನೀಡುತ್ತಾರೆ. ಅವನು ಒಂದು ವೇಳೆ ಊರಲ್ಲಿ ಇದ್ದರೆ ಪೊಲೀಸರಿಗೆ ಸುದ್ದಿ ತಿಳಿಯಬಹುದೆಂದು ಭಾವಿಸಿ ಅವನನ್ನು ಪರ ಊರಿಗೆ ಕಳುಹಿಸುತ್ತಾರೆ. ವೆಚ್ಚಕ್ಕಾಗಿ ಸ್ವಲ್ಪ ಹಣ ಕೊಡುವರು. ಇದಾದ ನಂತರ ವಡವಿಯವರು ಬೆಳಗಾವಿಗೆ ಬರುತ್ತಾರೆ. ಉಳಿದವರು ತಮಗೆ ಏನೂ ಗೊತ್ತಿಲ್ಲದಂತೆ ದೈನಂದಿನ ಕೆಲಸದಲ್ಲಿ ತೊಡಗುತ್ತಾರೆ.

ಟೆಲಿಫೋನ ತಂತಿ ಕಡಿದ ಬಳಿಕ ಈ ಸುದ್ದಿಯು ಅಂದಿನ ರಾತ್ರಿಯೇ ರೈಲ್ವೆ ಅಧಿಕಾರಿಗೆ ತಲುಪುತ್ತದೆ. ಮರುದಿವಸ ರೈಲ್ವೆ ಅಧಿಕಾರಿಗಳು ಪೊಲೀಸರು ಸ್ಥಳಕ್ಕೆ ಆಗಮಿಸಿ ಪಂಚನಾಮೆ ಮಾಡುತ್ತಾರೆ. ತಂತಿ ಕಡಿದ ಸ್ಥಳಗಲ್ಲಿ ಯಾವ ಕಂಬದ ಹತ್ತಿರ ಬಸಪ್ಪನ ಕೈಗೆ ಪೆಟ್ಟು ಹತ್ತಿತ್ತೊ ಅಲ್ಲಿ ರಕ್ತ ಸೋರಿತ್ತು. ಆತನ ಕೈಯ ಮೇಲೆ ಬಿದ್ದ ಕಪ್ಪಿನ ತುಂಡಿಗೆ ರಕ್ತ ಹತ್ತಿತ್ತು. ಚಳಿವಳಿಕಾರರು

ಇದನ್ನು ಗಮನಿಸದೇ ರಾತ್ರೋರಾತ್ರಿ ಪರಾರಿಯಾಗಿದ್ದರು. ಆದರೆ ಪೊಲೀಸರು ಕೂಲಂಕಷವಾಗಿ ಶೋಧನೆ ನಡೆಸಿದ್ದರು. ಚಳುವಳಿಕಾರರು ಆ ಕಪ್ಪಿನ ತುಂಡನ್ನು ಮತ್ತು ರಕ್ತದ ಕಲೆಯನ್ನು ನಾಶ ಮಾಡದೇ ಹಾಗೆ ಹೋಗಿದ್ದು ತಪ್ಪಾಗಿತ್ತು. ಪೊಲೀಸರು ರಕ್ತ ಬಿದ್ದ ಜಾಗದಿಂದ ಶೋಧ ಮಾಡುತ್ತ ಇದು ಕಪ್ಪು ಒಡೆದು ಯಾರಿಗೊ ಗಾಯವಾಗಿದೆ. ಅದರಿಂದ ಈ ರಕ್ತದ ಕಲೆ ಇಲ್ಲಿ ಬಿದ್ದಿದೆ ಮತ್ತು ಕಪ್ಪಿನ ತುಂಡಿಗೆ ರಕ್ತದ ಕಲೆ ಹತ್ತಿದೆ ಎಂದು ಊಹಿಸಿದರು, ಆದರೆ ಇದು ಯಾರ ಕೆಲಸ ಎಂಬುದು ಇವರಿಗೆ ಗೊತ್ತಾಗಲಿಲ್ಲ. ತಂತಿ ಕಡಿದ ಸ್ಥಳವು ಹುದಲಿಗೆ ಸಮೀಪವಾಗಿತ್ತು. ಆದ್ದರಿಂದ ಹುದಲಿ ಊರಿನ ಜನರೇ ಇದನ್ನು ಮಾಡಿರಬೇಕೆಂದು ಸಬ್ಇನ್‌ಸ್ಪೆಕ್ಟರ್ ಹಾಗೂ ಪೊಲೀಸರು ಬಂದು ಹುದಲಿಯಲ್ಲಿ ಶೋಧ ಕಾರ್ಯ ಕೈ ಕೊಂಡರು.

ಪೊಲೀಸರು ಊರಿಗೆ ಬಂದವರೇ ಮೊದಲು ಪೊಲೀಸ ಪಾಟೀಲರನ್ನು ಕರೆಸಿ ವಿಚಾರಿಸಿದರು. ಹುದಲಿ ಸುತ್ತಮುತ್ತ ಈ ಕೆಲಸ ಆಗಿರುವುದರಿಂದ ಹುದಲಿ ಗ್ರಾಮದವರೇ ತಂತಿ ಕತ್ತರಿಸಿದ್ದಾರೆ. ನೀವು ಅವರ ಹೆಸರನ್ನು ನಮಗೆ ಹೇಳಬೇಕೆಂದು ಇನ್‌ಸ್ಪೆಕ್ಟರ್ ಕೇಳುತ್ತಾರೆ. ಆಗ ಪೊಲೀಸ ಪಾಟೀಲರು 'ಈ ಕೆಲಸ ಹುದಲಿ ಗ್ರಾಮದವರಿಂದ ಆಗಿಲ್ಲ. ಬೇರೆ ಯಾರಾದರೂ ಮಾಡಿರಬೇಕು' ಎಂದು ತಮ್ಮ ಮೇಲಿನ ಹೊಣೆಯನ್ನು ಹಾರಿಸಿ ಅದಕ್ಕೆ ಸರಿಯಾದ ಕಾರಣವನ್ನು ಕೊಡುವರು. 'ನೀವು ಈಗಾಗಲೇ ಚಳುವಳಿಗಾರರನ್ನು ಹಿಡಿದಿರುವಿರಿ, ಇನ್ನು ಹೊರಗಿರುವವರೆಂದರೆ ವಡವೀ ಮಾಸ್ತರ್ ಒಬ್ಬರೇ ಅವರಿಂದ ಈ ಕೆಲಸವಾಗುವುದು ಸಾಧ್ಯವಿಲ್ಲ' ಎಂದು ಹೇಳುತ್ತಾರೆ. ಇದಲ್ಲದೆ ಸಮೀಪದ ಅಕ್ಕ ತಂಗೇರಹಾಳದವರು ಇದನ್ನು ಮಾಡಿ ಹುದಲಿ ಊರವರ ಮೇಲೆ ಆರೋಪ ಏಕೆ ಹೊರಸಿರಬಾರದು? ಎಂದು ಕೇಳುತ್ತಾರೆ. ಪೊಲೀಸರಿಗೆ ಪಾಟೀಲರ ಮಾತು ಸಮಂಜಸವೆನಿಸುತ್ತದೆ. ಏಕೆಂದರೆ ಅಕ್ಕತಂಗಿಯರಹಾಳದವರು ಚಳುವಳಿಗಾರರೇ ಇವೆರಡೂ ಗ್ರಾಮಗಳು ಸ್ವಾತಂತ್ರ್ಯ ಚಳುವಳಿಯಲ್ಲಿ ಪ್ರಮುಖ ಪಾತ್ರವಹಿಸಿದ್ದವು. ಪೊಲೀಸರು ಈಗ ಎರಡೂ ಊರಲ್ಲಿ ಶೋಧ ಕಾರ್ಯ ನಡೆಸಿದ್ದರು. ಹುದಲಿಯಲ್ಲಿ ಮಾತ್ರ ಅವರು ಕಾಯಂ ತಳ ಊರಿದರು. ಏನಾದರೂ ಸುದ್ದಿ ಇಲ್ಲಿಂದ ಸಿಗಬಹುದೆಂದು ಕಾದು ನೋಡತೊಡಗಿದರು.

ತಂತಿ ಕಡಿದವರಲ್ಲಿ ಯಾರಿಗೊ ಒಬ್ಬರಿಗೆ ಕೈಗೆ ಪೆಟ್ಟಾಗಿದೆ ಎಂಬುದನ್ನು ಗಮದಲ್ಲಿಟ್ಟುಕೊಂಡೇ ಪೊಲೀಸರು ಶೋಧ ಕಾರ್ಯಕ್ಕೆ ಇಳಿದಿದ್ದರು. ಕೈಗೆ ಪೆಟ್ಟುತಗುಲಿದ ಬಸಪ್ಪನಿಗೆ ಗಾಯ ಮಾಯಿಸಿಕೊಂಡು ಬರಲು ಪರ ಊರಿಗೆ ಚಳಿವಳಿಕಾರರು ಕಳುಹಿಸಿದ್ದರು. ಈಗ ಬಸಪ್ಪಾ ಊರಿಗೆ ಬಂದಿದ್ದ ಜನರಿಗೆ ಮತ್ತು ಪೊಲೀಸರಿಗೆ ತನ್ನ ಕೈಗಾದ ಗಾಯ ಗೊತ್ತಾಗಬಾರದೆಂದು ಕೈ ಮುಚ್ಚಿಕೊಂಡು ತಿರುಗಾಡುತ್ತಿದ್ದ. ಒಂದು ದಿವಸ ಬಸಪ್ಪನು ಚಹಾ ಕುಡಿಯಲೆಂದು ತನ್ನ ಎಡಗೈನ್ನು ಮುಚ್ಚಿಕೊಂಡೇ ಚಹಾದ ಅಂಗಡಿಗೆ ಬರುತ್ತಾನೆ. ಅದೇ ಸಮಯದಲ್ಲಿ ಅಲ್ಲಿ ಬಿಡಾರ ಬಿಟ್ಟ ಪೊಲೀಸರು ಚಹಾ ಕುಡಿಯಲು ಅದೇ ಅಂಗಡಿಗೆ ಬರುತ್ತಾರೆ. ಅವರ ದೃಷ್ಟಿ ಕೈ ಮುಚ್ಚಿ ಕುಳಿತ ಬಸಪ್ಪನ ಕಡೆಗೆ ಹೋಗುತ್ತದೆ. ಅವನ ಮೇಲೆ ಸಂಶಯ ಬರುತ್ತದೆ. ಅವನ ಹತ್ತಿರ ಬಂದು ಪೊಲೀಸರು ನಿನ್ನ ಕೈಗೆ

ಏನಾಗಿದೆ ಎಂದು ಕೇಳುತ್ತಾರೆ. ಮೊನ್ನೆ ಕಟ್ಟಿಗೆ ಕಡಿಯುವಾಗ ಸ್ವಲ್ಪ ಪೆಟ್ಟು ತಗುಲಿದೆಯೆಂದು ಬಸಪ್ಪಾ ಹೇಳಿದರೂ ಪೊಲೀಸರು ಕೇಳುವುದಿಲ್ಲ. ಕೈ ತೆಗೆಯಿಸಿ ಎಲ್ಲ ಪರೀಕ್ಷಿಸುತ್ತಾರೆ. ನಿಜ ಹೇಳುತ್ತಿಯೊ ಅಥವಾ ನಿನ್ನನ್ನು ಬಂಧಿಸಬೇಕೊ ಎಂದು ಅವನನ್ನು ಗದ್ದರಿಸುತ್ತಾರೆ. ಬಸಪ್ಪನು ಹೆದರಿ ನಡೆದ ಸಂಗತಿಯನ್ನೆಲ್ಲಾ ಹೇಳಿ ಬಿಡುತ್ತಾನೆ. ತಂತಿಯನ್ನು ಕಡಿಯಲಿಕ್ಕೆ ಬಂದವರು ಯಾರು ಯಾರು ಎಂದು ಪೊಲೀಸರು ಕೇಳುತ್ತಾರೆ. ಆಗ ಬಸಪ್ಪನು ಚಳುವಳಿಕಾರರಾದ ಶ್ರೀ ವಡವಿ ಮಾಸ್ತರ್, ಶ್ರೀ. ಬಿ.ಆರ್. ಪಾಟೀಲ, ನಿಂಗಪ್ಪಾ ತುಕ್ಕಾರ್, ಭೀಮಪ್ಪಾ ಭೂಸಿ, ಬಸಪ್ಪಾ ಹಳ್ಳೂರ, ಬಾಳಪ್ಪಾ ಆಡಕಾಯಿ, ಬಾಳಪ್ಪಾ ಮಾಳಗಿ, ಗಂಗಪ್ಪಾ ಮೊದಗಿ, ರಾಮಪ್ಪಾ ಮಲ್ಲಪ್ಪಾ ಗವನ್ನನವರ, ಮಲ್ಲಪ್ಪಾ ಗುಂಡ್ಲುರು, ಅಪ್ಪಯ್ಯ ಹೂಗಾರ, ಮಲ್ಲಣ್ಣಗೌಡಾ ಭದ್ರಕಾಳಿ ಫಕೀರಪ್ಪಾ ಬಣದವರ, ರಾಮಪ್ಪಾ ಬಣದವರ, ಬಸವಣ್ಣೆಪ್ಪಾ ಜಕ್ಕಣ್ಣವರ ಇವರೇ ಮೊದಲಾದವರ ಹೆಸರುಗಳನ್ನು ಆತ ಹೇಳುತ್ತಾನೆ. ಚಹಾದ ಅಂಗಡಿಯಲ್ಲಿ ಬಸಪ್ಪಾ ಪೊಲೀಸರ ಕೈಗೆ ಸಿಕ್ಕಿದ್ದಾನೆ. ತಂತಿ ಕಡಿಯಲಿಕ್ಕೆ ಹೋದವರ ಹೆಸರುಗಳನ್ನು ಆತ ಹೇಳಿದ್ದಾನೆ ಎಂಬ ಸುದ್ದಿ ಊರಲ್ಲಿ ಕಾಳ್ಗಿಚ್ಚಿನಂತೆ ಹಬ್ಬುತ್ತದೆ. ಕೂಡಲೇ ತಂತಿಯನ್ನು ಕಡಿಯಲಿಕ್ಕೆ ಬಂದವರು ಊರು ಬಿಟ್ಟು ತಲೆ ಮರೆಸಿಕೊಂಡು ಹೋಗುತ್ತಾರೆ.

ಪೊಲೀಸರಿಗೆ ಬಸಪ್ಪಾ ಹೇಳಿದವರ ಹೆಸರುಗಳಲ್ಲಿ ಬಿ. ಆರ್. ಪಾಟೀಲರ ಹೆಸರು ಇತ್ತು. ಪೊಲೀಸರಿಗೆ ಪಾಟೀಲರ ಹೆಸರನ್ನು ನೋಡಿ ಆಶ್ಚರ್ಯವೆನಿಸಿತ್ತು. ಪಾಟೀಲರು ತಮಗೆ ಬೇಕಾದವರೆಂದು ಪೊಲೀಸರು ಭಾವಿಸಿದ್ದರು. ಅಲ್ಲದೆ ಇವರು ಯಾವಾಗಲೂ ಸರಕಾರಕ್ಕೆ ವಿಧೇಯರಾಗಿದ್ದವರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದವರಲ್ಲ. ಇಗೇಕೆ ಹೀಗೆ ಬ್ರಿಟಿಷರ ವಿರುದ್ಧ ತಿರುಗಿಬಿದ್ದರೆಂದು ಪೊಲೀಸರು ಚಿಂತಿಸತೊಡಗಿದರು. ಬಸಪ್ಪಾ ಹೇಳಿದ ಮೇರೆಗೆ ಅವರ ಹೆಸರುಗಳನ್ನು ಬರೆದುಕೊಂಡು ಊರಲ್ಲಿ ಪತ್ತೆ ಹಚ್ಚಲು ಮನೆಮನೆಗೆ ತಿರುಗಾಡಿದರು. ಆದರೆ ಊರಲ್ಲಿ ಯಾರೊಬ್ಬರೂ ಅವರ ಕೈಯಲ್ಲಿ ಸಿಗಲಿಲ್ಲ. ಇದರಿಂದ ಕುಪಿತರಾದ ಪೊಲೀಸರು ಇದರಲೆಲ್ಲಾ ಪಾಟೀಲರದೆ ಕೈವಾಡವೆಂದು ಭಾವಿಸಿ ಅವರನ್ನು ತರಾಟೆಗೆ ತೆಗೆದುಕೊಂಡರು. ಆದರೆ ವಾಸ್ತವವಾಗಿ ಪೊಲೀಸ ಪಾಟೀಲರದು ಇದರಲ್ಲೇನೂ ಕೈವಾಡವಿರಲಿಲ್ಲ. ಅವರು ಬ್ರಿಟಿಷ ಸರಕಾರದ ಪರವಾಗಿ ಅಥವಾ ಪೊಲೀಸರ ಪರವಾಗಿ ಇರಲಿಲ್ಲ. ಪೊಲೀಸರೆ ತಪ್ಪಾಗಿ ಭಾವಿಸಿದ್ದರು. ಸಬ್‌ಇನ್‌ಸ್ಪೆಕ್ಟರ್ ಪೊಲೀಸರು ಹುದಲಿಯಲ್ಲಿ ತಳ ಊರಿದರು. ತಂತಿ ಕಡಿದವರಿಗೆ, ರೈಲು ಕಂಬಿಗಳನ್ನು ಕಿತ್ತವರಿಗೆ, ಸರಕಾರಿ ಕಟ್ಟಡ ಸುಟ್ಟವರಿಗೆ ದೇಹಾಂತ ಶಿಕ್ಷೆ ಕೊಡಲಾಗುವುದೆಂದು ಡಂಗುರ ಸಾರಿದರು.

ಇತ್ತ ಪೊಲೀಸರ ಶೋಧನಾ ಕಾರ್ಯ ಚುರುಕುಗೊಂಡಿತು. ದಿನಾಲು ಊರಲ್ಲಿ ತಿರುಗಿ ಮನೆಮನೆಗೆ ಹೋಗಿ ಜನರನ್ನು ಚೌಕಶಿ ಮಾಡಹತ್ತಿದರು. ಊರು ಬಿಟ್ಟು ಅವರು ಕದಲಲಿಲ್ಲ. ಮನೆ ಬಿಟ್ಟು ಹೋದವರಿಗೆ ತಿರುಗಿ ಮನೆಗೆ ಬರಬೇಕೆಂದರೆ ಪೊಲೀಸರು ಹಿಡಿಯಬಹುದೆಂಬ ಭಯ. ಆಗ ರಾಮಚಂದ್ರ ವಡವಿಯವರು ಸುದ್ಧಿ ತಿಳಿದ ಕೂಡಲೇ ಬೆಳಗಾವಿಯಿಂದ ಕುಮರಿ ಆಶ್ರಮಕ್ಕೆ ಬರುತ್ತಾರೆ. ಕಾರ್ಯಕರ್ತರಿಗೆ ಮಾರ್ಗದರ್ಶನ ಮಾಡಿ ಅವರಲ್ಲಿ ಧೈರ್ಯ ತುಂಬುತ್ತಾರೆ.

ಅವರು ಬೆಳಗಾವಿಯಲ್ಲಿ ಸುರಕ್ಷಿತ ಸ್ಥಳದಲ್ಲಿದ್ದರೂ ಹುದಲಿಯಂತಾ ಗಂಡಾಂತರ ಸ್ಥಳಕ್ಕೆ ಉದ್ದೇಶ ಪೂರ್ವಕವಾಗಿ ಬಂದು ಕಾರ್ಯಕರ್ತರನ್ನು ಸೇರಿಕೊಳ್ಳುತ್ತಾರೆ. ಇದರಿಂದ ಕಾರ್ಯಕರ್ತರಲ್ಲಿ ನವಚೈತನ್ಯ ಉಂಟಾಗುತ್ತದೆ. ಪೊಲೀಸರು ಯಾರ ಶೋಧದಲ್ಲಿದ್ದರೂ ಅವರೇ ಒಬ್ಬೊಬ್ಬರಾಗಿ ಕುಮರಿ ಆಶ್ರಮಕ್ಕೆ ಬಂದು ಸೇರುತ್ತಿದ್ದರು. ಇದಲ್ಲದೆ ಯಲ್ಲಪ್ಪ ಕರಡಿಗುದ್ದಿ, ನಾಗಪ್ಪಾ ಭೀಮಪ್ಪಾ ಉಪರಿ, ಫಕೀರಪ್ಪಾಬಸವಂತೆಪ್ಪಾ ಪವಾಡಿ, ಭೀಮಪ್ಪಾ ನಿಂಗಪ್ಪಾ ಹಿರಿತಂಗಿ, ಬಸವಣ್ಣೆಪ್ಪಾ ಜಕ್ಕಣ್ಣನವರ (ಸುಲದಾಳ) ಕೆಂಚಪ್ಪ ತೋರಣಗಟ್ಟಿ, ಬೆಣಕನಮರಡಿ ಮೊದಲಾದವರು ಕಾರ್ಯಕ್ರಮಗಳಿಗೆ ಬಂದು ಹೋಗುವುದನ್ನು ಮಾಡುತ್ತಿದ್ದರು.

ಒಂದೆರಡು ದಿನಗಳಲ್ಲಿ ಹೋರಾಟಗಾರರ ಸಂಖ್ಯೆ ಇಪ್ಪತ್ತೈದರಷ್ಟಾಯಿತು. ಇವರಿಗೆಲ್ಲಾ ಊಟದ ವ್ಯವಸ್ಥೆ ಮಾಡಬೇಕಾಯಿತು. ಪ್ರಾರಂಭದ ಒಂದೆರಡು ದಿನ ಅವರವರ ಮನೆಯಿಂದ ಊಟ ಬರುತ್ತಿತ್ತು. ಮುಂದೆ ಅದಕ್ಕೆ ಏನಾದರೊಂದು ಉಪಾಯವನ್ನು ಮಾಡಬೇಕೆಂದು ವಡವಿಯವರು ಯೋಚನೆ ಮಾಡುತ್ತಾರೆ ಮತ್ತು ಇವರಲ್ಲಿ ಎಷ್ಟು ಜನ ತಮ್ಮೊಂದಿಗೆ ಹೋರಾಡಲು ನಿರ್ಧರಿಸುತ್ತಾರೆಂದು ತಿಳಿದುಕೊಂಡು ಮುಂದಿನ ಯೋಜನೆ ಹಾಕಲು ಅಣಿಯಾಗುತ್ತಾರೆ. ಕಾರ್ಯಕರ್ತರನ್ನು ಕುರಿತು ವಡವೀಯವರು 'ನೀವು ಪೊಲೀಸರ ಹತ್ತಿರ ಹೋಗಿ ಹಾಜರಾಗುತ್ತಿರಾ ಅಥವಾ ನನ್ನೊಂದಿಗೆ ಇದ್ದು ಕೆಲಸ ಮಾಡುತ್ತಿರಾ' ಎಂದು ಕೇಳುತ್ತಾರೆ. ಅಲ್ಲದೆ ಅವರೆಲ್ಲಾ ವಡವಿಯವರೊಂದಿಗೆ ಇದ್ದು ಕೆಲಸ ಮಾಡುತ್ತೇವೆಂದು ಒಪ್ಪಿಕೊಂಡ ಬಳಿಕ ಈ ಆಂದೋಲನದ ಉಗ್ರ ಸ್ವರೂಪವನ್ನು ಅವರ ಮುಂದಿಡುತ್ತಾರೆ. ಅವರು ಒಕ್ಕೊರಲಿನಿಂದ 'ಮಾಡುತ್ತೇವೆ ಇಲ್ಲವೆ ಮಡಿಯುತ್ತೇವೆ' ಎಂದು ಹೇಳಿದಾಗ ಅವರ ದೇಶಪ್ರೇಮ ಮತ್ತು ಅಚಲ ನಿಷ್ಠೆಯ ಬಗ್ಗೆ ವಡವಿಯವರಿಗೆ ಸಂತೋಷವೆನಿಸುತ್ತದೆ.

ಹುದಲಿಯಿಂದ ಭೂಗತರಾದ ಆ ತರುಣ ಹೋರಾಟಗಾರರ ಅಭಿಪ್ರಾಯವನ್ನು ಕೇಳುವ ಸಲುವಾಗಿ ಪಂಚರ ಮತ್ತು ಊರ ಹಿರಿಯರ ಗುಪ್ತ ಸಭೆಯೊಂದನ್ನು ಏರ್ಪಡಿಸಲಾಗಿತ್ತು. ಹುದಲಿಯಲ್ಲಿ ಸರಕಾರ ನಿಯುಕ್ತ ಗ್ರಾಮ ಪಂಚಾಯತಿ ಇರಲಿಲ್ಲ. ಲೋಕಮಾನ್ಯವಾದ ಮತ್ತು ಪರಂಪರಾಗತವಾದ ಪಂಚಾಯಿತಿ ಇತ್ತು. ಊರಲ್ಲಿ ಯಾವುದೇ ಉತ್ಸವವಿರಲಿ, ತಂಟೆ ತಕರಾರುಗಳಿರಲಿ ಅವೆಲ್ಲಾ ಪಂಚರ ಮುಖಾಂತರವೇ ಬಗೆ ಹರಿಯುತ್ತಿದ್ದವು. ಪಂಚರ ಮಾತನ್ನು ಜನರು ಮನ್ನಿಸುತ್ತಿದ್ದರು. ಪಂಚರು ಅಪರಾಧಿಗಳಿಗೆ ದಂಡ ವಿಧಿಸುತ್ತಿದ್ದರು. ಕ್ಷಮೆ ಕೇಳಲಿಕ್ಕೆ ಹಚ್ಚುತ್ತಿದ್ದರು. ತಮ್ಮ ನಿರ್ಣಯವನ್ನು ಕೇಳದವರ ಮೇಲೆ ಬಹಿಷ್ಕಾರವನ್ನು ಹಾಕುತ್ತಿದ್ದರು. ಹಾಗಾಗಿ ಪಂಚರ ವರ್ಚಸ್ಸು ಗಾಢವಾಗಿತ್ತು. ವಡವಿಯುವರೂ ಕೂಡಾ ಯಾವುದೇ ಕೆಲಸವನ್ನು ಮಾಡುವುದಾದರೆ ಪಂಚರ ಅಭಿಪ್ರಾಯವನ್ನು ಕೇಳಿಯೇ ಮಾಡುತ್ತಿದ್ದರು. ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾದ ಗಂಗಾಧರರಾಯರು ಕೂಡಾ ಪಂಚರು ಕೊಡುವ ತೀರ್ಪನ್ನು ಮಾನ್ಯ ಮಾಡುತ್ತಿದ್ದರು.

ರಾಮಚಂದ್ರ ವಡವಿಯವರು ಹುದಲಿಯಲ್ಲಿ ಪಂಚರ ಮತ್ತು ಊರ ಹಿರಿಯರ ಗುಪ್ತ ಸಭೆಯೊಂದನ್ನು ಕರೆಯಲು ಸೂಚಿಸುತ್ತಾರೆ. ಶ್ರೀ ಭಾವುಸಾಹೇಬ ದೇಶಪಾಂಡೆಯುವರ ವಾಡೆಯಲ್ಲಿ ರಾತ್ರಿ ಹತ್ತು ಗಂಟೆಗೆ ಗುಪ್ತ ಸಭೆಯನ್ನು ಕರೆಯಲಾಗುತ್ತದೆ. ಊರ ಜನರು ಪಂಚರು ಹೋರಾಟಗಾರರಿಗೆ ಪರವಾಗಿಯೇ ಇದ್ದರು. ವಡವಿಯವರ ಜೊತೆ ಶ್ರೀ ಬಿ. ಆರ್. ಪಾಟೀಲರು ಕೂಡಾ ಆ ಸಭೆಗೆ ಹಾಜರಿದ್ದರು. ಊರಲ್ಲಿ ಪೊಲೀಸ ಪಾರ್ಟಿಯೂ ಇತ್ತು. ವಡವೀಯವರೊಂದಿಗೆ ಶ್ರೀ ಭಾವುರಾವ್ ದೇಶಪಾಂಡೆ, ಅಮೃತರಾವ್ ದೇಶಪಾಂಡೆ, ದಾದಾಸಾಹೇಬ ದೇಶಪಾಂಡೆ, ರಾಮರಾವ್ ದೇಶಪಾಂಡೆ, ಎಲ್ಲಪ್ಪಾ ತುಕ್ಕಾರ, ಶ್ರೀ ರಾಯಪ್ಪಾ ಖಣಗಣ್ಣಿ ಹಾಗೂ ಇನ್ನೂ ಅನೇಕ ಜನರು ಬಂದಿದ್ದರು. ಪೊಲೀಸ ಪಾಟೀಲರಾದ ಬಸನಗೌಡರು ಸಭೆಗೆ ಹಾಜರಿದ್ದರು. ವಾಡೆದ ನಡುಮನೆಯಲ್ಲಿ ಸಭೆ ನಡೆದಿತ್ತು. ಬಾಗಿಲನ್ನು ಹಾಕಿ ಹೊರಗೆ ಕಾವಲಿಗೆ ಒಬ್ಬಿಬ್ಬರನ್ನು ನಿಲ್ಲಿಸಿದ್ದರು. ವಡವಿಯವರು ಸಭೆಗೆ ಬಂದವರನ್ನು ಉದ್ದೇಶಿಸಿ 'ನಿಮ್ಮ ಮಕ್ಕಳಿಗೆ ನನ್ನೊಂದಿಗೆ ಹೊರಗೆ ಇದ್ದು ಕೆಲಸ ಮಾಡಲಿಕ್ಕೆ ಹೇಳುತ್ತಿರೋ ಅಥವಾ ಪೊಲೀಸರ ಹತ್ತಿರ ಹಾಜರಾಗಲು ಹೇಳುತ್ತಿರೋ' ಎಂದು ಕೇಳುತ್ತಾರೆ. ಅವರಲ್ಲಿ ಭೂಗತರಾದ ಹುಡುಗರ ಪಾಲಕರೂ ಆಗಿದ್ದರು. ಇವರಿಗೆ ಇಕ್ಕಟ್ಟಿನಲ್ಲಿ ಸಿಕ್ಕಂತ ಸ್ಥಿತಿ. ಈಗಲೇ ತಮ್ಮ ಹುಡುಗರಿಗೆ ಹಾಜರಾಗಲು ಹೇಳಿದರೆ ಏನಾಗುತ್ತದೆಯೋ ಏನೋ ತಂತಿ ಕಡಿದವರಿಗೆ ಗಲ್ಲಿನ ಶಿಕ್ಷೆ ಎಂದು ಡಂಗುರ ಸಾರಲಾಗಿದೆ. ಹುಡುಗರಿಗೆ ಈಗಲೇ ಪೊಲೀಸರ ಹತ್ತಿರ ಹೋಗಿ ಹಾಜರಾಗಲು ಹೇಳುವುದೆಂದರೆ ಅವರನ್ನು ಈಗಲೇ ಶೂಲಕ್ಕೇರಿಸಲು ಕೊಟ್ಟಂತೆಯೇ. ತಮ್ಮ ಹುಡುಗರಿಗೆ ಗಲ್ಲಿನ ಶಿಕ್ಷೆ ಆಗುತ್ತದೆಂಬ ಭೀತಿ ಅವರನ್ನು ಕಾಡುತ್ತಿತ್ತು. ಒಂದು ವೇಳೆ ಅವರು ಹೊರಗೆ ಉಳಿದರೆ ಬ್ರಿಟಿಷರಿಂದ ಎಂತಹ ಸಮಸ್ಯೆ ಎದುರಿಸಬೇಕಾಗುತ್ತದೆಯೋ ತಿಳಿಯದು. ಪಾಲಕರ ಮನಸ್ಸು ಹೊಯ್ದಾಡುತ್ತಿತ್ತು. ವಾತಾವರಣ ನಿಶ್ಯಬ್ಧವಾಗಿತ್ತು ಕೆಲ ಹೊತ್ತಿನ ನಂತರ ಅವರಲ್ಲಿ ಒಬ್ಬ ಹೇಳುತ್ತಾನೆ. "ಈದೀಗ ವಡವಿ ಮಾಸ್ತರರು ಹೇಳಿದ ಹಾಗೆ ಈ ಸಾರಿ ಆಂದೋಲನವು ಅಳಿವು ಉಳಿವಿನ ಪ್ರಶ್ನೆಯಾಗಿದೆ. ಪೊಲೀಸರ ಹತ್ತಿರ ಹೋಗಿ ಹಾಜರಾಗಿ ಈಗಲೇ ಗಲ್ಲಿಗೆ ಹೋಗುವುದಕ್ಕಿಂತ ವಡವಿ ಮಾಸ್ತರರೊಂದಿಗೆ ಹೊರಗಿದ್ದು ಕೆಲಸ ಮಾಡಲಿ. ಅವರಿಗೆ ಆದದ್ದು ನಮ್ಮ ಹುಡುಗರಿಗೂ ಆಗುತ್ತದೆ"[೩೬]. ಇವರ ಅಭಿಪ್ರಾಯವನ್ನು ಉಳಿದ ಪಾಲಕರು ಒಪ್ಪಿಕೊಂಡು ಆಂದೋಲನದ ಬಗ್ಗೆ ತಮ್ಮ ಸಮ್ಮತಿಯನ್ನು ಸೂಚಿಸಿದರು. ವಿಧ್ವಂಸಕ ಕೃತ್ಯ ಮಾಡಿದವರ ಮೇಲೆ ಕಟ್ಲೆ ಹಾಕಿ ಒಬ್ಬಿಬ್ಬರಿಗೆ ಫಾಸಿ ಕೊಟ್ಟ ಘಟನೆಗಳು ಪಾಲಕರಲ್ಲಿ ಭೀತಿಯನ್ನು ಹುಟ್ಟಿಸಿದವು. ಆದರೆ ಈ ತರುಣ ಜನರು ಹೋರಾಟದಿಂದ ಹಿನ್ನಡೆಯಲಿಲ್ಲ.

ಬೆಳಗಾವಿ, ಗೋಕಾಕಿನ ಈ ಭಾಗವನ್ನು ರೈಲು ಅಧಿಕಾರಿಗಳು ಡೆಂಜರ್ ಝೋನ್ ಎಂದು ಕರೆದು ಸುಮ್ಮನೆ ಕೂಡಲಿಲ್ಲ. ಮಾರ್ಗ ಪರಿಶೋಧಕ್ಕಾಗಿ ಪೈಲೆಟ್ ಗಾಡಿಯೊಂದನ್ನು ಬೆಳಗಾವಿಯಿಂದ ಹುಕ್ಕೇರಿ ರೋಡಿನವರೆಗೆ ಓಡಿಸತೊಡಗಿದರು. ಒಂದು ಇಂಜಿನ್, ಅದರ ಹಿಂದೆ ಸಶಸ್ತ್ರ ಪೊಲೀಸರ ಡಬ್ಬಿ, ಅದರ ಹಿಂದೆ ಗಾರ್ಡ ಇರುವ ಡಬ್ಬಿ ಇದು ಪೈಲೆಟ್ ಗಾಡಿಯ ಸ್ವರೂಪವಾಗಿತ್ತು. ಈ ಗಾಡಿಯನ್ನು ಪ್ಯಾಸೆಂಜರ್ ಗಾಡಿ ಬರುವುದಕ್ಕಿಂತ ಅರ್ಧ ತಾಸು ಮುಂಚಿತವಾಗಿ

ಓಡಿಸುತ್ತಿದ್ದರು. ರೈಲಿನ ಎರಡು ಬದಿಗೆ ಒಂದು ಫರ್ಲಾಂಗು ಅಂತರದೊಳಗೆ ಯಾರು ಬರಬಾರದು. ಬಂದರೆ ಅವರನ್ನು ಗುಂಡಿಕ್ಕಿ ಕೊಲ್ಲಲಾಗುವುದು ಎಂದು ಸರಕಾರ ಜಾಹೀರ ಮಾಡಿತು. ಗಾಡಿ ಹೋಗುವಾಗ ಪೊಲೀಸರು ಡಬ್ಬಿಯೊಳಗಿಂದಲೇ ಸಪ್ಪಳವಾದ ಕಡೆಗೆಲ್ಲಾ ಗುಂಡು ಹಾರಿಸುತ್ತಾ ಹೋಗುತ್ತಿದ್ದರು. ಇದು ಪೊಲೀಸರು ಹಾಗೂ ಹೋರಾಟಗಾರರ ನಡುವೆ ನಡೆಯುತ್ತಿರುವ ಅತ್ಯಂತ ತೀವ್ರ ಹೋರಾಟವಾಗಿತ್ತು.

ಚಳುವಳಿಯು ತೀವ್ರ ಸ್ವರೂಪವನ್ನು ಪಡೆಯಿತು. ಹುದಲಿ, ಅಕ್ಕತಂಗಿಯರಹಾಳ, ಪಾಶ್ಚಾಪುರಗಳಲ್ಲಿ ಭೂಗತರಾಗಿ ಕೆಲಸಮಾಡಿವ ಗುಂಪುಗಳಿದ್ದಂತೆ ಸಂಪಗಾವಿಯಲ್ಲಿ ಶ್ರೀ ಚೆನ್ನಪ್ಪಾ ವಾಲಿ, ಬೆಳಗಾವಿಯಲ್ಲಿ ಶ್ರೀ ರಂಗ ಕಾಮತ, ಇವರು ಗುಂಪು ಕಟ್ಟಿಕೊಂಡು ಕೆಲಸ ಮಾಡುತ್ತಿದ್ದರು. ಬೆಳಗಾವಿ ಜಿಲ್ಲೆಯಲ್ಲಿ ಅತ್ಯಂತ ಪ್ರಸಿದ್ಧರಾದ ನಾಲ್ವರು ಸ್ವಾತಂತ್ರ್ಯ ಹೋರಾಟಗಾರರ ಮೇಲೆ ಬ್ರಿಟಿಷರ ಕಣ್ಣಿತ್ತು. ಚೆನ್ನಪ್ಪಾ ವಾಲಿ, ಶ್ರೀರಂಗ ಕಾಮತ, ಅಣ್ಣೂ ಗುರುಜಿ ಮತ್ತು ರಾಮಚಂದ್ರ ವಡವಿ ಈ ನಾಲ್ವರೂ ಬ್ರಿಟಿಷರಿಗೆ ಬೇಕಾಗಿದ್ದರು. ಇವರನ್ನು ಬಂಧಿಸಿ ಚಳಿವಳಿಯನ್ನು ಮಟ್ಟ ಹಾಕಬೇಕೆಂದು ಅವರು ಲೆಕ್ಕ ಹಾಕಿದ್ದರು. ಈ ನಾಲ್ವರನ್ನು ಹಿಡಿದು ಕೊಟ್ಟವರಿಗೆ ಪ್ರತಿಯೊಬ್ಬರಿಗೂ ರೂಪಾಯಿ ಐದೈದು ಸಾವಿರದಂತೆ ಬಹುಮಾನ ಕೊಡುವುದಾಗಿ ಬ್ರಿಟಿಷ ಸರಕಾರ ಘೋಷಿಸುತ್ತದೆ. ಚಳುವಳಿಕಾರರಲ್ಲಿಯೂ ಸಂದೇಹ ಶುರುವಾಯಿತು. ಹಣದ ಆಸೆಗಾಗಿ ನಮ್ಮನ್ನು ಹಿಡಿದರೆ ಹೇಗೆ ? ಎಂಬ ಚಿಂತೆ ಕಾಡತೊಡಗಿತು. ಶ್ರೀರಂಗ ಕಾಮತ ಮತ್ತು ಅಣ್ಣೂ ಗುರೂಜಿಯವರು ಬೇಗನೆ ಬ್ರಿಟಿಷರ ಕೈಗೆ ಸಿಕ್ಕರು. ಕೆಲವು ದಿನಗಳ ನಂತರ ಬ್ರಿಟಿಷರು ಚೆನ್ನಪ್ಪಾ ವಾಲಿಯವರನ್ನೂ ಕೂಡಾ ಬಂಧಿಸುತ್ತಾರೆ. ವಾಮನರಾವ್ ದೇಸಾಯಿ ಮತ್ತು ರಾಮಚಂದ್ರ ವಡವಿಯವರನ್ನು ಹಿಡಿಯುವುದು ಪೊಲೀಸರಿಗೆ ಸಾಧ್ಯವಾಗಲಿಲ್ಲ.

ಹೋರಾಟಗಾರರು ರೈಲು ಕಂಬಿ ಕೀಳುವುದರಲ್ಲಿ ಪರಿಣಿತರಾಗಿದ್ದರು. ಒಂದು ದಿನ ರಾತ್ರಿ ಹತ್ತು ಗಂಟೆಗೆ ಕಂಬಿಗಳನ್ನು ಕೀಳಲಿಕ್ಕೆ ಹೋಗುವುದೆಂದು ಗೊತ್ತು ಮಾಡಿ ಇತರ ಚಳುವಳಿಕಾರರಿಗೆ ಸುದ್ಧಿಯನ್ನು ಮುಟ್ಟಿಸುತ್ತಾರೆ. ಕಂಬಿ ಕೀಳುವ ಮೊದಲು ರೈಲ್ವೆ ಹಳಿ ಬದಿ ಇರುವ ಟೆಲಿಫೋನ ವಾಯರಗಳನ್ನು ಮೊದಲು ಕತ್ತರಿಸುತ್ತಿದ್ದರು. ಅಂದರೆ ತಾವು ಮಾಡುವ ಕೆಲಸ ರೈಲ್ವೆ ಅಧಿಕಾರಿಗಳಿಗೆ ಗೊತ್ತಾಗಬಾರದೆಂಬ ಉದ್ದೇಶ ಅವರದಾಗಿತ್ತು. ಬ್ರಿಟಿಷ ಸರಕಾರದ ವಿರುದ್ಧ ಇವರು ಮಾಡುವ ವಿಧ್ವಂಸಕ ಕೃತ್ಯಗಳಲ್ಲಿ ಸಾರ್ವಜನಿಕರಿಗೆ ಯಾವುದೇ ರೀತಿಯ ತೊಂದರೆಯಾಗಬಾರದೆಂದು ಎಚ್ಚರವಹಿಸುತ್ತಿದ್ದರು. ರಾತ್ರಿ ಹನ್ನೊಂದು ಗಂಟೆಗೆ ಇವರು ಹಳಿ ಬಿಚ್ಚುವ ಕೆಲಸಕ್ಕೆ ತೊಡಗಿದರು. ಬೆಳಗಿನ ಮೂರು ಗಂಟೆಯವರೆಗೆ ಯಾವ ಗಾಡಿಯೂ ಸಂಚಾರ ಮಾಡುವುದಿಲ್ಲವೆಂದು ಖಾತರಿ ಮಾಡಿಕೊಂಡು ಕಂಬಿ ಕೀಳುವ ಕೆಲಸಕ್ಕೆ ಅಣಿಯಾದರು. ಹಾರಿ, ಗುದ್ದಲಿ ಮತ್ತು ಇತರ ಸಲಕರಣೆಗಳೆಲ್ಲಾ ಒಯ್ಯಲಾಗಿತ್ತು. ವಾಸುದೇವನು ಪಾನಾದಿಂದ ನಟ್ಬೋಲ್ಟ ಹೇಗೆ ಉಚ್ಚಬೇಕು, ಫಿಶ್ ಪ್ಲೇಟ್ ಹೇಗೆ ತೆಗೆಯಬೇಕು ಎಂಬುದನ್ನು ತೋರಿಸಿದ. ಹೀಗೆ ಎರಡು-ಮೂರು ಫರ್ಲಾಂಗ ಕಂಬಿಗಳನ್ನು ಕಿತ್ತು

ಎಸೆದಿರಬಹುದು. ಅಷ್ಟರಲ್ಲಿ ಒಂದು ರೈಲು ಕೂಗುತ್ತದೆ. ಇಂತಹ ಕೆಲಸ ಮಾಡುವಾಗ ಪ್ಯಾಸೆಂಜರ್ ಗಾಡಿಗೆ ಅಪಾಯವಾಗಬಾರದೆಂದು ಆಚೆ ಈಚೆ ಬದಿಗಳಲ್ಲಿ ಕೆಂಪು ನಿಶಾನೆಗಳನ್ನು ನಿಲ್ಲಿಸಲಾಗುತ್ತಿತ್ತು. ಹೀಗೆ ಬ್ರಿಟಿಷ ಸರಕಾರದ ವಿರುದ್ಧ ಇವರು ಹೋರಾಟ ಮಾಡುತ್ತಿದ್ದರು. ಯಾವುದೇ ವ್ಯಕ್ತಿಗೆ ಮತ್ತು ಅವರ ಆಸ್ತಿ–ಪಾಸ್ತಿಗಳಿಗೆ ಹಾನಿಯಾಗದಂತೆ ಎಚ್ಚರವಹಿಸುತ್ತಿದ್ದರು. ವೈಯಕ್ತಿಕ ಪ್ರಾಣಹಾನಿಯಾದರೂ ಅದನ್ನು ಸಹಿಸುವ ಎದೆಗಾರಿಕೆ ಈ ಹೋರಾಟಗಾರರಲ್ಲಿ ಇತ್ತು. ಇದು ಹೋರಾಟಗಾರರ ಬದ್ಧತೆ, ಮಾನವೀಯತೆಗಳಿಗೆ ನಿದರ್ಶನವಾಗಿದೆ.

ಸ್ವಾತಂತ್ರ್ಯ ಹೋರಾಟಗಾರರಿಗೆ ಹುದಲಿಯ ಪಂಚರು, ಪೊಲೀಸ ಪಾಟೀಲರು ಮತ್ತು ಊರ ಜನರು ತುಂಬಾ ಸಹಕಾರವನ್ನು ಕೊಡುತ್ತಿದ್ದರು. ಊರಲ್ಲಿ ನಾಲ್ಕೈದು ಜನರು ಚಳುವಳಿಯನ್ನು ವಿರೋಧಿಸುತ್ತಿದ್ದರು. ಅವರು ಯಾವಾಗಲೂ ಸರಕಾರದ ಪರವಾಗಿಯೇ ಕೆಲಸ ಮಾಡುತ್ತಿದ್ದರು. ಚಳುವಳಿಕಾರರು ಮಾಡುವ ಕೆಲಸ ಕಾರ್ಯಗಳನ್ನು ಗುಪ್ತರೀತಿಯಿಂದ ಬ್ರಿಟಿಷ ಸರಕಾರಕ್ಕೆ ತಿಳಿಸುತ್ತಿದ್ದರು. ಬ್ರಿಟಿಷರು ಮಾತ್ರ ಇವರಿಗೆ ಕವಡೆ ಕಿಮ್ಮತ್ತನ್ನು ಕೊಡುತ್ತಿರಲಿಲ್ಲ. ಭೂಗತರ ಚಲನವಲನಗಳನ್ನು ಬ್ರಿಟಿಷರಿಗೆ ತಿಳಿಸುವುದರಿಂದ ತಮಗೆ ದೊಡ್ಡ ಪುರಸ್ಕಾರ ಸಿಗಬಹುದೆಂದು ಅವರು ಭಾವಿಸಿದ್ದರು. ಹೋರಾಟಗಾರರ ಗುಪ್ತ ಸಭೆಗಳನ್ನು, ಚರ್ಚೆ ಮತ್ತು ಅವರ ವಿಚಾರಗಳನ್ನು ಇವರೂ ಗುಪ್ತ ರೀತಿಯಿಂದ ತಿಳಿದುಕೊಂಡು ಬ್ರಿಟಿಷರಿಗೆ ಹೇಳಿ ಕಳಿಸುತ್ತಿದ್ದರು. ಬ್ರಿಟಿಷ ಸರಕಾರ ಪೊಲೀಸರನ್ನು ನಿಯಮಿಸಿ ಚಳುವಳಿಕಾರರನ್ನು ಹಿಡಿದು ತರಲು ತಿಳಿಸುತ್ತಿದ್ದರು. ಆದರೆ ಸ್ವಾತಂತ್ರ್ಯ ಹೋರಾಟಗಾರರಿಗೆ ಅಪಾರವಾದ ಜನ ಬೆಂಬಲವಿದ್ದಿತು. ಆ ಜನರು ಪೊಲೀಸರು ಬರುವ ವೇಳೆ ಮತ್ತು ದಿನಾಂಕವನ್ನು ತಿಳಿದುಕೊಂಡು ಚಳುವಳಿಗಾರರಿಗೆ ತಿಳಿಸುತ್ತಿದ್ದರು. ಇದರಿಂದ ಪೊಲೀಸರು ಎಷ್ಟೇ ಪ್ರಯತ್ನಪಟ್ಟರೂ ಚಳುವಳಿಕಾರರು ಸಿಗುತ್ತಿರಲಿಲ್ಲ. ಹಿಡಿಯಲು ಬಂದ ಪೊಲೀಸರು ಬಂದ ದಾರಿಗೆ ಸುಂಕವಿಲ್ಲವೆಂಬಂತೆ ತಿರುಗಿ ಹೋಗುತ್ತಿದ್ದರು. ಚಳುವಳಿಕಾರರಿಗೆ ವಿರೋಧವಾಗಿ ಕೆಲಸ ಮಾಡುತ್ತಿರುವ ಈ ದುಷ್ಟ ಜನರನ್ನು ಕೊನೆಗೆ ಪೊಲೀಸರೇ ಹಿಡಿದು ಸೆರೆಮನೆಗೆ ಅಟ್ಟುತ್ತಾರೆ. ಸರಿಯಾದ ಮತ್ತು ಖಚಿತವಾದ ಮಾಹಿತಿಯಿಲ್ಲದೆ ಬೇರೆಯವರ ಬಗ್ಗೆ ಆರೋಪ ಮಾಡುವುದು ನಿಮ್ಮ ಮೂರ್ಖತನವೆಂದು ಬ್ರಿಟಿಷರು ಅವರಿಗೆ ಛೀಮಾರಿ ಹಾಕಿ ಅವರನ್ನೇ ಸೆರೆಮನೆಗೆ ಕಳಿಸುತ್ತಾರೆ. ಪ್ರತಿಯೊಬ್ಬರಿಗೆ ನಾಲ್ಕು ತಿಂಗಳು ಸಕ್ತಮಜೂರಿ ಶಿಕ್ಷೆಯಾಗುತ್ತದೆ. ಈ ಕುಚೋದ್ಯೋಗಿಗಳಿಗೆ ಚಳುವಳಿಗಾರರ ಸುದ್ದಿಗಳನ್ನು ಹೇಳಿದ್ದಕ್ಕೆ ಪುರಸ್ಕಾರದ ಬದಲು ಜೈಲಿಗೆ ಹೋಗುವ ಪ್ರಸಂಗ ಬರುತ್ತದೆ. ಇದರಿಂದ ಪಾಠ ಕಲಿತ ದೇಶದ್ರೋಹಿ ಜನರಿಗೆ ದೇವರು ಸದ್ಬುದ್ಧಿಯನ್ನು ಕೊಡಲೆಂದು ದೇವರಲ್ಲಿ ಪ್ರಾರ್ಥಿಸಿ ಚಳುವಳಿಕಾರರು ಮತ್ತೆ ತಮ್ಮ ಚಳುವಳಿಯನ್ನು ಮುಂದುವರಿಸುತ್ತಾರೆ.

ಹುದಲಿ, ಪಾಶ್ಚಾಪೂರ, ಅಕ್ಕತಂಗೇರಹಾಳ ಪ್ರದೇಶದಲ್ಲಿ ವಿಧ್ವಂಸಕ ಚಟುವಟಿಕೆಗಳು ಬಿರುಸಿನಿಂದ ಸಾಗಿದ್ದವು. ಇದನ್ನು ಗಮನಿಸಿದ ಪೊಲೀಸರು ಹೇಗಾದರೂ ಮಾಡಿ ಚಳುವಳಿಗಾರರನ್ನು ಬಂಧಿಸಬೇಕೆಂದು ಈ ಊರುಗಳಿಗೆ ಮಧ್ಯವರ್ತಿಯಾದ ಗುಜನಾಳ ಎಂಬ ಗ್ರಾಮದಲ್ಲಿ ಅವರು

ಬೀಡು ಬಿಟ್ಟಿದ್ದರು. ಸುಲಧಾಳ ರೇಲ್ವೆ ಸ್ಟೇಷನ್‌ದಿಂದ ನಾಲ್ಕು ಫರ್ಲಾಂಗ ಅಂತರದಲ್ಲಿ ಗುಜನಾಳ ಇದೆ. ಇಲ್ಲಿ ಇನಾಮದಾರರ ಒಂದು ದೊಡ್ಡ ವಾಡೆ ಇದ್ದು ಇನಾಮದಾರರು ಬೇರೆ ಕಡೆ ವಾಸವಾಗಿದ್ದರಿಂದ ಅದು ಖಾಲಿ ಇತ್ತು. ಸುಮಾರು ಒಂದು ನೂರು ಜನ ಪೋಲೀಸರು ಆ ವಾಡೆಯಲ್ಲಿ ಬೀಡು ಬಿಟ್ಟಿದ್ದರು. ಅಲ್ಲಿಂದ ಅಕ್ಕತಂಗಿಯರಹಾಳ, ಹುದಲಿ, ಪಾಶ್ಚಾಪೂರಗಳಿಗೆ ಒಂದೊಂದು ತಂಡಗಳನ್ನು ಕಳಿಸುತ್ತಿದ್ದರು. ಇದು ಚಳುವಳಿಗಾರರಿಗೆ ಗೊತ್ತಾದ ಬಳಿಕ ಅವರು ಗುಜನಾಳವನ್ನು ಬಿಟ್ಟು ಗುಡ್ಡದಲ್ಲಿ ವಾಸ ಮಾಡತೊಡಗಿದರು. ಪೋಲೀಸರು ಬೆಳಗಾವಿಯಿಂದ ಗುಜನಾಳಕ್ಕೆ ಪ್ರತಿದಿನ ಬಂದು ಹೋಗುತ್ತಿದ್ದರು. ಇದರಿಂದ ಅವರು ಹೋಗುವ ಹಾಗೂ ಬರುವ ರೈಲಿನ ಮಾಹಿತಿ ಪಡೆದು ಇವರು ಕೆಲಸಮಾಡುತ್ತಿದ್ದರು. ಚಳುವಳಿಕಾರರಲ್ಲಿ ಕೆಲವು ಜನ ಸೈಕಲ್ ಮೇಲೆ ಬಂದು ಮುಂಚಿತವಾಗಿ ಪೋಲೀಸರು ಬರುವುದನ್ನು ನಮಗೆ ತಿಳಿಸುತ್ತಿದ್ದರು. ಇದರಿಂದ ಮುಂಜಾಗ್ರತವಾಗಿ ತಾವು ಮಾಡುವ ಕಾರ್ಯವಿಧಾನಗಳನ್ನು ಇವರು ರೂಪಿಸುತ್ತಿದ್ದರು. ಪೋಲೀಸರಿಗೆ ಹಗಲು ರಾತ್ರಿ ಶೋಧಕಾರ್ಯ ಮಾಡುವುದೊಂದೇ ಅವರ ಮುಖ್ಯ ಕೆಲಸವಾಗಿತ್ತು. ಹಗಲು ಗುಡ್ಡದಲ್ಲಿದ್ದು ವಡವಿಯವರು ಹಾಗೂ ಅವರ ಸ್ನೇಹಿತರು ರಾತ್ರಿಯಲ್ಲಿ ಕುಮರಿ ಆಶ್ರಮದಲ್ಲಿ ಮಲಗುತ್ತಿದ್ದರು. ಇದು ಪೋಲೀಸರಿಗೆ ಗೊತ್ತಾದ ಬಳಿಕ ಅವರು ಕುಮರಿ ಆಶ್ರಮವನ್ನು ಶೋಧಿಸತೊಡಗಿದರು. ಇದರಿಂದ ಹಗಲು ಮತ್ತು ರಾತ್ರಿ ಗುಡ್ಡದಲ್ಲಿಯೇ ವಾಸ ಮಾಡುವುದು ಇವರಿಗೆ ಅನಿವಾರ್ಯವಾಯಿತು. ಸ್ವಾತಂತ್ರ್ಯಕ್ಕಾಗಿ ಅವರು ಈ ಕಷ್ಟಗಳನ್ನೆಲ್ಲ ಸ್ವಾಗತಿಸಿದರು.

ಕುಂದರನಾಡಿನ ಸ್ವಾತಂತ್ರ್ಯ ಚಳುವಳಿಯ ವಿಶೇಷವೆಂದರೆ ಬೇಡ ಜನಾಂಗವು ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರೀಯವಾಗಿ ಭಾಗವಹಿಸಿದ್ದು. ಪೋಲೀಸರು ಚಳುವಳಿಕಾರರನ್ನು ಹಿಡಿಯಲು ಬಂದಾಗ ಗುಡ್ಡಗಾಡುಗಳಲ್ಲಿ ವಾಸಮಾಡುವ ಬೇಡರೇ ಅವರಿಗೆ ಆಶ್ರಯವನ್ನು ಒದಗಿಸುತ್ತಿದ್ದರು. ಬೆಳಗಾವಿ ಹತ್ತಿರವಿರುವ ಕಣಬರಗಿಯಿಂದ ಕಾಕತಿಯವರೆಗೆ ಸುಮಾರು ಇಪ್ಪತ್ತು ಮೈಲು ಗುಡ್ಡವು ಹಬ್ಬಿಕೊಂಡಿದೆ. ಇಲ್ಲಿ ಎತ್ತರವಾದ ಮರಗಳು ಬೆಳೆಯದಿದ್ದರೂ ಚಿಕ್ಕ ಪುಟ್ಟ ಗಿಡಗಳು ಮತ್ತು ಉರುವಲು ಕಟ್ಟಿಗೆಗೆ ಬೇಕಾಗುವ ಗಿಡಗಂಟಿಗಳು ಬೆಳೆಯುತ್ತಿದ್ದವು. ಈ ಗುಡ್ಡದ ಎತ್ತರದ ತುದಿಯಲ್ಲಿ ಬೇಡರು ಗುಡಿಸಲುಗಳನ್ನು ಕಟ್ಟುಕೊಂಡು ವಾಸಮಾಡುತ್ತಿದ್ದರು. ಇವರಿಗೆ ಉಪಜೀವನಕ್ಕೆ ಮತ್ತು ಸಾಗುವಳಿಗೆ ಜಮೀನ ಇರಲಿಲ್ಲ. ಆದ್ದರಿಂದ ರೈತರ ದನಗಳನ್ನು ಕದಿಯುವದು, ಭಟ್ಟಿ ಸೆರೆ ತಯಾರಿಸುವುದು ಇವೇ ಇವರ ಉದ್ಯೋಗವಾಗಿದ್ದವು. ಇದಲ್ಲದೆ ಕವಣೆಗಲ್ಲು, ಕುಡುಗೋಲು, ಚಪಗೊಡಲಿ, ಭರ್ಚಿ, ಲೈಸೆನ್ಸ ಇಲ್ಲದ ಬಂದೂಕು ಇವುಗಳನ್ನು ಹೊಂದಿ ಕಳವು ಮಾಡುತ್ತಿದ್ದರು, ಜನರನ್ನು ಹೆದರಿಸುತ್ತಿದ್ದರು. ಇವರ ಹೆಣ್ಣುಮಕ್ಕಳು ಗುಡ್ಡದಲ್ಲಿ ಉರುವಲು ಕಟ್ಟಿಗೆಯನ್ನು ಸಂಗ್ರಹಿಸಿ ಊರಲ್ಲಿ ಮಾರಾಟ ಮಾಡುತ್ತಿದ್ದರು. ಇವರು ತಂದ ಪುಡಿಕಾಸು ಅವರ ಜೀವನ ನಿರ್ವಹಣೆಗೆ ಸಾಕಾಗುತ್ತಿರಲಿಲ್ಲ. ಇವರಲ್ಲಿ ಒಕ್ಕಟ್ಟಿತ್ತು. ಸುಮಾರು ಇಪ್ಪತ್ತು, ಇಪ್ಪತ್ತೈದು ಗುಡಿಸಲುಗಳ ಒಂದು ಗುಂಪು. ಯಾರೇ ತುಡುಗು ಮಾಡಿದರು ಒಬ್ಬರ ವಿರುದ್ಧ ಒಬ್ಬರು ಚಾಡಿ ಹೇಳುತ್ತಿರಲಿಲ್ಲ. ಊರೊಳಗಿನ ಅಪರಿಚಿತರು ಗುಡ್ಡದ ಮೇಲೆ ಬರುವುದನ್ನು ಕಂಡರೆ ಇವರು ಸಿಳ್ಳು ಹೊಡೆದು

ತಮ್ಮ ಜನರಿಗೆ ಎಚ್ಚರಿಕೆ ಕೊಡುತ್ತಾರೆ. ಅಪರಿಚಿತರಿದ್ದರೆ ಅವರಿಗೆ ಕಲ್ಲು ಒಗೆದು, ಗುಂಡು ಹಾರಿಸಿ ಅಂಜಿಸಿ ಅವರನ್ನು ಓಡಿಸಿ ಬಿಡುತ್ತಾರೆ. ಊರೊಳಗೆ ಪೋಲೀಸರು ಬರುತ್ತಿದ್ದರೆ ಗಂಡಸರು ಮತ್ತು ಹೆಂಗಸರು ಗುಡ್ಡದೊಳಗೆ ಓಡಿ ಹೋಗುತ್ತಾರೆ. ಒಂದು ವೇಳೆ ಪೊಲೀಸರು ತಪಾಸಣೆ ಮಾಡಿದರೆ ಅವರಿಗೆ ಗಡಿಗೆ, ಮಡಿಕೆಗಳ ಹೊರತು ಬೇರೇನೂ ಸಿಗುತ್ತಿರಲಿಲ್ಲ. ಮೇಲಿಂದ ಮೇಲೆ ಪೊಲೀಸರಿಂದ ತಪ್ಪಿಸಿಕೊಳ್ಳುವ ಪ್ರಸಂಗ ವಡವಿಯವರಿಗೆ ಮತ್ತು ಅವರ ಸ್ನೇಹಿತರಿಗೆ ಬರುತ್ತಿತ್ತು. ಅವರು ಬೇರೇನೂ ವಿಚಾರ ಮಾಡದೆ ಗುಡ್ಡದಲ್ಲಿ ಅವಿತುಕೊಳ್ಳುತ್ತಿದ್ದರು. ಹೀಗಾಗಿ ಬೇಡರ ಮತ್ತು ಚಳುವಳಿಕಾರರ ಸಂಪರ್ಕವು ಗಾಢವಾಗಿ ಬೆಳೆಯತೊಡಗಿತು. ಬೇಡರು ಕೂಡಾ ಚಳುವಳಿಕಾರರ ಗೊತ್ತುಗುರಿಗಳನ್ನು ಅರಿತುಕೊಂಡು ಅವರಿಗೆ ಸಹಾಯ ಮಾಡುತ್ತಿದ್ದರು. ಅಲ್ಲದೆ ತಾವು ಮಾಡುವ ತಪ್ಪುಗಳನ್ನು ತಿದ್ದಿಕೊಳ್ಳುತ್ತಿದ್ದರು. ಬೇಡರ ಮನೋವೃತ್ತಿಯನ್ನು ಹಿಂಸಾಚಾರ, ಕಾನೂನು ಇವುಗಳಿಂದ ಬದಲಿಸಲು ಸಾಧ್ಯವಿಲ್ಲವೆಂದು ಬಗೆದು ಗಾಂಧೀಜಿ ಹೇಳಿದ ಮಾತು ವಡವಿಯವರಿಗೆ ನೆನಪಾಗುತ್ತದೆ. ಆದ್ದರಿಂದ ಆರ್ಥಿಕವಾಗಿ ಮೊದಲು ಅವರನ್ನು ಸುಧಾರಣೆ ಮಾಡಬೇಕು. ಅವರಿಗೆ ಉದ್ಯೋಗವಕಾಶ ಕಲ್ಪಿಸಿ ಕೊಡುವುದೂ ಸಾಧ್ಯವಿಲ್ಲ. ಒಂದೊಂದು ಊರಿಗೆ ಒಬ್ಬ ಬೇಡರ ಪ್ರಮುಖನನ್ನು ಗೊತ್ತುಮಾಡಿ ಅವನಿಗೆ ಧಾನ್ಯ ಸಂಗ್ರಹಿಸುವ ಕೆಲಸವನ್ನು ವಹಿಸಿಕೊಟ್ಟರು. ತಮಗೆ ಅಡಚಣೆ ಬಂದಾಗ ಊರ ಪ್ರಮುಖರಿಂದ ಧಾನ್ಯವನ್ನು ಸಂಗ್ರಹಿಸಿ ಸುಗ್ಗಿಯಾದ ಬಳಿಕ ಅದಕ್ಕೆ ಮತ್ತೆ ನೂರಕ್ಕೆ ಇಪ್ಪತ್ತೈದರಷ್ಟು ಹೆಚ್ಚಿಗೆ ಧಾನ್ಯವನ್ನು ಕೂಡಿಸಿ ಕೊಡುತ್ತಿದ್ದರು. ಈ ಕೆಲಸದಲ್ಲಿ ಅತ್ಯಂತ ಪ್ರಾಮಾಣಿಕತೆಯನ್ನು ಬೇಡರು ತೋರಿಸುತ್ತಿದ್ದರು. ಇದರಿಂದ ಊರಲ್ಲಿ ದನಗಳ ಕಳುವಾಗಲಿ, ಬೇಡರ ಹಾವಳಿಯಾಗಲಿ, ಉಂಟಾಗದೇ ಜನರು ಸಂತೋಷದಿಂದ ಇರಹತ್ತಿದರು. ಅಲ್ಲದೆ ಚಳುವಳಿಕಾರರ ಪ್ರೀತಿಗೂ ಪಾತ್ರರಾದರು.

ಬೇಡರ ವಿಶೇಷವಾದ ಗುಣವೆಂದರೆ ಅವರು ವಚನ ಕೊಟ್ಟರೆ ತೀರಿತು ಎಂದೂ ವಚನ ಭ್ರಷ್ಟರಾಗುತ್ತಿರಲಿಲ್ಲ. ಉಪ್ಪು ಉಂಡವರ ಮೇಲೆ ಇವರು ಕೈ ಮಾಡಲಾರರು. ಯಾರಾದರೂ ಅವರಿಗೆ ಉಪಕಾರ ಮಾಡಿದರೆ ಅವರ ಋಣವನ್ನು ತೀರಿಸುವಲ್ಲಿ ಬದ್ಧರಾದವರು. ಇವರ ಈ ಸದ್ಗುಣಗಳನ್ನು ಕಂಡು ಈ ಚಳುವಳಿಕಾರರು ಸಮಗ್ರ ಗ್ರಾಮಸೇವಾ ಸಮೀತಿಯ ಪರವಾಗಿ ನಾಲ್ಕು ಬೇಡರ ಹಳ್ಳಿಗಳಲ್ಲಿ ಶಾಲೆಗಳನ್ನು ಪ್ರಾರಂಭಿಸುತ್ತಾರೆ. ಈ ಜನಾಂಗಕ್ಕೆ ಸುಶಿಕ್ಷಿತರ, ನಾಗರಿಕರ ಸಂಪರ್ಕವೇ ಇರಲಿಲ್ಲ. ಅವರ ಹತ್ತಿರ ಹೋಗುವವರೆಂದರೆ ಪೊಲೀಸರು ಮತ್ತು ದಲ್ಲಾಳಿಗಳು. ಆದ್ದರಿಂದ ಬೇಡರನ್ನೂ ಕೂಡಾ ಸುಸಂಸ್ಕೃತರನ್ನಾಗಿ ಮಾಡಬೇಕೆಂಬ ಉದ್ದೇಶದಿಂದ ಹುದಲಿಯಲ್ಲಿ ಶಾಲೆಗಳನ್ನು ಪ್ರಾರಂಭಿಸಲಾಯಿತು. ಬಸವಣ್ಣೆಪ್ಪಾ ಮೊದಗಿ, ಬಸವಣ್ಣೆಪ್ಪಾ ಕಣಗಣ್ಣಿ, ಬಸವಣ್ಣೆಪ್ಪಾ ಕೊಂಡಿ, ಕಾಶೀಮ ತಹಶೀಲದಾರ್, ಇವರನ್ನು ಆಯಾ ಶಾಲೆಗಳಿಗೆ ಶಿಕ್ಷಕರೆಂದು ನೇಮಿಸಲಾಗುತ್ತದೆ. ಆಶ್ಚರ್ಯದ ಸಂಗತಿಯೆಂದರೆ ನಾಗರಿಕರ ಸಂಪರ್ಕವಿಲ್ಲದ ಈ ಜನರು (ಬೇಡರು) ಶಾಲೆ ತಪಾಸಣೆಗೆ ಬಂದ ಸೂಟು, ಬೂಟು, ಹ್ಯಾಟು, ಧರಿಸಿದ ವ್ಯಕ್ತಿಯನ್ನು ಕಂಡು ಓಡಿ ಹೋಗುತ್ತಿದ್ದರು. ಇವರಿಗೆ ಬ್ರಿಟಿಷರದೇ ಭಯ. ಆದ್ದರಿಂದ ಅವರು ಹಿಡಿದು ಹೊಡೆಯುತ್ತಾರೆಂದು ತಿಳಿದು ಓಡಿ ಹೋಗುತ್ತಿದ್ದರು. ವಡವಿಯವರು ಹಾಗೂ ಅವರ ಸ್ನೇಹಿತರು ಕೂಡಿ ಅವರ ಮನ ಪರಿವರ್ತನೆ ಮಾಡುತ್ತಾರೆ

ಮತ್ತು ಚಳಿವಳಿಯ ಹಾಗೂ ದೇಶ ಪ್ರೇಮದ ಬಗ್ಗೆ ಅವರಿಗೆ ತಿಳಿಸಿ ಹೇಳುತ್ತಾರೆ. ಸೂಟು, ಬೂಟು ಧರಿಸಿದ ತಪಾಸನಾ ಅಧಿಕಾರಿಯಾದ ಹುಯಿಲಗೋಳ್ ಸಾಹೇಬರು ಕೂಡಾ ಬೇಡರಿಂದ ಒಂದು ಪಾಠ ಕಲಿಯುತ್ತಾರೆ. ಆ ಸಾಮಾನ್ಯರ ಮಧ್ಯದಲ್ಲಿ ಇದ್ದುಕೊಂಡು ನಾವು ಸೇವೆ ಮಾಡಬೇಕಾದರೆ ನಮ್ಮ ವೇಷ ಭೂಷಣಗಳು ಕೂಡಾ ಅವರಂತೆಯೇ ಸಾದಾ ಇರಬೇಕೆ ಹೊರತು ಅವರಿಗಿಂತ ಭಿನ್ನವಾದ ವೇಷಭೂಷಣಗಳು ಮನುಷ್ಯರನ್ನು ಹತ್ತಿರಕ್ಕೆ ತರುವುದಿಲ್ಲ ಎಂಬುದು ಹುಯಿಲ್‌ಗೋಳ ಅವರಿಗೆ ಮನವರಿಕೆಯಾಗುತ್ತದೆ.

## ಹುದಲಿಯ ದಂಗೆಯ ಸ್ವರೂಪ :

ಹೋರಾಟಗಾರರು ಸರಕಾರಿ ಕಚೇರಿಗಳನ್ನು ಸುಡುವುದು, ರೈಲ್ವೇ ಹಳಿಗಳನ್ನು ಕೀಳುವುದು ಮುಂತಾದ ವಿಧ್ವಂಸಕ ಕೆಲಸಗಳನ್ನು ಮಾಡುತ್ತಲೇ ಬಂದರು. ಸುಲದಾಳ ಹಾಗೂ ಹುದಲಿಯಲ್ಲಿಯ ಸರಕಾರಿ ದಪ್ತರ್‌ಗಳನ್ನು ಸುಟ್ಟ ಘಟನೆಯು ರೋಚಕವಾಗಿದೆ. ಸುಲದಾಳದಲ್ಲಿ ಸರಕಾರಿ ಚಾವಡಿಗಳಿರಲಿಲ್ಲ. ಸರಕಾರಿ ಅಧಿಕಾರಿಗಳು ಇಲ್ಲವೆ ಪೋಲೀಸರು ಬಂದರೆ ಅವರು ತಮ್ಮ ಕೆಲಸ ಕಾರ್ಯಗಳನ್ನು ಮಾಡಲು ಶಾಲೆ ಮತ್ತು ಧರ್ಮ ಶಾಲೆಗಳನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಆ ಕಾರಣಕ್ಕಾಗಿ ರಾತ್ರಿ ಅವರು ಅಲ್ಲಿಯೇ ವಾಸ್ತವ್ಯ ಮಾಡಬೇಕಾಗುತ್ತಿತ್ತು. ಇದನ್ನು ಅರಿತು ಚಳುವಳಿಕಾರರು ಶಾಲೆ ಮತ್ತು ಧರ್ಮ ಶಾಲೆಯನ್ನು ಬೆಂಕಿ ಹಚ್ಚಿ ಸುಡಬೇಕೆಂದು ನಿರ್ಧರಿಸಿದರು. ಒಂದು ರಾತ್ರಿ ಶಾಲೆ ಮತ್ತು ಧರ್ಮ ಶಾಲೆಗೆ ಬೆಂಕಿಯನ್ನು ಹಚ್ಚಿದರು. ಅದನ್ನು ಆರಿಸಲು ಊರವರು ಯಾರೂ ಬರುವುದಿಲ್ಲ. ಯಾಕೆಂದರೆ ಇದು ಕಾಂಗ್ರೆಸ್ಸಿಗರ ಕೆಲಸವೆಂಬುದು ಊರವರಿಗೆ ಗೊತ್ತಿತ್ತು. ಸುಲದಾಳ ಶಾಲೆ ಸುಟ್ಟದ್ದರಿಂದ ಸುಲದಾಳದಲ್ಲಿ ಬಸವಣ್ಣೆಪ್ಪಾ ಜಕ್ಕಣ್ಣವರ, ಬಸಪ್ಪಾ ತೇಲಿ, ಮಲ್ಲಪ್ಪಾ ಪಾಟೀಲ ಮುಂತಾದ ಮೂರ-ನಾಲ್ಕು ಜನರ ಮೇಲೆ ವಾರಂಟ್ ಹೊರಡಿಸಲಾಯಿತು. ಇಲ್ಲಿಯವರೆಗೆ ವಡವಿಯವರ ಎಲ್ಲಾ ಕಾರ್ಯಕ್ರಮಗಳಿಗೆ ಅವರು ಗುಪ್ತವಾಗಿ ಬಂದು ಸಹಾಯ ಮಾಡಿ ಮತ್ತೆ ಹೋಗುತ್ತಿದ್ದರು. ಆದರೆ ವಾರಂಟ್ ಬಂದ ಬಳಿಕ ಅವರೂ ಭೂಗತರಾಗಿ ತಲೆ ಮರೆಸಿಕೊಳ್ಳಬೇಕಾಯಿತು. ಸ್ವಾತಂತ್ರ್ಯ ಚಳುವಳಿಕಾರರ ವಿಧ್ವಂಸಕ ಕೃತಿಗಳಲ್ಲಿ ಅನೇಕ ಚಾವಡಿಗಳು, ಧರ್ಮ ಶಾಲೆಗಳು ಭಸ್ಮವಾದವು.

ಹುದಲಿಯ ಸುತ್ತಮುತ್ತ ಚಳುವಳಿಕಾರರು ಕೈಕೊಂಡ ಕಾರ್ಯಗಳು ಬ್ರಿಟಿಷರನ್ನು ನಿದ್ದೆಗೆಡಿಸಿದವು. ನಾಲ್ಕೈದು ಜನರನ್ನು ಹಿಡಿಯುವುದಕ್ಕಾಗಿ ಸುಮಾರು ಇಪ್ಪತ್ತು ಇಪ್ಪತ್ತೈದು ಪೋಲೀಸರನ್ನು ಅವರು ನಿಯೋಜನಗೊಳಿಸುತ್ತಿದ್ದರು. ಇದಕ್ಕೆ ಮುಖ್ಯ ಕಾರಣವೆಂದರೆ ಚಳುವಳಿಕಾರರಲ್ಲಿ ಇರುವ ಒಕ್ಕಟ್ಟು ಮತ್ತು ಗುಪ್ತ ಸಭೆಗಳಲ್ಲಿ ಅವರು ಕೈಕೊಳ್ಳುವ ನಿರ್ಣಯಗಳು. ಆಂದೋಲನ ಪ್ರಾರಂಭವಾಗಿ ಮೂರ-ನಾಲ್ಕು ತಿಂಗಳು ಕಳೆದಿರಬಹುದು. ಭೂಗತರ ಗುಪ್ತ ಸಂಘಟನೆಗಳು ಚೆನ್ನಾಗಿ ರೂಪತಾಳಹತ್ತಿದವು. ಶ್ರೀ ದಿವಾಕರ್ ಹಾಗೂ ದ. ಪ. ಕರಮರಕರ್ ಅವರು ಭೂಗತರಾಗಿ ಮುಂಬೈಯಲ್ಲಿ ಕೆಲಸ ಮಾಡುತ್ತಿದ್ದರು. ಇವರ ಆಂದೋಲನಕ್ಕೆ ಅವರೇ

ಮಾರ್ಗದರ್ಶನ ಮಾಡುತ್ತಿದ್ದರು. ಗುಪ್ತವಾಗಿ ಬುಲೆಟಿನ್‌ಗಳನ್ನು ಹೊರಡಿಸುತ್ತಿದ್ದರು. ಬೇರೆ ಬೇರೆ ಸ್ಥಳಗಳಲ್ಲಿ ಭೂಗತ ಕಾರ್ಯಕರ್ತರ ಸಭೆಗಳು ಜರುಗುತ್ತಿದ್ದವು. ಈ ಸಭೆಗಳಲ್ಲಿ ವಿಧ್ವಂಸಕ ಕಾರ್ಯಗಳ ಬಗ್ಗೆ ಕಾರ್ಯ ನಡೆಯುತ್ತಿತ್ತು. ಸಂಘಟಿತವಾಗಿ ಕೆಲಸಗಳನ್ನು ಹೇಗೆ ಮಾಡಬೇಕೆಂಬ ಯೋಜನೆಗಳು ಸಿದ್ಧವಾಗುತ್ತಿದ್ದವು. ರೈಲ್ವೆ ಸ್ಟೇಷನ್ ಸುಟ್ಟರೆ ಉಳಿದ ಎಲ್ಲ ಸಂಘಟನೆಯವರು ಅದೇ ಕೆಲಸವನ್ನು ಮಾಡಬೇಕು. ಟಪಾಲು ಹೊಡೆಯುವ ಕಾರ್ಯವನ್ನು ಮಾಡಬೇಕೆಂದರೆ ಉಳಿದವರೂ ಅದೇ ಕಾರ್ಯವನ್ನು ಮಾಡುವುದು. ಹೀಗೆ ನೂರಾರು ಸ್ಥಳಗಳಲ್ಲಿ ಧಂಗೆ ಪ್ರಾರಂಭವಾದರೆ ಬ್ರಿಟಿಷರಿಗೆ ತನ್ನಿಂದ ತಾನೇ ಎಚ್ಚರಾಗುತ್ತದೆ ಎಂದು ಚಳುವಳಿಗಾರರು ಬಗೆದು ಆ ರೀತಿ ತಮ್ಮ ಕಾರ್ಯಗಳಿಗೆ ಅಣಿಯಾಗುತ್ತಿದ್ದರು.

ಬೆಳಗಾವಿಯಲ್ಲಿ ಕುಮಾರಿ ಪ್ರಮಿಳಾ ದೇಶಪಾಂಡೆ ಮತ್ತು ಇನ್ನು ಕೆಲವರು ಕೂಡಿಕೊಂಡು ಕನ್ನಡ, ಮರಾಠಿ ಬುಲೆಟಿನ್‌ಗಳನ್ನು ಹೊರಡಿಸುತ್ತಿದ್ದರು. ಅವುಗಳನ್ನು ಬೇರೆ ಬೇರೆ ಕಟ್ಟು ಮಾಡಿ ಆಯಾ ಊರುಗಳಿಗೆ ಕಳಿಸಲಾಗುತ್ತಿತ್ತು. ಶ್ರೀ ಶಂಕರ ಗ್ರಾಮೋಪಾಧ್ಯಾಯ ಬೆಳಗಾವಿ ಹಾಗೂ ಅಪ್ಪಯ್ಯಾ ಹೂಗಾರ ಹುದಲಿ ಇವರು ಗುಪ್ತವಾಗಿ ಬಂದು ಆ ಕಟ್ಟುಗಳನ್ನು ತೆಗೆದುಕೊಂಡು ಹೋಗಿ ಬೆಳಗಾವಿ ಹಾಗೂ ಜಿಲ್ಲೆಯ ಇತರ ಭಾಗಗಳಿಗೆ ಕಳಿಸಿ ಅವುಗಳ ಪ್ರಚಾರ ಮಾಡಿತ್ತಿದ್ದರು. ಈ ಬುಲೆಟಿನ್ನಗಳನ್ನು ಜಿಲ್ಲಾಧಿಕಾರಿ ಮತ್ತು ಇತರ ಅಧಿಕಾರಿಗಳಿಗೆ ಪೋಸ್ಟ ಮುಖಾಂತರ ರವಾನಿಸಲಾಗುತ್ತಿತ್ತು.

**ಚಳುವಳಿಯಲ್ಲಿಯೂ ಪ್ರೇಮ ಪ್ರಸಂಗಗಳು :**

ಈ ಆಂದೋಲನದಲ್ಲಿ ಅನೇಕ ತರುಣ ತರುಣಿಯರು ಭಾಗವಹಿಸುತ್ತಿದ್ದರು. ಕೂಡಿ ಕೆಲಸ ಮಾಡಿ ಒಟ್ಟೊಟ್ಟಿಗೆ ಇರುವುದರಿಂದ ಮನುಷ್ಯ ಸಹಜವಾದ ಪ್ರೇಮವು ಅವರಲ್ಲಿ ಅಂಕುರಿಸುತ್ತಿತ್ತು. ಇದಕ್ಕೆ ಉದಾಹರಣೆಯಾಗಿ ವಡವಿಯವರು ಶ್ರೀ ಶಂಕರ ಕುರ್ತಕೋಟಿ ಮತ್ತು ಕುಮಾರಿ ಶಕುಂತಲಾ ಅವರ ಪ್ರೇಮ ಪ್ರಸಂಗ. ಈ ಇಬ್ಬರೂ ಪರಸ್ಪರ ಪ್ರೀತಿಸುತ್ತಿರುವುದರಿಂದ ಅವರಲ್ಲಿ ಮದುವೆ ಮಾಡಿಕೊಳ್ಳುವ ವಿಚಾರ ಬರುತ್ತದೆ. ಆದರೆ ಶಂಕರ ಕುರ್ತಕೋಟಿಯವರ ಮೇಲೆ ವಾರಂಟ ಇರುವುದರಿಂದ ಅವರು ಬಹಿರಂಗವಾಗಿ ಮದುವೆಯಾಗುವುದು ಸಾಧ್ಯವಿರಲಿಲ್ಲ. ಚಳಿವಳಿಯಂತೂ ಅತ್ಯಂತ ಧೀರ್ಘ ಕಾಲದ್ದು ಎಂದು ಮುಗಿಯುತ್ತಿದೆ ಎಂಬುದು ಯಾರಿಗೂ ಗೊತ್ತಿರಲಿಲ್ಲ. ಹೀಗಾಗಿ ಅವರಿಬ್ಬರೂ ಮುಂಬೈಯಂತಹ ಊರಲ್ಲಿ ಯಾರಿಗೂ ತಿಳಿಯದಂತೆ ಗುಪ್ತವಾಗಿಯೇ ವಿವಾಹ ಮಾಡಿಕೊಳ್ಳಬೇಕೆಂದು ನಿಶ್ಚಿಯಿಸಿದರು. ವಿವಾಹವು ಭೂಗತವಾಗಿಯೇ ಜರಗುತ್ತದೆ. ಲಗ್ನಕ್ಕೆ ವಧುವರರ ತಂದೆ, ತಾಯಿ, ಬಂಧುಗಳು ಯಾರೂ ಬರುವುದಿಲ್ಲ. ಮುಂಬೈಯಲ್ಲಿ ಇದ್ದ ಕರ್ನಾಟಕದ ಭೂಗತ ಕಾರ್ಯಕರ್ತರು ಮಾತ್ರ ಬರುತ್ತಾರೆ. ಶ್ರೀ ವಡವಿಯವರೇ ಕನ್ಯೆಯ ತಂದೆಯಾಗಿ, ತಾಯಿಯಾಗಿ ನಿಂತು ವಿವಾಹ ಮಾಡಿಸುತ್ತಾರೆ. ಇಂತಹ ಸಂಗತಿಯನ್ನು ಗಮನಿಸಿದರೆ ಆ ಕಾಲದಲ್ಲಿ ಬ್ರಿಟಿಷರು ಮಾಡಿದ ದಬ್ಬಾಳಿಕೆ ಮತ್ತು ಅವರ ಶೋಷಣೆ ಎಂತಹ ಭೀಕರ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ.

ಚಳುವಳಿಕಾರರು ವೈಯಕ್ತಿಕ ಸುಖವನ್ನು ಬದಿಗಿಟ್ಟು ದೇಶಕ್ಕಾಗಿ ಸರ್ವಸ್ವವನ್ನು ತ್ಯಾಗಮಾಡಿದ ಘಟನೆಗಳು ಇಂದಿನವರಿಗೆ ಆದರ್ಶವಾಗಬೇಕು. ಅವುಗಳನ್ನು ಅಧ್ಯಯನ ಮಾಡಬೇಕು.

**ಸುಳೆಬಾವಿ ರೈಲು ನಿಲ್ದಾಣ ಸುಡುವ ವಿಫಲ ಪ್ರಯತ್ನ :**

ಇವರ ಚಳುವಳಿಗೆ ಯಾವಾಗಲೂ ಪೊಲೀಸರದ್ದೇ ಹೆದರಿಕೆ. ಆದ್ದರಿಂದ ಮುಂಜಾಗ್ರತೆಗಾಗಿ ಸ್ಟೇಷನ್ನಿನಲ್ಲಿ ಪೊಲೀಸರು ಇದ್ದಾರೊ ಇಲ್ಲವೋ ಎಂಬುದನ್ನು ತಿಳಿದುಕೊಂಡು ಬರಲು ಒಬ್ಬ ಕಾರ್ಯಕರ್ತನನ್ನು ಸ್ಟೇಷನ್ ಕಡೆ ಕಳಿಸುತ್ತಾರೆ. ಆದರೆ ನೋಡಿಬರಲು ಹೋದ ಮನುಷ್ಯ ತಿರುಗಿ ಬೇಗನೆ ಬಾರದ್ದರಿಂದ ಅಲ್ಲದೆ ಇನ್ನೊಂದು ಗಾಡಿ ಬರುವ ವೇಳೆ ಸಮೀಪಿಸಿದ್ದರಿಂದ ವಡವಿಯವರು ಮತ್ತು ಸ್ನೇಹಿತರು ಅತ್ತ ಹೋಗುತ್ತಾರೆ. ಇವರಲ್ಲಿ ಗರುಡ ಶರ್ಮ ಅತ್ಯಂತ ಗಟ್ಟಿಮುಟ್ಟಾದ ಆಳು. ಅವರ ಹಿಂದಿನಿಂದ ಇತರರು ಬೆನ್ನು ಹತ್ತಿ ಸಾಗುತ್ತಾರೆ. ಮೂರನೇ ವರ್ಗದ ಪ್ರತೀಕ್ಷಾಲಯದಲ್ಲಿ ಅನೇಕ ಪ್ರವಾಸಿಗರು ಮಲಗಿದ್ದರು. ಸ್ಟೇಷನ್‌ನಲ್ಲಿ ದೀಪವಿರಲಿಲ್ಲ. ಎಲ್ಲಿ ನೋಡಿದಲ್ಲಿ ನಿಶ್ಯಬ್ದ ವಾತಾವರಣವಿತ್ತು. ಇವರೆಲ್ಲರೂ ಸ್ಟೇಷನ್ನಿನ ಎರಡನೇ ಬದಿಯಿಂದ ಹಳಿ ದಾಟಿ ಪ್ಲಾಟ್ ಫಾರಂ ಮೇಲೆ ಬರುತ್ತಿದ್ದರು. ಅಷ್ಟರಲ್ಲಿ ಗರುಡ ಶರ್ಮರ ಕಾಲು ತಂತಿಗೆ ಸಿಕ್ಕು ಅವರು ಅಯ್ಯೋ ಎಂದು ಜೋರಾಗಿ ಚೀರುತ್ತಾರೆ. ಅವರ ಚೀತ್ಕಾರಕ್ಕೆ ಪ್ರತೀಕ್ಷಾಲಯದಲ್ಲಿ ಮಲಗಿದ ಎಲ್ಲ ಪ್ರವಾಸಿಗರು ಎಚ್ಚರಾಗಿ ಕಳ್ಳರೇ ಬಂದಿರಬೇಕೆಂದು ಜೋರಾಗಿ ಕೂಗುತ್ತಾರೆ. ಇದರಿಂದ ಸ್ಟೇಷನ್ ಮಾಸ್ಟರ್, ಪೋರ್ಟರ್ ಮುಂತಾದವರೂ ಎದ್ದು ಗದ್ದಲ ಮಾಡುತ್ತಾರೆ. ಅಷ್ಟರಲ್ಲಿ ಪೈಲೆಟ್ ಗಾಡಿ ಬರುತ್ತದೆ. ಇದರಿಂದ ಸುಳೇಭಾವಿ ರೈಲ್ವೆ ಸ್ಟೇಷನ್ ಸುಡುವ ಕಾರ್ಯ ಕೈ ತಪ್ಪುತ್ತದೆ. ಆದರೂ ಇಂದಿಲ್ಲ ನಾಳೆಯಾದರೂ ಈ ಕಾರ್ಯವನ್ನು ಮಾಡಲೇಬೇಕೆಂದು ಹಟ ತೊಟ್ಟು ತಿರುಗಿ ಬರುತ್ತಾರೆ.

**ರಂಗಧೋಳಿ ಪ್ರಕರಣ :**

ಕುಂದರನಾಡಿನಲ್ಲಿ ಜರುಗಿದ ಇನ್ನೊಂದು ಅವಿಸ್ಮರಣೀಯ ಘಟನೆ ರಂಗಧೋಳಿ ಪ್ರಕರಣ. ಕೇಂದ್ರದ ಆದೇಶದಂತೆ ಒಂದು ದಿನ ಎಲ್ಲ ಕಡೆಗೂ ಸ್ಟೇಷನ್ ಸುಡುವ ಕಾರ್ಯಕ್ರಮವಿತ್ತು. ಅಕ್ಕತಂಗೇರಹಾಳದವರು ಸುಲಧಾಳ ಸ್ಟೇಷನ್ ಸುಡಬೇಕೆಂದು ನಿರ್ಧರಿಸಿದ್ದರು. ಆಗ ವಡವಿಯವರು ಹಾಗು ಅವರ ತಂಡದವರು ಹುದಲಿಯಿಂದ ಮೂರು ಕಿಲೋಮೀಟರ ದೂರವಿರುವ ರಂಗಧೋಳಿ ಎಂಬ ಚಿಕ್ಕ ಗ್ರಾಮದಲ್ಲಿ ಭೂಗತರಾಗಿದ್ದರು. ಈ ಗ್ರಾಮದ ಸುತ್ತಮುತ್ತಲೂ ಗುಡ್ಡ ಅವುಗಳ ಮಧ್ಯದಲ್ಲಿಯೇ ಮಾರ್ಕಂಡೇಯ ನದಿ. ಆ ನದಿ ದಂಡೆಯ ಮೇಲೆ ಕರ್ನಾಟಕದ ಸಿಂಹವೆನಿಸಿದ ಗಂಗಾಧರರಾವ್ ದೇಶಪಾಂಡೆ ಅವರ ಕಬ್ಬಿನ ತೋಟವಿತ್ತು. ಆ ತೋಟದ ಮಧ್ಯದಲ್ಲಿ ಒಂದು ದೊಡ್ಡ ಮಾವಿನ ಮರ. ಸಿದ್ಧಲಿಂಗಪ್ಪಾ ತರಬರಿ ಹಾಗೂ ಅವರ ಮಗಳು ಬಸಲಿಂಗವ್ವಾ ತರಬರಿ ತೋಟವನ್ನು ಮಾಡುತ್ತಿದ್ದರು. ಇವರು ಚಳುವಳಿಕಾರರಿಗೆ ಅಡಿಗೆ ಮಾಡಿ ಹಾಕುತ್ತಿದ್ದರಲ್ಲದೆ ಪಾತ್ರೆ ಮುಂತಾದ ವಸ್ತುಗಳನ್ನು ಕೊಟ್ಟು ನೆರವಾಗುತ್ತಿದ್ದರು. ಅಂದು ಸಾಯಂಕಾಲ ಊಟ ಮುಗಿಸಿ ರಾತ್ರಿ ಸುಳೇಭಾವಿ ಸ್ಟೇಶನ್ ಸುಡಬೇಕೆಂದು ನಿರ್ಣಯಿಸಿ ಅತ್ತ ಸಾಗುತ್ತಾರೆ. ಅಷ್ಟರಲ್ಲಿ ನದಿ

ದಂಡೆಯಲ್ಲಿ ಕೆಲಸ ಮಾಡುತ್ತಿದ್ದ ರಾಮು ಎಂಬ ಹನ್ನೆರಡು ವರ್ಷದ ಬಾಲಕನು ನದಿ ಆಚೆ ದಂಡೆಗೆ ನೂರಾರು ಜನ ಸಶಸ್ತ್ರ ಪೊಲೀಸರು ಸಾಲುಗಟ್ಟಿ ಬರುತ್ತಿದ್ದಾರೆ, ಏಳಿರೇಳಿರಿ ಎಂದು ರಾಮಚಂದ್ರ ವಡವಿಯವರಿಗೆ ಹೇಳುತ್ತಾನೆ. ಚಳುವಳಿಕಾರರೆಲ್ಲರೂ ಆ ಕಬ್ಬಿನ ತೋಟದಲ್ಲಿ ಮನಸ್ಸಿಗೆ ಬಂದತ್ತ ಓಡುತ್ತಾರೆ. ಗುಂಪು ಚದರುತ್ತದೆ. ವಡವಿಯವರು ಶ್ರೀ ಪಾಟೀಲ ಅವರು ಮತ್ತೆ ಇಬ್ಬರು ಕಬ್ಬಿನ ಹೊಲದ ಬದಿಯ ಜೋಳದ ಹೊಲದಲ್ಲಿ ಓಡಿ ಹೋಗುತ್ತಾರೆ. ಪೊಲೀಸರು ಕಬ್ಬಿನ ತೋಟದಲ್ಲಿ ಹೊಕ್ಕು ಸುತ್ತೆಲ್ಲಾ ತಪಾಸಣೆ ಮಾಡುತ್ತಾರೆ. ಕಬ್ಬು ಕಡಿಯುವ ಜನರ ಶಬ್ದ ಕೇಳಿದ ಕೂಡಲೆ ಪೊಲೀಸರು ಚಳುವಳಿಕಾರರು ಇಲ್ಲಿಯೇ ಇರಬೇಕೆಂದು ಒಳಹೊಕ್ಕು ಹುಡುಕುತ್ತಾರೆ. ವಡವಿ ಹಾಗೂ ಅವರ ಜೊತೆಗಾರರು ಜೋಳದ ಹೊಲದಲ್ಲಿ ಓಡುವುದನ್ನು ನಾಲ್ಕಾರು ಪೊಲೀಸರು ಕಂಡು ಅವರ ಬೆನ್ನು ಹತ್ತಿ ಗುಂಡು ಹಾರಿಸತೊಡಗುತ್ತಾರೆ. ಕೇವಲ ಒಂದು ಫರ್ಲಾಂಗ ಅಂತರದಲ್ಲಿ ಈ ಹೋರಾಟ ನಡೆಯುತ್ತದೆ. ವಡವಿಯವರು ಓಡುವಾಗ ಒಂದು ಬಳ್ಳಿ ಕಾಲಿಗೆ ಸಿಕ್ಕು ಬಿದ್ದು ಬಿಡುತ್ತಾರೆ. ಅವರ ಹತ್ತಿರವಿದ್ದ ಬಿ. ಆರ್. ಪಾಟೀಲರು ಅಲ್ಲಿಯೇ ನಿಂತು ಅವರನ್ನು ಉಪಚರಿಸಲು ತೊಡಗುತ್ತಾರೆ. ಆಗ ವಡವಿಯವರು 'ನೀವು ಬೇಗ ಹೋಗಿರಿ, ಗುಂಡು ಬಡೆದೀತು. ಎಲ್ಲರೂ ಸಾಯುವುದು ಬೇಡ' ಎಂದು ಹೇಳಿದರೂ ಪಾಟೀಲರು ಆದದ್ದು ಇಬ್ಬರಿಗೂ ಆಗಲಿ. ನಿಮ್ಮನ್ನು ಈ ಸ್ಥಿತಿಯಲ್ಲಿ ಬಿಟ್ಟು ಹೋಗುವುದಿಲ್ಲವೆಂದು ಹೇಳುತ್ತಾರೆ. ಇದು ವಡವಿಯವರ ಮೇಲೆ ಇದ್ದ ಪಾಟೀಲರ ಅಪಾರ ಪ್ರೀತಿಯ ದ್ಯೋತಕ. ಮಬ್ಬುಗತ್ತಲಾಗುತ್ತಾ ಬಂದಂತೆ ಜೋಳದ ಹೊಲದಲ್ಲಿ ಇಬ್ಬರೂ ಸಾವರಿಸಿಕೊಂಡು ಬಾಗಿ ಮುಂದೆ ಸಾಗುತ್ತಾರೆ. ಪೊಲೀಸರಿಗೂ ಕೂಡಾ ಚಳುವಳಿಕಾರರ ಜೊತೆ ಸಶಸ್ತ್ರಬೇಡರ ಪಡೆ ಇರಬೇಕೆಂದು ಭಾವಿಸಿ ಹೆದರಿ ಅವರೂ ಮುಂದೆ ಬರುವುದಿಲ್ಲ. ಈ ಮುಂಚೆ ಮುಂದೆ ಓಡಿ ಹೋದ ಜೊತೆಗಾರರಿಬ್ಬರೂ ಮತ್ತೆ ಬಂದು ಇವರನ್ನು ಕೂಡಿಕೊಳ್ಳುತ್ತಾರೆ. ಹೀಗೆ ಈ ಹೋರಾಟದ ಹಾದಿಯಲ್ಲಿ ಅನಿರೀಕ್ಷಿತವಾದ ಅನೇಕ ಘಟನೆಗಳು ಜರುಗಿವೆ.

ರಂಗಧೋಳಿಯ ತೋಟದಲ್ಲಿ ಬಿಡಾರ ಬಿಟ್ಟ ಪೊಲೀಸರ ಬಗ್ಗೆ ಭೂಗತರಲ್ಲಿ ಕೂತೂಹಲವಿತ್ತು. ತೋಟದಲ್ಲಿ ಕಬ್ಬು ಕಡಿಯುವವರ ಸಪ್ಪಳವು ಇದು ಭೂಗತರ ಚಟುವಟಿಕೆಯಾಗಿರಬೇಕೆಂದು ಪೊಲೀಸರು ಭಾವಿಸುತ್ತಾರೆ. ಇದಲ್ಲದೆ ಇಪ್ಪತ್ತು ಇಪ್ಪತ್ತೈದು ಜನ ತೋಟದಲ್ಲಿ ಊಟ ಮಾಡಿದ ಎಲೆಗಳನ್ನು ಎಣಿಸಿ ಚಳುವಳಿಕಾರರು ಇಲ್ಲೇ ಇರಬೇಕೆಂದು ಇಡೀ ರಾತ್ರಿಯಲ್ಲಾ ತಿರುಗಾಡುತ್ತಾರೆ. ತೋಟದಲ್ಲಿಯ ನರಿಗಳು ಕಬ್ಬನ್ನು ತಿಂದಾಗ ಆಗುವ ಸಪ್ಪಳದಿಂದ ಪೊಲೀಸರು ದೇಖೋರೆ ದೇಖೋ ಎಂದು ಟಾರ್ಚ ಬಿಟ್ಟು ಗುಂಡು ಹಾರಿಸುತ್ತಿದ್ದರು. ಆ ಸಪ್ಪಳದಿಂದ ನರಿಗಳು ಕೆಲಹೊತ್ತು ಸುಮ್ಮನಾಗಿ ಮತ್ತೆ ಸಪ್ಪಳ ಮಾಡಿದಾಗ ಪೊಲೀಸರು ಪುನಃಗುಂಡು ಹಾರಿಸುತ್ತಿದ್ದರು. ಬೆಳಿಗ್ಗೆ ನಾಲ್ಕಾರು ನರಿಗಳು ಆ ತೋಟದಿಂದ ಗುಡ್ಡದ ಕಡೆಗೆ ಓಡುತ್ತವೆ. ಈ ಪೊಲೀಸರಿಗೆ ಮನವರಿಕೆಯಾದದ್ದು ರಾತ್ರಿ ಸಪ್ಪಳವಾದದ್ದು ಚಳುವಳಿಕಾರರದಲ್ಲ. ಅದು ನರಿಗಳದು. ಅವರ ಕೆಲಸ ಗುಡ್ಡ ಅಗೆದು ಇಲಿ ತೆಗೆದಂತೆ ಆಗುತ್ತದೆ.

ಪೊಲೀಸರು ತೋಟದ ರೈತನಾದ ಸಿದ್ದಲಿಂಗಪ್ಪನನ್ನು ಬಹಳ ಹೊಡೆದು ಚಳುವಳಿಗಾರರು ಎಲ್ಲಿದ್ದಾರೆ? ನೀನು ಅವರಿಗೆ ಸಹಾಯ ಮಾಡುತ್ತೀ ಎಂದು ಗದರಿಸುತ್ತಾರೆ. ಸಿದ್ದಲಿಂಗಪ್ಪನು ತಾನು ಧನಿಯರ ತೋಟ ಮಾಡುವುದು ಮತ್ತು ಅವರಿಗೆ ಅಡಿಗೆಯ ಮಾಡಿ ಬಡಿಸುವುದು ಇನ್ನಿತರ ಕೆಲಸವನ್ನು ಮಾಡುತ್ತೇನೆಂದು ಹೇಳುತ್ತಾನೆ. ಇದು ರಂಗಧೋಳಿ ತೋಟದಲ್ಲಿದ್ದು ಮಾಡಿದ ಚಳುವಳಿಯ ಸ್ವರೂಪ.

ಪೊಲೀಸರು ಬಂಧಿಸಿದ ಈ ನಾಲ್ವರು ತರುಣರನ್ನು ಬಿಡಿಸಿಕೊಂಡು ಬರಬೇಕೆಂದು ಹುದಲಿಯ ತರುಣರು ವಿಚಾರ ಮಾಡುತ್ತಾರೆ. ಅದಕ್ಕಾಗಿ ಒಂದು ಯೋಜನೆಯನ್ನು ತಯಾರಿಸುತ್ತಾರೆ. ಆದರೆ ಊರಲ್ಲಿಯ ಹಿರಿಯರು ಈ ಪ್ರಯತ್ನವನ್ನು ಕೈ ಬಿಡಬೇಕೆಂದು ತಿಳಿಸಿ ಹೇಳುತ್ತಾರೆ. ಒಂದು ವೇಳೆ ತರುಣರು ಪೊಲೀಸರೊಂದಿಗೆ ಸೆಣಸಾಟಕ್ಕೆ ನಿಂತರೆ ಊರಲ್ಲಿ ದೊಡ್ಡ ಅನಾಹುತವಾಗುವುದೆಂದೂ ಹೆಣಗಳು ಬೀಳುವ ಸಂಭವವಿದೆಯೆಂದು ಹೇಳುತ್ತಾರೆ. ಬಂಧಿತರನ್ನು ಗುಜನಾಳ ಪೊಲೀಸ ಠಾಣೆಗೆ ಒಯ್ಯುತ್ತಾರೆ. ಗುಜನಾಳ ಸುಲಧಾಳ ಸ್ಟೇಷನ್ನಿನಿಂದ ನಾಲ್ಕು ಫರ್ಲಾಂಗ ದೂರವಿದೆ. ಪೋಲೀಸರು ಕಾಲು ದಾರಿಯಿಂದ ಚಳುವಳಿಕಾರರನ್ನು ಕರೆದುಕೊಂಡು ಹೋಗುತ್ತಾರೆ. ಪೋಲೀಸರಿಗೂ ವಿಶ್ರಾಂತಿ ಇರಲಿಲ್ಲ. ಸರಿಯಾದ ಹೊತ್ತುಹೊತ್ತಿಗೆ ಊಟವೂ ಸಿಗುತ್ತಿರಲಿಲ್ಲ. ತಮ್ಮ ಸಮವಸ್ತ್ರಗಳನ್ನು ಬದಲಿಸಿಕೊಳ್ಳುವ ಪುರುಸೊತ್ತೂ ಇರಲಿಲ್ಲ. ಇಂತಹ ಸ್ಥಿತಿಯಲ್ಲಿ ಸುಲಧಾಳ ಸ್ಟೇಷನ್ ಅಗ್ನಿಗೆ ಆಹುತಿಯಾಗಿತ್ತು. ಅಕ್ಕತಂಗಿಯರಹಾಳದ ಚಳುವಳಿಯ ತಂಡವು ಸುಲಧಾಳ ಸ್ಟೇಷನನ್ನು ಸುಟ್ಟುಬಿಟ್ಟಿತ್ತು. ಈ ಚಳುವಳಿಕಾರರು ಸುಲಧಾಳ ಸ್ಟೇಷನನ್ನು ಸುಟ್ಟು ಪರಿಣಾಮ ಏನಾಗುತ್ತದೆ ಎಂಬುದನ್ನು ತಿಳಿದುಕೊಳ್ಳುವುದಕ್ಕಾಗಿ ಪಕ್ಕದ ಜೋಳದ ಹೊಲದಲ್ಲಿ ಅವಿತುಕೊಂಡು ಕುಳಿತುಕೊಂಡಿದ್ದರು. ರಂಗಧೋಳಿಯಿಂದ ಹುದಲಿಗೆ ಭೂಗತರನ್ನು ತರುವಾಗ ಪೊಲೀಸರು ಶ್ರೀ ಗಂಗಾಧರರಾವ್ ದೇಶಪಾಂಡೆಯವರನ್ನು ಹಿಡಿದುಕೊಂಡು ಬಂದಿದ್ದರು. ಗಂಗಾಧರರಾವ್ ದೇಶಪಾಂಡೆ ಅವರ ಅಣ್ಣ ಬಂಡೋಪಂತ ದೇಶಪಾಂಡೆಯವರಿಗೆ ಸುದ್ದಿ ತಿಳಿದ ತಕ್ಷಣ ಅವರು ತಮ್ಮ ಸಹೋದರನಿಗೆ ಊಟ ತೆಗೆದುಕೊಂಡು ಸುಲಧಾಳ ಸ್ಟೇಶನ್ ರಸ್ತೆಯಿಂದ ಗುಜನಾಳಕ್ಕೆ ಹೋಗುತ್ತಾರೆ. ಮಾರ್ಗದಲ್ಲಿ ಸುಲಧಾಳ ಸ್ಟೇಶನ್ ಹೊತ್ತಿ ಉರಿಯುವದನ್ನು ಕಂಡು ಬಂಡೋಪಂತರು ಪೊಲೀಸರಿಗೆ ಈ ವಿಷಯವನ್ನು ತಿಳಿಸುತ್ತಾರೆ. ಆಗ ಪೊಲೀಸರು ಇನ್ನಷ್ಟು ಬಿಗಿ ಬಂದೋಬಸ್ತ ಮಾಡಿ ಹತ್ತು ಜನ ಸಶಸ್ತ್ರ ಪೊಲೀಸರನ್ನು ಅಲ್ಲಿ ಕಳಿಸುತ್ತಾರೆ. ಇಲ್ಲಿ ಯಾರಾದರು ಬಂದು ಭೂಗತ ಕಾರ್ಯಕರ್ತರಿಗೆ ಭೇಟಿಯಾಗುವ ಪ್ರಯತ್ನ ಮಾಡಿದರೆ ಅವರಿಗೆ ಗುಂಡು ಹಾಕಬೇಕು, ಯಾರನ್ನೂ ವಾಡೆಯೊಳಗೆ ಬಿಡಬಾರದು ಎಂದು ಕಟ್ಟಪ್ಪಣೆ ವಿಧಿಸುತ್ತಾರೆ.

ಮುಂದೆ ಒಂದೆರಡು ದಿನಗಳ ತರುವಾಯ ರಂಗಧೋಳಿಯಲ್ಲಿ ಬಂಧಿಸಿದ ಭೂಗತ ಕಾರ್ಯಕರ್ತರನ್ನು ಬೆಳಗಾವಿ ಲಾಕಪ್ಪಿನಲ್ಲಿ ಒಯ್ದು ಇಡುತ್ತಾರೆ. ಅವರಿಗೆ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಆಹಾರ ಒದಗಿಸುತ್ತಾರಲ್ಲದೆ ಹಿಂಸೆಯನ್ನು ಕೊಡುತ್ತಾರೆ. ಆದರೆ ಈ ಆರೋಪಿಗಳ

ಬಗಗೆ ಅಪರಾಧ ಕುರಿತು ಯಾವುದೇ ಪುರಾವೆ ಇಲ್ಲದ ಕಾರಣ ನ್ಯಾಯಾಧೀಶರು ಅವರನ್ನು ನಿರ್ದೋಷಿಗಳೆಂದು ಬಿಡುಗಡೆ ಮಾಡುತ್ತಾರೆ. ಆದರೂ ಪೋಲೀಸರು ಅವರ ಮೇಲೆ ಸುಳೆಭಾವಿ ಟಪಾಲ ಲೂಟಿಯ ಕಟ್ಲೆ ಹಾಕಿ ಕೋರ್ಟಿನ ಹೊರಗೆ ಬಂಧಿಸುತ್ತಾರೆ. ಆಗ ಸುಳೇಭಾವಿಯು ಸಾಂಗಲಿ ಸಂಸ್ಥಾನದಲ್ಲಿತ್ತು. ಆದುದರಿಂದ ಕಟ್ಲೆಯು ಶಹಾಪೂರದಲ್ಲಿ ಮೂರು ತಿಂಗಳು ನಡೆಯಿತು. ಭೂಗತರನ್ನು ಶಹಾಪುರ ಲಾಕಪ್ಪಿನಲ್ಲಿಟ್ಟು ಅವರಿಗೆ ಜೀವ ಹಿಡಿಯುವಷ್ಟೇ ಅನ್ನ ಕೊಡುತ್ತಿದ್ದರು. ಸ್ನಾನಕ್ಕೆ ನೀರು ಕೊಡುತ್ತಿರಲಿಲ್ಲ. ಬಟ್ಟೆ ಬದಲಾಯಿಸಲು ಅನುಮತಿ ಕೊಡುತ್ತಿರಲಿಲ್ಲ. ಹೀಗೆ ಸಾಕಷ್ಟು ತೊಂದರೆಯನ್ನು ಕೊಟ್ಟು ಚಳುವಳಿಯನ್ನು ಹತ್ತಿಕ್ಕಬೇಕೆಂದು ಪೋಲೀಸರು ಪ್ರಯತ್ನ ಮಾಡುತ್ತಾರೆ. ಈ ಕಟ್ಲೆ ಮುಂದೆ ಶಹಾಪೂರದಿಂದ ಸಾಂಗಲಿಗೆ ಮತ್ತು ಅಲ್ಲಿಂದ ಹೈಕೋರ್ಟಿಗೆ ಹೋಗುತ್ತದೆ. ಅಲ್ಲಿಯೂ ಕೂಡಾ ಭೂಗತರು ನಿರ್ದೋಷಿಗಳೆಂದು ಘೋಷಿಸಲಾಗುತ್ತದೆ.

ಭೂಗತರು ಅಳುಕಿನಿಂದಲೇ ಕಾಲ ಕಳೆಯಬೇಕಿತ್ತು. ಇವರಿಗೆ ಆಶ್ರಯ ಕೊಡಲು ಯಾರೂ ಮುಂದಾಗುತ್ತಿರಲಿಲ್ಲ. ಬೇರೆ ಬೇರೆ ಊರಲ್ಲಿ ಗುಪ್ತವಾಗಿದ್ದುಕೊಂಡೇ ಕಾರ್ಯವನ್ನು ಮಾಡಬೇಕಾಗುತ್ತಿತ್ತು. ಇಂತಹ ಸಂದರ್ಭದಲ್ಲಿ ರಾಮಚಂದ್ರ ವಡವಿಯವರು ಎದುರಿಸಿದ ಒಂದೆರಡು ಘಟನೆಗಳನ್ನು ಇಲ್ಲಿ ಪ್ರಸ್ತಾಪ ಮಾಡಲಾಗಿದೆ. ವಡವಿಯವರು ಬಿ. ಆರ್. ಪಾಟೀಲರ ಜೊತೆ ಕೂಡಿ ಬೆಳಗಾವಿಗೆ ಹೋಗಬೇಕೆಂದು ನಿರ್ಣಯಿಸಿದರು. ತಮ್ಮ ಜೊತೆಗಿದ್ದ ಇತರ ಕಾರ್ಯಕರ್ತರಿಗೆ ಖರ್ಚಿಗೊಂದಿಷ್ಟು ಹಣ ಕೊಟ್ಟು ಅವರಿಗೂ ಬೇರೆ ಎಲ್ಲಿಗಾದರೂ ಹತ್ತು-ಹದಿನೈದು ದಿವಸ ಹೋಗಲು ತಿಳಿಸುತ್ತಾರೆ. ಬೆಳಗಾವಿಯಲ್ಲಿ ಕೆಳಕರ್ ಬಾಗ್ ಹತ್ತಿರ ಇರುವ ಶ್ರೀ ನಾರಾಯಣರಾಯರ ಮನೆಯಲ್ಲಿ ಅವರು ಉಳಿದುಕೊಳ್ಳುವುದಾಗಿ ಪಾಟೀಲರಿಗೆ ಹೇಳಿ ನಾರಾಯಣರಾಯರ ಮನೆಗೆ ಬರುತ್ತಾರೆ. ನಾರಾಯಣರಾಯರ ತಮ್ಮಂದಿರಾದ ಕೃಷ್ಣರಾವ್ ಜೋಶಿಯವರು ಇವರನ್ನು ನೋಡಿ ಗಾಬರಿಯಾಗುತ್ತಾರೆ. ಇಲ್ಲಿಗೆ ತಾವು ಹೇಗೆ ಬಂದಿರಿ? ಏನು ಸಮಾಚಾರ? ಎಂದು ಕೇಳಿದುದಕ್ಕೆ ವಡವಿಯವರು ಸವಿಸ್ತಾರವಾಗಿ ನಡೆದ ವಿಷಯವನ್ನು ತಿಳಿಸುತ್ತಾರೆ. ಅಂದು ಯಾವುದೊ ಹಬ್ಬ. ಇವರು ಸ್ನಾನ, ಊಟ ತೀರಿಸಿ ಸಾಯಂಕಾಲದವರೆಗೆ ಅಲ್ಲಿಯೇ ಇದ್ದು ರಾತ್ರಿ ಗಾಡಿಯಿಂದ ಧಾರವಾಡಕ್ಕೆ ಬರುತ್ತಾರೆ.

ಧಾರವಾಡದಲ್ಲಿ ನಾಲ್ಕೈದು ದಿವಸ ಕಳೆದ ಬಳಿಕ ಬೇಟಗೇರಿ ಕೃಷ್ಣಶರ್ಮರು ಭೇಟಿಯಾದಾಗ ತಮ್ಮ ಮನೆಗೆ ವಡವಿಯವರನ್ನು ಊಟಕ್ಕೆ ಆಮಂತ್ರಿಸುತ್ತಾರೆ. ಕೃಷ್ಣಶರ್ಮರಿಗೂ ವಡವಿಯವರಿಗೂ ಮೊದಲಿನಿಂದಲೂ ಸ್ನೇಹವಿತ್ತು. ಸಾಮಾನ್ಯವಾಗಿ ಧಾರವಾಡಕ್ಕೆ ಹೋದಾಗೊಮ್ಮೆ ಅವರ ಮನೆಯಲ್ಲಿ ತಿಂಡಿ ತಿನಿಸು ಆಗುತ್ತಿತ್ತು. ಈಗ ವಡವಿಯವರು ಊಟಕ್ಕೆ ಬಂದದ್ದು ವಿಶೇಷವಿತ್ತು. ಅದು ಶೀಗೀಹುಣ್ಣಿಮೆ ಹಬ್ಬ. ಮನೆಯಲ್ಲಿ ಕರಿಗಡಬಿನ ಊಟ ಮಾಡಿಸಿದ್ದರು. ಮಧ್ಯಾಹ್ನ ಹನ್ನೆರಡು ಗಂಟೆಗೆ ಊಟಕ್ಕೆ ಕೂಡುತ್ತಾರೆ. ಕೃಷ್ಣಶರ್ಮರ ಪತ್ನಿ ಇವರನ್ನು ಸಹೋದರರಂತೆ ಕಾಣುತ್ತಿದ್ದರು. ಅವರು ಅಕ್ಕರೆಯಿಂದ ಬಡಿಸುತ್ತಿದ್ದರು. ವಡವಿಯವರು ನಿಧಾನವಾಗಿ ಊಟ ಮಾಡುತ್ತಿದ್ದರು.

ಆದರೆ ಕೃಷ್ಣಶರ್ಮರಿಗೆ ಮಾತ್ರ ಎದೆಗುದಿ. ರಸ್ತೆಯಲ್ಲಿ ಸ್ವಲ್ಪ ಏನಾದರು ಸಪ್ಪಳವಾದರೆ ತಮ್ಮ ಮಕ್ಕಳನ್ನು ಹೊರಗೆ ನೋಡಿ ಬಾಯೆಂದು ಕಳುಹಿಸುತ್ತಿದ್ದರು. ಇವರ ಎಲೆಯೊಳಗಿನ ಕಡಬು ಮುಗಿಯುವುದರ ಒಳಗೆ ತಮ್ಮ ಪತ್ನಿಗೆ ಅನ್ನ ಮೊಸರು ಬಡಿಸೆಂದು ಹೇಳುತ್ತಿದ್ದರು. ಪತ್ನಿಗೆ ಇವರ ಗಡಿಬಿಡಿಯ ಅರ್ಥವಾಗದು. ಬಹಳ ದಿವಸಕ್ಕೆ ಬಂದ ಇವರಿಗೆ ಹೀಗೇಕೆ ಗಡಿಬಿಡಿ ಮಾಡುತ್ತೀರಿ ಸಾವಕಾಶ ಊಟ ಮಾಡಲಿ ಬಿಡಿರಿ ಎನ್ನುತ್ತಿದ್ದರು. ಕೃಷ್ಣಶರ್ಮರಿಗೆ ಮನಸ್ಸಿನಲ್ಲಿ ಇವರನ್ನು ಏತಕ್ಕೆ ಊಟಕ್ಕೆ ಕರೆದೆನೆಂದು ಅನಿಸಿರಬಹುದು. ಏಕೆಂದರೆ ವಡವಿಯವರನ್ನು ಹಿಡಿದುಕೊಟ್ಟವರಿಗೆ ಬ್ರಿಟಿಷ ಸರಕಾರವು ಐದು ಸಾವಿರ ರೂಪಾಯಿ ಕೊಡುವುದಾಗಿ ಘೋಷಣೆ ಮಾಡಿತ್ತು. ಆಕಸ್ಮಾತ ಯಾರಾದರೂ ವಡವಿಯವರನ್ನು ಕಂಡರೆ, ಅವರು ಬ್ರಿಟಿಷರಿಗೆ ತಿಳಿಸಿದರೆ ಕೃಷ್ಣಶರ್ಮರು ತಾವೇ ಹಿಡಿಸಿಕೊಟ್ಟಂತೆ ಆಗುವುದಲ್ಲವೇ? ಎಂಬ ಅಳುಕಿನಿಂದ ಹಾಗೆ ಮಾಡುತ್ತಿದ್ದರು. ಒಟ್ಟಿನಲ್ಲಿ ಭೂಗತ ಕಾರ್ಯಕರ್ತರನ್ನು ರಕ್ಷಿಸುವವರಿಗೆ ಬ್ರಿಟಿಷರಿಂದ ಶಿಕ್ಷೆ ಇತ್ತು.

ಇಂತಹದೇ ಇನ್ನೊಂದು ಪ್ರಸಂಗವನ್ನು ವಡವಿಯವರು ಹೇಳುತ್ತಾರೆ. ಅವರು ಕುಮರಿ ಆಶ್ರಮದಲ್ಲಿದ್ದಾಗ ದಸರೆ ಹಬ್ಬವಿತ್ತು. ಈ ಹಬ್ಬದಲ್ಲಿ ಊರ ಹಿರಿಯರಿಗೆಲ್ಲಾ ಬನ್ನಿ ಕೊಟ್ಟು ಅವರಿಂದ ಆಶೀರ್ವಾದ ಪಡೆದುಕೊಳ್ಳುವ ಪರಿಪಾಠ ಅನೇಕ ವರ್ಷಗಳಿಂದ ನಡೆದು ಬಂದಿತ್ತು. ವಡವಿಯವರು ಹುದಲಿಯ ಹಿರಿಯರಾದ ದಾದಾಸಾಹೇಬ ದೇಶಪಾಂಡೆಯವರ ಮನೆಗೆ ಬಂದು ಬನ್ನಿಯನ್ನು ಕೊಟ್ಟು ಆಶೀರ್ವಾದ ಪಡೆದರು. ಅದು ದಸರೆ ಹಬ್ಬವಾದ ಕಾರಣ ಮನೆಯಲ್ಲಿ ಸಿಹಿ ಅಡುಗೆ ಮಾಡಿ ಊಟಕ್ಕೆ ಇವರನ್ನು ಕರೆಯುತ್ತಾರೆ. ಆತ್ಮೀಯತೆ ಮತ್ತು ಹಲವು ವರ್ಷಗಳ ಮಧುರ ಬಾಂಧವ್ಯದಿಂದಾಗಿ ವಡವಿಯವರು ಊಟಕ್ಕೆ ಸಮ್ಮತಿಸುತ್ತಾರೆ. ದಾದಾಸಾಹೇಬರ ತಾಯಿ ಅಕ್ಕರತೆಯಿಂದ ಊಟಕ್ಕೆ ಬಡಿಸುತ್ತಿದ್ದರು. ಇವರು ನಿಧಾನವಾಗಿ ಊಟ ಮಾಡುತ್ತಿದ್ದರು. ಊರಲ್ಲಿ ಪೊಲೀಸರ ಗದ್ದಲ ನಡೆದ ಸಂಗತಿಯು ದಾದಾಸಾಹೇಬರಿಗೆ ಗೊತ್ತಿತ್ತು. ಅದಕ್ಕಾಗಿ ವಡವಿಯವರು ಬೇಗನೆ ಜಾಗಾ ಖಾಲಿ ಮಾಡುವುದು ಒಳಿತೆಂದು ಭಾವಿಸಿ ಬೇಗ ಬೇಗನೆ ಊಟ ಮಾಡಲು ತಿಳಿಸುತ್ತಾರೆ. ಇದು ದಾದಾಸಾಹೇಬರ ತಾಯಿಗೆ ಬೇಸರವನ್ನುಂಟು ಮಾಡುತ್ತದೆ. ಭೂಗತರಾಗಿ ಚಳುವಳಿಯಲ್ಲಿ ತೊಡಗಿದ ವಡವಿಯವರಂತಹ ಅನೇಕ ಕಾರ್ಯಕರ್ತರಿಗೆ ರುಚಿಕರವಾದ ಭೋಜನವನ್ನು ಮಾಡುವ ಅವಕಾಶಗಳು ಸಿಕ್ಕಿದ್ದರೂ ಅದನ್ನು ಅನುಭವಿಸುವ ಸ್ಥಿತಿ ಇರಲಿಲ್ಲ. ಹೀಗಾಗಿ ಭೂಗತರನ್ನು ಜನ ಸಂಶಯದ ದೃಷ್ಟಿಯಿಂದಲೇ ಕಾಣುತ್ತಿದ್ದರು. ಅವರಿಗೆ ಆಶ್ರಯ ಕೊಟ್ಟರೆ ತಮ್ಮನ್ನು ಹಿಡಿದರೆ ಹೇಗೆ ಎಂಬ ಹೆದರಿಕೆ ಅವರನ್ನು ಕಾಡುತ್ತಿತ್ತು.

ಆಂದೋಲನದಲ್ಲಿ ತೊಡಗಿದ ಕಾರ್ಯಕರ್ತರು ಕಷ್ಟಗಳನ್ನು ಎದುರಿಸಿದ್ದರೇನೋ ಸರಿ, ಆದರೆ ಅವರ ಕುಟುಂಬದವರು ಇವರ ಕಷ್ಟದಲ್ಲಿ ಭಾಗಿಯಾಗಿ ಹೇಗೊ ಬದುಕು ಸಾಗಿಸುತ್ತಿರುವುದು ಅಸಹನೀಯವೆನಿಸುತ್ತದೆ. ವಡವಿಯವರ ಆರ್ಥಿಕ ಪರಿಸ್ಥಿತಿಯು ಉತ್ತಮವಾಗಿರಲಿಲ್ಲ. ಇವರ ಹೆಂಡತಿ ಮಕ್ಕಳು ಅನೇಕ ಕಷ್ಟನಷ್ಟಗಳನ್ನು ಅನುಭವಿಸಬೇಕಾಗಿತ್ತು. ೧೯೪೨ ರ ಆಂದೋಲನ

ಪ್ರಾರಂಭವಾಗುವ ಕಾಲಕ್ಕೆ ಔಷಧೋಪಚಾರಕ್ಕಾಗಿ ಅವರ ಪತ್ನಿ, ತಾಯಿ, ಮಗಳಾದ ಚಿರಂಜೀವಿ ಪ್ರೇಮಾ ಅವರನ್ನು ಹುಬ್ಬಳ್ಳಿಯ ಆಸ್ಪತ್ರೆಯಲ್ಲಿ ಸೇರಿಸಲಾಗಿತ್ತು. ಮಗ ಅಚ್ಯುತ ಬೆಳಗಾವಿಯ ಮಾಡಲ್ ಹೈಸ್ಕೂಲನಲ್ಲಿ ಓದುತ್ತಿದ್ದ. ಅವನಿಗೆ ಊಟಕ್ಕಾಗಿ ವಾರದ ಮನೆಗಳನ್ನು ಹಚ್ಚಿ ಇವರು ಭೂಗತರಾದ ಮೇಲೆ ವಡವಿಯವರನ್ನು ಹಿಡಿಯಲು ಪೊಲೀಸರು ಅವರ ಮನೆಯವರಿಗೆ ಬಹಳ ತೊಂದರೆಯನ್ನು ಕೊಡುತ್ತಾರೆ. ಮಡದಿ ಹುಬ್ಬಳ್ಳಿಯಲ್ಲಿದ್ದುದು ಅವರಿಗೆ ಗೊತ್ತಿರಲಿಲ್ಲ. ಮಗ ಅಚ್ಯುತ ಬೆಳಗಾವಿಯಲ್ಲಿದ್ದಾಗ ಪೊಲೀಸರು ಆತನಿಗೆ ಸಾಕಷ್ಟು ಹಿಂಸೆ ಕೊಡುತ್ತಾರೆ ಮತ್ತು ನಿಮ್ಮ ತಂದೆ ರಾಮಚಂದ್ರ ವಡವಿ ಎಲ್ಲಿ ಎಂದು ಅವನಿಂದ ಮಾಹಿತಿ ಪಡೆಯಲು ಪ್ರಯತ್ನಿಸುತ್ತಾರೆ. ವಡವಿಯವರು ಮಗನಿಗೆ ಶಾಲೆ ಬಿಟ್ಟು ಹುಬ್ಬಳ್ಳಿಗೆ ಹೋಗಲು ತಿಳಿಸುತ್ತಾರೆ. ಒಂದು ವರ್ಷ ಶಾಲಾ ಕಾಲೇಜುಗಳನ್ನು ಬಹಿಷ್ಕರಿಸುತ್ತಾರೆ. ಇವರ ಸಂಬಂಧಿಕರು ಹುಬ್ಬಳ್ಳಿಯಲ್ಲಿದ್ದದ್ದು ಪೊಲೀಸರಿಗೆ ಹೇಗೊ ಗೊತ್ತಾಗುತ್ತದೆ. ಅವರು ಮೇಲಿಂದ ಮೇಲೆ ಬಂದು ಬೆದರಿಕೆ ಹಾಕಿ ವಡವಿಯವರ ಬಗ್ಗೆ ಮಾಹಿತಿ ತಿಳಿಸಬೇಕೆಂದು ಪೀಡಿಸುತ್ತಾರೆ. ವಡವಿಯವರ ಅಣ್ಣ ತಮ್ಮಂದಿರು ಕರ್ಜಗಿಯಲ್ಲಿ ಇದ್ದರು. ಅಲ್ಲಿ ವಡವಿಯವರ ಪತ್ನಿ ಹಾಗೂ ತಾಯಿ ಕೆಲವು ದಿವಸ ಇರುತ್ತಾರೆ. ವಡವಿಯವರ ಅಣ್ಣ ತಮ್ಮಣ್ಣಾಚಾರರಿಗೆ ಎಲ್ಲಿ ಪೊಲೀಸರು ವಡವಿಯವರ ಚೌಕಸಿಗಾಗಿ ತಮ್ಮ ಮನೆಗೆ ಬರುತ್ತಾರೆಯೋ, ಒಂದು ವೇಳೆ ಬಂದರೆ ತಮ್ಮ ಮನೆ ಮೈಲಿಗೆಯಾಗುತ್ತದೆಯಲ್ಲಾ? ಎಂಬ ಅಳುಕು ಇವರು ಕಟ್ಟಾ ಸನಾತನಿಗಳು. ಇವರನ್ನು ಪೊಲೀಸರು ಯಾವುದೊ ಕಾರಣಕ್ಕೆ ಜೈಲಿಗೆ ಕಳುಹಿಸಿದ್ದರು. ಕರ್ಜಗಿಯಿಂದ ಮತ್ತೆ ವಡವಿಯವರ ತಾಯಿ, ಪತ್ನಿ ಹುಬ್ಬಳ್ಳಿಗೆ ಬಂದರು. ಅಲ್ಲಿಯೂ ಪೊಲೀಸರ ಪೀಡೆಯನ್ನು ಎದುರಿಸಿ ಧಾರವಾಡಕ್ಕೆ ಬರುತ್ತಾರೆ. ಪೊಲೀಸರು ಹದ್ದಿನ ಕಣ್ಣಾಗಿ ಇವರನ್ನು ಹುಡುಕುತ್ತಿದ್ದರು. ಇವರ ಸಂಬಂಧಿಕರಿಗೆ ತೊಂದರೆ ಕೊಟ್ಟರೆ ವಡವಿಯವರು ತಾವಾಗಿಯೇ ಬಂದು ಸೆರೆಸಿಗುತ್ತಾರೆಂದು ಲೆಕ್ಕ ಹಾಕುತ್ತಾರೆ. ಪೊಲೀಸರ ಕಿರುಕುಳವನ್ನು ತಾಳಲಾರದೆ ವಡವಿಯವರ ಕುಟುಂಬದವರು ಮತ್ತೆ ಹುಬ್ಬಳ್ಳಿಗೆ ಹೋಗುತ್ತಾರೆ. ಒಟ್ಟಿನಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಒಂದೊಂದು ಕುಟುಂಬಗಳೇ ಭೂಗತರಾಗುವ ಪ್ರಸಂಗ ಬಂದದ್ದು ಅನಿವಾರ್ಯ.

ಚಳುವಳಿಕಾರರಿಗೆ ಕುಟುಂಬವನ್ನು ನಿಭಾಯಿಸಿಕೊಂಡು ಹೋರಾಟ ಮಾಡುವುದು ಕಷ್ಟದ ಕೆಲಸವಾಗಿತ್ತು. ಆರ್ಥಿಕ ಮುಗ್ಗಟ್ಟು, ಬ್ರಿಟಿಷರ ಶೋಷಣೆ ಇವುಗಳ ಮಧ್ಯ ಸ್ವಾತಂತ್ರ್ಯ ಪಡೆಯಬೇಕೆಂಬ ಹಂಬಲ ಬತ್ತಲಾರದ್ದು ಅಪರೂಪವೇ ಸರಿ. ವಡವಿಯವರು ಚಳುವಳಿ ಸಂದರ್ಭವನ್ನು ನೆನಪಿಸಿಕೊಳ್ಳುತ್ತಾರೆ. ಇವರಿಗೆ ಗಾಂಧಿ ಸೇವಾ ಗ್ರಾಮದಿಂದ ತಿಂಗಳಿಗೆ ನಲವತ್ತು ರೂಪಾಯಿ ಬರುತ್ತಿತ್ತು. ಆಂದೋಲನ ಪ್ರಾರಂಭವಾದ ಮೇಲೆ ಅದೂ ನಿಂತು ಹೋಗುತ್ತದೆ. ಯಾರಾದರೂ ಗೆಳೆಯರಿಂದ ಹಣ ಕೇಳಿ ಪಡೆಯುವ ಪ್ರಸಂಗ ಅವರಿಗೆ ಎದುರಾಗುತ್ತದೆ. ಧಾರವಾಡ ಹುಬ್ಬಳ್ಳಿಯಂತ ಊರಲ್ಲಿ ಬಾಡಗಿ ಮನೆ ಹಿಡಿದು ತಾಯಿ, ಹೆಂಡತಿ ಮತ್ತು ಮಗನನ್ನು ಜೋಪಾನ ಮಾಡುವುದು ಕಷ್ಟವೆನಿಸುತ್ತದೆ. ತಾಯಿ ಹಾಗೂ ಪತ್ನಿ ಹೇಗೊ ಸಂಸಾರವನ್ನು ತೂಗಿಸಿಕೊಂಡು ಹೋಗುತ್ತಾರೆ. ಎಷ್ಟೋ ದಿನ ಒಂದೇ ಹೊತ್ತು ಊಟ ಮಾಡಿ ಇರುತ್ತಾರೆ. ವಡವಿಯವರ ಮನೆಯವರು ಅತ್ಯಂತ

ಸ್ವಾಭಿಮಾನದ ಸ್ವಭಾವದವರು. ಎಷ್ಟೇ ಕಷ್ಟ ಬಂದರೂ ಬೇರೆಯವರ ಮುಂದೆ ಅದನ್ನು ತೋಡಿಕೊಳ್ಳುತ್ತಿರಲಿಲ್ಲ. ಅವರು ಉಟ್ಟುಕೊಳ್ಳುವ ಖಾದಿ ಸೀರೆ ತೀರ ಹರಿದಿದ್ದವು. ಖಾದಿ ಕೇಂದ್ರಗಳೆಲ್ಲಾ ಆಗ ಬಂದಾಗಿದ್ದವು. ಹೀಗಾಗಿ ಖಾದಿ ಸೀರೆ ಸಿಗುತ್ತಿರಲಿಲ್ಲ. ಒಂದು ವೇಳೆ ಸಿಕ್ಕರೂ ಅವುಗಳನ್ನು ಕೊಂಡುಕೊಳ್ಳಲು ಇವರಲ್ಲಿ ಹಣವಿರಲಿಲ್ಲ. ವಡವಿಯವರು ತಮ್ಮ ಹೆಂಡತಿಗೆ ಪತ್ರ ಬರೆದು 'ಈಗ ಸಧ್ಯ ಬೇರೆ ಸೀರೆಯನ್ನು ಉಟ್ಟುಕೊ' ಎಂದು ಹೇಳುತ್ತಾರೆ. ಅದಕ್ಕೆ ಉತ್ತರವಾಗಿ ಅವರ ಪತ್ನಿಯು ಹೇಳಿದ ಮಾತು ಅವರ ದೇಶಾಭಿಮಾನಕ್ಕೆ ಸಾಕ್ಷಿಯಾಗುತ್ತದೆ. 'ಒಮ್ಮೆ ನಾನು ಖಾದಿ ಸೀರೆ ಉಡತೊಡಗಿದ್ದೇನೆ. ಅವನ್ನು ಬಿಟ್ಟು ಏನನ್ನೂ ಉಡುವುದಿಲ್ಲ. ನಿಮಗೆ ಹಣದ ಅನುಕೂಲತೆ ಯಾವಾಗ ಆಗುತ್ತದೆಯೋ ಆಗ ಕೊಡಿಸಿರಿ' ಎಂದು ಉತ್ತರಿಸುತ್ತಾರೆ. ಆಂದೋಲನ ಮುಗಿದು ತಿರುಗಿ ಊರಿಗೆ ಬರುವವರೆಗೆ ಅವರು ಹರಿದ ಸೀರೆಗಳನ್ನೆ ತೇಪೆ ಹಚ್ಚಿ ಉಡುತ್ತಿದ್ದರಂತೆ.

ಭೂಗತರಾದ ಚಳುವಳಿಕಾರರಿಗೆ ರಕ್ಷಣೆ ಕೊಡಲು ಬಹಳಷ್ಟು ಜನ ಹೆದರುತ್ತಿದ್ದರು. ಅವರ ಭಯದ ವಿಪರೀತಕ್ಕೆ ವಡವಿಯವರ ಬದುಕಿನಲ್ಲಿ ನಡೆದ ಒಂದು ಘಟನೆಯನ್ನು ಉದ್ಧರಿಸಬಹುದು. ಇವರ ಪತ್ನಿ ಧಾರವಾಡದಲ್ಲಿದ್ದಾಗ ವಡವಿಯವರ ಚಿಕ್ಕ ಮಗುವೊಂದು ತೀರಿಕೊಳ್ಳುತ್ತದೆ. ಆ ಮಗುವಿನ ಅಂತ್ಯಕ್ರಿಯೆಗೂ ಬಹಳ ಹೊತ್ತಿನವರೆಗೆ ಯಾರು ಬರಲಿಲ್ಲವಂತೆ. ಇವರ ಮನೆಗೆ ಯಾರಾದರೂ ಬಂದರೆ ಪೊಲೀಸರು ಏನು ಮಾಡುತ್ತಾರೋ ಎಂಬ ಭೀತಿ ಅವರನ್ನು ಕಾಡುತ್ತಿತ್ತು. ಜನರಿಗೆ ಪೊಲೀಸರ ಭೀತಿ ಈ ರೀತಿಯಾಗಿ ಕಾಡುತ್ತಿತ್ತು.

ಕುಂದರನಾಡಿನಲ್ಲಿ ಹಪ್ತೆ ಲೂಟಿ ನಡೆದಂತೆ ಧಾರವಾಡ ಜಿಲ್ಲೆಯಲ್ಲಿಯೂ ಭೂಗತ ಕಾಂಗ್ರೆಸ್ ಕಾರ್ಯಕರ್ತರ ಗುಂಪು ವಿಧ್ವಂಸಕ ಚಟುವಟಿಕೆಗಳಲ್ಲಿ ತೊಡಗಿತ್ತು. ಇಂತಹ ಒಂದು ಗುಂಪಿನ ಮುಖಂಡ ಮೈಲಾರ ಮಹಾದೇವಪ್ಪನವರು. ಹೊಸರಿತ್ತಿಯಲ್ಲಿದ್ದುಕೊಂಡು ಅದರ ಸಮೀಪ ಕೊರಡೂರಲ್ಲಿ ಗಾಂಧಿ ಆಶ್ರಮವನ್ನು ಸ್ಥಾಪನೆ ಮಾಡಿ ಅನೇಕ ವರ್ಷ ಕೆಲಸ ಮಾಡಿದರು. ಮಹಾದೇವಪ್ಪನವರು ಹೊಸರಿತ್ತಿಯ ದೇವಸ್ಥಾನದಲ್ಲಿ ಹಪ್ತೆ ವಸೂಲಿ ನಡೆಯುತ್ತಿತ್ತು. ಇವರು ಅಲ್ಲಿ ದಾಳಿ ಮಾಡಿ ಪೋಲೀಸರ ಕೈಯೊಳಗಿನ ಹಣದ ಥೈಲಿಯನ್ನು ಮತ್ತು ರೈಫಲ್‌ಗಳನ್ನು ಕಸಿಯುತ್ತಾರೆ. ಅಷ್ಟರಲ್ಲಿ ಮಹಾದೇವಪ್ಪನವರ ತಲೆಗೆ ಮತ್ತೊಬ್ಬ ಪೊಲೀಸನಿಂದ ಗುಂಡು ತಗಲುತ್ತದೆ. ಪೋಲೀಸರ ಮತ್ತು ಮಹಾದೇವಪ್ಪನವರ ಈ ಹೋರಾಟ ನಡೆದರೂ ಪೋಲೀಸರನ್ನು ಹೊಡೆಯಬೇಡಿರೆಂದು ಹೇಳಿ ನೆಲಕ್ಕುರುಳುತ್ತಾರೆ. ಈ ಘಟನೆ ಕುಂದರನಾಡಿನ ಕಾರ್ಯಕರ್ತರ ಮೇಲೆ ತೀವ್ರವಾದ ಪರಿಣಾಮವನ್ನು ಬೀರುತ್ತದೆ. ಅವರು ತಮ್ಮ ಚಳುವಳಿಗೆ ಇನ್ನಷ್ಟು ಬಲ ತುಂಬಿ ಹೋರಾಟವನ್ನು ಚುರುಕುಗೊಳಿಸುತ್ತಾರೆ.

ಬೆಳಗಾವಿ ಜಿಲ್ಲೆಯ ಖಾನಾಪೂರ ತಾಲೂಕಿನ ತೊಲಗಿಯಲ್ಲಿ ಹಪ್ತೆ ವಸೂಲಿ ನಡೆದಿತ್ತು. ಅದನ್ನು ಲೂಟಿ ಮಾಡಬೇಕೆಂದು ಚೆನ್ನಪ್ಪಾ ವಾಲಿಯವರು ನಿಶ್ಚಯಿಸುತ್ತಾರೆ. ಬಿ. ಆರ್. ಪಾಟೀಲ,

ನಾಗಪ್ಪಾ ಬಾಗೇವಾಡಿ ಮುಂತಾದವರು ಸೇರಿ ಸಾಯಂಕಾಲ ನಾಲ್ಕು ಘಂಟೆಗೆ ಹಪ್ತೆ ವಸೂಲಿ ಮಾಡುವ ಪೊಲೀಸರನ್ನು ಹಿಡಿದು ಅವರ ಬಂದೂಕನ್ನು ಕಸಿದುಕೊಳ್ಳುತ್ತಾರೆ. ರೈತರ ವೇಷದಲ್ಲಿ ಹಪ್ತೆ ಕೊಡುವವರಂತೆ ಬಂದು ಬಿ. ಆರ್. ಪಾಟೀಲ ಮತ್ತು ನಾಗಪ್ಪಾ ಬಾಗೇವಾಡಿಯವರು ಬಂದೂಕು ಹಿಡಿದ ಪೊಲೀಸರನ್ನು ತೆಕ್ಕೆಯಲ್ಲಿ ಹಿಡಿದುಕೊಳ್ಳುತ್ತಾರೆ. ಈ ಗದ್ದಲದಲ್ಲಿ ಪೊಲೀಸನ ಕೈಯೊಳಗಿನ ಬಂದೂಕು ಹಾರಿ ಗುಂಡು ಬಿ. ಆರ್. ಪಾಟೀಲರ ಬೆರಳಿಗೆ ತಾಕುತ್ತದೆ. ಅದರಿಂದ ಅವರಿಗೆ ಗಾಯವೂ ಆಗುತ್ತದೆ. ಇಷ್ಟರಲ್ಲಿ ನಾಲ್ಕೈದು ಜನ ಕಾರ್ಯಕರ್ತರು ಅವರ ಸಹಾಯಕ್ಕೆ ಬಂದು ಪೊಲೀಸರ ಕೈಯೊಳಗಿನ ಬಂದೂಕನ್ನು ಕಸಿದುಕೊಂಡು ಅವರನ್ನು ಕಟ್ಟಿ ಹಾಕುತ್ತಾರೆ. ಕೆಲವರು ಬಂದೂಕನ್ನು ಲಪಟಾಯಿಸಿದರೆ ಇನ್ನು ಕೆಲವರು ವಸೂಲಿ ಪೆಟ್ಟಿಗೆಯನ್ನು ತೆಗೆದುಕೊಳ್ಳುತ್ತಾರೆ. ಮತ್ತೆ ಕೆಲವರು ಶಾನುಭೋಗರ ಹತ್ತಿರವಿದ್ದ ಕಾಗದ ಪತ್ರಗಳನ್ನು ಕಿತ್ತುಕೊಳ್ಳುತ್ತಾರೆ. ಇನ್ನು ಕೆಲವು ಜನ ಹಪ್ತೆ ಕೊಡಲು ಬಂದವರು ಅಂಜಿ ಓಡಿ ಹೋಗುತ್ತಾರೆ. ಈ ರೀತಿಯಾಗಿ ಬ್ರಿಟಿಷರಿಗೂ ಮತ್ತು ಚಳುವಳಿಗಾರರಿಗೂ ನಿರಂತರ ಹೋರಾಟಗಳು ನಡೆದೆ ಇದ್ದವು.

ಸುಳೇಭಾವಿ ಸ್ಟೇಶನ್ ಸುಟ್ಟ ಕಾರಣಕ್ಕಾಗಿ ಕೆಲವು ಕಾರ್ಯಕರ್ತರ ಮೇಲೆ ಅರೆಸ್ಟ ವಾರೆಂಟ್ ಹೊರಡಿಸಲಾಗಿತ್ತು. ಬಿ. ಆರ್. ಪಾಟೀಲರು ಧಾರವಾಡದಲ್ಲಿ ಪೊಲೀಸರ ಕೈಗೆ ಸಿಕ್ಕ ನಂತರ ಅವರನ್ನು ಬೆಳಗಾವಿಯ ಹಿಂಡಲಗಿ ಜೈಲಿನಲ್ಲಿ ಇಡುತ್ತಾರೆ. ಸುಳೇಭಾವಿ ಸ್ಟೇಶನ್ ಸುಡಲು ಹೋದವರು ಕೇವಲ ಇಪ್ಪತ್ತು ಜನ. ಆದರೆ ಪೋಲೀಸರು ಮೂವತ್ತೈದು ಜನರ ಮೇಲೆ ಕಟ್ಲೆ ಹಾಕುತ್ತಾರೆ. ಒಂಭತ್ತು ತಿಂಗಳವರೆಗೆ ಆ ಮೂವತ್ತೈದು ಜನರನ್ನು ಜೈಲಿನಲ್ಲಿ ಇಡುತ್ತಾರೆ. ಕೊನೆಗೆ ನ್ಯಾಯಾಧೀಶರು ಸರಿಯಾದ ಸಾಕ್ಷಿ ಪುರಾವೆಗಳಿಲ್ಲದ ಕಾರಣ ಅವರನ್ನು ನಿರ್ದೋಷಿಗಳೆಂದು ಬಿಟ್ಟುಬಿಡುತ್ತಾರೆ. ಹೀಗೆ ನಿರಂತರವಾಗಿ ಕುಂದರನಾಡಿನಲ್ಲಿ ಸ್ವಾತಂತ್ರ್ಯ ಹೋರಾಟ ಜೀವಂತವಾಗಿತ್ತು. ಅದು ಹಲವು ರೂಪಗಳಲ್ಲಿ ಜನಮನದಲ್ಲಿ ಪ್ರಭಾವಿಯಾಗಿತ್ತು.

### ೩.೪ ಸ್ವಾತಂತ್ರ್ಯ ಚಳುವಳಿ ಜನಸಾಮಾನ್ಯರು ಮತ್ತು ಮಹಿಳೆಯರು

ಕನ್ನಡನಾಡು ವೀರ ಮಹಿಳೆಯರಿಗೆ ಜನ್ಮವಿತ್ತ ಪವಿತ್ರ ಭೂಮಿ. ಪ್ರಾಚೀನ ಕಾಲದಿಂದಲೂ ಅನೇಕ ವೀರ ಮಹಿಳೆಯರು ನಾಡ ಸೇವೆಗಾಗಿ ಹೋರಾಟವನ್ನು ಮಾಡಿದ್ದಾರೆ. ಪುರುಷನ ಸರಿದೊರೆಯಾಗಿ ಹೋರಾಟ ಮಾಡಿದ ಹೆಂಗಳೆಯರಿಗೆ ಇಲ್ಲಿ ಕೊರತೆಯಿಲ್ಲ. ಬ್ರಿಟಿಷರ ವಿರುದ್ಧ ಹೋರಾಡಿದ ಕಿತ್ತೂರಿನ ರಾಣಿ ಚನ್ನಮ್ಮಾ, ಬೆಳವಡಿ ಮಲ್ಲಮ್ಮಾ, ಝಾನ್ಸಿರಾಣಿ ಲಕ್ಷ್ಮೀಬಾಯಿ ಮುಂತಾದ ವೀರ ಮಹಿಳೆಯರ ಸಾಹಸ ಗಾಥೆಯು ಕುಂದರನಾಡಿನ ಮಹಿಳಾ ಹೋರಾಟಗಾರ್ತಿಯರಿಗೆ ಪ್ರೇರಣೆಯನ್ನು ನೀಡಿದೆ. ಇದೇ ದಾರಿಯಲ್ಲಿ ಮುನ್ನುಗ್ಗಿದ ವೀರ ಮಹಿಳೆಯ ಧೀರ ಪರಂಪರೆಯಲ್ಲಿ ಸಾಗಿ ಬಂದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತಮ್ಮನ್ನು ತೊಡಗಿಸಿಕೊಂಡ ನಮ್ಮ ಹಳ್ಳಿಯ ಹೆಣ್ಣು ಮಕ್ಕಳು ಎಲೆಯ ಮರೆಯ ಕಾಯಿಯಂತೆ ಸ್ವಾತಂತ್ರ್ಯ ಚಳುವಳಿಯ ಇತಿಹಾಸದಲ್ಲಿ ಅನಾಮಧೇಯರಾಗಿ ಉಳಿದಿದ್ದಾರೆ. ಕೆಚ್ಚೆದೆಯ ಕಲಿಗಳಿಗೆ ಹೆಸರಾದ ಕುಂದರನಾಡಿನಲ್ಲಿ ಅನೇಕ ಅಬಲೆಯರು ಸಬಲೆಯರಾದ ಸಂಗತಿ ರೋಮಾಂಚನಕಾರಿಯಾಗಿದೆ!

ಪುರುಷರಂತೆ ಮಹಿಳೆಯರು ಕೂಡ ಉಗ್ರ ಹೋರಾಟ ಮಾಡಿದ್ದನ್ನು ಇತಿಹಾಸವು ನಮಗೆ ತಿಳಿಸಿಕೊಡುತ್ತದೆ. ಬೆಳಗಾವಿಯ ಅನೇಕ ವಿದ್ಯಾರ್ಥಿ ವಿದ್ಯಾರ್ಥಿನಿಯರು ಗುಪ್ತ ಸಂಘಟನೆಯ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದಾರೆ. ಬಹಿರಂಗವಾಗಿ ಬುಲಟೀನ ಹಂಚುವುದು, ಧ್ವಜವಂದನೆ, ಸಾಮೂಹಿಕ ಸೂತ್ರಯಜ್ಞ, ಸಭೆ ಇತ್ಯಾದಿ ಕಾರ್ಯಕ್ರಮಗಳನ್ನು ಮಾಡಿ ಅವರು ಜೈಲಿಗ ಹೋಗುತ್ತಿದ್ದರು. ಚಳುವಳಿಯ ಆರಂಭದಲ್ಲಿಯೇ ಶ್ರೀಮತಿ ಇಂದುಮತಿ ಗುಣಾಜಿ ಅವರು ಬೆಳಗಾವಿಯಲ್ಲಿ ಭಾಷಣ ಮಾಡಿ ೨ ವರ್ಷ ಕಠಿಣ ಶಿಕ್ಷೆಗೆ ಗುರಿಯಾಗಿದ್ದಾರೆ. ಶ್ರೀಮತಿ ರಮಾಬಾಯಿ ಯಾಳಗಿಯವರನ್ನು ಭಾರತ ರಕ್ಷಣಾ ಕಾನೂನಿನ ಪ್ರಕಾರ ಬಂಧಿಸಿ ಸೆರೆಮನೆಗೆ ಸೇರಿಸಲಾಯಿತು. ಮಹಿಳಾ ಮುಖಂಡರು ಯಾರೂ ಇಲ್ಲದ ಕಾಲದಲ್ಲಿ ವಿದ್ಯಾರ್ಥಿನಿಯರಾದ ಶ್ರೀಮತಿ ಶಕುಂತಲಾ ದಾವನಕರ, ಪ್ರಮೀಳಾತಾಯಿ ದೇಶಪಾಂಡೆ, ಮಾಲತಿ ಯಾಳಗಿ, ವಸುಂಧರಾ ನಾಯಕ, ಸಲೀನ ವಾಲಾವಲಕರ, ವಿಮಲ ಘಾಟಕ ಮೊದಲಾದವರು ಮುಂದಾಗಿ ವಿದ್ಯಾರ್ಥಿನಿಯರ ಸಂಘಟನೆಯನ್ನು ಮಾಡುತ್ತಾರೆ. ೧೯೪೨ ಅಗಷ್ಟ ೯ಕ್ಕೆ ೧೦ ಸಾವಿರ ವಿದ್ಯಾರ್ಥಿ ವಿದ್ಯಾರ್ಥಿನಿಯರ ಮೆರವಣಿಗೆ ಹೊರಟಾಗ ವಿದ್ಯಾರ್ಥಿನಿಯರು ಅಲ್ಲಿ ಬಹುಸಂಖ್ಯೆಯಲ್ಲಿ ಭಾಗವಹಿಸಿದ್ದರು. ಅಂದು ಬಂಧಿಸಿದ ೮೫ ವಿದ್ಯಾರ್ಥಿ ಹೋರಾಟಗಾರರಲ್ಲಿ ೩೦ ಮಂದಿ ಮಹಿಳೆಯರೆ ಇದ್ದಾರೆ. ೧೯೪೨ ರಿಂದ ೧೯೪೪ ರ ಅಗಷ್ಟದಲ್ಲಿ ಹೋರಾಟ ನಿಲ್ಲುವವರೆಗೆ ಬೆಳಗಾವಿಯ ವೀರ ಭಗಿನಿಯರು ನಿರಂತರ ಶ್ರಮ ವಹಿಸಿದ್ದಾರೆ. ಇದಲ್ಲದೆ ರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ ಕ್ರಿಯಾಶೀಲ ಪಾತ್ರವನ್ನು ಇವರು ಆಡಿದ್ದಾರೆ. ಇಲ್ಲಿ ತಿಳಿಸಲಾದ ಐವರು ಭಗಿನಿಯರ ನೇತೃತ್ವದಲ್ಲಿ ಗೋದಾವರಿ ಸೋಲ್ಲಾಪುರಕರ, ಕುಸುಮಾಪೈ, ಸುಮಂತಾ ಕಾಮತ, ಸುಶೀಲಾ ತೆಂಡೂಲ್ಕರ್, ಕಮಲ ಪಾಠಕ, ಅನುಸೂಯಾ ಸಾವಂತ, ಶಾಲಿನಿ ಜಾಂಬೂಟಕರ, ಭೀಮಾ ಸಾಮಂತ, ಪ್ರಭಾವತಿ ಸಾಮಂತ, ಅರುಂಧತಿ ಕಾಮತ, ಆಶಾಲತಾ ಜೇವೆಕರ, ಸೀಮಾ ಪೋತದಾರ, ಸೀತಾಬಾಯಿ ಪ್ರಭು, ಲಕ್ಷ್ಮೀಬಾಯಿ ಕುಲಕರ್ಣಿ, ಶಾಂತಾಬಾಯಿ ಮಠದ, ಸಂಗವ್ವ ಬಾಳೇಕುಂದ್ರಿ, ಇಂದುಮತಿ ಪಾಟೋಳೆ, ಮಾಲತಿ ಜಾಂಬೋಟೆಕರ, ಕಮಲ ಸೋಹಾನಿ, ಸುಮನ ಬೇಂದ್ರೆ, ಮೊದಲಾದ ೫೦ ಭಗಿನಿಯರು ಗುಪ್ತವಾಗಿ ಚಳುವಳಿಯನ್ನು ಮಾಡುತ್ತಿದ್ದರು. ಬುಲೇಟಿನ ಹಂಚುವುದು, ಜೈಲಿನಲ್ಲಿದ್ದವರಿಗೆ ಬೇಕಾಗುವ ತಿಂಡಿ ತಿನಿಸು ಮಾಡಿ ಕೊಡುವುದು ಹೀಗೆ ಚಳುವಳಿಗೆ ಪೂರಕವಾಗುವ ಹಲವಾರು ಕಾರ್ಯಗಳನ್ನು ಈ ಮಹಿಳೆಯರು ಮಾಡಿದ್ದಾರೆ.

೧೯೨೪ ರ ಕಾಂಗ್ರೆಸ್ ಅಧಿವೇಶನವು ಗಾಂಧೀಜಿಯವರ ಮುಖಂಡತ್ವದಲ್ಲಿ ಬೆಳಗಾವಿಯಲ್ಲಿ ಜರುಗಿತು. ಈ ಅಧಿವೇಶನದಲ್ಲಿ 'ಖಾದಿ ಮುಖಾಂತರವೇ ಸ್ವರಾಜ್ಯ ಪ್ರಾಪ್ತಿ' ಎಂಬ ನಿರ್ಣಯವನ್ನು ಕೈಕೊಳ್ಳಲಾಯಿತು. ಅದರ ಪರಿಣಾಮವಾಗಿ ಕರ್ನಾಟಕದ ಗಂಗಾಧರರಾವ್ ದೇಶಪಾಂಡೆಯವರು ಕುಂದರನಾಡಿನ ಸುಮಾರು ನಾಲವತ್ತು ಹಳ್ಳಿಗಳಲ್ಲಿ ಎಡೆಬಿಡದೆ ಸಂಚರಿಸಿ ಗಾಂಧೀಜಿಯವರ ಸಂದೇಶವನ್ನು ಮನೆಮನೆ ಮುಟ್ಟಿಸಿದರು. ಬ್ರಿಟಿಷರ ವಿರುದ್ಧ ಸ್ವಾವಲಂಭನೆಗಾಗಿ ಹೋರಾಡಲು ಅಸಹಕಾರದ ಅಸ್ತ್ರವನ್ನು ಹಿಡಿದು ಅಣಿಯಾದರು. ಈ ಭಾಗದ ಜನರಲ್ಲಿ ನಿರಂತರ ಹೋರಾಡುವ ಮನೋಭಾವವನ್ನು ಹುಟ್ಟಿಸಿದರು. ವ್ಯಕ್ತಿ ವ್ಯಕ್ತಿಯ ಎದೆಗಳಲ್ಲಿ ಸ್ವಾತಂತ್ರ್ಯದ ಜ್ಯೋತಿ ಮಿನುಗುವಂತೆ

ಮಾಡಿದರು. ಇದಲ್ಲದೆ ಹಳ್ಳಿಯ ಹೆಣ್ಣು ಮಕ್ಕಳಲ್ಲಿ ಸ್ವಾವಲಂಬನೆಯ ಮಹತ್ವವನ್ನು ಚಿತ್ರಿಸಿ ನೂಲುವ ಕಾರ್ಯಕ್ಕೆ ಪ್ರೋತ್ಸಾಹಿಸಿದರು. ಅವರಿಗೆ ಸ್ವಾತಂತ್ರ್ಯ ಹೋರಾಟದ ಬಗೆಗೆ ಸರಿಯಾದ ತಿಳುವಳಿಕೆಯನ್ನು ನೀಡಿ ಹೆಣ್ಣು ಮಕ್ಕಳೂ ಕೂಡಾ ಈ ಸಂಗ್ರಾಮದಲ್ಲಿ ಭಾಗವಹಿಸಲು ಅವರಿಗೆ ಪ್ರೇರಣೆಯನ್ನು ನೀಡಿದರು.

ಸಾಮಾನ್ಯವಾಗಿ ಹೆಣ್ಣುಮಕ್ಕಳು ನಮ್ಮ ಪರಂಪರೆಯಂತೆ ಮನೆಯ ಹೊಸ್ತಿಲನ್ನು ದಾಟಿ ಹೊರಗೆ ಬರುವುದೇ ಅಪರೂಪ. ಪರಂಪರೆ ಮತ್ತು ನಂಬಿಕೆಗಳನ್ನು ಮೀರಿ ಕುಂದರನಾಡಿನ ಹೆಣ್ಣು ಮಕ್ಕಳು ಸಾಂಪ್ರದಾಯಿಕ ಪರಿಸರದಿಂದ ಎದ್ದು ಬಂದು ಹೋರಾಟದ ಕಣಕ್ಕೆ ಇಳಿದದ್ದು ಒಂದು ಚಾರಿತ್ರಿಕ ದಾಖಲೆಯಾಗಿದೆ. ಪುರುಷರಂತೆ ಇವರು ಹೋರಾಟದಲ್ಲಿ ತಮ್ಮ ದಿಟ್ಟತನವನ್ನು ಪ್ರದರ್ಶಿಸಿದ್ದಾರೆ. ಉಪ್ಪಿನ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳುವುದು, ಸಿಂಧಿ ಗಿಡ ಕಡೆಯುವುದು, ಅರಣ್ಯ ಸತ್ಯಾಗ್ರಹ, ಪರದೇಶಿ ಬಟ್ಟೆ ಮಾರುವ ಅಂಗಡಿಗಳ ಮುಂದೆ ಪಿಕೆಟಿಂಗ ಮಾಡುವುದು ಮುಂತಾದ ಹೋರಾಟಗಳಲ್ಲಿ ಈ ಭಾಗದ ಮಹಿಳೆಯರು ಧೈರ್ಯದಿಂದ ಚಳುವಳಿಯನ್ನು ಮಾಡಿದ್ದಾರೆ. ಇದಲ್ಲದೆ ಬ್ರಿಟಿಷರ ಯಾವ ತಂತ್ರಕ್ಕೂ ಮಣಿಯದೆ ಸೆರೆಮನೆ ವಾಸದಂತ ಶಿಕ್ಷೆಗೂ ಕೂಡಾ ಹೆದರದೆ ಧೈರ್ಯದಿಂದ ಎದುರಿಸಿದ್ದಾರೆ.

೧೯೪೨ ರ ಚಲೇಜಾವ್ ಚಳುವಳಿಯಲ್ಲಿ ಅನೇಕ ಮಹಿಳೆಯರು ಭಾಗವಹಿಸಿದ್ದರು. ಬ್ರಿಟಿಷ ಅಧಿಕಾರಿಗಳನ್ನು ದಿಟ್ಟತನದಿಂದ ಎದುರಿಸಿ ಅವರ ಯಾವ ಬೆದರಿಕೆಗೂ ಸೊಪ್ಪು ಹಾಕುತ್ತಿರಲಿಲ್ಲ. ಕೋರ್ಟ ಕಚೇರಿಗಳಲ್ಲಿ ಕೆಲಸ ಕಾರ್ಯಗಳನ್ನು ಮಾಡುವ ಹಿರಿಯ ಅಧಿಕಾರಿಗೂ ಹೆದರದೆ, ಕಾವಲು ನಿಂತ ಪೊಲೀಸರ ಬಂದುಕಿಗೂ ಬೆದರದೆ ಕಚೇರಿ ಒಳನುಗ್ಗಿ ಕಾಗದ ಪತ್ರಗಳನ್ನು ಹೊರ ತಂದು ಸುಟ್ಟು ಹಾಕಿದ ಧೀರ ಮಹಿಳೆಯರು ಈ ನಾಡಿನಲ್ಲಿ ಆಗಿ ಹೋದುದು ಮಹಿಳೆಯರಿಗೆ ಮಾತ್ರವಲ್ಲ, ಈ ನಾಡಿಗೆ ಹೆಮ್ಮೆಯ ಸಂಗತಿಯಾಗಿದೆ. ಹಸಿವೆ ನೀರಡಿಕೆಯ ಪರಿವೆ ಇಲ್ಲದೆ ಸ್ವಾತಂತ್ರ್ಯ ಸಾಧನೆಯೇ ತಮ್ಮ ಜೀವನದ ಗುರಿ ಎಂದು ಭೂಗತರಾಗಿ ಅನೇಕ ಯೋಧರು ಹೋರಾಡುವುದು ಒಂದು ಕಡೆಯಾದರೆ, ಅಂಥ ಭೂಗತ ಯೋಧರಿಗೆ ಪ್ರೇರಣೆ ನೀಡಿದವರು ಈ ಮಹಿಳೆಯರು. ಪೊಲೀಸರ ಕಣ್ಣು ತಪ್ಪಿಸಿ ಅನ್ನ ನೀರು ಆಶ್ರಯವನ್ನು ಕೊಟ್ಟ ಈ ತಾಯಿಂದಿರು ನಿಜವಾಗಿಯೂ ಪ್ರಾಥಃಸ್ಮರಣೀಯರು. ಬ್ರಿಟಿಷ ಅಧಿಕಾರಿಗಳ ಸೈನಿಕರ ಮತ್ತು ಪೊಲೀಸರ ಚಲನವಲನಗಳನ್ನು ಭೂಗತ ಯೋಧರಿಗೆ ತಿಳಿಸಿ ಅವರನ್ನು ಗಂಡಾಂತರಗಳಿಂದ ಪಾರು ಮಾಡಿದ್ದಾರೆ. ಹೀಗೆ ಪಾರು ಮಾಡುವಾಗ ಅನೇಕ ಸಲ ಪೊಲೀಸರ ಕೈಗೆ ತಾವೇ ಸಿಕ್ಕು ಬಿದ್ದು ಕಷ್ಟವನ್ನು ಅನುಭವಿಸಿದ ಅನೇಕ ಮಹಿಳೆಯರು ಇದ್ದಾರೆ. ಮನೆಯಲ್ಲಿ ಮೂಲೆ ಹಿಡಿದು ಮುದುಡಿ ಕುಳಿತುಕೊಳ್ಳಬೇಕಾದ ಎಪ್ಪತ್ತರ ಇಳಿ ವಯಸ್ಸಿನ ಹೆಂಗಳೆಯರೂ ಈ ಹೋರಾಟದಲ್ಲಿ ಭಾಗವಹಿಸಿ ಸೆರೆಮನೆ ವಾಸವನ್ನು ಅನುಭವಿಸಿದ್ದಾರೆ. ಸೆರೆಮನೆಯಲ್ಲಿ ನೂಲುವ ಬಗ್ಗೆ ಕೆಲವು ಜನ ಹೆಣ್ಣು ಮಕ್ಕಳು ಬ್ರಿಟಿಷ ಅಧಿಕಾರಿಗೆ ಆಗ್ರಹಿಸಿ ನೂಲು ತೆಗೆಯಲು ಅನುಕೂಲ ಮಾಡಿಕೊಡುವಂತೆ

ಕೇಳಿಕೊಂಡು ಕೊನೆಗೆ ಸತ್ಯಾಗ್ರಹ ಮಾಡಿ ಯಶಸ್ವಿಯಾಗಿದ್ದಾರೆ. ಸ್ವಾತಂತ್ರ್ಯ ಪಿತಾಮಹ ಎನಿಸಿಕೊಂಡ ಮಹಾತ್ಮಾ ಗಾಂಧೀಜಿ ಯರವಡಾ ಜೈಲಿನಲ್ಲಿದ್ದಾಗ ಅದೇ ಜೈಲಿನಲ್ಲಿ ಕೆಲವು ಹೆಣ್ಣುಮಕ್ಕಳು ಇದ್ದದ್ದು ಸ್ವಾತಂತ್ರ್ಯ ಚಳುವಳಿಯ ವಿಶೇಷವಾಗಿದೆ.

ಸ್ವರಾಜ್ಯ ಚಳುವಳಿಯ ಹಿನ್ನೆಲೆಯಲ್ಲಿ ಗಾಂಧೀಜಿಯವರ ಹೋರಾಟ ದೇಶವ್ಯಾಪಿಯಾಗಿ ಹಬ್ಬಿಕೊಂಡಿತು. ಚಿಕ್ಕ ಮಕ್ಕಳಿಂದ ಮುದುಕರವರೆಗೂ ಗಾಂಧೀಜಿಯವರು ಆವರಿಸಿಕೊಂಡಿದ್ದರು. ಸ್ವಾತಂತ್ರ್ಯದ ಅವಶ್ಯಕತೆ ಈ ಜನರಿಗೆ ಎಷ್ಟು ಅವಶ್ಯವಿದೆಯೋ, ಅಷ್ಟೇ ಜಾತಿ ಮುಕ್ತತೆಯು ಅವಶ್ಯವಾಗಿದೆ. ಗಾಂಧೀಜಿಯರ ಆ ಕಾಲದಲ್ಲಿ ಹರಿಜನರು ಅನುಭವಿಸುತ್ತಿದ್ದ ದಯನೀಯ ಸ್ಥಿತಿಯನ್ನು ಸ್ವತಃ ಗಾಂಧೀಜಿಯವರು ಕಂಡು ಅದಕ್ಕೊಂದು ಪರಿಹಾರ ಹುಡುಕಲು ಹೊರಟರು. ಹೀಗೆ ಗಾಂಧೀಜಿ ಹರಿಜನ ಯಾತ್ರೆ ಮಾಡುತ್ತಿದ್ದ ಕಾಲದಲ್ಲಿ ಒಂದು ದಿನ ಮಹಿಳೆಯೊಬ್ಬಳು ಗಾಂಧೀಜಿಯವರ ವ್ಯಕ್ತಿತ್ವಕ್ಕೆ ಮಾರುಹೋಗಿ ತನ್ನ ಮೈಮೇಲಿನ ವಡವೆಗಳನ್ನೆಲ್ಲಾ ದಾನಮಾಡಲು ಗಾಂಧೀಜಿಯವರನ್ನೇ ತನ್ನ ಮನೆಗೆ ಕರೆದುಕೊಂಡು ಹೋಗುತ್ತಾಳೆ. ಗಾಂಧೀಜಿ ಅಲ್ಲಿಗೆ ಬಂದಾಗ ಆ ಮಹಿಳೆ ದಾನ ಮಾಡಿದ್ದನ್ನು ಕಂಡು ಇದರಿಂದ ಪ್ರಭಾವಿತಳಾಗಿ ನೆರೆಮನೆಯವಳೂ ಕೂಡಾ ತನ್ನ ಕೈಯಲ್ಲಿರುವ ಚಿನ್ನದ ಬಳೆಗಳನ್ನು ಬಾಪೂಜಿಯವರಿಗೆ ದಾನವಾಗಿ ಕೊಡುತ್ತಾಳೆ. ಗಾಂಧೀಜಿಗೆ ಆಶ್ಚರ್ಯವಾಗುತ್ತದೆ. ಅವರು ಈ ಮಹಿಳೆಯ ಪತಿಯನ್ನು ಕುರಿತು ಹೀಗೆ ಕೇಳುತ್ತಾರೆ. 'ನಿಮ್ಮ ಪತ್ನಿ ನಿಮ್ಮೆಲ್ಲಾ ಚಿನ್ನದ ಬಳೆಗಳನ್ನು ಧಾನವಾಗಿ ಕೊಡುತ್ತಿರುವುದು ನಿಮಗೆ ಗೊತ್ತಿರಬೇಕಲ್ಲವೇ ? ಅವಳು ನಿಮ್ಮ ಅನುಮತಿ ಪಡೆದುಕೊಂಡಿರಬೇಕಲ್ಲವೇ' ? ಎಂದು ಪ್ರಶ್ನಿಸಿದಾಗ ಆ ಪತಿ ಮಹಾಶಯನು ಹೀಗೆ ಉತ್ತರಿಸಿದನಂತೆ 'ಹೌದು ನನ್ನನ್ನು ಆಕೆ ಕೇಳಿದಳು. ಅದರೆ ಆ ಬಳೆಗಳು ಆಕೆಯವು ಅವಳು ಯಾರಿಗಾದರೂ ನೀಡಲಿ ನನಗೆ ತಡೆಯುವ ಅಧಿಕಾರವೇನಿದೆ' ? ಆಗ ಮಹಾತ್ಮಾ ಗಾಂಧೀಜಿಯವರು ಆ ವ್ಯಕ್ತಿಯನ್ನು ಕುರಿತು 'ಎಲ್ಲ ಗಂಡಂದಿರರು ಇಷ್ಟು ವಿವೇಕಿಗಳಾದರೆ ನಮ್ಮ ದೇಶದ ಸ್ಥಿತಿಯೇ ಬದಲಾಗುವುದು. ನಿಮ್ಮ ವಯಸ್ಸು ಎಷ್ಟು' ? ಎಂದರು ಆಗ ಆ ವ್ಯಕ್ತಿಯು ಮೂವತ್ತು ವರ್ಷ ಎಂದು ಹೇಳುತ್ತಾನೆ. ಗಾಂಧೀಜಿ ಆ ತರುಣನ ಮಾತನ್ನು ಕೇಳಿ 'ಈ ವಯಸ್ಸಿನಲ್ಲಿ ನಾನೂ ಇಷ್ಟು ವಿವೇಕಿಯಾಗಿರಲಿಲ್ಲ' ಎನ್ನುತ್ತಾರೆ. ಇದರಿಂದ "ಗಾಂಧೀಜಿಯವರ ಪ್ರಭಾವ ವಿಶೇಷವಾಗಿ ಕರ್ನಾಟಕದ ಮೇಲೆ ಎಷ್ಟಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಇದಲ್ಲದೆ ಒಬ್ಬ ಸಾಮಾನ್ಯ ಹೆಣ್ಣು ಮಕ್ಕಳು ಕೂಡಾಸ್ವಾತಂತ್ರ್ಯ ಚಳುವಳಿಗಾಗಿ ತಮ್ಮ ಮೈಮೇಲಿನ ಬಂಗಾರದ ಒಡವೆ ವಸ್ತುಗಳನ್ನು ದಾನ ಮಾಡಿದ್ದು ಅವರ ದೇಶಪ್ರೇಮಕ್ಕೆ ಸಾಕ್ಷಿಯಾಗುತ್ತದೆ. ಇದರಿಂದ ಆ ಮಹಿಳೆಯರ ಜೊತೆಗೆ ಸಹಕರಿಸಿದ ಪುರುಷರ ಉದಾರತೆಯೂ ಮತ್ತು ಸ್ವಾತಂತ್ರ್ಯ ಕುರಿತು ವ್ಯಕ್ತವಾಗುವ ಅವರ ಅಭಿಮಾನವೂ ತಿಳಿದು ಬರುತ್ತದೆ"[೩೭].

ಪುರುಷರ ಹೆಗಲಿಗೆ ಹೆಗಲು ಹಚ್ಚಿ ಮಹಿಳಾ ಹೋರಾಟಗಾರರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದರು. ಬೆಳಗಾವಿಯಲ್ಲಿ ಕುಮಾರಿ ಪ್ರಮಿಳಾ ದೇಶಪಾಂಡೆ ಮತ್ತು ಇನ್ನು ಕೆಲವು

ಮಹಿಳೆಯರು ಸೇರಿಕೊಂಡು ಚಳುವಳಿ ಕುರಿತು ಕನ್ನಡ ಮರಾಠಿ ಬುಲೆಟಿನ್ ಹೊರಡಿಸುತ್ತಿದ್ದರು. ಇವು ನಾಡಿನ ಮೂಲೆ ಮೂಲೆಗೆ ತಲುಪುವಂತೆ ನೋಡಿಕೊಳ್ಳುತ್ತಿದ್ದರು. ಆ ಬುಲೆಟಿನ್‌ಗಳ ಕಟ್ಟು ಮಾಡಿ ಜನರಲ್ಲಿ ಜಾಗೃತಿಯನ್ನುಂಟು ಮಾಡುವಲ್ಲಿ ಬ್ರಿಟಿಷರಿಗೆ ಗೊತ್ತಾಗದಂತೆ ಹಳ್ಳಿ ಹಳ್ಳಿಗಳಿಗೆ ಅವುಗಳನ್ನು ಸಾಗಿಸುತ್ತಿದ್ದರು. ಈ ಕಟ್ಟುಗಳನ್ನು ಒಯ್ಯುವ ಜವಾಬ್ದಾರಿಯು ಹುದಲಿಯ ಶ್ರೀ ಅಪ್ಪಯ್ಯಪ್ಪಾ ಹೂಗಾರ ಮತ್ತು ಶಂಕರ ಗ್ರಾಮೋಪಾಧ್ಯಾಯ ಇವರದಾಗಿತ್ತು. ಹೀಗೆ ಹೆಣ್ಣುಮಕ್ಕಳು ಪತ್ರಿಕಾ ರಂಗದಲ್ಲಿ ಕಾರ್ಯ ಮಾಡಿ ಜನರಲ್ಲಿ ಸ್ವಾತಂತ್ರ್ಯದ ಅರಿವನ್ನು ಮೂಡಿಸುತ್ತಿದ್ದರು.

**ನಾಗನೂರಿನ ನಾಗವ್ವ :**

ಕುಂದರನಾಡಿನ ಮಹಿಳೆಯರು ಮಾಡಿದ ಸ್ವಾತಂತ್ರ್ಯ ಹೋರಾಟದ ಕಾವು ಬೈಲಹೊಂಗಲ ಸವದತ್ತಿ ತಾಲೂಕಿಗೂ ತಟ್ಟಿತು. ಈ ಭಾಗದಲ್ಲಿ ಒಂದೇ ದಿನ ಒಂದನೂರಾ ಒಂದು ಹಳ್ಳಿಗಳಿಂದ ಒಂದೂನೂರಾ ಒಂದು ಮಹಿಳೆಯರು ಸತ್ಯಾಗ್ರಹದಲ್ಲಿ ತೊಡಗಿ ಬಂಧಿತರಾದದ್ದು ಆ ಹೆಣ್ಣುಮಕ್ಕಳ ಕೆಚ್ಚೆದೆಗೆ ಸಾಕ್ಷಿಯಾಗಿದೆ. ಇನ್ನೊಂದು ಅದ್ಭುತವಾದ ಘಟನೆಯೆಂದರೆ ಬೈಲಹೊಂಗಲ ತಾಲೂಕಿನ ನಾಗನೂರಿನ ಹೆಣ್ಣು ಮಗಳೊಬ್ಬಳು ಸ್ವರಾಜ್ಯದ ಬಗ್ಗೆ ಮತ್ತು ಗಾಂಧೀಜಿಯವರ ಬಗ್ಗೆ ಅಪಾರವಾದ ಆದರ ಅಭಿಮಾನವನ್ನು ಇಟ್ಟುಕೊಂಡಿದ್ದಳು. ಆ ಊರಿನಲ್ಲಿ ಸಿಂಧಿ ಮರ ಕಡಿಯುವ ಚಳುವಳಿಯು ತೀವ್ರ ಸ್ವರೂಪವನ್ನು ಪಡೆದಿತ್ತು. ಜನರು ಕಹಳೆಯನ್ನು ಊದಿಸುತ್ತಾ ಮೆರವಣಿಗೆಯಲ್ಲಿ ಬಂದು ಸಿಂಧಿ ಮರಗಳನ್ನು ನಾಶ ಮಾಡುತ್ತಿದ್ದರು. ಹೆಣ್ಣು ಮಕ್ಕಳು ಸತ್ಯಾಗ್ರಹಿಗಳಿಗೆ ಆಹಾರವನ್ನು ಪೂರೈಸಿ ಆರತಿಯನ್ನು ಮಾಡಿ ಕಳುಹಿಸುತ್ತಿದ್ದರು. ಇದನ್ನು ಹತ್ತಿಕ್ಕಲೆಂದು ಒಂದು ದಿನ ಪ್ರಾಂತ ಅಧಿಕಾರಿಯಾದ ವೇಲ್ಸ್‌ಸಾಹೇಬ ನಾಗನೂರಿಗೆ ಬರುತ್ತಾನೆ.

ಭೂಗತರನ್ನು ಹುಡುಕುವ ಸಂದರ್ಭದಲ್ಲಿ ಈ ಮಹಿಳೆಯ ಮನೆಯನ್ನು ಪ್ರವೇಶಿಸುತ್ತಾನೆ. ನಿನ್ನ ಪತಿ ಚಳುವಳಿಯಲ್ಲಿ ತೊಡಗಿದ್ದಾನೆ. ಅವನು ಎಲ್ಲಿ ಅಡಗಿರುವನೆಂಬುದನ್ನು ತಿಳಿಸು ಇಲ್ಲದಿದ್ದರೆ ಕಠಿಣವಾದ ಶಿಕ್ಷೆಯನ್ನು ಎದುರಿಸಬೇಕಾಗುತ್ತದೆ ಎಂದು ಹೇಳುತ್ತಾ ರಭಸದಿಂದ ಮನೆಯೊಳಗೆ ಪ್ರವೇಶ ಮಾಡುತ್ತಾನೆ. ಎದುರುಗಡೆ ಆ ಹೆಣ್ಣು ಮಗಳು ಅಭಿಮಾನದಿಂದ ಗಾಂಧೀಜಿಯ ಭಾವ ಚಿತ್ರವನ್ನು ಗೋಡೆಗೆ ನೇತು ಹಾಕಿರುತ್ತಾಳೆ. ಬ್ರಿಟಿಷ ಅಧಿಕಾರಿ ಗಾಂಧೀಜಿಯ ಭಾವಚಿತ್ರವನ್ನು ನೋಡಿದ್ದೇ ತಡ, 'ಈ ಭಾವಚಿತ್ರ ಏಕೆ ಹಾಕಿರುವೆ ಅದನ್ನು ಕಿತ್ತೆಸೆ' ಎಂದು ಹೇಳಿ ಸಿಟ್ಟಿನಿಂದ ಗಾಂಧೀಜಿಯ ಫೋಟೊ ಕಿತ್ತು ನೆಲಕ್ಕೆಸೆದು ಭೂಟುಗಾಲಿನಿಂದ ತುಳಿಯುತ್ತಾನೆ. ಅಪ್ಪಟ ಗಾಂಧಿ ಭಕ್ತಳಾದ ಆ ಹೆಣ್ಣು ಮಗಳಾದ ನಾಗವ್ವಾ ಬ್ರಿಟಿಷ ಅಧಿಕಾರಿಯ ಕಾರ್ಯವನ್ನು ಸಹಿಸದೆ ಸಿಟ್ಟಿನಿಂದ ತನ್ನ ಕಾಲಿನ ಚಪ್ಪಲಿಯಿಂದಲೇ ಆತನ ಕಪಾಳಕ್ಕೆ ಹೊಡೆಯುತ್ತಾಳೆ. ಈ ಘಟನೆಯನ್ನು ನೋಡಿದ ಸುತ್ತಲ ಹೆಂಗಳೆಯರು ಒಗ್ಗಟ್ಟಾಗಿ ಕೂಡಿಕೊಂಡು ಆ ಅಧಿಕಾರಿಗೆ ಚಪ್ಪಲಿ ಏಟಿನ ರುಚಿಯನ್ನು ಕೊಡುತ್ತಾರೆ. ಇದರಿಂದ ಗಾಬರಿಗೊಂಡ ಅಧಿಕಾರಿಯು 'ಸಾಕಪ್ಪಾ ಈ ನೌಕರಿ' ಎಂದು ಈ ದೇಶವನ್ನೇ ಬಿಟ್ಟು ಇಂಗ್ಲೆಂಡಿಗೆ ಓಡಿ ಹೋಗುತ್ತಾನೆ. ಗಾಂಧೀಜಿಯವರು ಕರೆ ನೀಡಿದ ಚಲೇಜಾವ್ ಚಳುವಳಿಯು ನಿಜ ಅರ್ಥದಲ್ಲಿ ಸಾಕಾರಗೊಂಡದ್ದು ಈ ಮಹಿಳೆಯಿಂದಲೇ !

ಕೃಷ್ಣಾಬಾಯಿ ಪಣಜೀಕರ ಅವರು ಧಾರವಾಡದವರಾಗಿದ್ದರೂ ಬೆಳಗಾವಿ ಜಿಲ್ಲೆಯ ಭಾಗಗಳಲ್ಲಿ ತಿರುಗಾಡಿ ಜನರಲ್ಲಿ ಜಾಗೃತಿಯನ್ನುಂಟು ಮಾಡುವಲ್ಲಿ ಭಾಷಣ ಮಾಡುತ್ತಿದ್ದರು. ೧೯೩೧ರ ಜನಗಣತಿ ಬಹಿಷ್ಕಾರವನ್ನು ಮಾಡಬೇಕೆಂದು ಕಾಂಗ್ರೆಸ್ ಮುಖಂಡರು ನಿರ್ಧರಿಸಿದ್ದರು. ಜಯದೇವ ಕುಲಕರ್ಣಿಯವರ ನೇತೃತ್ವದಲ್ಲಿ ೧೯೩೧ರ ಜನೇವರಿ ಎರಡನೇ ವಾರದಿಂದ ಈ ಕಾರ್ಯಕ್ರಮ ಜಾರಿ ಬಂತು. ಕೃಷ್ಣಾಬಾಯಿ ಪಣಜಿಕರ ಅವರು ಗ್ಯಾಸ ಬೆಳಕಿನಲ್ಲಿ ದಿನವೂ ಸಂಜೆ ಕಾರ್ಯಕರ್ತರ ಜೊತೆಗೆ ಓಣಿ ಓಣಿಗೆ ಹೋಗಿ ಕೂಟಗಳಲ್ಲಿ ಭಾಷಣ ಮಾಡಿ ಜನಗಣತಿಗೆ ಸಹಕರಿಸಬಾರದೆಂದು ಜನರಲ್ಲಿ ಕೇಳಿಕೊಳ್ಳುತ್ತಿದ್ದರು. ಬಹಿಷ್ಕಾರದ ಮೊದಲನೆಯ ದಿನದಂದು ಜನರೆಲ್ಲಾ ಮನೆಗಳಿಗೆ ಕೀಲಿ ಹಾಕಿ ಜಾಹೀರ ಸಭೆಗೆ ಬಾರದ್ದರಿಂದ ಜನಗಣತಿ ಗಣನೀಯವಗಿ ವಿಫಲವಾಯಿತು. ಹೀಗೆ ಮಹಿಳೆಯರು ಮುಂಚೂಣಿಯಲ್ಲಿದ್ದುಕೊಂಡು ಹೋರಾಟ ಮಾಡಿದ್ದನ್ನು ಇತಿಹಾಸ ನಮಗೆ ತೆರೆದು ತೋರಿಸುತ್ತದೆ.

ಇನ್ನು ಕೆಲವು ಹೆಣ್ಣು ಮಕ್ಕಳು ಭೂಗತ ಕಾರ್ಯಕರ್ತರಿಗೆ ದಿನವೂ ಹಬ್ಬದೂಟ ಉಣಬಡಿಸುತ್ತಿದ್ದರು. "ಗಿರಣಿಗಳಿಲ್ಲದೆ ಮನೆಮನೆಯಲ್ಲಿ ಬೀಸಿ ರೊಟ್ಟಿ ಮಾಡುವ ಕಾಲದಲ್ಲಿ ನಮ್ಮ ಹಳ್ಳಿಯ ಮುಗ್ಧ ಮಹಿಳೆಯರು ಬೆಳತನಕ ಬೀಸಿ ರೊಟ್ಟಿ ಬುತ್ತಿ ಮಾಡಿ ನಿತ್ಯ ಸೀಗಿ ಹುಣ್ಣಿಮೆ ಎಂಬಂತೆ ಬುಟ್ಟಿ ತುಂಬ ತರತರದ ಅಡುಗೆ ಮಾಡಿ ಕಟ್ಟಿಕೊಂಡು ಊರ ಹೊರಗಿನ ನಿಶ್ಚಿತವಾದ ಗುಪ್ತ ಸ್ಥಳಗಳಿಗೆ ತಲುಪಿಸಿ ಬರುತ್ತಿದ್ದರು. ಗುಪ್ತ ಹೋರಾಟಗಾರರು ಊಟದ ಮಟ್ಟಿಗೆ ಮನೆ ಮರೆತು ಇದ್ದಲ್ಲಿಯೇ ಅಲ್ಲೀಕೇರಿ ಮಾಡಿ ನಿಶ್ಚಿಂತೆಯಾಗಿ ಹೋರಾಟದಲ್ಲಿ ಹೊಸಹೊಸ ಯೋಜನೆಗಳನ್ನು ಹಾಕಿಕೊಳ್ಳಲು ಅನುಕೂಲವಾಯಿತು. ಇನ್ನು ಜೇಲಿನಲ್ಲಿದ್ದವರಿಗೆ ಬುತ್ತಿಯಲ್ಲಿಯೇ ಕರ ಪತ್ರಗಳು ತಲುಪುತ್ತಿದ್ದವು. ಇದಲ್ಲದೆ ಹೆಣ್ಣುಮಕ್ಕಳು ತಮ್ಮ ಜಾಣತನದಿಂದ ಅಗತ್ಯ ಕಾರ್ಯಕ್ಕೆಂದು ಮನೆಗೆ ಬಂದ ಸ್ವಾತಂತ್ರ್ಯ ಯೋಧನನ್ನು ಹೊಳೆಗೆ ಬಟ್ಟೆ ಗಂಟು ಒಗೆಯಲು ಒಯ್ಯುವ ನೆವದಲ್ಲಿ ಸೀರೆ ಉಡಿಸಿಕೊಂಡು ಹೋಗಿ ಹೊಳೆ ದಾಟಿಸಿ ಬಂದ ಮಾತೆಯರು ಇದ್ದಾರೆ. ಇದಲ್ಲದೆ ಹೊರಸಿನ ಮೇಲೆ ಬಾಣಂತಿಯಂತೆ ಮಲಗಿಸಿ ಪೊಲೀಸರಿಂದ ಪಾರಾಗಲು ಸಹಕರಿಸಿದ ಎಷ್ಟೋ ನಾರಿಯರೂ ಇದ್ದಾರೆ"[೨೯].

ಹೀಗೆ ಕುಂದರನಾಡಿನ ಹೆಣ್ಣು ಮಕ್ಕಳು ಸ್ವಾತಂತ್ರ್ಯ ಚಳುವಳಿಯಲ್ಲಿ ತಮ್ಮ ವೈಯಕ್ತಿಕ ಬದುಕನ್ನು ಮತ್ತು ಪ್ರಾಣವನ್ನು ಪಣಕ್ಕಿಟ್ಟು ಹೋರಾಟ ಮಾಡಿದ್ದಾರೆ. ಕುಂದರನಾಡಿನ ಚರಿತ್ರೆಯುದ್ದಕ್ಕೂ ಈ ಮಹಿಳೆಯರು ಮಾಡಿದ ಸ್ವಾತಂತ್ರ್ಯ ಸಂಗ್ರಾಮವು ಚಿರಕಾಲ ಉಳಿಯುವಂತಹದ್ದಾಗಿದೆ.

"೧೯೩೦-೩೧ ರ ಅವಧಿ ವಿಶೇಷವಾಗಿ ಕುಂದರನಾಡಿನಲ್ಲಿ ಚಳುವಳಿಯ ತೀವ್ರ ಸ್ವರೂಪದ ಕಾಲವೆಂದೇ ಹೇಳಬೇಕು. ಬ್ರಿಟಿಷ ಸರಕಾರ ಅನ್ಯಾಯವಾಗಿ ಸಾಮಾನ್ಯರಿಗೆ ಹಿಂಸೆ ಕೊಡುವುದು, ದೌರ್ಜನ್ಯವೆಸಗುವುದನ್ನು ಪುರುಷರು ಪ್ರತಿಭಟಿಸಿದಂತೆ ಮಹಿಳೆಯರು ಪ್ರತಿಭಟಿಸಿದ ಉದಾಹರಣೆಗಳು

ಸಾಕಷ್ಟಿವೆ. ೧೯೩೦-೩೧ ರ ಆಂದೋಲನದಲ್ಲಿ ಪುರುಷರಂತೆ ಸ್ತ್ರೀಯರೂ ಕೂಡಾ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿ ತಮ್ಮ ಪಾಲಿನ ಕರ್ತವ್ಯವನ್ನು ಮಾಡುತ್ತಾ ಬಂದಿದ್ದಾರೆ"[೬]. "ಬೆಳಗಾವಿಯಲ್ಲಿ ಲಕ್ಷ್ಮೀಬಾಯಿ ಸೋಹನಿ, ಶಾಂತಾಬಾಯಿ ಕೊಪ್ಪಳ, ಉಮಾಬಾಯಿ ಮೊಡಕ ಮೊದಲಾದವರು ಒಳ್ಳೆಯ ಉತ್ಸಾಹದಿಂದ ಮತ್ತು ನಿಷ್ಠೆಯಿಂದ ಕಾರ್ಯವನ್ನು ನಿರ್ವಹಿಸಿದ್ದಾರೆ. ರಾಣಿ ಲಕ್ಷ್ಮೀ ಪಥಕ ಎಂಬ ಹೆಣ್ಣು ಮಕ್ಕಳದ್ದೇ ಒಂದು ಪ್ರಭಾತಫೇರಿ ಪಥಕವನ್ನು ಕಟ್ಟಿ ದಿನಾಲು ನಗರ ಸಂಕೀರ್ತನೆಯನ್ನು ಮಾಡುತ್ತಿದ್ದರು"[೪೦]. ಇವರ ಪ್ರೇರಣೆಯಿಂದ ಬೆಳಗಾವಿ ಜಿಲ್ಲೆಯ ಇತರ ಭಾಗಗಳಲ್ಲಿಯ ಮಹಿಳೆಯರೂ ಕೂಡಾ ಆಂದೋಲನದಲ್ಲಿ ಭಾಗವಹಿಸಿದರಲ್ಲದೇ ಪ್ರಭಾತಫೇರಿಯನ್ನೂ ಹೊರಡಿಸುತ್ತಿದ್ದರು. ಶ್ರೀಮತಿ ಪಾನಬೆನ್ ಅವರ ನೇತೃತ್ವದಲ್ಲಿ ನಿಪ್ಪಾಣಿಯ ಅನೇಕ ಮಹಿಳೆಯರು ಚಳುವಳಿಯಲ್ಲಿ ಭಾಗವಹಿಸಿದರು. ಶ್ರೀಮತಿ ಪಾನಬೆನ್ ಅವರನ್ನು ಬಂಧಿಸಿ ಸೆರೆಮನೆಗೆ ಕಳುಹಿಸಲಾಗಿತ್ತು. ಹಳ್ಳಿ ಹಳ್ಳಿಗಳಲ್ಲಿ ಅನೇಕ ಮಹಿಳೆಯರು ಪ್ರಭಾತಫೇರಿ ಮಾಡುವುದು, ಸಿಂದಿ ಗಿಡ ಕಡೆಯುವುದು ಮುಂತಾದ ಗಾಂಧಿ ಚಳುವಳಿಗೆ ಪೂರಕವಾಗುವ ಕಾರ್ಯಗಳನ್ನು ಮಾಡಿದ್ದಾರೆ. ನಾಗನೂರಿನ ಶ್ರೀಮತಿ ನಾಗವ್ವ, ಅಥಣಿಯ ಶ್ರೀಮತಿ, ಅಂಬಕ್ಕಾ ಬಳೇಗಾರ, ಧಾರವಾಡದ ಶ್ರೀಮತಿ ಕೃಷ್ಣಾಭಾಯಿ ಪಣಜಿಕರ್ ಇವರು ಬೆಳಗಾವಿ ಜಿಲ್ಲೆ ಹಾಗೂ ಕುಂದರನಾಡಿನ ಪ್ರದೇಶಕ್ಕೆ ಮೇಲಿಂದ ಮೇಲೆ ಬಂದು ಸ್ವಾತಂತ್ರ್ಯ ಕುರಿತು ಭಾಷಣಗಳನ್ನು ಮಾಡಿದ್ದಾರಲ್ಲದೆ ಜನರಲ್ಲಿ ಸ್ವಾತಂತ್ರ್ಯ ಕಿಚ್ಚನ್ನು ಹಚ್ಚಿದ್ದಾರೆ.

ಚಳುವಳಿಕಾರರ ಮುಖ್ಯ ಉದ್ಧೇಶ ಬ್ರಿಟಿಷರ ಕಾರ್ಯ ಆಡಳಿತದ ಸರಕಾರಿ ಯಂತ್ರವನ್ನು ಬಲಹೀನಗೊಳಿಸುವುದಾಗಿತ್ತು. ಅವರು ಕೈಕೊಳ್ಳುವ ನಿರ್ಣಯವನ್ನಿಲ್ಲಿ ಚಳುವಳಿಕಾರರು ವಿರೋಧಿಸುತ್ತಿದ್ದರು. ೧೯೩೧ ರಲ್ಲಿ ಸರಕಾರವು ದಶವಾರ್ಷಿಕ ಜನಗಣತಿಯನ್ನು ಕೈಕೊಂಡಿತ್ತು. ಅದನ್ನು ವಿಫಲಗೊಳಿಸುವುದು ಚಳುವಳಿಕಾರರ ಮುಖ್ಯ ಉದ್ಧೇಶವಾಗಿತ್ತು. ಈ ಆಂದೋಲನವು ಬೆಳಗಾವಿ ಜಿಲ್ಲೆಯಲ್ಲಿ ಪ್ರಾರಂಭವಾಯಿತು. ಆಗ ಚಳುವಳಿಯ ಮುಖಂಡರು ಮತ್ತು ಕಾರ್ಯಕರ್ತರು ಇವರೆಲ್ಲಾ ಜೈಲಿನಲ್ಲಿದ್ದರು. ಶ್ರೀ ಜಯದೇವ ಕುಲಕರ್ಣಿಯವರು ಎಂಟು ತಿಂಗಳು ಕಾರಾವಾಸವನ್ನು ಅನುಭವಿಸಿ ಜನೇವರಿ ಹತ್ತರಂದು ಬಿಡುಗಡೆಯಾಗಿ ಹೊರಬರುತ್ತಾರೆ. ಆಗ ಈ ಆಂದೋಲನಕ್ಕೆ ಕುಲಕರ್ಣಿಯವರು ಚಾಲನೆಯನ್ನು ಕೊಡುತ್ತಾರೆ. ಆಂದೋಲನ ರಭಸದಿಂದ ನಡೆಯುತ್ತದೆ. ಪ್ರತಿನಿತ್ಯ ಸಂಜೆ ಗ್ಯಾಸ ಭತ್ತಿ ಹೊತ್ತಿಸಿಕೊಂಡು ಸ್ವಯಂ ಸೇವಕರೊಂದಿಗೆ ಓಣಿ ಓಣಿಗಳಿಗೆ ಹೋಗಿ ಅಲ್ಲಿ ಚೌಕಗಳಲ್ಲಿ ನಿಂತು ಭಾಷಣ ಮಾಡಿ ಜನಗಣತಿಗೆ ನೀವಾರು ಸಹಕರಿಸಬಾರದೆಂದು ಅವರಿಗೆ ತಿಳಿಸಿ ಹೇಳುತ್ತಿದ್ದರು. ಜನರ ಮೇಲೆ ಇವರ ಭಾಷಣದ ಪ್ರಭಾವ ತೀವ್ರವಾಗಿತ್ತು. ಪೋಲೀಸರು ಇದನ್ನು ಕಂಡು ಮುಖಂಡರಾದ ಜಯದೇವ ಕುಲಕರ್ಣಿಯವರನ್ನು ಹಾಗೂ ಅವರ ಜೊತೆಗಿದ್ದ ಏಳೆಂಟು ಜನ ಕಾರ್ಯಕರ್ತರನ್ನು ಬಂಧಿಸುತ್ತಾರೆ. ಜನಗಣತಿಯ ಮುಖ್ಯ ದಿನದಂದು ರಾತ್ರಿ ಜಾಹೀರ ಸಭೆ ನಡೆಸಲಾಗುತ್ತದೆ. ಜನರೆಲ್ಲಾ ತಮ್ಮ ಮನೆಗಳಿಗೆ ಕೀಲಿ ಹಾಕಿ ಭಾಷಣ ಕೇಳಲು ಬರುತ್ತಿದ್ದರು. ಇದರಿಂದಾಗಿ ಬ್ರಿಟಿಷರು ಕೈಕೊಂಡ ಜನಗಣತಿ ಕಾರ್ಯ ವಿಫಲವಾಗುತ್ತದೆ. ಸ್ವಾತಂತ್ರ್ಯ

ಚಳುವಳಿಯಲ್ಲಿ ಪುರುಷರಿಗೆ ಹೇಗೆ ಬೆಂಬಲ ಸೂಚಿಸಬೇಕು ಮತ್ತು ಅವರ ಹಿಂದಿನ ಶಕ್ತಿಯಾಗಿ ಯಾವ ನೆಲೆಯಲ್ಲಿ ನಿಲ್ಲಬೇಕೆಂಬುದನ್ನೆಲ್ಲಾ ತಿಳಿಸಿಕೊಡುತ್ತಿದ್ದರು. ಇದಲ್ಲದೆ ಸ್ವದೇಶಿ ಪ್ರಚಾರ. ಸ್ವರಾಜ್ಯಕ್ಕಾಗಿ ಹೋರಾಡುವ ಮನೋಭಾವ ಮುಂತಾದ ಗುಣಗಳನ್ನು, ದೇಶಪ್ರೇಮವನ್ನು ಜನಮಾನಸದಲ್ಲಿ ಇವರು ಬಿತ್ತುತ್ತಿದ್ದರು.

ಶ್ರೀಮತಿ ಸೋಹನಿಯವರು ತಮ್ಮ ದವಾಖಾನೆಯನ್ನು ಮುಚ್ಚಿ ತನು ಮನ ಧನದಿಂದ ಹೋರಾಟದಲ್ಲಿ ಸಕ್ರೀಯವಾಗಿ ಭಾಗವಹಿಸಿದ್ದರು. ಶ್ರೀಮತಿ ಶಾಂತಬಾಯಿ ಕೊಪ್ಪಳವರು ತಮ್ಮ ಪತಿ ಸೆರೆಮನೆ ಸೇರಿದರೂ ಮನೆ ಮಾರು ಮೇಲಿನ ಮೋಹ ಬಿಟ್ಟ ಸ್ವಾತಂತ್ರ್ಯ ಹೋರಾಟಕ್ಕಾಗಿ ಟೊಂಕ ಕಟ್ಟಿ ದುಡಿದಿದ್ದಾರೆ. ಇವರಿಬ್ಬರ ಮುಖಂಡತ್ವದಲ್ಲಿ ಬೆಳಗಾವಿಯ ಸೇವಕಿಯರು ಮನೆಮನೆಗೆ ಹೋಗಿ ಉಪ್ಪು ಮಾರಿದರಲ್ಲದೆ ಖಾದಿ ಮತ್ತು ಸ್ವದೇಶಿ ವಸ್ತುಗಳ ಪ್ರಸಾರ ಮಾಡಿದರು. 'ಸ್ವದೇಶಿ ವಸ್ತು ಪ್ರಸಾರಕ ಮಂಡಳ' ಎಂಬ ಸಂಸ್ಥೆಯ ಮುಖಾತರ ಜನರಿಗೆ ಸ್ವದೇಶಿ ವಸ್ತುಗಳನ್ನು ಪೂರೈಸುವ ಏರ್ಪಾಟು ಮಾಡಿದರು. ಮನೆಮನೆಗೆ ಚರಕಾಗಳನ್ನು ಹಂಚಿ ನೂಲುವ ಸ್ಪರ್ಧೆಗಳನ್ನು ಹಮ್ಮಿಕೊಂಡು ಮಹಿಳೆಯರಲ್ಲಿ ಖಾದಿ ಕಾರ್ಯದ ಆಸ್ತಿಯನ್ನು ಕುದುರಿಸಿದರು. ಈ ದೇಶ ಸೇವಕಿಯರ ಪ್ರಯತ್ನದಿಂದಾಗಿ ಬಾರ್ ಅಸೋಸಿಯೇಶನ್‌ದಲ್ಲಿ ಚರಕಾ ತಿರುಗುವಂತಾಯಿತು. ಶ್ರೀಮತಿ ಗಂಗೂಬಾಯಿ ಸೊಹನಿ, ತುಳಸಾಬಾಯಿ ಆನಿಖಿಂಡಿ, ಕಾಶೀತಾಯಿ ಗರ್ದೆ ಮೊದಲಾದ ದೇಶ ಸೇವಕಿಯರು ಮಹಿಳಾ ಧುರೀಣರಿಗೆ ನೆರವಾಗುತ್ತಿದ್ದರು.

ಬೆಳಗಾವಿ ಜಿಲ್ಲೆಯ ಮಹಿಳೆಯರು ಪುರುಷರಿಗೆ ಸರಿ ಸಮಾನರಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಕಾರ್ಯ ಮಾಡಿದ್ದಾರೆ. ಅವರ ಕ್ರೀಯಾಶೀಲ ಪಾಲುಗಾರಿಕೆಯಿಂದ ಚಳುವಳಿಗೆ ಒಂದು ಹೊಸ ಸಂಚಲನ ಮೂಡಿ ಬಂದಿತ್ತು. ಇದಲ್ಲದೆ ಚಳುವಳಿಯಲ್ಲಿ ಭಾಗವಹಿಸಬೇಕೆಂಬ ಮನೋಭಾವದವರಿಗೆ ಸಂಜೀವಿನಿಯಂತೆ ಶಕ್ತಿ ತುಂಬಿದವರು ಈ ಮಹಿಳೆಯರು. ಅವರಲ್ಲಿಯ ಧೈರ್ಯ ಸಾಹಸವನ್ನು ಮೆಚ್ಚಲೇಬೇಕು. ಪ್ರಭಾತಫೇರಿ ಹೊರಡಿಸಬಾರದೆಂದು ಪೋಲೀಸರು ೧೪೪ ನೇ ಕಲಂ ಅನ್ನು ಜಾರಿಗೊಳಿಸಿದರು. ಈ ಮಹಿಳೆಯರು ಆ ೧೪೪ ನೇ ಕಲಂನ್ನು ಧಿಕ್ಕರಿಸಿ ಪೋಲೀಸರ ಹಾಗೂ ಬ್ರಿಟಿಷರ ಕಾನೂನಿಗೆ ಹೆದರದೆ ಪ್ರಭಾತಫೇರಿಯನ್ನು ನಡೆಸುತ್ತಾರೆ. ಪೋಲೀಸರು ಈ ಮಹಿಳೆಯರ ಮೇಲೆ ಕೈ ಮಾಡಿ ಅವಮಾನಕರ ನುಡಿಗಳನ್ನಾಡಿದರೂ ಅವರು ಕಡೆತನಕ ಹೋರಾಡಿ ಕೈಯಲ್ಲಿ ತಾವು ಹಿಡಿದ ಸ್ವಾತಂತ್ರ್ಯದ ಧ್ವಜದ ಕೋಲನ್ನು ಬಿಡುವುದಿಲ್ಲ. ಶ್ರೀಮತಿ ಲಕ್ಷ್ಮೀಬಾಯಿ ಸೊಹನಿ, ಶಾಂತಾಬಾಯಿ ಕೊಪ್ಪಳ, ಗಂಗೂತಾಯಿ ಸೊಹನಿ, ತುಳಸಾಬಾಯಿ ಆನಿಕಿಂಡಿ, ಕಾಶೀತಾಯಿ ಗರ್ದೆ, ಶ್ರೀಮತಿ ಗಾವಡೆ, ಮುರುಕುಂಬಿ ಮೊದಲಾದ ಸುಮಾರು ಹದಿನೇಳು ಜನ ಮಹಿಳೆಯರನ್ನು ಕಂಪನಿ ಸರಕಾರ ಬಂಧಿಸಿ ಪ್ರತಿಯೊಬ್ಬರಿಗೆ ನಾಲ್ಕು ತಿಂಗಳು ಸಹಶ್ರಮ ಶಿಕ್ಷೆಯನ್ನು ವಿಧಿಸುತ್ತದೆ.

ಈ ಹಿಂದೆ ಹೇಳಿದಂತೆ ಬ್ರಿಟಿಷರು ಒಡೆದು ಆಳುವಲ್ಲಿ ನಿಪುಣರು. ಚಳುವಳಿಕಾರರ ಚಳುವಳಿಯನ್ನು ಸೆದೆಬಡಿಯುವುದಕ್ಕಾಗಿ ಸರಕಾರಕ್ಕೆ ಸಹಾಯ ಮಾಡುವ ಕೆಲವು ಜನ ಸರಕಾರಿ ನಿಷ್ಠರನ್ನು ತಮ್ಮ ಕಡೆಗೆ ಸೆಳೆಯುತ್ತಿದ್ದರು. ಚಳುವಳಿಯು ನಡೆಯಬಾರದೆಂದು ಇದರಿಂದ ಶಾಂತತೆಗೆ ಭಂಗ ಉಂಟಾಗಬಹುದೆಂದು ಜನರಲ್ಲಿ ತಿಳುವಳಿಕೆ ಮೂಡಿಸಬೇಕೆಂದು ಇವರಿಗೆ ಹೇಳಿ ಶಾಂತತಾ ಕಮೀಟಿಯನ್ನು ಸ್ಥಾಪಿಸಿದರು. ಇದಕ್ಕೆ ಸಂಬಂಧಿಸಿದಂತೆ ಜಿಲ್ಲೆಯಲ್ಲಿ ಅಲ್ಲಲ್ಲಿ ಸಭೆಗಳು ನಡೆಯುತ್ತಿದ್ದವು. ಬೈಲಹೊಂಗಲದ ಶ್ರೀ ಮಲ್ಲನಾಯಕ ಬೆಳಗಾವಿಯ ಶ್ರೀ ಎಸ್. ಎಸ್. ಅಂಗಡಿ, ಭೀಮಪ್ಪಾ ಧಾರವಾಡ, ಚೌಗಲೆ ವಕೀಲ, ದಳವಿ ವಕೀಲ, ಮೋರೋಪಂತ ಮರಾಠೆ ವಕೀಲ, ನಗರಕರ್ ವಕೀಲ್, ಕೌಜಲಗಿ ವಕೀಲ್, ಸವದತ್ತಿ ಮತ್ತು ಹುಕ್ಕೇರಿಯ ಸಿದ್ದನಾಯಕ ವಕೀಲ್, ಸಂಕೇಶ್ವರದ ಅಳತೇಕರ್ ಶಾಸ್ತ್ರಿ, ಮೊದಲಾದ ರಾಜ ನಿಷ್ಠರು ಈ ಸಭೆಗಳಲ್ಲಿ ಭಾಗವಹಿಸಿ ಬ್ರಿಟಿಷರಿಗೆ ಸಾಥ ಕೊಡುತ್ತಿದ್ದರು. ಇದಲ್ಲದೆ ಕಾಂಗ್ರೆಸನ್ನು ಟೀಕಿಸುತ್ತಿದ್ದರು. ಗಾಂಧೀಜಿ ಜನರನ್ನು ತಪ್ಪು ದಾರಿಗೆ ಹಚ್ಚುತ್ತಾರೆಂದು ಅವರು ಹಳಿಯುತ್ತಿದ್ದರು. ಬೆಳಗಾವಿಯ ಕೆಲವು ಪತ್ರಿಕೆಗಳು ಬ್ರಿಟಿಷರ ಪರವಾಗಿಯೇ ಇದ್ದವು. ಮರಾಠಿ ಸಾಪ್ತಾಹಿಕ ಪರೀಕ್ಷಿಕ ಪತ್ರಿಕೆ, ಪ್ರಜಾಧ್ವನಿ ಪತ್ರಿಕೆ ಇವು ಕಾಂಗ್ರೆಸ್ಸಿನ ವಿರುದ್ಧವಾಗಿ ಸುದ್ದಿಯನ್ನು ಪ್ರಕಟಿಸುತ್ತಿದ್ದವು. ಇದಲ್ಲದೆ ಚಳುವಳಿಯ ಬಗ್ಗೆ ಟೀಕೆಯನ್ನು ಮಾಡಿತ್ತಿದ್ದವು. ಜನರು ಈ ಪತ್ರಿಕೆಯನ್ನು ದುಡ್ಡುಕೊಟ್ಟುಕೊಂಡು ಯಾರು ಓದುತ್ತಿರಲಿಲ್ಲ. ಬ್ರಿಟಿಷ ಸರಕಾರ ಕೊಡುತ್ತಿರುವ ಉದಾರ ನೆರವಿನಿಂದ ಈ ಪತ್ರಿಕೆಗಳು ನಡೆಯುತ್ತಿದ್ದವು.

ಬ್ರಿಟಿಷ ಸರಕಾರ ಏನೆಲ್ಲಾ ತಂತ್ರಗಾರಿಕೆ ಮಾಡಿದರೂ ಸ್ವಾತಂತ್ರ್ಯ ಕುರಿತಾದ ಮನೋಭಾವ ಎಂದೂ ಬದಲಾಗಲಿಲ್ಲ. ದಬ್ಬಾಳಿಕೆ ಅಂಗವಾಗಿ ಸರಕಾರವು ದೇಶಪಾಂಡೆ, ಕುಲಕರ್ಣಿ ವತನದಾರರ ವತನ ಕಾಲಸಾ ಮಾಡುವ ನೋಟಿಸನ್ನು ಜಾರಿಗೊಳಿಸಿದರು. ಕೆಲವರ ವತನಗಳನ್ನು ಕಾಲಸಾ ಮಾಡಿದರು. ಚಳುವಳಿಗೆ ಅನುಕೂಲವಿದ್ದವರಲ್ಲಿ ಶ್ರೀಪಾದ ಗುಂಡೇ ಕುಲಕರ್ಣಿ ಇವರಂತಹ ಕೆಲಸಗಾರರನ್ನು ಸೇವೆಯಿಂದ ವಜಾಗೊಳಿಸಿದರು. ಇದಲ್ಲದೆ ಅವರ ಹೆಸರಿಗಿದ್ದ ಜಮೀನು ಮತ್ತು ಆಸ್ತಿಯನ್ನು ಕೂಡಾ ಕಂಪನಿ ಸರಕಾರ ತನ್ನ ವಶಕ್ಕೆ ತೆಗೆದುಕೊಂಡಿತು. ಚಳುವಳಿಯಲ್ಲಿ ಭಾಗವಹಿಸಿದ್ದಕ್ಕಾಗಿ ಬೆಳಗಾವಿಯ ಹದಿನಾಲ್ಕು ಜನ ವಕೀಲರ ಸನ್ನದ್ದು ರದ್ದುಗೊಳಿಸಲಾಯಿತು. ಆಶ್ಚರ್ಯಕರ ಸಂಗತಿಯೆಂದರೆ ಪುರುಷರು ಚಳುವಳಿಯಲ್ಲಿ ಭಾಗವಹಿಸಿದರೆ ಅವರ ಮನೆಯ ಹೆಣ್ಣು ಮಕ್ಕಳನ್ನು ಕಂಪನಿ ಸರಕಾರ ಪೀಡಿಸುತ್ತಿತ್ತು. ಹಾಗೇಯೇ ಮಹಿಳೆಯರು ಚಳುವಳಿಯಲ್ಲಿ ಭಾಗವಹಿಸಿದಾಗ ಅವರ ಗಂಡಂದಿರನ್ನು ಕೂಡಾ ಬ್ರಿಟಿಷರು ಬಂಧಿಸಿದ್ದು ಉಂಟು. ಇದಲ್ಲದೆ ಚಳುವಳಿಗೆ ಸಹಕರಿಸಿದ ಎಲ್ಲರನ್ನೂ ಬಂಧಿಸುತ್ತಿದ್ದರು. ಸತ್ಯಾಗ್ರಹಿಗಳನ್ನು ಮೋಟಾರಿನಿಂದ ಒಯ್ದುದಕ್ಕಾಗಿ ಡ್ರೈವರ್‌ನನ್ನು ಕೂಡಾ ಬಂಧಿಸಿದ್ದಾರೆ. ಹೀಗೆ ವಿವಿಧ ರೀತಿಯ ದಬ್ಬಾಳಿಕೆಯನ್ನು ಮಾಡಿ ಚಳುವಳಿಯನ್ನು ಹತ್ತಿಕ್ಕಬೇಕೆಂದು ಕಂಪನಿ ಸರಕಾರ ಮಾಡಬಾರದ ಕೆಲಸಗಳನ್ನು ಮಾಡಿತು. ಚಳುವಳಿಯ ಕೆಲಸ ಪ್ರಕಟಿಸಿದ್ದಕ್ಕಾಗಿ ಬೆಳಗಾವಿ ತರುಣಭಾರತ ಪತ್ರಿಕೆಯಿಂದ ಆ ಕಾಲದಲ್ಲಿ ಜಾಮೀನಿಗಾಗಿ ಎರಡು ಸಾವಿರ ರೂಪಾಯಿಯನ್ನು ಕೇಳಲಾಗಿತ್ತು. ಅಷ್ಟೊಂದು ಹಣ ಕೂಡಿಸಿಕೊಡಲು

ಆಗದ ಕಾರಣ ಕೆಲವು ದಿವಸ ಪತ್ರಿಕೆ ನಿಲ್ಲಿಸುವ ಪ್ರಸಂಗ ಬರುತ್ತದೆ. ಮುಂದೆ ಸತ್ಯಾಗ್ರಹಿಗಳು ಹಣವನ್ನು ಕೂಡಿಸಿ ಮತ್ತೆ ಪತ್ರಿಕೆಯನ್ನು ಪ್ರಾರಂಭ ಮಾಡುತ್ತಾರೆ.

ಕರ್ನಾಟಕದಾದ್ಯಂತ ಚಳುವಳಿಯ ಗಾಳಿಯು ತೀವ್ರವಾಗಿ ಬೀಸಿತು ಬೆಳಗಾವಿ ಜಿಲ್ಲೆಯ ಬಹಳಷ್ಟು ಸ್ವಾತಂತ್ರ್ಯ ಹೋರಾಟಗಾರರ ಜೊತೆ ಅವರ ಹೆಂಡಂದಿರೂ ಕೂಡಾ ಸಕ್ರೀಯವಾಗಿ ಭಾಗವಹಿಸಿ ತಮ್ಮ ದಿಟ್ಟತನವನ್ನು ಮೆರೆದಿದ್ದಾರೆ. ಗೋಕಾಕ ತಾಲೂಕ ಕಛೇರಿಯನ್ನು ಈ ಭಾಗದ ವೀರ ಮಹಿಳೆಯರು ಮುತ್ತಿಗೆ ಹಾಕಿದ್ದು ಅವರ ಸ್ವಾತಂತ್ರ್ಯ ಹೋರಾಟಕ್ಕೆ ಸಾಕ್ಷಿಯಾಗಿದೆ.ದಿವಂಗತ ವಾಮನರಾಯರ ನಿರ್ದೇಶನದಂತೆ ತಹಶೀಲ್ದಾರ ಕಛೇರಿಗೆ ಮುತ್ತಿಗೆ ಹಾಕಲು ಎತ್ತಿನ ಬಂಡಿಯಲ್ಲಿ ಕುಳಿತು ಕೆಲವು ಮಹಿಳೆಯರು ಬರುತ್ತಾರೆ. ಅಕ್ಕತಂಗೇರಹಾಳದ ಶ್ರೀಮತಿ ಗಂಗವ್ವಾ ಹೊಳೆಯಾಚಿ, ತಂಗೆವ್ವಾ ಬಡಿಗೇರ, ಚನ್ನಬಸವ್ವಾ ಬಡಕಲ್, ಬಾಳವ್ವಾಬೋರಗಲ್ಲ, ಕಾಶವ್ವಾ ಹೊಸಮನಿ, ಸರಸ್ವತಿಬಾಯಿ ಚೌಗಲೆ, ನಿಂಗವ್ವಾ ಚಿಕ್ಕೋಡಿ, ಸಿದ್ದವ್ವಾ ಗಾಡವಿ ಮುಂತಾದ ಮಹಿಳೆಯರು ಬೆನಚಿನಮರಡಿಗೆ ಬಂದು ಲಕ್ಷವ್ವಾ ಅರಬಾವಿಯವರನ್ನು ಕರೆದುಕೊಂಡು ಗೋಕಾವಿಗೆ ಬರುತ್ತಾರೆ. ಅಲ್ಲಿಯ ಬ್ಯಾಳಿಕಾಟಾದಿಂದ ಪ್ರಭಾತಫೇರಿ ತೆಗೆದು ಮಹಿಳಾ ಸತ್ಯಾಗ್ರಹಿಗಳು ಜಯಘೋಷ ಮಾಡುತ್ತಾ ಕಛೇರಿ ಕಡೆಗೆ ಸಾಗುತ್ತಾರೆ. ಸಿದ್ದಪ್ಪಾ ಬಡಿಗೇರ ಎಂಬ ಸ್ವಾತಂತ್ರ್ಯ ಹೋರಾಟಗಾರ ಕುರುಬನ ವೇಷವನ್ನು ತೊಟ್ಟು ಮಾರ್ಗದರ್ಶನ ಮಾಡುತ್ತಾನೆ. ಇದಲ್ಲದೆ ಮಲ್ಲಪ್ಪಾ ಕುಂದರಗಿ ಎಂಬುವನು ಹುಚ್ಚನ ವೇಷ ಹಾಕಿಕೊಂಡು ಚುರುಮರಿ ಮುಕ್ಕುತ್ತಾ ಮಹಿಳಾ ಸತ್ಯಾಗ್ರಹಿಗಳಿಗೆ ಕಚೇರಿಯ ದಾರಿಯನ್ನು ತೋರಿಸಿತ್ತಾ ಮುನ್ನಡೆಯುತ್ತಾನೆ. ಮಹಿಳಾ ಚಳುವಳಿಕಾರರು ತಹಶಿಲ್ದಾರ ಕಚೇರಿಯನ್ನು ತಲುಪಿ ಅದರ ಒಳಗೆ ಪ್ರವೇಶ ಮಾಡಿ ಕಾಗದ ಪತ್ರಗಳನ್ನೆಲ್ಲಾ ನಾಶಪಡಿಸುತ್ತಾರೆ. ಈ ಕಾರಣಕ್ಕಾಗಿ ಪೊಲೀಸರು ಮಹಿಳೆಯರಿಗೆ ಹಿಂಸೆಯನ್ನು ಕೊಡುತ್ತಾರೆ. ಅಲ್ಲದೆ ಈ ಮಹಿಳಾ ಸತ್ಯಾಗ್ರಹಿಗಳನ್ನೆಲ್ಲಾ ಬೆಳಗಾವಿಗೆ ಕರೆದೊಯ್ದು ನಂತರ ವಿಜಾಪುರ ಸೆರೆಮನೆಗೆ ಸ್ಥಳಾಂತರಿಸುತ್ತಾರೆ. ಅಲ್ಲಿ ಹನ್ನೊಂದು ತಿಂಗಳು ಇವರು ಸೆರೆಮನೆವಾಸವನ್ನು ಅನುಭವಿಸುತ್ತಾರೆ.

ಈ ಭಾಗದಲ್ಲಿ ಮಹಿಳೆಯರು ಮಾಡಿದ ಚಳುವಳಿ ಕುರಿತು ಎಲ್. ಎಸ್. ಶಾಸ್ತ್ರೀಯವರು ಸ್ವಾತಂತ್ರ್ಯ ಸಂಗ್ರಾಮ ಕೃತಿಯಲ್ಲಿ ಹೀಗೆ ಹೇಳುತ್ತಾರೆ. ಗಾಂಧೀಜಿಯವರ ವ್ಯಕ್ತಿತ್ವ ಸಾಮಾನ್ಯ ಹಳ್ಳಿಯ ಹೆಣ್ಣುಮಕ್ಕಳ ಮನಸ್ಸಿನ ಮೇಲೆಯೂ ಗಾಢವಾದ ಪ್ರಭಾವ ಬೀರಿತ್ತು. ಬೆಳಗಾವಿ ಜಿಲ್ಲೆಯ ಕುಂದರನಾಡಿನ ಚಳುವಳಿಯ ತೀವ್ರತೆಯನ್ನು ಕಂಡು ಬ್ರಿಟಿಷ ಸರಕಾರ ಆತಂಕಕ್ಕೆ ಒಳಗಾಗಿತ್ತು. ಕಾಂಗ್ರೆಸ್ ಸಂಸ್ಥೆಯ ಪ್ರಕಾರ ಸಾವಿರಕ್ಕೂ ಮಿಕ್ಕಿ ತೇಗು, ಎರಡನೂರಾ ಐವತ್ತಕ್ಕೂ ಹೆಚ್ಚು ಶ್ರೀಗಂಧ ಹಾಗೂ ಆರನೂರಕ್ಕಿಂತ ಹೆಚ್ಚು ಇತರೇ ಗಿಡಗಳು ನಾಶವಾಗಿದ್ದವು. ಎಪ್ರಿಲ್ ತಿಂಗಳಲ್ಲಿ ಮಹಾತ್ಮಾ ಗಾಂಧೀಜಿಯವರು ಈಚಲ ಗಿಡ ಕಡಿಯುವುದನ್ನು ಆರಂಭಿಸಿದ್ದೇ ತಡ ಬೆಳಗಾವಿ ಜಿಲ್ಲೆಯ ಹುದಲಿ ಸತ್ಯಾಗ್ರಹ ಶಿಬಿರದವರು ನೆರೆ ಹಳ್ಳಿಗಳಿಗೆ ಹೋಗಿ ಈಚಲ ಮರ ಕಡೆಯುವುದನ್ನು ಆರಂಭಿಸಿದರು. ಇದರ ಪ್ರಭಾವ ಎಷ್ಟಾಯಿತೆಂದರೆ ಇಡೀ ಬೆಳಗಾವಿ ಜಿಲ್ಲೆಯ ಎಲ್ಲಾ ಹಳ್ಳಿಗಳಿಗೂ

ಹಚ್ಚಿಕೊಂಡು ಆ ಜನ ಈಚಲ ಮರ ಕಡಿಯುವ ಚಳುವಳಿಯಲ್ಲಿ ತೊಡಗಿಕೊಂಡರು. ಇದೊಂದು ರೀತಿಯ ಜಂಗಲ್ ಸತ್ಯಾಗ್ರಹ. ಕಿತ್ತೂರು, ಸಂಪಗಾವ್, ಬೈಲಹೊಂಗಲ್, ಹೊಸೂರು, ಸಂಗೊಳ್ಳಿ, ಚಚಡಿ, ನೇಸರಗಿ, ದೇವಲಾಪೂರ, ಹುದಲಿ, ಹಿರೇಬಾಗೇವಾಡಿ, ಮುರಗೋಡ, ಪಾಶ್ಚಾಪೂರ, ಯಮಕನಮರಡಿ, ನಾಗನೂರ, ಕುರಹಟ್ಟಿ, ಶಿವಸಮುದ್ರ, ಅಕ್ಕತಂಗೇರಹಾಳ, ಅಥಣಿ, ಕೊಕಟನೂರ ಮೊದಲಾದ ಊರುಗಳಲ್ಲಿ ಈಚಲ ಮರಗಳ ಸಂಹಾರ ಕಾರ್ಯ ಜೋರಾಗಿಯೇ ನಡೆಯಿತು. ಸುಮಾರು ಐದನೂರು ಜನರು ಜೈಲಿಗೆ ಹೋಗುವಂತಾಯಿತು. ಜನ ಉತ್ಸಾಹದಿಂದ ರಣಹಲಿಗೆ ಬಾರಿಸುತ್ತಾ, ಕಹಳೆಯನ್ನು ಊದುತ್ತಾ ಮೆರವಣಿಗೆಯಲ್ಲಿ ಸಾಗಿ ಶಿಂಧಿ ಮರ ನೆಲಸಮ ಮಾಡುತ್ತಿದ್ದರು. ಹೆಣ್ಣುಮಕ್ಕಳು ಸತ್ಯಾಗ್ರಹಿಗಳಿಗೆ ರೊಟ್ಟಿ ಪಲ್ಲೆ ಉಣಬಡಿಸಿ ಆರತಿ ಮಾಡಿ ಕಳಿಸುತ್ತಿದ್ದರು. ಇದೊಂದು ಅಪರೂಪದ ದೃಶ್ಯ.

ಸ್ವಾತಂತ್ರ್ಯ ಹೋರಾಟಗಾರರು ಬ್ರಿಟಿಷರಿಗೆ ಮತ್ತು ಪೋಲೀಸರಿಗೆ ತೀವ್ರವಾದ ಪ್ರತಿರೋಧವನ್ನು ಒಡ್ಡುತ್ತಿದ್ದರಲ್ಲದೆ ಆಂಗ್ಲರ ಪಕ್ಷಪಾತಿಗಳಿಗೂ ತಕ್ಕ ಶಿಕ್ಷೆಯನ್ನು ಕೊಡುತ್ತಿದ್ದರು. "ಕುಂದರನಾಡಿನ ತಳಗಿನಹಟ್ಟಿ ಗ್ರಾಮದ ಶಿಂಧಿ ಮರ ಕಡಿಯಲು ಹುದಲಿ, ಅಕ್ಕತಂಗಿಯರಹಾಳದ ಸತ್ಯಾಗ್ರಹಿಗಳು ಹೋದಾಗ ಆಂಗ್ಲರ ಪಕ್ಷಪಾತಿ ಅಂಕಲಗಿಯ ಮಹಮದ್ ಇಸಾಕಸಾ ದೇಸಾಯಿ ಎಂಬವರು ತಮ್ಮ ಕೆಲವು ಅನುಯಾಯಿಗಳೊಂದಿಗೆ ಅಲ್ಲಿಗೆ ಹೋಗಿ ದಾರಿಯಲ್ಲಿ ಇಬ್ಬರು ಹುಡುಗರನ್ನು ಹೊಡೆದು ಅವರ ಜುಟ್ಟ ಕತ್ತರಿಸಿ ಹಾಕುತ್ತಾರೆ. ಈ ಸುದ್ದಿ ಹರಡಿದಾಗ ಅಕ್ಕತಂಗಿಯರಹಾಳ ಜಾತ್ರಿಯಲ್ಲಿ ಕುಸ್ತಿ ನೋಡಲು ಸೇರಿದ ಸಾವಿರಾರು ಜನರು ಅಲ್ಲಿಗೆ ಧಾವಿಸುತ್ತಾರೆ. ಇದರಿಂದ ಬೆದರಿದ ದೇಸಾಯಿ ಓಡಿಹೋಗಿ ಮದವಾಲದ ಕುಂಬಾರನ ಆವಿಗೆಯಲ್ಲಿ ಅವಿತುಕೊಳ್ಳುತ್ತಾನೆ. ರೊಚ್ಚಿಗೆದ್ದ ಜನ ಅಲ್ಲಿಗೂ ಬಿಡದೇ ಹೋಗಿ ಮನೆಯ ಚಾವಣಿಯ ಮೇಲೆ ಹತ್ತಿ ಕಲ್ಲು ಒಗೆಯ ಹತ್ತುತ್ತಾರೆ. ದೇಸಾಯಿಯವರು ಕೈ ಮುಗಿದು ಕ್ಷಮೆಯಾಚಿಸಿ ಜನರ ಆದೇಶದಂತೆ ಗಾಂಧಿ ಟೋಪಿ ಧರಿಸಿ ಗಾಂಧಿ ಮಹಾರಾಜ ಕೀ ಜೈ ಅಂದದ್ದರಿಂದ ಜನರು ಅವನನ್ನು ಜೀವಂತ ಬಿಡುತ್ತಾರೆ"[೪೧].

"ಕುಂದರನಾಡಿನ ಅಂಕಲಗಿಯ ದೇಸಾಯಿಯ ಈ ಘಟನೆಯು ಚಳುವಳಿಕಾರರಿಗೆ ಹೊಸ ಪ್ರೇರಣೆಯನ್ನು ಕೊಟ್ಟಿತು. ನೇಗಿನಾಳದಲ್ಲಿ ಶಿಂಧಿ ಮರ ಕಡೆಯುತ್ತಿದ್ದ ಸತ್ಯಾಗ್ರಹಿಗಳನ್ನು ನಾಡಕರ್ಣಿ ಎಂಬ ಫೌಜದಾರ ತಡೆಯಲು ಹೋದಾಗ ಅವನಿಗೆ ಮುತ್ತಿಗೆ ಹಾಕಿ ಜನರು ಅವನಿಂದಲೇ ಶಿಂಧಿ ಗಿಡ ಕಡಿಸುತ್ತಾರೆ. ಇದರಿಂದ ಹತಾಶಗೊಂಡ ಸರಕಾರ ಅನೇಕ ಊರುಗಳ ಮೇಲೆ ಪುಂಡಗಂದಾಯವನ್ನು ಹೇರಿ ದಬ್ಬಾಳಿಕೆಯಿಂದ ಹಣ ವಸೂಲಿ ಮಾಡತೊಡಗುತ್ತದೆ. ದಂಡ ವಸೂಲಿಗಾಗಿ ಮಹಿಳೆಯರ ಮೇಲಿನ ಒಡವೆಗಳನ್ನು ಕಿತ್ತುಕೊಳ್ಳಲಾಯಿತು"[೪೨]. ಇಂತಹ ಹಲವು ಬಗೆಯ ದೌರ್ಜನ್ಯಗಳಿಗೆ ಒಳಗಾದರು ಜನರು ಆಂಗ್ಲ ಆಡಳಿತಕ್ಕೆ ತಲೆಬಾಗುವುದಿಲ್ಲ. ಇದಲ್ಲದೆ ಆಂಗ್ಲರಿಗೆ ಸಹಾಯ ಮಾಡುವ ಅಧಿಕಾರಿಗಳಿಗೆ ಮತ್ತು ಪೊಲೀಸರಿಗೆ ಸಾಮಾಜಿಕ ಬಹಿಷ್ಕಾರ ಹಾಕಲಾಗುತ್ತಿತ್ತು. ಇದೊಂದು ಬಗೆಯ ಸಾಮಾಜಿಕ ಅಸಹಕಾರ ಚಳುವಳಿಯಾಗಿತ್ತು.

೧೯೩೩ ಸೆಪ್ಟಂಬರ್ ೩೦ ರಂದು ಮುಂಬೈ ಗವರ್ನರ್ ಲಾರ್ಡ್ ಬ್ರೆಬೋರ್ನ್ ಅವರು ಬೆಳಗಾವಿಗೆ ಬರುವವರಿದ್ದರು ಮುಂಜಾಗ್ರತೆಗಾಗಿ ಪೊಲೀಸರು ಜಯದೇವ ಕುಲಕರ್ಣಿ, ರಾಘವೇಂದ್ರ ಕಾಳೆ ಮತ್ತು ಗುಂಡೋಪಂಥ ಉಂಡಾಳೆ ಇವರನ್ನು ಬಂಧಿಸಿ ಸಾಂಗಲಿ ಜೈಲಿಗೆ ಕಳಿಸಲಾಗುತ್ತದೆ. ಈ ಅನ್ಯಾಯವನ್ನು ಪ್ರತಿಭಟಿಸಿ ಕುಲಕರ್ಣಿಯವರು ಮತ್ತು ಉಳಿದ ಇಬ್ಬರು ಉಪವಾಸ ಪ್ರಾರಂಭಿಸುತ್ತಾರೆ. ಕೇಸರಿ ಪತ್ರಿಕೆಯೂ ಪೊಲೀಸರ ಕೃತ್ಯವನ್ನು ಖಂಡಿಸುತ್ತದೆ. ಪ್ರಜಾ ಪರಿಷತ್ತಿನ ಆಗಿನ ಅಧ್ಯಕ್ಷರಾದ ಅಭ್ಯಂಕರ್ ವಕೀಲರು ದಿವಾನರನ್ನು ಕಂಡು ಆ ಮೂವರನ್ನು ಬಿಡುಗಡೆ ಮಾಡುವಂತೆ ಆಗ್ರಹಿಸುತ್ತಾರೆ. ಅವರ ಆಗ್ರಹದ ಮೇರೆಗೆ ಎಂಟು ದಿನಗಳ ಬಳಿಕ ಅವರ ಬಿಡುಗಡೆಯಾಗುತ್ತದೆ.

"ಗವರ್ನರ್ ಬೆಳಗಾವಿಗೆ ಬಂದಾಗ ಸರಕಾರ ಬೆಳಗಾವಿ ಸ್ಟೇಷನ್‌ನಿಂದ ಟಿಳಕವಾಡಿಗೆ ಹೋಗುವ ರಸ್ತೆಗೆ ಬ್ರೆಬೋರ್ನ ರೋಡ್ ಎಂದು ಹೆಸರಿಡಬೇಕೆಂದು ನಿರ್ಣಯಿಸುತ್ತದೆ"[೪೩]. ಆದರೆ ಸ್ವಾಭಿಮಾನಿಗಳಾದ ಚಳುವಳಿಕಾರರು ಸರಕಾರದ ಈ ಧೋರಣೆಯನ್ನು ಪ್ರತಿಭಟಿಸುತ್ತಾರೆ. ಶ್ರೀ ಬಾಬುರಾವ್ ಠಾಕೂರರು ರೇಲ್ವೆ ಮೇಲ್ ಸೇತುವೆ ಬಳಿ ಸಭೆ ಕೂಡಿ ಜನರಿಗೆ ಬ್ರಿಟಿಷರ ಸ್ವಾರ್ಥ ರಾಜಕಾರಣವನ್ನು ಮನವರಿಕೆ ಮಾಡಿ ಕೊಡುತ್ತಾರೆ. ಅಲ್ಲದೆ ಆ ರಸ್ತೆಗೆ ಕಾಂಗ್ರೆಸ್ಸ ರೋಡ ಎಂದು ಹೆಸರಿಡಬೇಕೆಂದು ಘೋಷಿಸುತ್ತಾರೆ. ಬಾಬುರಾವ್ ಠಾಕೂರರು ಮಾತನಾಡುವಾಗ ಫೌಜದಾರ ಅವರ ಮೇಲೆ ಹಲ್ಲೆ ಮಾಡುತ್ತಾನೆ. ಈ ತಿಕ್ಕಾಟದಲ್ಲಿ ಠಾಕೂರರ ಮೂಗಿಗೆ ಪೆಟ್ಟಾದರೂ ಅವರು ಭಾಷಣವನ್ನು ನಿಲ್ಲಿಸುವುದಿಲ್ಲ. ಸರಕಾರ ಅವರನ್ನು ಬಂಧಿಸುತ್ತದೆ. ಆದರೆ ಸಂತೋಷದ ಸಂಗತಿಯೆಂದರೆ ಆ ರಸ್ತೆಗೆ 'ಕಾಂಗ್ರೆಸ್ಸ ರಸ್ತೆ' ಎಂಬ ಹೆಸರೇ ಉಳಿಯುತ್ತದೆ.

ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಹಿರಿಯರು ಸಾಹಸ ಕಾರ್ಯ ಮೆರೆದಂತೆ ಕಿರಿಯರೂ ತಮ್ಮ ಸಾಮರ್ಥ್ಯಕ್ಕೆ ಮೀರಿ ಹೋರಾಟ ಮಾಡಿದ್ದು ಗಮನಾರ್ಹ ಸಂಗತಿಯಾಗಿದೆ. "ಪಾಶ್ಚಾಪೂರದ ವೆಂಕಣ್ಣಾ ಮಠದ ಅವರ ಮೂರನೆಯ ಹಾಗೂ ನಾಲ್ಕನೆಯ ಮಕ್ಕಳಾದ ನರಹರಿ ಮತ್ತು ಮಹಾದೇವ ಇವರ ಸಾಹಸ ಅತ್ಯಂತ ದೊಡ್ಡದು. ಕಿರಿಯವನಾದ ಮಹಾದೇವ ಆಗ ಹನ್ನೆರಡು ಹದಿಮೂರು ವರುಷದ ಬಾಲಕ. ಅದರೆ ಆತ ಮಾಡಿದ ಕಾರ್ಯ ದೊಡ್ಡವರೂ ನಾಚುವಂತಹದು. ಪೊಲೀಸರು ಇವರಿಬ್ಬರನ್ನು ಬಂಧಿಸಿ ಬಸ್ಸಿನಲ್ಲಿ ಒಯ್ಯುತ್ತಿದ್ದಾಗ ಇಬ್ಬರೂ ಅವರಿಂದ ತಪ್ಪಿಸಿಕೊಂಡು ಪರಾರಿಯಾದದ್ದುಂಟು"[೪೪]. ನರಹರಿಯು ಅಣ್ಣೂ ಗುರೂಜಿಯವರ ಜೊತೆ ಕೂಡಿ ಕಾರ್ಯ ಮಾಡಿದರೆ ಮಹಾದೇವನು ಜಯದೇವರಾವ್ ಕುಲಕರ್ಣಿಯವರೊಂದಿಗೆ ಕೆಲಸ ಮಾಡಿದ್ದಾನೆ. ಜಯದೇವರಾವ್ ಅವರ ಘುಲಭಾಗ ಗಲ್ಲಿಯ ಕೇಂದ್ರ ಕಛೇರಿಯ ಕಾರ್ಯ ನಿರ್ವಹಣೆಯ ಕೆಲಸವು ಮಹಾದೇವನದಾಗಿದ್ದಿತು. ಹೇಳಿದ ಕಾರ್ಯವನ್ನು ಇವರಿಬ್ಬರು ಅತ್ಯಂತ ಪ್ರಾಮಾಣಿಕವಾಗಿ ಮತ್ತು ದಕ್ಷತೆಯಿಂದ ಮಾಡುತ್ತಿದ್ದರು. ಗುಪ್ತವಾಗಿ ವಿಧ್ವಂಸಕ ಕಾರ್ಯಗಳನ್ನು ಮಾಡುವಾಗ ಪೊಲೀಸರ ಕೈಗೆ ಸಿಕ್ಕು ಸಾಕಷ್ಟು ಹೊಡೆತ ಬಡೆತಗಳನ್ನು ಮಹಾದೇವ ತಿಂದಿದ್ದಾನೆ.

ಇವನ ವಿರುದ್ಧ ಅನೇಕ ಕಟ್ಲೆಗಳು ದಾಖಿಲಾಗಿದ್ದವು. ಪಿ. ಎಂ. ಲಾಡ್ ಎಂಬ ನ್ಯಾಯಾಧೀಶರು ಇಷ್ಟು ಚಿಕ್ಕ ವಯಸ್ಸಿನ ಹುಡುಗ ಇಂತಹ ಅಸಾಧ್ಯ ಕಾರ್ಯಗಳನ್ನು ಮಾಡಲಿಕ್ಕಿಲ್ಲವೆಂದು ಹೇಳಿ ಮಹಾದೇವನನ್ನು ದೋಷಮುಕ್ತಗೊಳಿಸುತ್ತಾರೆ. ಆದರೆ ರಾಷ್ಟ್ರಪ್ರೇಮವನ್ನು ಮೈಗೂಡಿಸಿಕೊಂಡ ಮಹಾದೇವ ವೆಂಗೂಲಾ ಟಪಾಲ ಬಸ್ ಲೂಟಿ, ತಂತಿ ಕತ್ತರಿಸುವುದು, ಬುಲೆಟಿನ್ ಹಂಚುವುದು, ಪೋಲೀಸರ ಚಲನ ವಲನ ತಿಳಿದುಕೊಳ್ಳುವುದು ಇಂತಹ ಹಲವಾರು ವಿಧ್ವಂಸಕ ಕೆಲಸಗಳಲ್ಲಿ ಸಕ್ರೀಯವಾಗಿ ಭಾಗವಹಿಸುತ್ತಿದ್ದ. ಮಹಾದೇವನ ಸಾಹಸ ಮತ್ತು ಧೈರ್ಯ ಮೆಚ್ಚುವಂತಹದು. ಒಮ್ಮೆ ಶ್ರೀರಂಗ ಕಾಮತರ ನೇತೃತ್ವದಲ್ಲಿ ದೇಸೂರ ಸ್ಟೇಶನ್ ಸುಡುವ ವಿಚಾರವನ್ನು ಮಾಡಲಾಗಿತ್ತು. ಆ ಕಾರಣಕ್ಕಾಗಿ ತಂಡವೆಲ್ಲಾ ನಂದಿಹಳ್ಳಿ ಕತ್ತರಿಹತ್ತಿರ ಬಂದು ಸೇರಬೇಕಿತ್ತು. ಈ ವಿಷಯ ಬಾಲಕನಿಗೆ ತಿಳಿಯಿತು. ಆತನೂ ತಂಡದಲ್ಲಿ ಭಾಗಿಯಾಗುವವನಿದ್ದ. ದಾರಿ ಅಪರಿಚಿತವಿದ್ದರೂ ನಡುರಾತ್ರಿಯಲ್ಲಿ ಒಬ್ಬಂಟಿಗನಾಗಿ ಮಹಾದೇವನು ನಂದಿಹಳ್ಳಿ ಕತ್ತರಿ ಹತ್ತಿರ ಬಂದು ನಿಲ್ಲುತ್ತಾನೆ. ತಂಡವು ಮಹಾದೇವನನ್ನು ನೋಡಿ ಬೆರಗಾಗುತ್ತದೆ ಅಲ್ಲದೆ ಅವನ ಸಾಹಸ ಧೈರ್ಯವನ್ನು ಕೊಂಡಾಡುತ್ತದೆ.

ಅಪ್ಪಣ್ಣಾ ಹೊಳೆಯಾಚೆ ಮತ್ತು ಈರಯ್ಯಾ ಮಠಪತಿ ಎಂಬ ಬಾಲಕರು ಪ್ರಾಯದಲ್ಲಿ ಅತ್ಯಂತ ಚಿಕ್ಕವರು. ಆದರೆ ಚಳುವಳಿಕಾರರ ತಂಡದಲ್ಲಿ ಸೇರ್ಪಡೆಯಾಗಿ ಹಲವಾರು ಕಾರ್ಯಗಳನ್ನು ಮಾಡಿ ಸೈ ಎನಿಸಿಕೊಂಡಿದ್ದಾರೆ. ಒಮ್ಮೆ ಸುಲದಾಳ ಹತ್ತಿರ ಟೆಲಿಫೋನ ತಂತಿ ಕತ್ತರಿಸಲು ಇವರಿಬ್ಬರೂ ತಯಾರಾಗಿ ಗುಪ್ತವಾಗಿ ಆ ಕೆಲಸದಲ್ಲಿ ತೊಡಗುತ್ತಾರೆ. ಕಾವಲು ಪೋಲೀಸರು ಇವರನ್ನು ನೋಡಿದ ತಕ್ಷಣ ಎಲ್ಲಿ ಆತ ತಮ್ಮನ್ನು ಬಂಧಿಸುತ್ತಾನೆಯೋ ಎಂಬ ಸಂದೇಹದಿಂದ ಕೆಳಗಿದ್ದ ಮುಳ್ಳು ಕಂಠಿಗಳ ರಾಶಿಯ ಮೇಲೆ ಜಿಗಿದು ಬಿಡುತ್ತಾರೆ. ಮೈತುಂಬಾ ಗಾಯ ಮತ್ತು ರಕ್ತ ಚಿಮ್ಮುತ್ತದೆ. ಇದಾವುದನ್ನೂ ಲೆಕ್ಕಿಸದೇ ಪೋಲೀಸರ ಕೈಗೆ ಸಿಗದೇ ಪರಾರಿಯಾಗುತ್ತಾರೆ.

ಅಣ್ಣೂ ಗುರೂಜಿ ಶ್ರೀರಂಗ ಕಾಮತ ಹಾಗೂ ಜಯದೇವ ಕುಲಕರ್ಣಿಯವರನ್ನು ಒಬ್ಬ ವಿಶ್ವಾಸ ಘಾತಕನು ಸರಕಾರಕ್ಕೆ ತಿಳಿಸಿ ಇವರು ಬಂಧನಕ್ಕೆ ಒಳಗಾಗುವಂತೆ ಮಾಡುತ್ತಾನೆ ಕೇಳಕರ ಭಾಗದ ಶ್ರೀನಿವಾಸ ರಂಗೋ ಕುಲಕರ್ಣಿ ಎಂಬವರ ಮನೆಯಲ್ಲಿ ಇವರಿಬ್ಬರೂ ದಿನಾಂಕ ೨೧-೦೨-೧೯೪೩ ರಂದು ಮುಂದಿನ ಕಾರ್ಯಕ್ರಮದ ಬಗ್ಗೆ ಚರ್ಚಿಸಲು ಸೇರಿದಾಗ ಬಡಸ್ ಗ್ರಾಮದ ಒಬ್ಬ ಪರಿಚಿತನೇ ಜಮಾದಾರ ಚವ್ಹಾಣ ಎಂಬ ಪೋಲೀಸನಿಗೆ ಸುಳುಹು ಕೊಡುತ್ತಾನೆ. ನೂರಾರು ಸಶಸ್ತ್ರ ಪೋಲೀಸರು ಇವರ ಮನೆಗೆ ನುಗ್ಗಿ ಮುತ್ತಿಗೆ ಹಾಕಿ ಅವರಿಬ್ಬರನ್ನು ಸೆರೆ ಹಿಡಿಯುತ್ತಾರೆ.

ಅಣ್ಣೂ ಗುರೂಜಿಯವರನ್ನು ವಿಜಾಪೂರದ ಚಾಂದಬಾವಡಿ ಹತ್ತಿರ ಒಂದು ಬಾಡಿಗೆ ಮನೆಯಲ್ಲಿ ಇದ್ದಾಗ ಬಂಧಿಸಲಾಗುತ್ತದೆ. ಅವರೂ ಕೂಡಾ ಪರಿಚಿತರೊಬ್ಬರ ಒಳ ಸಂಚಿನ

ಫಲವಾಗಿ ಬಂಧಿಸಲ್ಪಡುತ್ತಾರೆ. ಇವರ ಬಗ್ಗೆ ವಿಚಾರಣೆ ನಡೆದು ಕೊನೆಗೆ ೪೮ ತಿಂಗಳು ಜೈಲು ಶಿಕ್ಷೆಯಾಗುತ್ತದೆ. ಅದನ್ನು ಮುಗಿಸಿ ಹೊರಗೆ ಬರುವಾಗಲೇ ಮತ್ತೆ ಅವರನ್ನು ಜೈಲಿನೊಳಗೆ ತಳ್ಳಿ ಒಂದೂವರೆ ವರ್ಷ ಡೆಟನ್ಯು ಆಗಿ ಇರಿಸಲಾಗುತ್ತದೆ. ಐದು ಸಾವಿರ ರೂಪಾಯಿಯ ಆಶೆಗೆ ಬೇಟಗೇರಿ ಎಂಬಾತ ಮಾಡಿದ ವಿಶ್ವಾಸ ದ್ರೋಹದ ಕೆಲಸದಿಂದಾಗಿ ಅಣ್ಣೂ ಗುರೂಜಿಯುವರನ್ನು ಬಂಧಿಸಲಾಗಿತ್ತು.

"ಅದೇ ತಿಂಗಳು ವಾಲಿ ಚೆನ್ನಪ್ಪಾ ಅವರನ್ನು ಬೆಂಗಳೂರಿನಲ್ಲಿ ಬಂಧಿಸಿ ಬೆಳಗಾವಿ ಕ್ಯಾಂಪ ಜೈಲಿಗೆ ತಂದಿರಿಸಲಾಗಿತ್ತು. ಇವರನ್ನು ಹಿಡಿದು ಕೊಟ್ಟವರಿಗೂ ಕೂಡಾ ಐದು ಸಾವಿರ ಬಹುಮಾನವನ್ನು ಕಂಪನಿ ಸರಕಾರ ಘೋಷಿಸಿತ್ತು. ಶಂಕರ ಕಣಗಲಿ ಎಂಬ ಕಾರ್ಯಕರ್ತನು ರಾಮಚಂದ್ರ ವಡವಿಯವರ ಬಂಧನಕ್ಕೆ ಕಾರಣೀಭೂತನಾಗುತ್ತಾನೆ. ವಾಮನ ಬಿದರಿಯವರು ಮಾತ್ರ ಯಾರ ಕೈಗೂ ಸಿಗುವುದಿಲ್ಲ. ಆದರೆ ೧೯೪೪ ರ ಅಗಷ್ಟ ೯ ರಂದು ಗಾಂಧೀಜಿಯವರ ಆದೇಶದಂತೆ ಜಿಲ್ಲಾ ಕಾಂಗ್ರೆಸ್ ಕಛೇರಿಯಲ್ಲಿ ಪ್ರತ್ಯಕ್ಷರಾಗಿ ತಾವೇ ಬಂಧನಕ್ಕೆ ಒಳಗಾಗುತ್ತಾರೆ"[೪೫].

## ೩.೫ ಬಸವರಾಜ ಕಟ್ಟಿಮನಿಯವರ ಸಾಹಿತ್ಯದಲ್ಲಿ ಕುಂದರನಾಡಿನ ಚಳುವಳಿ

ಬಸವರಾಜ ಕಟ್ಟಿಮನಿಯವರು ಕುಂದರನಾಡನ್ನು ಸಮೀಪದಿಂದ ಕಂಡವರು. ಅವರು ಚಲೇಜಾವ್ ಚಳುವಳಿ ಅರವತ್ತರ ನೆನಪು ಎಂಬ ಕೃತಿಯಲ್ಲಿ ಹೀಗೆ ಹೇಳುತ್ತಾರೆ. ಬಸವರಾಜ ಕಟ್ಟಿಮನಿಯವರು ಸ್ವಾತಂತ್ರ್ಯ ಹೋರಾಟಗಾರರಾಗಿ ಗಮನ ಸೆಳೆಯುವಂತೆ ಚಳುವಳಿಗೆ ಪ್ರೇರಣೆ ನೀಡುವ ಸಾಹಿತ್ಯ ಕೃತಿಗಳನ್ನು ರಚಿಸುವುದರ ಮೂಲಕ ಭಾರತ ಸ್ವಾತಂತ್ರ್ಯ ಸಂಗ್ರಾಮದ ಒಂದು ಭಾಗವಾಗುತ್ತಾರೆ. ಸ್ವಾತಂತ್ರ್ಯ ಚಳುವಳಿಯ ತೀವ್ರವಾದ ಪ್ರಭಾವ ಕಟ್ಟಿಮನಿಯವರ ಮೇಲೆ ಆದದ್ದು ಅವರ ಬದುಕಿಗೆ ಒಂದು ಹೊಸ ತಿರುವನ್ನು ತಂದು ಕೊಡುತ್ತದೆ. ಕಟ್ಟಿಮನಿಯವರು ಗದುಗಿನ 'ಕರ್ನಾಟಕ ಬಂಧು' ಪತ್ರಿಕೆಯ ಕೆಲಸ ಬಿಟ್ಟು ೧೯೪೨ ರ ಎಪ್ರಿಲ್ ದಲ್ಲಿ ಧಾರವಾಡಕ್ಕೆ ಬರುತ್ತಾರೆ. ಶಂಬೂರಾವ್ ಜಠಾರ್ ಅವರು ಹೊರಡಿಸುತ್ತಿದ್ದ ದಿನಪತ್ರಿಕೆಯಲ್ಲಿ ಕೆಲಸಕ್ಕೆ ಸೇರುತ್ತಾರೆ. ಆಗ ಅವರಿಗೆ ಇಪ್ಪತ್ತಮೂರು ವಯಸ್ಸು. ಇವರು ಪತ್ರಕರ್ತರಾಗಿರುವುದರಿಂದ ದೇಶದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ವಿದ್ಯಮಾನಗಳನ್ನೆಲ್ಲ ತಿಳಿದುಕೊಂಡವರಾಗಿದ್ದರು. ಅಗಷ್ಟ ೮ ರ ಘಟನೆಯಿಂದ ಭಾವ ಪರವಶರಾಗುತ್ತಾರೆ. ಒಂದು ರೀತಿ ಹುಚ್ಚು ಹಿಡಿದವರಂತೆ ಅವರು ಅಲೆದಾಡುತ್ತಾರೆ. ಖಾದಿಧಾರಿ ಯುವಕನೊಬ್ಬ ಇವರನ್ನು ಕಂಡು ತಾಯಿ ಭಾರತಿಗಾಗಿ ನಾವು ಪ್ರಾಣಾರ್ಪಣೆ ಮಾಡುವ ಕಾಲ ಬಂದಿದೆ. ಭಗತಸಿಂಗ, ಚಂದ್ರಶೇಖರ ಆಝಾದರ ಹಾಗೆ ನೀವು ತಯಾರಾಗಿದ್ದೀರಾ ? ಎಂದು ಸವಾಲು ಹಾಕುತ್ತಾನೆ. ಕಟ್ಟೀಮನಿಯವರು ಯಾವುದೇ ಸಂದೇಹವಿಲ್ಲದೆ ಭಾರತಮಾತೆಯ ಸೇವೆಗೆ ತಾವು ಸಿದ್ಧರೆಂದು ಹೇಳುತ್ತಾರೆ. ಆ ವ್ಯಕ್ತಿಯು ತನ್ನ ಜೇಬಿನಿಂದ ಬ್ಲೇಡನ್ನು ತೆಗೆದು ಮುಂಗೈಗೆ ಗಾಯವನ್ನು ಮಾಡಿಕೊಂಡು ಆ ರಕ್ತದಿಂದ ಕಟ್ಟಿಮನಿಯವರ ಹಣೆಗೆ ತಿಲಕವಿಟ್ಟು ಕಂಪಿಸುವ ಧ್ವನಿಯಲ್ಲಿ ಇಂಕ್ವಿಲಾಬ್ ಜಿಂದಾಬಾದ ಎಂದು ಹೇಳುತ್ತಾನೆ ಈ

ಕ್ರಾಂತಿಯ ಘೋಷಣೆಯು ಅವರ ಮನಸ್ಸಿನಲ್ಲಿ ದುಮುಗುಡುತ್ತದೆ. ಮರುದಿನ ಕಡಪಾ ಮೈದಾನದಲ್ಲಿ ಡಾ॥ ಕಬ್ಬೂರರ ಭಾಷಣ ಮತ್ತು ಅವರ ಬಂಧನವಾಗುತ್ತದೆ. ಪೋಲೀಸರು ಸಭಿಕರ ಮೇಲೆ ಲಾಠೀ ಚಾರ್ಜ ಮಾಡುತ್ತಾರೆ. ಕಟ್ಟಿಮನಿಯವರ ಬೆನ್ನಿಗೆ ಏಟು ಬೀಳುತ್ತದೆ.

ಕಟ್ಟಿಮನಿಯವರು ದಿನವಿಡೀ ಕೆಲಸ ಮಾಡಿ ರಾತ್ರಿ ಪತ್ರಿಕೆಗೆ ಲೇಖನಿಗಳನ್ನು ಬರೆದು ತುಂಬಿಸುತ್ತಿದ್ದರು. ರಣಭೇರಿ ಪತ್ರಿಕೆಯ ಸಂಪಾದಕತ್ವವು ಇವರ ಹೊಣೆಯಾಗಿದ್ದಿತು. ಗಾಂಧಿ, ನೆಹರು, ಆಝಾದರ ಹೆಸರಿನಲ್ಲಿ ಇವರೇ ಲೇಖನಗಳನ್ನು ಬರೆದು ಪ್ರಸಾರ ಮಾಡುತ್ತಿದ್ದರು. ಕರಪತ್ರಗಳನ್ನು ಅಂಗಡಿಗಳ ಬಾಗಲಿಗೆ ಹಚ್ಚುವುದು, ವಿದ್ಯಾರ್ಥಿಗಳ ಸಭೆ ಕರೆದು ಸರಕಾರದ ದಮನ ನೀತಿಯನ್ನು ಖಂಡಿಸಿ ಭಾಷಣ ಮಾಡುತ್ತಿದ್ದರು. ಈ ಕಾರಣಕ್ಕಾಗಿ ಕಟ್ಟಿಮನಿಯವರನ್ನು ಬಂಧಿಸಿ ಆರು ತಿಂಗಳ ಹಿಂಡಲಗಾ ಜೈಲಿಗೆ ಕಳಿಸಲಾಯಿತು. ಸೆರೆಮನೆಯಲ್ಲಿ ಇದ್ದಾಗಲೂ ಸಹಿತ ಕಟ್ಟಿಮನಿಯವರು ಅಗಷ್ಟ ೯, ಸ್ವಾತಂತ್ರ್ಯದೆಡೆಗೆ, ಮಾಡಿಮಡಿದವರು ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಈ ಕೃತಿಗಳ ಮೂಲಕ ಜನರಲ್ಲಿ ಸ್ವಾತಂತ್ರ್ಯದ ಕಿಡಿಯನ್ನು ಹಚ್ಚಿದ್ದಾರೆ. ಅಗಷ್ಟ ೯ ಕಥಾ ಸಂಕಲನದಲ್ಲಿಯ ಕತೆಗಳಿಗೆ ಸ್ವಾತಂತ್ರ್ಯ ಚಳಿವಳಿಯ ಹಿನ್ನಲೆ ತಳಪಾಯವಾಗಿ ನಿಂತಿದೆ. ಸ್ವಾತಂತ್ರ್ಯ ಹೋರಾಟದಲ್ಲಿ ಬಂಧಿಯಾಗಿ ಅತ್ತ ಗಂಡ ಸೆರೆಮನೆಯಲ್ಲಿದ್ದರೆ ಇತ್ತ ಏಕಾಂಕಿತನ ಕಿತ್ತು ತಿನ್ನುವ ಬಡತನ, ವಿರಹ, ಅಸಹಾಯಕತೆ, ಕಾಮುಕರ ಕುಚೇಷ್ಟೆಗಳ ಮಧ್ಯ ತನ್ನತನ ಕಾಯ್ದುಕೊಂಡು ಹೋದ ಸಾಧ್ವಿಯೊಬ್ಬಳ ಬದುಕಿನ ದಾರುಣ ಚಿತ್ರ ಈ ಕತೆಯಲ್ಲಿದೆ. ಈ ಕತೆಯಲ್ಲಿ ಉದ್ಧರಿಸಿದ ಕಟ್ಟಿಮನಿಯವರ ಸಾಲುಗಳು ಹೋರಾಟಗಾರರ ರಾಷ್ಟ್ರ ಪ್ರೇಮಕ್ಕೆ ಮತ್ತು ಬಲಿದಾನಕ್ಕೆ ಸಾಕ್ಷಿಯಾಗುತ್ತವೆ.

**"ಬೀಳಲು ನೆತ್ತರು ಕಾರಿ**
**ಹೋದರೆ ಹೋಗಲಿ ತಲೆ ಹಾರಿ**
**ತಾಯ್ನಾಡಿನ ಮೇಲ್ಮೆಗೆ ಹೋರಿ**
**ಸ್ವಾತಂತ್ರ್ಯದ ಸ್ವರ್ಗಕ್ಕೇರಿ"**

"ಈ ಸಾಲುಗಳು ಕಟ್ಟಿಮನಿಯವರ ಒಂದು ಕತೆ ಅಥವಾ ಸಂಕಲನಕ್ಕೆ ಮಾತ್ರ ಸೀಮಿತವಲ್ಲ. ಇಡೀ ಚಳುವಳಿಗೆ ಬರೆದ ಮುನ್ನುಡಿಯಂತಿದೆ"[೪೬].

ಕಟ್ಟಿಮನಿಯವರು ಬರೆದ ಇನ್ನೊಂದು ಕತೆ ರಕ್ತಧ್ವಜ. ಉತ್ತರ ಭಾರತದಲ್ಲಿ ನಡೆದ ಘಟನೆಯೊಂದನ್ನು ಕೇಂದ್ರವಾಗಿಟ್ಟುಕೊಂಡು ರಚಿಸಿದ ಈ ಕತೆಯು ಕಿಸನ್ ಎಂಬ ಹತ್ತು ವರ್ಷದ ಹಸುಳೆಯ ಬಲಿದಾನದ ಚಿತ್ರವಾಗಿದೆ. ಕತೆಯ ತುಂಬ ದೇಶಪ್ರೇಮ, ಸ್ವಾತಂತ್ರ್ಯ, ಹೋರಾಟ, ಛಲ, ಕಲಿತನ ಈ ಗುಣಗಳು ಓದುಗರಲ್ಲಿ ಅಚ್ಚೊತ್ತುವಂತೆ ನೆಲೆ ಊರುತ್ತವೆ. ಕೋರ್ಟಿನ ಗೋಪುರದ ಮೇಲೆ ತ್ರಿವರ್ಣ ಧ್ವಜವನ್ನು ಹಾರಿಸಲು ಹೋದ ಹತ್ತು ವರ್ಷದ ಹುಡುಗನ ಮೇಲೆ ಪೋಲೀಸರು ಗುಂಡಿನ ದಾಳಿ ಮಾಡುತ್ತಾರೆ. ಅವನು ಮುಗಿಲಿನಿಂದ ಉರುಳುವ ಚಿಕ್ಕೆಯಂತೆ ಗೋಪುರದಿಂದ ನೆಲಕ್ಕುರುಳುತ್ತಾನೆ. ಈ ಸಂಗತಿಯನ್ನು ಕಟ್ಟಿಮನಿಯವರು ತುಂಬಾ ಪರಿಣಾಮಕಾರಿಯಾಗಿ

ನಿರೂಪಿಸುತ್ತಾರೆ. "ಧ್ವಜ ಮಾತ್ರ ಡೌಲಿನಿಂದ ಗೋಪುರದಿಂದ ಹಾರಾಡುತ್ತಿತ್ತು. ಆ ಬಾಲ ವೀರನ ಬಿಸಿ ರಕ್ತದ ಕುಂಕುಮವನ್ನು ಧರಿಸಿಕೊಂಡು"[೬] ಎನ್ನುವ ಮಾತು ತುಂಬಾ ಔಚಿತ್ಯಪೂರ್ಣವಾಗಿದೆ.

ಹುತಾತ್ಮಾ ಎಂಬ ಇನ್ನೊಂದು ಕತೆಯಲ್ಲಿ ಬೆಳಗಾವಿ ಜಿಲ್ಲೆಯ ಹೋರಾಟಗಾರನೊಬ್ಬ ಸೆರೆಮನೆಯಲ್ಲಿದ್ದಾಗ ಅನುಭವಿಸಿದ ನರಕ ಸದೃಶ್ಯ ಯಾತನೆ ಮನಸ್ಸು ತಟ್ಟುತ್ತದೆ. ನಾಯಿ, ನರಿ ತಿನ್ನದ ಆಹಾರದಿಂದಾಗಿ ಆ ವ್ಯಕ್ತಿಯ ಆರೋಗ್ಯ ಕೆಟ್ಟು ಅವನು ಯಾತನೆಯನ್ನು ಅನುಭವಿಸುತ್ತಾನೆ. ತನ್ನ ವೈಯಕ್ತಿಕ ಆಸ್ತಿಯನ್ನು, ಬಂಧು ಬಾಂಧವರನ್ನು ಕಳೆದುಕೊಂಡು ತುತ್ತು ಕೂಳು ಗುಟುಕು ನೀರು ಸಿಗದೆ ನೆರಳಿ ಸತ್ತ ಹೃದಯ ವಿದ್ರಾವಕ ಚಿತ್ರವನ್ನು ಈ ಕತೆಯಲ್ಲಿ ಕಟ್ಟಿಮನಿಯವರು ಚಿತ್ರಿಸುತ್ತಾರೆ.

ಸ್ವಾತಂತ್ರ್ಯ ಚಳುವಳಿಯ ತೀವ್ರ ಹೋರಾಟದಲ್ಲಿ ಪ್ರಾಣ ಕಳೆದುಕೊಂಡವರವರಿಗೆ ಲೆಕ್ಕವಿಲ್ಲ. ಜನೇವರಿ ೨೬ ಮತ್ತು ಬಲಿ ಎಂಬ ಕತೆಯಲ್ಲಿ ಇಬ್ಬರು ಸಿಡಿಲು ಮರಿಗಳ ಸಾಹಸ ಗಾಥೆಯನ್ನು ಕಟ್ಟಿಮನಿಯವರು ನಿರೂಪಿಸುತ್ತಾರೆ. ಬಾಲಕನೊಬ್ಬ ಚಳುವಳಿಯಲ್ಲಿ ಧುಮುಕಿ ಬಂಧಿತನಾಗಿ ಜೈಲು ಸೇರುತ್ತಾನೆ. ಪರಿಕೀಯರ ದಬ್ಬಾಳಿಕೆಯನ್ನು ವಿರೋಧಿಸುವ ಅವನ ರೀತಿ ಅನನ್ಯವಾಗಿದೆ. ರಣಭೇರಿ ಎಂಬ ಕತೆಯಲ್ಲಿಯ ಬಾಲಕ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿ ತಂದೆ, ತಾಯಿ, ಶಾಲೆ, ಮನೆಗಳನ್ನು ತೊರೆದು ಸೆರೆಮನೆಯಲ್ಲಿ ವಾಸವಾಗುವ ಚಿತ್ರಣವಿದೆ. ಅಲ್ಲಿ ದೊರೆತ ಹಾಳೆಗಳಿಂದಲೇ ರಣಭೇರಿ ಹೆಸರಿನ ಕರಪತ್ರವನ್ನು ಈ ಬಾಲಕ ಹಂಚುತ್ತಾನೆ. ಈ ಕತೆಯ ಪಾತ್ರಕ್ಕೂ ಕಟ್ಟಿಮನಿಯವರಿಗೂ ಸಾಮ್ಯವಿದೆ. ಕಟ್ಟಿಮನಿಯವರೇ ಈ ಪಾತ್ರವಾಗಿ ಕತೆಯನ್ನು ಕಟ್ಟಿಕೊಂಡಂತಿದೆ. ಇವರಿಗೆ ಚಳುವಳಿಯ ಕಾವು ತಟ್ಟಿದ್ದರಿಂದ ಪೋಲೀಸರ ಲಾಠಿ ರುಚಿ ಅನುಭವಿಸಿದ್ದರಿಂದ ಕತೆಯು ನೈಜವೆನಿಸುತ್ತದೆ.

ಚಲೇಜಾವ್ ಚಳುವಳಿಯ ಬಿಸಿಯು ಹಳ್ಳಿಗಳಿಗೂ ತಟ್ಟಿತ್ತು. ಅಜ್ಞಾನ, ಮೌಢ್ಯ ಮತ್ತು ದಾರಿದ್ರ್ಯಗಳಲ್ಲಿ ಮುಳುಗಿದ ಸಾಮಾನ್ಯರಲ್ಲಿಯೂ ಅಸಾಮಾನ್ಯ ಶಕ್ತಿ ಇದ್ದುದನ್ನು ಕಟ್ಟಿಮನಿಯವರು ಗುರುತಿಸುತ್ತಾರೆ. ಪೋಲೀಸರ ದೌರ್ಜನ್ಯಕ್ಕೆ ಒಳಗಾದ ಸಾಧ್ವಿ ಸತಿ ನಾಗಮ್ಮನ ಆತ್ಮ ಸ್ಥೈರ್ಯ ಮೆಚ್ಚುವಂತಹದು. ನರ ರಾಕ್ಷಸರ ಅತ್ಯಾಚಾರಕ್ಕೆ ಒಳಗಾದ ಆಕೆ ಗಂಡನನ್ನು ಹೀಯಾಳಿಸಿ ಬೈದಾಗಸಿಂಹಿಣಿಯಂತೆ ಕೆರಳಿ ಬುಸುಗುಡುತ್ತಾರೆ. ಪೋಲೀಸರಿಗೆ ಛೀಮಾರಿ ಹಾಕುತ್ತಾಳೆ. ಈ ಸಂಗತಿಯನ್ನು ಒಳಗೊಂಡ ಅಜ್ಞಾತವಾಸಿ ಎಂಬ ಕತೆಯು ಬ್ರಿಟಿಷರ ಮತ್ತು ಪೋಲೀಸರ ದೌರ್ಜನ್ಯವನ್ನು ಬಹಿರಂಗವಾಗಿ ಟೀಕಿಸುತ್ತದೆ. ಇದರಂತೆ ಮೈಲಾರ ಮಹಾದೇವಪ್ಪನವರ ಸ್ವಾತಂತ್ರ್ಯ ಪ್ರೇಮವನ್ನು 'ಮೂವರು ಸೈನಿಕರು' ಎಂಬ ಕತೆಯಲ್ಲಿ ಹಿಡಿದಿಡುತ್ತಾರೆ. ಹೀಗೆ ಕಟ್ಟಿಮನಿಯವರ ಕಥಾ ಸಾಹಿತ್ಯವು ಸ್ವಾತಂತ್ರ್ಯ ಹೋರಾಟಗಾರರ ಬದುಕಿಗೆ ಮುನ್ನುಡಿ ಬರೆದಂತಿದೆ.

ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮಿಕಿದ ಕಟ್ಟಿಮನಿಯವರಿಗೆ ಬ್ರಿಟಿಷರು ಮಾಡುವ ಅನ್ಯಾಯಕ್ಕೆ ಪ್ರತಿರೋಧವಾಗಿ ಹೋರಾಟ ಮಾಡಿದ್ದಾರೆ. ಅವರು ತಮ್ಮ ಹೋರಾಟದ ಅನುಭವದ ಸಂಗತಿಯನ್ನು ಸ್ವಾತಂತ್ರ್ಯದೆಡೆಗೆ ಮತ್ತು ಮಾಡಿಮಡಿದವರು ಎಂಬ ಕಾದಂಬರಿಗಳಲ್ಲಿ ಮನಮುಟ್ಟುವಂತೆ ಚಿತ್ರಿಸಿದ್ದಾರೆ. ೧೯೪೨ ರ ಆಗಷ್ಟ ಚಳುವಳಿಯ ಸಂದರ್ಭದಲ್ಲಿ ಸುಮಾರು ಆರು ತಿಂಗಳು ಸೆರೆಮನೆಯಲ್ಲಿದ್ದ ಕಾರಣ ಅನೇಕ ಸಂಗತಿಗಳು ಅವರಿಗೆ ಕಾದಂಬರಿಯನ್ನು ರಚಿಸಲು ಪ್ರೇರಣೆಯನ್ನು ಒದಗಿಸಿವೆ. ಗಾಂಧೀಜಿಯವರ ಹೋರಾಟದ ಗುರಿ ಕೇವಲ ರಾಜಕೀಯ ಸ್ವಾತಂತ್ರ್ಯವಾಗಿರಲಿಲ್ಲ. ಅಜ್ಞಾನ, ಅಸಮಾನತೆ, ಬಡತನಗಳ ವಿರುದ್ಧ ಹೋರಾಡಿ ರಾಮರಾಜ್ಯ ಕಟ್ಟುವದಾಗಿತ್ತು. ರಾಜಕೀಯ ಸ್ವಾತಂತ್ರ್ಯ ಪರಿಪೂರ್ಣ ಸ್ವರಾಜ್ಯದ ಒಂದು ಭಾಗವೆಂದು ಗಾಂಧೀಜಿಯವರು ಭಾವಿಸಿದ್ದರು. ಗಾಂಧೀಜಿಯವರ ಈ ಕಲ್ಪನೆಯೇ ಕಟ್ಟಿಮನಿಯವರ 'ಸ್ವಾತಂತ್ರ್ಯದೆಡೆಗೆ' ಕಾದಂಬರಿಯ ವಸ್ತುವಾಗಿದೆ.

ಗಾಂಧೀಜಿಯವರ ಬಂಧನವಾದ ಬಳಿಕ ಅದರ ಪ್ರತಿಭಟನೆಗಾಗಿ ಬೆಳಗಾವಿಯಲ್ಲಿ ಹೋರಾಟ ನಡೆಯುತ್ತದೆ. ಈ ಹೋರಾಟದೊಂದಿಗೆಯೇ ಕಾದಂಬರಿಯು ಪ್ರಾರಂಭವಾಗುತ್ತದೆ. ಬ್ರಿಟಿಷ ಸರಕಾರಿ ಸೇವಕನ ಮಗನಾದ ಶೇಖರನು ಚಳುವಳಿಯಲ್ಲಿ ಭಾಗವಹಿಸಲು ತಯಾರಾಗುತ್ತಾನೆ. ಅತ್ತ ಪ್ರಭಾತಫೇರಿಯ ಜಯಜಯಕಾರ ಮಾಡುತ್ತಾ ಲಾಠಿ ಏಟು ತಿಂದು ಮನೆಗೆ ಬಂದರೆ ಮನೆಯಲ್ಲಿ ಗಾಂಧೀಟೋಪಿ ಬೇಡಿ ಹಟ ಮಾಡಿದಾಗ ಅಪ್ಪನಿಂದ ಒದೆ ತಿನ್ನುವ ದುರಂತ. ಹೀಗಾಗಿ ಭಾರತದ ವಾಸ್ತವ ಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ರೈತರ ನೋವಿಗೆ ದನಿಯಾಗುತ್ತಾನೆ. ಜಮೀನದಾರರು, ವಸಾಹಾತುಶಾಹಿ ಸರಕಾರ, ಬಡತನ, ರೋಗರುಜಿನ, ಅಜ್ಞಾನ, ಇವುಗಳ ವಿರುದ್ಧ ಹೋರಾಡುತ್ತಾನೆ. ದಲಿತೋದ್ಧಾರ ಮತ್ತು ಸಮಾಜವಾದದಂತ ಆಶಯಗಳನ್ನು ಹೊತ್ತುಕೊಂಡು ಗಾಂಧೀಜಿಯವರ ಕನಸಿನ ರಾಮರಾಜ್ಯದ ನಿರ್ಮಾಣವೇ ಸ್ವಾತಂತ್ರ್ಯದೆಡೆಗೆ ಕಾದಂಬರಿಯ ವಸ್ತು.

ಕಟ್ಟಿಮನಿಯವರಿಗೆ ಸ್ವಾತಂತ್ರ್ಯ ಎಷ್ಟು ಮುಖ್ಯವಾಗಿತ್ತೋ ಅಷ್ಟೇ ಮುಖ್ಯವಾದದ್ದು ರಾಮರಾಜ್ಯವನ್ನು ಕಟ್ಟುವುದು. ಆದ್ದರಿಂದ ಇವರ ಕಾದಂಬರಿಯ ನಾಯಕ ಶೇಖರನುರಾಷ್ಟ್ರೀಯ ಪ್ರಜ್ಞೆಯನ್ನು ಮೈಗೂಡಿಸಿಕೊಂಡು ಬೆಳೆಯುತ್ತಾನೆ. "೧೯೪೨ ಆಗಷ್ಟ ೮ ರ ಎ.ಆಯ್.ಸಿ.ಸಿ. ಅಧೀವೇಶನದಲ್ಲಿ ಗಾಂಧೀಜಿ ಕ್ವಿಟ್ ಇಂಡಿಯಾಗೆ ಕರೆ ಕೊಟ್ಟದ್ದು ಆ ರಾಷ್ಟ್ರೀಯ ಚಳುವಳಿಯಲ್ಲಿ ಭಾಗಿಯಾಗಲು ಶೇಖರ ಹೊರಟು ಹೋಗುವ ಸನ್ನಿವೇಶದೊಂದಿಗೆ ಕಾದಂಬರಿ ಮುಕ್ತಾಯವಾಗುತ್ತದೆ"[೪೯]. ಈ ಕಾದಂಬರಿಯು ಮುಂಬರುವ ಮಾಡು ಇಲ್ಲವೆ ಮಡಿ ಎಂಬ ಸಿದ್ಧಾಂತಕ್ಕೆ ಮುನ್ನುಡಿ ಬರೆಯುತ್ತದೆ.

ಕಟ್ಟಿಮನಿಯವರು ರಜಸತ್ತೆಯನ್ನು ವಿರೋಧಿಸುತ್ತಾ ಬಂದವರು ಮತ್ತು ಪ್ರಜಾಸತ್ತೆಯಲ್ಲಿ ಅತ್ಯಂತ ಪ್ರೀತಿ ಆದರಗಳನ್ನು ಇಟ್ಟುಕೊಂಡವರು. ವ್ಯಕ್ತಿಯ ಪ್ರಗತಿಯು ಮತ್ತು ಅವನ ಮಾನಸಿಕ ವಿಕಾಸವು ಪ್ರಜಾಸತ್ತೆಯಲ್ಲಿ ಇರುವುದನ್ನು ಇವರು ಕಾಣುತ್ತಾರೆ. ರಾಜ ಮತ್ತು ಅರಸೊತ್ತಿಗೆಯು

ಸರ್ವಾಧಿಕಾರತ್ವವನ್ನು ಹೊಂದಿರುವುದರಿಂದ ವ್ಯಕ್ತಿಯ ಆಶೋತ್ತರಗಳು ಅಲ್ಲಿ ಕೈಗೂಡುವುದಿಲ್ಲ. ಆದ್ದರಿಂದ ಸಮಾಜವಾದದ ಸಿದ್ಧಾಂತವಾದ 'ಸರ್ವರಿಗೂ ಸಮಪಾಲು ಸರ್ವರಿಗೂಸಮಬಾಳು' ಇರಬೇಕೆಂಬ ಸಿದ್ಧಾಂತ ಕಟ್ಟಿಮನಿಯವರದಾಗಿದೆ. ಸ್ವಾತಂತ್ರ್ಯದೆಡೆಗೆ ಕಾದಂಬರಿಯಲ್ಲಿ ಗಾಂಧೀಜಿಯವರ ಕನಸಿನ ಭಾರತವನ್ನು ಚಿತ್ರಿಸುತ್ತಾರೆ. ಪ್ರಾಸಂಗಿಕವಾಗಿ ಕುವೆಂಪು ಅವರ ಪದ್ಯದ ಸಾಲುಗಳನ್ನು ಉಲ್ಲೇಖಿಸುತ್ತಾರೆ.

**"ಕರಿಯರದೋ ಬಿಳಿಯರದೋ ಯಾರದಾದರೇನು ?**
**ಸಮ್ರಾಜ್ಯವಾವಗಂ ಸುಲಿಗೆ ರೈತರಿಗೆ**
**ವಿಜಯನಗರವೋ ? ಮೊಗದರಾಳ್ವಿಕೆಯೋ ?**
**ಇಂಗ್ಲೀಷರೋ ? ಎಲ್ಲರೂ ಜಿಗಣೆಗಳೇ ನನ್ನ ನೆತ್ತರಕೆ**
**ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು**
**ಎಂಬ ನವಯುಗವಾಣಿ ಘೋಶಿಸಿದೆ ಕೇಳಿ"**[೪೯]

ಎಂದು ಕಟ್ಟಿಮನಿಯವರು ಕುವೆಂಪು ಅವರ ವಿಚಾರಗಳೊಂದಿಗೆ ತಮ್ಮನ್ನು ಸಮೀಕರಿಸಿಕೊಳ್ಳುತ್ತಾರೆ. ಒಟ್ಟಿನಲ್ಲಿ ಸ್ವಾತಂತ್ರ್ಯದೆಡೆಗೆ ಎಂಬ ಕಾದಂಬರಿಯಲ್ಲಿ ಸ್ವಾತಂತ್ರ್ಯಕ್ಕಿಂತ ಹೆಚ್ಚು ಸುಂದರ ಭಾರತದ ಕನಸು ಕಾಣಲಾಗಿದೆ.

ಕಟ್ಟಿಮನಿಯವರ ಅತ್ಯಂತ ಜನಪ್ರಿಯ ಕಾದಂಬರಿ 'ಮಾಡಿ ಮಡಿದವರು'. ಗಾಂಧೀಜಿಯವರ ಕರೆ 'ಚಲೇಜಾವ್ ಚಳುವಳಿ' ಎಂಬುದು ಮಾಡಿ ಮಡಿದವರು ಕಾದಂಬರಿಯಲ್ಲಿ ಘೋಷಣೆಯ ವಾಕ್ಯವಾಗಿ ಮತ್ತು ಕಾದಂಬರಿಯ ಕೇಂದ್ರ ಬಿಂದುವಾಗಿ ಪರಿಣಮಿಸಿದೆ. ಬೆಳಗಾವಿಯ ಸುತ್ತಮುತ್ತಲಿನ ಗುಡ್ಡಗಾಡು ಪ್ರದೇಶಗಳಲ್ಲಿ ಸ್ವಾತಂತ್ರ್ಯಯೋಧರು ಅವಿತು ಮಾಡಿದ ಚಳುವಳಿಯನ್ನು ನೋಡಬೇಕಾದರೆ ಬಸವರಾಜ ಕಟ್ಟಿಮನಿಯವರ ಮಾಡಿ ಮಡಿದವರು ಕಾದಂಬರಿಯನ್ನು ಓದಬೇಕು. ಕರ್ನಾಟಕದಲ್ಲಿ ಅದರಲ್ಲೂ ಬೆಳಗಾವಿಯಲ್ಲಿ ನಡೆದ ಅಗಷ್ಟ ಕ್ರಾಂತಿ ರಾಷ್ಟ್ರದಲ್ಲಿಯೇ ವಿಶಿಷ್ಟವಾದುದು. ಇಲ್ಲಿ ವ್ಯವಸ್ಥಿತವಾಗಿ ನಡೆದ ಸಂಘಟಿತ ಹೋರಾಟವು ವಿಶೇಷ ಮತ್ತು ವಿಶಿಷ್ಟವಾಗಿದೆ. ಬೆಳಗಾವಿಯ ಈ ಹೋರಾಟವು ರಾಷ್ಟಮಟ್ಟದಲ್ಲಿ ದೊಡ್ಡ ಸುದ್ದಿಯಾಗಿ ಹಿರಿಯ ನಾಯಕರಿಂದ ಹೊಗಳಿಕೆಗೆ ಒಳಗಾಗಿದೆ. ಅಲ್ಲಿಯ ಜನರು 'ಕರ್ನಾಟಕ ಪ್ಯಾಟರ್ನ' ಎಂದು ಇದನ್ನು ಕರೆದಿದ್ದಾರೆ. ಇದಲ್ಲದೆ ಜಯಪ್ರಕಾಶ ನಾರಾಯಣರು "ಬೆಳಗಾವಿ ಜಿಲ್ಲೆಯಲ್ಲಿ ನಡೆದ ಈ ವ್ಯವಸ್ಥಿತ ಹೋರಾಟದ ವಿಧಾನವು ಭಾರತದಾದ್ಯಂತ ಅನುಸರಿಸಬೇಕಾದದ್ದು ಎಂದಿದ್ದಾರೆ"[೫೦]. ಕರ್ನಾಟಕ ಗೆಝೆಟಿಯರ್‌ನಲ್ಲಿ ಈ ಕುರಿತು ಸ್ಪಷ್ಟ ವಿವರಣೆ ಇದೆ.

ಒಂದು ಸಾಹಿತ್ಯ ಕೃತಿಯ ರಚನೆಯ ಹಿಂದೆ ಆ ವಸ್ತುವಿನ ವಾಸ್ತವ ಸಂಗತಿ ಲೇಖಕರಿಗೆ ಇರಬೇಕಾಗುತ್ತದೆ. ಅನುಭವಿ ಲೇಖಕನು ಸತ್ಯ ಸಂಗತಿಗಳಿಗೆ ಕಲಾ ನೈಪುಣ್ಯತೆಗಳನ್ನು ತೊಡಿಸಿ ಘಟನೆಗಳು ಜೀವಂತವೂ ಆಕರ್ಷಕವೂ ಆಗುವಂತೆ ಮಾಡುತ್ತಾನೆ. ಅಗಷ್ಟ ೮ ರಾತ್ರಿ ದೇಶದ

ಉದ್ವಗಲಕ್ಕೂ ನಡೆದ ಅಸಂಖ್ಯಾತ ದೇಶಪ್ರೇಮಿಗಳ ಬಂಧನ ನಡೆಯುವುದು. ಇದಕ್ಕೂ ಮುಂಚಿತವಾಗಿ ಬೆಳಗಾವಿಯ ವೀರಯೋಧರು ಈ ಮೊದಲೇ ಪೂರ್ವಭಾವಿ ಸಭೆಯನ್ನು ೧೯೪೨ ರ ಅಗಸ್ಟ ೫ ರಂದೇ ನಡೆಸಿ ಒಂದು ಮಹತ್ವದ ಒಮ್ಮತದ ನಿರ್ಧಾರವನ್ನು ತೆಗೆದುಕೊಳ್ಳುತ್ತಾರೆ. ಬಂಧನಕ್ಕೆ ಒಳಗಾಗಿ ವ್ಯರ್ಥ ಜೈಲಿನಲ್ಲಿ ಕೊಳೆಯುವುದಕ್ಕಿಂತ ಹೊರಗಿದ್ದೇ ಬ್ರಿಟಿಷರಿಗೆ ಚಳ್ಳೇ ಹಣ್ಣು ತಿನ್ನಿಸುವುದೆಂದು ನಿರ್ಧರಿಸುತ್ತಾರೆ. ಅದೇ ರೀತಿ ೮ ರ ರಾತ್ರಿಯೇ ಮನೆ ಮಠ ತೊರೆದು ಭೂಗತ ಚಟುವಟಿಕೆಯಲ್ಲಿ ತೊಡಗುತ್ತಾರೆ. ಹೀಗಾಗಿ "ಬೆಳಗಾವಿ ಜಿಲ್ಲೆಯಲ್ಲಿ ಬ್ರಿಟಿಷರ ಬಂಧನದ ಕ್ರಿಯೆ ಯಶಸ್ವಿಯಾಗುವುದಿಲ್ಲ. ಅಂದು ಆ ಹೋರಾಟದಲ್ಲಿ ರಾಷ್ಟ್ರೀಯ ಮುಖಂಡರು ಕಾಂಗ್ರೆಸಿಗರು, ವಕೀಲರು, ಶಿಕ್ಷಕರು, ರೈತರು, ಸಾಮಾನ್ಯ ಜನರು, ಶಾಲೆ ಕಾಲೇಜುಗಳನ್ನು ತೊರೆದ ವಿದ್ಯಾರ್ಥಿ ವಿದ್ಯಾರ್ಥಿನಿಯರು ಒಮ್ಮತದಿಂದ ಈ ಚಳುವಳಿಯಲ್ಲಿ ಭಾಗವಹಿಸುತ್ತಾರೆ. ಇದನ್ನು ಕಣ್ಣಾರೆ ಕಂಡ ಕಟ್ಟಿಮನಿಯವರು ತಮ್ಮ ಮಾಡಿ ಮಡಿದವರು ಕಾದಂಬರಿಯಲ್ಲಿ ಸೊಗಸಾಗಿ ಚಿತ್ರಿಸುತ್ತಾರೆ"[೫೦]. ಬೆಳಗಾವಿಯಲ್ಲಿ ನಡೆದ ಹೋರಾಟಕ್ಕೂ ಕಾದಂಬರಿಯ ಒಳ ಚಿತ್ರಣಕ್ಕೂ ಅವಿನಾಭಾವ ಸಂಬಂಧವಿದೆ.

ಕಟ್ಟಿಮನಿಯವರಿಗೆ ಈ ಕಾದಂಬರಿಯನ್ನು ಬರೆಯಲು ಮೂಲ ಪ್ರೇರಣೆ ಸಂಗೊಳ್ಳಿ ರಾಯಣ್ಣನಂತವರು. ತರುವಾಯ ಕಟ್ಟಿಮನಿಯವರ ಸಮಕಾಲೀನ ವ್ಯಕ್ತಿಗಳಾದ ಗಂಗಾಧರರಾವ್ ದೇಶಪಾಂಡೆ, ವಾಲಿ ಚೆನ್ನಪ್ಪಾ ಮುಂತಾದವರ ಬದುಕು ಕಟ್ಟಿಮನಿಯವರನ್ನು ಕಾದಂಬರಿ ಬರೆಯಲು ಪ್ರೇರೇಪಿಸಿದೆ. ಚಲೇಜಾವ್ ಚಳುವಳಿಯ ಸಂದರ್ಭದ ಹೋರಾಟದ ಏಳುಬೀಳುಗಳನ್ನೆಲ್ಲಾ ಚರ್ಚಿಸಿ ಆ ಘಟನಾವಳಿಗಳಿಗೆ, ಆ ಹೋರಾಟಕ್ಕೆ ಒಂದು ಕಲಾತ್ಮಕ ಚೌಕಟ್ಟನ್ನು ನೀಡಿ ಈ ಕಾದಂಬರಿ ರಚಿಸಿದ್ದಾರೆ. ಚಲೇಜಾವ್ ಚಳುವಳಿಯ ಸಮಗ್ರ ಚಿತ್ರಣವುಳ್ಳ ಏಕೈಕ ಕಾದಂಬರಿ ಮಾಡಿಮಡಿದವರು.

ಕಟ್ಟಿಮನಿಯವರ ಪ್ರಥಮ ಕಾದಂಬರಿ ಸ್ವಾತಂತ್ರ್ಯದೆಡೆಗೆ. ಇದು ಚಳುವಳಿಯ ಪೂರ್ವ ತಯಾರಿ. ಸ್ವಾತಂತ್ರ್ಯಕ್ಕಾಗಿ ಮಾಡಬೇಕಾದ ಆಂದೋಲನದ ಸ್ವರೂಪ ಮತ್ತು ಸಂಘಟನೆ ಇವುಗಳ ಸಮಾಲೋಚನೆಯು ಆ ಕಾದಂಬರಿಯಲ್ಲಿದೆ. ಅದರ ಮುಂದುವರೆದ ಭಾಗವೆನಿಸುವಂತೆ ಮಾಡಿ ಮಡಿದವರು ಕಾದಂಬರಿಯು ಸಿದ್ಧಗೊಂಡಿದೆ. ಶೇಖರ ಈ ಕಾದಂಬರಿಯ ನಾಯಕ. ಅವನು ಎಆಯ್‌ಸಿಸಿ ಅಧಿವೇಶನಕ್ಕೆ ಮಾರು ವೇಷದಲ್ಲಿ ಹೋಗುತ್ತಾನೆ. ಅಲ್ಲಿಂದ ಹಿಂತಿರುಗಿ ಬರುವಾಗ ಅದೇ ಕಂಪಾರ್ಟಮೆಂಟ್‌ನಲ್ಲಿದ್ದ ಹೇಮಾ ಮತ್ತು ವಿಶ್ವನಾಥರ ಪರಿಚಯ ಶೇಖರನಿಗೆ ಆಗುತ್ತದೆ. ಕಾದಂಬರಿಯು ಪ್ರಾರಂಭವಾಗುವುದೇ ಇಲ್ಲಿಂದ. ಅವರ ಪರಿಚಯದಲ್ಲಿ ಶೇಖರನು ಸ್ವಾತಂತ್ರ್ಯ ಚಳುವಳಿಯ ಸ್ವರೂಪವನ್ನು ಮತ್ತು ದೇಶಕ್ಕಾಗಿ ತರುಣರು ಕೈಕೊಳ್ಳಬೇಕಾದ ಕಾರ್ಯಗಳನ್ನು ಕುರಿತು ವಿವರಿಸುತ್ತಾನೆ. ಶೇಖರನು ನಿಷ್ಠಾವಂತ, ಅಪ್ಪಟ ದೇಶಭಕ್ತ ಎಂಬುದು ಹೇಮಾ ಮತ್ತು ವಿಶ್ವನಾಥರಿಗೆ ಮನದಟ್ಟಾಗುತ್ತದೆ. ಶೇಖರನ ಪ್ರಭಾವದಿಂದಾಗಿ ಅವರು ಕಾಲೇಜಿಗೆ ತಿಲಾಂಜಲಿಯನ್ನಿಟ್ಟು

ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕುತ್ತಾರೆ. ಶ್ರೀಮಂತಿಕೆ ಮತ್ತು ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದ ವಿಶ್ವನಾಥ ಮತ್ತು ಹೇಮಾರಿಗೆ ಚಳುವಳಿಯಲ್ಲಿ ಎದುರಿಸಬೇಕಾದ ಕಷ್ಟ ನಷ್ಟ. ಹಸಿವು ನೀರಡಿಕೆಯ ಅನುಭವವಾಗುತ್ತದೆ. ಚಳುವಳಿಯಲ್ಲಿ ಭಾಗವಹಿಸದಿರಲು ಹೇಮಾಳ ತಂದೆ ಕಾಂಗ್ರೆಸ್ಸ ಮುಖಂಡ. ತಂದೆಗೆ ಮಗಳು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಬಾರದೆಂಬ ಉದ್ದೇಶವಿತ್ತು. ಸಾಮಾನ್ಯ ಹೆಣ್ಣುಮಕ್ಕಳಂತೆ ಓದಿ ಸದ್‌ಗ್ರಹಿಣಿಯಾಗಬೇಕೆಂಬ ಬಯಕೆ.

ಗಾಂಧೀಜಿಯವರ ಚಲೇಜಾವ್ ಚಳುವಳಿಯು ಅಂದಿನ ಶಾಲಾ–ಕಾಲೇಜ ವಿದ್ಯಾರ್ಥಿಗಳ ಮೇಲೆ ಗಾಢವಾದ ಪ್ರಭಾವವನ್ನು ಭೀರಿತ್ತು. ವಿದ್ಯಾರ್ಥಿಗಳೆಲ್ಲಾ ಶಾಲೆಯನ್ನು ತೊರೆದು ಚಳುವಳಿಯಲ್ಲಿ ಧುಮುಕಿದರು. ವಿಶ್ವನಾಥನನ್ನು ಪ್ರೀತಿಸಿದ ಹೇಮಾ ಅವನೊಂದಿಗೆ ತಾನು ಚಳುವಳಿಯಲ್ಲಿ ಭಾಗಿಯಾಗುತ್ತಾಳೆ. ತಂದೆ ಶಾಮರಾಯರ ಮಾತನ್ನು ಧಿಕ್ಕರಿಸಿ ವಿಶ್ವನಾಥನೊಂದಿಗೆ ಕೂಡಿಕೊಂಡು ಚಳುವಳಿಯಲ್ಲಿ ಸಕ್ರೀಯವಾಗಿ ಭಾಗವಹಿಸುತ್ತಾಳೆ. ಈ ಕಟ್ಟಿಮನಿಯವರು ರಚಿಸಿದ ಕಾದಂಬರಿಗಳಿಗೆ ಕುಂದರನಾಡಿನ ಸ್ವಾತಂತ್ರ್ಯ ಚಳುವಳಿ ಪ್ರೇರಣೆಯಾಗಿದೆ. ಕುಮರಿ ಆಶ್ರಮ ಹೋರಾಟದ ನೆಲೆಯಾಗಿತ್ತು. ೧೯೪೨ ರಲ್ಲಿ ಕುಂದರನಾಡಿನ ಚಳುವಳಿಗಾರರು ಕುಮರಿ ಆಶ್ರಮದಲ್ಲಿ ಇದ್ದುಕೊಂಡು ಸುತ್ತಮುತ್ತಲಿನ ಗ್ರಾಮಗಳಿಗೆ ಹೋಗಿ ಸಭೆ ಸಮಾರಂಭಗಳನ್ನು ನಡೆಸುತ್ತಿದ್ದರು. ಜನರಲ್ಲಿ ಸ್ವಾತಂತ್ರ್ಯದ ಬಗ್ಗೆ ಅರಿವನ್ನು ಮೂಡಿಸಿ ಬ್ರಿಟಿಷ ಸರಕಾರಕ್ಕೆ ಅಸಹಕಾರ ಚುರುಕನ್ನು ಮುಟ್ಟಿಸುತ್ತಿದ್ದರು. ರೇಲ್ವೆ ಸ್ಟೇಶನ್ ಸುಡುವುದು, ಸರಕಾರಿ ಕಾಗದ ಪತ್ರಗಳನ್ನು ದಹಿಸಿವುದು, ಮುಂತಾದ ವಿಧ್ವಂಸಕ ಕೃತಿಗಳನ್ನು ಮಾಡಿ ಅವರು ಭೂಗತರಾಗುತ್ತಿದ್ದರು.

ಅದರಂತೆ ಮಾಡಿ ಮಡಿದವರು ಕಾದಂಬರಿಯಲ್ಲಿಯೂ ಶೇಖರನ ಮುಂದಾಳತ್ವದಲ್ಲಿ ಕಲ್ಲಾಪುರದ ಹಾಡುಗಾರ ಶಂಕರೆಪ್ಪ ಮಾಸ್ತರ, ಹಣ್ಣು ಮುದುಕ ಬಾಳಪ್ಪಾ, ಪೈಲವಾನ ಸಂಗಣ್ಣಾ ಇವರ ಜೊತೆಗೆ ಹತ್ತಿಪ್ಪತ್ತು ಜನ ಭಂಟರು ಸೇರಿಕೊಂಡು ಚಳುವಳಿಯನ್ನು ಮಾಡುತ್ತಿದ್ದರು. ಆತ್ಮ ರಕ್ಷಣೆಗಾಗಿ ಶಸ್ತ್ರ ಸಂಗ್ರಹಿಸಿವುದು, ಖರ್ಚಿಗಾಗಿ ಕಂದಾಯದ ಕೂಡಿಟ್ಟ ಹಣ ಲೂಟಿ ಮಾಡುವುದು ಮುಂತಾದ ಕಾರ್ಯಗಳನ್ನು ಚಳುವಳಿಕಾರರು ಮಾಡುತ್ತಿದ್ದರು. ಆದರೆ ನೈತಿಕವಾಗಿ ಪರಿಶುದ್ಧವಾಗಿದ್ದುಕೊಂಡು ಅನ್ಯಾಯ, ಅತ್ಯಾಚಾರಗಳಿಗೆ ಒಳಗಾಗುತ್ತಿರಲಿಲ್ಲ ಮತ್ತು ಅವುಗಳನ್ನು ಮಾಡುತ್ತಿರಲಿಲ್ಲ. ಇದೇ ಸಿದ್ಧಾಂತವನ್ನು ಕಟ್ಟಿಮನಿಯವರು ತಮ್ಮ ಕಾದಂಬರಿಯಲ್ಲಿ ಚರ್ಚಿಸುತ್ತಾರೆ. ಬೆಳಗಾವಿಯಲ್ಲಿ ಚಳುವಳಿಕಾರರು ಹದಿನೇಳು ಗುಂಪು ಕಟ್ಟಿಕೊಂಡು ಪ್ರತಿಯೊಂದು ಗುಂಪಿನಲ್ಲಿ ಸುಮಾರು ಮೂವತ್ತು ಜನ ಸೇರಿಕೊಂಡು ಚಳುವಳಿ ಮಾಡುತ್ತಿದ್ದರು. ಕುಂದರನಾಡಿನ ಗುಂಪಿನ ನಾಯಕ ವಾಮನರಾವ್ ಬಿದರಿಯವರ ಗುಂಪು ಖರ್ಚುವೆಚ್ಚ ನಿಭಾಯಿಸಲು ಪ್ರಥಮ ಬಾರಿಗೆ ಟಪಾಲು ಲೂಟಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತದೆ. ಹುಕ್ಕೇರಿ ಘಟಪ್ರಭಾ ನಡುವಿನ ಕೊಟಬಾಗಿ ಹತ್ತಿರ ಬಸ್ಸನ್ನು ನಿಲ್ಲಿಸಿ ಅದರೊಳಗಿನ ಟಪಾಲು ಬ್ಯಾಗನ್ನು ಲೂಟಿ ಮಾಡುತ್ತಾರೆ. ಬ್ಯಾಗಿನಲ್ಲಿದ್ದ ಸರಕಾರಿ ಪತ್ರಗಳನ್ನು ಸುಟ್ಟು ಹಾಕುತ್ತಾರೆ. ಇದನ್ನೇ ಹೋಲುವ ಪ್ರಸಂಗವು ಮಾಡಿ ಮಡಿದವರು

ಕಾದಂಬರಿಯಲ್ಲಿ ರಸವತ್ತಾಗಿ ವರ್ಣಿಸಲ್ಪಟ್ಟಿದೆ. ಗಾಂಧಿ ಜಯಂತಿಯ ದಿನ ನಡೆದ ಟಪಾಲು ಲೂಟ ಪ್ರಕರಣ ದೇಶದ ಪ್ರಥಮ ಪ್ರಕರಣ ಎನ್ನುವ ಮಾತು ಕೊಟಬಾಗಿ ಲೂಟ ಪ್ರಕರಣವನ್ನು ನೆನಪಿಗೆ ತರುತ್ತದೆ.

ಕಾದಂಬರಿಯ ಉದ್ದಕ್ಕೂ ಕಟ್ಟಿಮನಿಯವರು ನಿರೂಪಿಸಿದ ತಾರುತಂತಿ ಕತ್ತರಿಸುವ, ಟಪಾಲು ಲೂಟಿ ಮಾಡುವ, ಪೊಲೀಸ ಸ್ಟೇಶನ್, ರೇಲ್ವೆ ಸ್ಟೇಶನ್, ತಾಲೂಕು ಕಛೇರಿ, ಚಾವಡಿಗಳನ್ನು ಸುಡುವ, ಬಂದೂಕು ಲಪಟಾಯಿಸಿಕೊಂಡು ಬರುವ, ಕಂದಾಯದ ಹಣ ಲೂಟಿ ಮಾಡುವ ಈ ಎಲ್ಲ ಘಟನೆಗಳು ಓದುಗರ ಮೈ ಜುಮ್ಮ ಎನ್ನುವಂತೆ ಮಾಡಿ ಮಡಿದವರು ಕಾದಂಬರಿಯಲ್ಲಿ ನಿರೂಪಿತಗೊಂಡಿವೆ. ಹೋರಾಟದ ಅಂದಿನ ಸಂದರ್ಭಗಳನ್ನು ತುಂಬಾ ಹತ್ತಿರದಿಂದ ಕಂಡ ಕಟ್ಟಿಮನಿಯವರು ತಮ್ಮ ಕಾದಂಬರಿಯಲ್ಲಿ ವಾಸ್ತವವನ್ನೇ ಬಿಂಬಿಸಿದಂತಿದೆ.

ಈ ಕಾದಂಬರಿಯಲ್ಲಿ ಬರುವ ಪಾತ್ರಗಳು ಚಳುವಳಿ ಸಂದರ್ಭದಲ್ಲಿಯ ವ್ಯಕ್ತಿಗಳ ಪಾತ್ರದಂತೆ ಕಾಣಿಸುತ್ತವೆ. ಆ ಕಾಲದಲ್ಲಿಯೂ ಕೆಲವು ಜನ ಕಂಪನಿ ಸರಕಾರಕ್ಕೆ ನಿಷ್ಠುರರಾಗಿದ್ದರು ಮತ್ತು ಪಿತೂರಿ ಮಾಡಿ ಚಳುವಳಿಕಾರರನ್ನು ಬ್ರಿಟಿಷರಿಗೆ ಹಿಡಿದು ಕೊಡುವ ಕೆಟ್ಟ ಕೆಲಸವನ್ನು ಮಾಡುವ ಜನರೂ ಅಲ್ಲಿದ್ದರು. ಇವೆಲ್ಲಾ ಸಂಗತಿಗಳನ್ನು ಮಾಡಿಮಡಿದವರು ಕಾದಂಬರಿಯಲ್ಲಿ ನಾವು ಕಾಣುತ್ತೇವೆ. ತಾವು ಕಾಂಗ್ರೆಸ ಮುಖಂಡರಾಗಿದ್ದು ತಮ್ಮ ಮಗಳು ಹೇಮಾ ಚಳುವಳಿಯಲ್ಲಿ ಸೇರಬಾರದೆಂಬುವುದು ಶಾಮರಾಯರ ಉದ್ದೇಶ. ಬ್ರಿಟಿಷರಿಗೆ ವಿಧೇಯನಾಗಿದ್ದು ದಿವಾನಗಿರಿ, ರಾವಬಹಾದ್ದೂರ್ ಮುಂತಾದ ಪದವಿಗಳಿಗಾಗಿ ಹಂಬಲಿಸುವ ಹಳ್ಳೂರ ಬಾಬಾಸಾಹೇಬ ದೇಸಾಯಿ, ಕುಲಕರ್ಣಿ ರಂಗಣ್ಣಾ ಮತ್ತು ಶೇಖರನಿಗೆ ಮಗಳನ್ನು ಕೊಡಬೇಕೆಂದಿದ್ದು, ಕೊನೆಗೆ ಬ್ರಿಟಿಷರ ಪಿತೂರಿಗೆ ಬಲಿಯಾಗಿ ಶೇಖರನ ಗುಂಪಿನ ಇಪ್ಪತ್ತು ಜನ ಭಂಟರನ್ನು ಹೋಳಿಗೆ ಊಟಕ್ಕೆ ಕರೆದು ಹಿಡಿದು ಕೊಟ್ಟ ಸೂರಪ್ಪಾ ಗೌಡಾ, ಹೇಮಾಳನ್ನು ಮದುವೆಯಾಗಲು ಹಂಬಲಿಸಿ ಅವಳನ್ನು ಚಳುವಳಿಯಿಂದ ಬೇರ್ಪಡಿಸಲು ಯತ್ನಿಸಿದ ಸಿ.ಆಯ್.ಡಿ. ಇನ್ಸಪಕ್ಟರ್ ಕೀರ್ತಿನಾಥ ಮುಂತಾದವರೆಲ್ಲಾ ಅಪ್ಪಟ ಸ್ವಾರ್ಥಿಗಳಾಗಿ ದೇಶದ್ರೋಹಿಗಳಾಗಿ ಚಿತ್ರಿತರಾಗಿದ್ದಾರೆ.

ಕಾದಂಬರಿಯ ಈ ಮೇಲಿನ ಪಾತ್ರಗಳಿಗೆ ವಿರುದ್ಧವಾಗಿ ಮುಪ್ಪಿನ ವಯಸ್ಸಿನಲ್ಲಿಯೂ ಸ್ವಾಭಿಮಾನವನ್ನು ಮೆರೆದ ಪೈಲವಾನ ಸಂಗಣ್ಣನ ತಾಯಿ ಮತ್ತು ಮುದುಕ ಬಾಳಪ್ಪಾ ಇನ್ನೊಂದು ಮುಖ. ಸ್ವಾತಂತ್ರ್ಯಕ್ಕಾಗಿ ತಮ್ಮ ಬದುಕನ್ನೇ ಪಣಕಿಟ್ಟು ಹೋರಾಡಿದ ಇವರ ಮಾತುಗಳು ಸ್ವಾತಂತ್ರ್ಯದ ಕಿಚ್ಚಿನ ಪರಿಯನ್ನು ಹೇಳಿಕೊಡುತ್ತವೆ. ಮುದುಕ ಬಾಳಪ್ಪಾ ಪೊಲೀಸರಿಗೆ ಹೀಗೆ ಹೇಳುತ್ತಾನೆ. "ಕಿತ್ತೂರ ಚೆನ್ನವ್ವನ ನಾಡಿನ್ಯಾಗ ಹುಟ್ಟಿ ಬೆಳದೀನಿ ನಾನು, ಇಂಥಾ ಹೇಸಿ ಕೆಲಸಾ ನಮ್ಮ ಮಂದಿ ಯಾರೂ ಮಾಡಾಕಿಲ್ಲ. ನಾಲಗಿ ಬಿಗಿ ಹಿಡಿದ ಮಾತಾಡ್ರೀ"[೫೨]. ಸಂಗಣ್ಣನ ತಾಯಿ ರೋಗದಿಂದ ನೆರಳುತ್ತ ಬಿದ್ದಾಗಲೂ ಪೊಲೀಸರಿಗೆ ಹೇಳುವ ಮಾತು ಅವಳ ದಿಟ್ಟ ತನಕ್ಕೆ ಸಾಕ್ಷಿಯಾಗಿದೆ. 'ನನ್ನ

ಪ್ರಾಣದಾಗ ತ್ರಾಣ ಇರೂತನಕ ಆ ಕೋಣೆಯೊಳಗ ನೀ ಹೋಗಾಕ ಕೊಡಾಕಿಲ್ಲಾ ಸುಮ್ಮಗ ಹೋಗೋ ಮೂಳಾ, ಯಾವನೋ ಗಂಡಸು ನನ್ನ ಕೈ ಹಿಡಿಯಾವ್ ಮೈಗೆ ಕೈ ಹಚ್ಚಿದರ ಕೊಂದಬಿಟ್ಟೇನು[೧೩] ಎಂದು ಸಂಗಣ್ಣನ ತಾಯಿ ಹೇಳಿದರೆ, ಕಾದಂಬರಿಯ ನಾಯಕನಾದ ಶೇಖರನ ತಾಯಿ ಹೇಳುವ ಮಾತು ಇನ್ನೂ ವೈಶಿಷ್ಟ ಪೂರ್ಣವಾಗಿದೆ. ನನ್ನ ತೋಳಿನ್ಯಾಗ ಶಕ್ತಿ ಇರೂತನಕಾ ಯಾರಿಗೂ ಅಂಜುವಾಕಿ ಅಲ್ಲ ನಾ, ಕೂಲಿ ಕುಂಬಳಿ ಮಾಡಿ ಇವರೆಲ್ಲಾರ ಹೊಟ್ಟೀಗೆ ಹಾಕತಿನಿ ಇಲ್ಲಿ ಕೂಲಿ ಸಿಗದಿದ್ದರ ಗೋಕಾಕ ಗಿರಣಿಗೆ ಹೋಗಿ ದುಡಿತಿನಿ, ಆ ಕೆಂಪ ಮಾರಿ ಸರಕಾರಕ ಮಾತ್ರ ನಾ ಎಂದೆಂದೂ ಅಂಜುವುದಿಲ್ಲ ಎಂದು ಹೇಳುವಲ್ಲಿ ಅವಳು ತನ್ನ ಸ್ವಾಭಿಮಾನವನ್ನು ಮೆರೆದಿದ್ದಾಳೆ.

ಹೀಗೆ ಇಡೀ ಕಾದಂಬರಿಯು ಸ್ವಾತಂತ್ರ್ಯ ಚಳುವಳಿಯ ವಸ್ತುವನ್ನು ಬೇರೆ ಬೇರೆ ಪಾತ್ರಗಳ ಮೂಲಕ ಹೇಳಿಕೊಡುತ್ತದೆ. ಕಟ್ಟಿಮನಿಯವರು ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿ ಬ್ರಿಟಿಷರ ವಿರುದ್ಧ ಹೋರಾಡಿದ ಕಾರಣಕ್ಕಾಗಿ 'ಮಾಡಿ ಮಡಿದವರು' ಇಂತಹ ಕಾದಂಬರಿಯ ಸೃಷ್ಟಿಯಾಗಿದೆ. ಇದು ಸ್ವಾತಮತ್ರ್ಯ ಚಳುವಳಿಗೆ ಪ್ರೇರಣೆಯನ್ನು ಒದಗಿಸಿದ ಸಾಹಿತ್ತಿಕ ಚಳುವಳಿಯಾಗಿದೆ.

ಕುಂದರನಾಡಿನವರೇ ಆದ ಕಟ್ಟಿಮನಿಯವರು ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿ ಅನುಭವದ ಪಾಕದಿಂದ ಸಾಹಿತ್ಯ ಕೃತಿಗಳನ್ನು ಸೃಷ್ಟಿಸಿದ್ದಾರೆ. ಇವು ಚಳುವಳಿಕಾರರಿಗೆ ಪ್ರೇರಣೆಯಾಗಿವೆ.

**ಕೊನೆ ಟಿಪ್ಪಣಿಗಳು :**


೧. ಕೆ. ಎಸ್. ಪಾರ್ಥಸಾರತಿ : ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ : ಪುಟ-೧೭

೨. ಚಕ್ರವರ್ತಿ ಸೂಲಿಬೆಲೆ : ಸ್ವಾತಂತ್ರ್ಯ ಮಹಾ ಸಂಗ್ರಾಮ : ಪು.ಸಂ-೧೭೯

೩. ದೇಶಪಾಂಡೆ ಬಾ. ಯ. : ಅಣ್ಣೂ ಗುರೂಜಿ (ಲೇ) : ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಸಮರ ಸಂಪುಟ - ೧ : ಪು.ಸಂ-೫೩

೪. ರಾಮಚಂದ್ರ ವಡವಿ : ಕುಂದರನಾಡಿನ ಒಂದು ಅಧ್ಯಾಯ : ಭೋಡೋ ಭಾರತ ಪರ್ವದಲ್ಲಿ : ಪು.ಸಂ-೬೬

೫. ಅದೇ : ಪು.ಸಂ-೬೭

೬. ಅದೇ : ಪು.ಸಂ-೬೯

೭. ಅದೇ : ಪು.ಸಂ-೩೮

೮. ಅದೇ : ಪು.ಸಂ-೧

೯. ಅದೇ : ಪು.ಸಂ-೩೮

೧೦. ಅದೇ : ಪು.ಸಂ-೦೧

೧೧. ಅದೇ : ಪು.ಸಂ-೦೨

೧೨. ಶ್ರೀನಿವಾಸ ಕುಲಕರ್ಣಿ : ಗಂಗಾಧರರಾವ ದೇಶಪಾಂಡೆ : ಪು.ಸಂ-೨೨

೧೩. ಅದೇ : ಪು.ಸಂ-೨೯

೧೪. ದೇಶಪಾಂಡೆ ಬಾ. ಯ. : ಅಣ್ಣೂ ಗುರೂಜಿ (ಲೇ) : ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಸಮರ ಸಂಪುಟ – ೧ : ಪು.ಸಂ–೩೩

೧೫. ಅದೇ : ಪು.ಸಂ–೩೩

೧೬. ಅದೇ : ಪು.ಸಂ–೩೪

೧೭. ಶಾಸ್ತ್ರೀ ಎಲ್.ಎಸ್. : ಸ್ವಾತಂತ್ರ್ಯ ಸಂಗ್ರಾಮ : ಪು.ಸಂ–೮೭

೧೮. ಶರ್ಮಾ ಎಸ್.ಆರ್. : ಫ್ರೀಡಂ ಮೂವ್ಮೆಂಟ್ (೧೮೫೭–೧೯೪೭) : ಪು.ಸಂ–೮೭

೧೯. ಶಾಸ್ತ್ರೀ ಎಲ್.ಎಸ್. : ಸ್ವಾತಂತ್ರ್ಯ ಸಂಗ್ರಾಮ : ಪು.ಸಂ–೩೩

೨೦. ಅದೇ : ಪು.ಸಂ–೨೦

೨೧. ದೇಶಪಾಂಡೆ ಬಾ. ಯ. : ಅಣ್ಣೂ ಗುರೂಜಿ (ಲೇ) : ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಸಮರ ಸಂಪುಟ – ೧ : ಪು.ಸಂ–೬೮

೨೨. ಅದೇ : ಪು.ಸಂ–೭೦

೨೩. ಶಾಸ್ತ್ರೀ ಎಲ್. ಎಸ್. : ಸ್ವಾತಂತ್ರ್ಯ ಸಂಗ್ರಾಮ : ಪು.ಸಂ–೧೦೦

೨೪. ಅದೇ : ಪು.ಸಂ–೧೦೧

೨೫. ಅದೇ : ಪು.ಸಂ–೧೦೪

೨೬. ರಾಮಚಂದ್ರ ವಡವಿ : ಕುಂದರನಾಡಿನ ಒಂದು ಅಧ್ಯಾಯ : (ಭೋಡೋ ಭಾರತ ಪರ್ವದಲ್ಲಿ) : ಪು.ಸಂ–೧೫೫

೨೭. ಅದೇ : ಪು.ಸಂ–೧೫೫

೨೮. ಅದೇ : ಪು.ಸಂ–೧೫೬

೨೯. ಅದೇ : ಪು.ಸಂ–೧೫೬

೩೦. ಅದೇ : ಪು.ಸಂ–೧೫೭

೩೧. ಅದೇ : ಪು.ಸಂ–೧೭೦

೩೨. ಅದೇ : ಪು.ಸಂ–೧೭೭

೩೩. ಅದೇ : ಪು.ಸಂ–೧೭೭

೩೪. ಅದೇ : ಪು.ಸಂ–೧೭೯

೩೫. ಅದೇ : ಪು.ಸಂ–೦೫

೩೬. ದೇಶಪಾಂಡೆ ಬಾ. ಯ. : ಅಣ್ಣೂ ಗುರೂಜಿ (ಲೇ) : ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಸಮರ ಸಂಪುಟ – ೧ : ಪು.ಸಂ–೮೮

೩೭. ಅದೇ : ಪು.ಸಂ–೯೬

೩೮. ಸಂಗಮೇಶ ಹಂಡಗಿ (ಸಂ.) : ಕುಂದರನಾಡಿನ ಕುಂದಣ : ಎನ್. ಪಿ. ದಾನಪ್ಪಗೌಡರ (ಲೇ) : ಪು.ಸಂ–೧೫೮

೩೯. ಎಸ್. ಎಮ್. ಹರದಗಟ್ಟಿ (ಸಂ.) : ಬೆಳಗಾವಿ ಸಿರಿ : ಶಿವಲಿಂಗಪ್ಪ ಭಾವಿಕಟ್ಟಿ (ಲೇ) : ಪು.ಸಂ–೧೧೩

೪೦. ಅದೇ : ಪು.ಸಂ–೬೮

೪೧. ಎಲ್. ಎಸ್. ಶಾಸ್ತ್ರಿ : ಸ್ವಾತಂತ್ರ್ಯ ಸಂಗ್ರಾಮ : ಪು.ಸಂ–೯೫

೪೨. ಅದೇ : ಪು.ಸಂ-೯೬

೪೩. ಅದೇ : ಪು.ಸಂ-೧೦೯

೪೪. ಅದೇ : ಪು.ಸಂ-೧೨೭

೪೫. ಅದೇ : ಪು.ಸಂ-೧೩೬

೪೬. ಬಸವರಾಜ ಕಟ್ಟಿಮನಿ : ಚಲೇಜಾವ್ ಚಳುವಳಿ ಅರವತ್ತರ ನೆನಪು : ಸ್ಮರಣ ಸಂಚಿಕೆ : ೨೦೦೩ : ವಾಯ್. ಬಿ. ಹಿಮ್ಮಡಿ (ಸಂ.) : ಪು.ಸಂ-೨೪

೪೭. ಅದೇ : ಪು.ಸಂ-೨೫

೪೮. ಅದೇ : ಪು.ಸಂ-೨೮

೪೯. ಬಸವರಾಜ ಕಟ್ಟಿಮನಿ : ಸ್ವಾತಂತ್ರ್ಯದೆಡೆಗೆ : ಪು.ಸಂ-೧೭೯

೫೦. ಬಸವರಾಜ ಕಟ್ಟಿಮನಿ : ಚಲೇಜಾವ್ ಚಳುವಳಿ ಅರವತ್ತರ ನೆನಪು : ಸ್ಮರಣ ಸಂಚಿಕೆ : ೨೦೦೩ (ಸಂ) ವಾಯ್. ಬಿ. ಹಿಮ್ಮಡಿ : ಪು.ಸಂ-೨೪

೫೧. ಅದೇ : ಪು.ಸಂ-೨೬

೫೨. ಅದೇ : ಪು.ಸಂ-೩೪

# ಅಧ್ಯಾಯ - ೪
# ಸ್ವಾತಂತ್ರ್ಯ ಚಳುವಳಿಯ ಪ್ರಮುಖ ಆಯಾಮಗಳು

ಕುಂದರನಾಡಿನ ಸ್ವಾತಂತ್ರ್ಯ ಚಳುವಳಿಯ ಐದು ಪ್ರಮುಖ ಆಯಾಮಗಳ ಕುರಿತು ಇಲ್ಲಿ ವಿವರಿಸಲಾಗಿದೆ.

## ೪.೧ ಬೆಳಗಾವಿಯ ಕಾಂಗ್ರೆಸ್ ಅಧಿವೇಶನ :

೧೯೨೪ ಡಿಸೆಂಬರ ತಿಂಗಳಲ್ಲಿ ೩೯ ನೆಯ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನವು ಕರ್ನಾಟಕದ ಬೆಳಗಾವಿಯಲ್ಲಿ ಜರುಗಿತು. ಭಾರತದ ರಾಜಕೀಯ ಚರಿತ್ರೆಯಲ್ಲಿ ಹೊಸ ಮನ್ವಂತರವನ್ನು ಇದು ಪ್ರಾರಂಭಿಸಿತು. ಅಧಿವೇಶನದ ಅಧ್ಯಕ್ಷತೆಯನ್ನು ಅಲಂಕರಿಸಿದವರು ಮಹಾತ್ಮಾ ಗಾಂಧೀಜಿಯವರು. ಗಾಂಧೀಜಿಯವರನ್ನು ಅಧ್ಯಕ್ಷೀಯ ಪೀಠಕ್ಕೆ ಕೂಡಿಸಿ ಸನ್ಮಾನಿಸಿದ ಶ್ರೇಯಸ್ಸು ಬೆಳಗಾವಿ ಜಿಲ್ಲೆಗೆ ಸೇರುತ್ತದೆ. ಏಕೆಂದರೆ ಅದೇ ಮೊದಲು ಬಾರಿಗೆ ಗಾಂಧೀಜಿಯವರು ಕಾಂಗ್ರೆಸ ಅಧಿವೇಶನದ ಅಧ್ಯಕ್ಷರಾಗಿದ್ದರು. ಗಾಂಧೀಜಿಯವರ ತೀವ್ರವಾದ ಪ್ರಭಾವಕ್ಕೆ ಹಲವರು ಒಳಗಾದರು. ಮೋತಿಲಾಲ ನೆಹರು, ಚಿತ್ತರಂಜನದಾಸರಂತಹ ಮುತ್ಸದ್ಧಿಗಳು ಕಾಂಗ್ರೆಸನ್ನು ಬಿಟ್ಟು ಸ್ವರಾಜ್ಯ ಪಟ್ಟವನ್ನು ಕಟ್ಟಿ ಕಾರ್ಯಗೈಯಬೇಕೆಂಬ ತಮ್ಮ ನಿರ್ಧಾರವನ್ನು ಬದಲಿಸಿದ್ದು ಗಾಂಧೀಜಿಯವರ ಪ್ರೇರಣೆಯಿಂದ. ಈ ಇಬ್ಬರು ನಾಯಕರ ಮನೋಗತವನ್ನು ಅರಿತ ಗಾಂಧೀಜಿಯವರು ಜವಾಹರಲಾಲರನ್ನು ಕಾಂಗ್ರೆಸಿನ ಪ್ರಧಾನ ಕಾರ್ಯದರ್ಶಿಯನ್ನಾಗಿ ಮಾಡಿದರು. ಈ ಐತಿಹಾಸಿಕ ಘಟನೆಯು ನಡೆದದ್ದು ಕೂಡಾ ಬೆಳಗಾವಿಯಲ್ಲಿಯೇ.

ಕರ್ನಾಟಕದಲ್ಲಿ ಕಾಂಗ್ರೆಸ್ ಅಧಿವೇಶನವನ್ನು ಹಮ್ಮಿಕೊಳ್ಳಬೇಕೆಂದು ನಿರ್ಣಯಿಸಿದ ಕಾಂಗ್ರೆಸ್ ಮುಖಂಡರಲ್ಲಿ ಗಂಗಾಧರರಾವ್ ದೇಶಪಾಂಡೆಯವರು ಪ್ರಮುಖರು. ಕಾಕಿನಾಡಿನಲ್ಲಿ ನಡೆದ ಮೂವತ್ತೆಂಟನೆಯ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿದ್ದ ಗಂಗಾಧರರಾವ್ ದೇಶಪಾಂಡೆ ಹಾಗೂ ಹಲವಾರು ಮುಖಂಡರು ಮುಂದಿನ ಅಧಿವೇಶನವು ಬೆಳಗಾವಿಯಲ್ಲಿ ಜರುಗಬೇಕೆಂದು ರಾಷ್ಟ್ರೀಯ ಕಾಂಗ್ರೆಸ್ ನಾಯಕರಿಗೆ ಮನವಿ ಸಲ್ಲಿಸುತ್ತಾರೆ.

ಮನವಿ ಸಲ್ಲಿಸಿ ಬಂದ ಬಳಿಕ ಕರ್ನಾಟಕದಲ್ಲಿ ಅಧಿವೇಶವನ್ನು ಎಲ್ಲಿ ನಡೆಸಬೇಕೆಂದು ಸಾಕಷ್ಟು ಚರ್ಚೆ ನಡೆಯುತ್ತದೆ. ಕರ್ನಾಟಕದ ಪ್ರಾಂತೀಯ ಕಾಂಗ್ರೆಸ್ ಸಮಿತಿಯು ಪ್ರಪ್ರಥಮ ಅಧ್ಯಕ್ಷರಾದ ಗಂಗಾಧರರಾವ್ ದೇಶಪಾಂಡೆ ಅವರ ಸಲಹೆಯ ಮೇರೆಗೆ ಬೆಳಗಾವಿಯಲ್ಲಿ ನಡೆಸಬೇಕೆಂಬ ತೀರ್ಮಾನವನ್ನು ತೆಗೆದುಕೊಳ್ಳುತ್ತಾರೆ. ಕಾಕಿನಾಡ ಅಧಿವೇಶನ ಕಾಲಕ್ಕೆ ಗಾಂಧೀಜಿಯವರು ಸೆರೆಮನೆಯಲ್ಲಿದ್ದರು. ಅವರ ದೇಹಾರೋಗ್ಯವು ಶಿಥಿಲಗೊಂಡಿತ್ತು. ಆ ಕಾರಣಕ್ಕಾಗಿ ೧೯೨೪ ಫೆಬ್ರುವರಿಯಲ್ಲಿ ಸರಕಾರ ಅವರನ್ನು ಬಿಡುಗಡೆ ಮಾಡುತ್ತದೆ. ಬೆಳಗಾವಿ ಕಾಂಗ್ರೆಸ್ ಅಧಿವೇಶನಕ್ಕೆ ಗಾಂಧೀಜಿಯವರು ಅಧ್ಯಕ್ಷರಾದ ಕೂಡಲೆ ಗಂಗಾಧರರಾಯರು ಅವರಿಗೆ ಭೇಟಿಯಾಗಿ ಅಧಿಕೃತ ಆಮಂತ್ರಣವನ್ನಿಡುತ್ತಾರೆ. ಆಗ ಗಾಂಧೀಜಿಯವರು ಗಂಗಾಧರರಾಯರನ್ನು ಕುರಿತು ಹೀಗೆ ಹೇಳುತ್ತಾರೆ. ಅಧಿವೇಶನಕ್ಕೆ ಬರುವ ಪ್ರತಿನಿಧಿಗಳಿಗಾಗಿ ನಿರ್ಮಿಸುವ ಗುಡಿಸಲುಗಳಿಗಾಗಿ ಮತ್ತು ಸಭಾಮಂಟಪಕ್ಕೆ ನೀವು ವಿದೇಶಿ ವಸ್ತ್ರವನ್ನು ಹೊದಿಸದೇ ಶುದ್ಧವಾದ ಖಾದಿಯನ್ನೇ ಹೊದಿಸಬೇಕು. ಅಂದರೆ ನಾನು ಅಧ್ಯಕ್ಷನಾಗುತ್ತೇನೆ ಎಂದು ನಗುತ್ತಾ ಹೇಳುತ್ತಾರೆ. ಗಾಂಧೀಜಿಯವರ ಈ ಸವಾಲನ್ನು ಸಂತೋಷದಿಂದ ಸ್ವೀಕರಿಸಿದ ಗಂಗಾಧರರಾಯರು ಆ ಕೆಲಸಕ್ಕೆ ಅಣಿಯಾಗುತ್ತಾರೆ. ಗಾಂಧೀಜಿಯವರು ಈ ಷರತ್ತನ್ನು ಹಾಕಲು ಒಂದು ಪ್ರಬಲವಾದ ಕಾರಣವಿತ್ತು. ಭಾರತದ ಜನತೆಗೆ ಚರಕಾ ಸಂದೇಶವನ್ನು ನೀಡುವುದು ಅವರ ಮುಖ್ಯ ಗುರಿಯಾಗಿತ್ತು. ಗಾಂಧೀಜಿಯವರು ಹೀಗೆ ಹೇಳುತ್ತಾರೆ. "ದೇಶಕ್ಕೆ ನನ್ನ ಶ್ರೇಷ್ಠವಾದ ಸಂದೇಶವೆಂದರೆ ಚರಕಾ. ಇದಕ್ಕಿಂತ ಹೆಚ್ಚಿನ ಸಂದೇಶ ನನ್ನ ಬಳಿ ಇಲ್ಲ. ನ್ಯಾಯಬದ್ಧವಾಗಿ, ಮತ್ತು ಶಾಂತಿಪೂರ್ವಕವಾಗಿ ನಡೆಯಬೇಕಾದರೆ ಇದೊಂದೇ ತಾರಕ ಮಂತ್ರ, ದೇಶವು ಅದನ್ನು ಸ್ವೀಕರಿಸುವುದೆಂಬ ನಂಬಿಕೆ ನನ್ನಲ್ಲಿ ಬಲವಾಗಿದೆ"[೧] ಎಂದು ಹೇಳುತ್ತಾರೆ.

ಕಾಂಗ್ರೆಸ್ ಅಧಿವೇಶನದ ಚಪ್ಪರಕ್ಕೆ ಬೇಕಾಗುವ ಖಾದಿ ಬಟ್ಟೆಯನ್ನು ಉತ್ಪಾದನೆ ಮಾಡಲಾಯಿತು. ಹುದಲಿ ಗ್ರಾಮದವರಾದ ಗಂಗಾಧರರಾವ ದೇಶಪಾಂಡೆಯವರು ತಮ್ಮ ಜಮೀನನ್ನು ಕೊಟ್ಟು ಕುಮರಿ ಆಶ್ರಮವನ್ನು ಕಟ್ಟಿಸಿದರು. ಅಲ್ಲಿಯೇ ಅಖಿಲ ಭಾರತ ಚರಕಾ ಸಂಘವನ್ನು ಸ್ಥಾಪಿಸಿದರು. ಈ ಸಂದರ್ಭದಲ್ಲಿ ಕಾಂಗ್ರೆಸ್ ಅಧಿವೇಶನಕ್ಕೆ ಬೇಕಾದ ಸಭಾ ಮಂಟಪಕ್ಕೆ ಕಾಗಲದ ಛತ್ರೆ ಸರ್ಕಸ್ಸಿನ ಡೇರೆ ಕಂಬಗಳನ್ನು ತರಿಸಲಾಯಿತು. ಆ ಎಲ್ಲಾ ಕಂಬಗಳ ಮೇಲೆ ಕರ್ನಾಟಕದ ಹುದಲಿಯಲ್ಲಿ ಸಿದ್ಧವಾದ ಖಾದಿ ಬಟ್ಟೆಯನ್ನೇ ಗಾಂಧೀಜಿಯವರ ಅಪೇಕ್ಷೆಯ ಮೇರೆಗೆ ಹೊದಿಸಲಾಯಿತು. ಬೆಳಗಾವಿ ಅಧಿವೇಶನದ ಅಪರೂಪದ ಸನ್ನಿವೇಶವಿದು. ಬೆಳಗಾವಿಯ ಜನಸಂಖ್ಯೆಯು ಆಗ ಸುಮಾರು ಮೂವತ್ತು ಸಾವಿರವಿತ್ತು. ಇದಲ್ಲದೆ ಅಧಿವೇಶನಕ್ಕೆ ಬೇರೆ ಬೇರೆ ಪ್ರಾಂತಗಳಿಂದ ಸಾವಿರ ಸಾವಿರ ಸಂಖ್ಯೆಗಳಲ್ಲಿ ಜನ ಬರುವರೆಂದು ಬಯಸಿ ವಿಶಾಲವಾದ ಬಯಲನ್ನು ಸುಸಜ್ಜಿತಗೊಳಿಸಲಾಯಿತು. ಬೆಳಗಾವಿಯ ರೈಲು ಮನೆಯ ಪಶ್ಚಿಮ ಭಾಗಕ್ಕಿದ್ದ ಹೊಲವೊಂದನ್ನು ಆಯ್ಕೆ ಮಾಡಿಕೊಂಡು ಅದಕ್ಕೆ 'ವಿಜಯನಗರ'ವೆಂದು ಹೆಸರಿಟ್ಟು ಪ್ರತಿನಿಧಿಗಳಿಗೆ ಅನುಕೂಲ ಮಾಡಿಕೊಡಲಾಯಿತು. ಅಧಿವೇಶನಕ್ಕೆ ಬಂದ ಎಲ್ಲ ಜನರಿಗೆ ನೀರಿನ ಅನುಕೂಲತೆ ಮಾಡುವುದರ ಸಲುವಾಗಿ ಒಂದು ದೊಡ್ಡ ಬಾವಿಯನ್ನೇ ತೋಡಲಾಯಿತು. ಅದಕ್ಕೆ 'ಪಂಪಾ ಸರೋವರ'ವೆಂದು ಹೆಸರಿಟ್ಟಿದ್ದರಂತೆ.

ಅಡುಗೆಗಾಗಿ ನಿರ್ಮಿಸಲಾಗಿದ್ದ ಉಗ್ರಾಣ ವಿವಿಧ ಸಾಮಾನುಗಳಿಂದ ತುಂಬಿ ಹೋಗಿತ್ತು. ಸುಮಾರು ಐವತ್ತೊಂದು ಚೀಲ ಮೆಣಸಿನ ಪುಡಿಯನ್ನು ಸಂಗ್ರಹಿಸಲಾಗಿತ್ತು. ಈ ಸಮಾವೇಶಕ್ಕೆ ಸಂಗ್ರಹಿಸಿದ ಧಾನ್ಯ ಮತ್ತು ವಸ್ತುಗಳನ್ನು ಒಂದು ಕಡೆ ಶೇಖರಿಸಿದರೆ ಅದು ಒಂದು ದೊಡ್ಡ ಬೆಟ್ಟವಾಗುತ್ತಿತ್ತು. ಮುಂಬೈಯಿಂದ ಸುಮಾರು ಸಾವಿರ ಲಾಟೀನುಗಳೂ ಎರಡನೂರಾ ಐವತ್ತು ಪೆಟ್ರೋಮ್ಯಾಕ್ಸಗಳೂ ಬಂದಿದ್ದವು. ಸಮಾವೇಶದ ಪ್ರವೇಶದ್ವಾರವನ್ನು ದೊಡ್ಡ ಗೋಪುರಾಕಾರದಲ್ಲಿ ನಿರ್ಮಿಸಲಾಗಿತ್ತು ಈ ಗೋಪುರಕ್ಕೆ ಏಳು ಮಹಡಿಗಳಿದ್ದವು. ಐದನೇ ಮಹಡಿಯನ್ನು ಏರಿ ನೋಡಿದರೆ ಇಡೀ ಶಿಬಿರವು ದೃಷ್ಟಿಗೆ ಗೋಚರವಾಗುತ್ತಿತ್ತು.

ಅಧಿವೇಶನದದಲ್ಲಿ ಭಾಗವಹಿಸಿದ ಸದಸ್ಯರಿಗೆ ರುಚಿ ರುಚಿಯಾದ ಅಡುಗೆಯನ್ನು ಮಾಡಿ ಬಡಿಸಲಾಗುತ್ತಿತ್ತು. ಮಿರಜದಿಂದ ಹಾಲು, ಮೊಸರು, ಬೆಣ್ಣೆ ಬರುತ್ತಿತ್ತು. ತುಪ್ಪದಲ್ಲಿಯೇ ಬುಂದಿ, ಜಿಲೇಬಿ, ಸಿರಾ ಮಾಡಿ ಪ್ರತಿನಿಧಿಗಳು ತೃಪ್ತಿ ಪಡುವಂತೆ ಊಟದ ವ್ಯವಸ್ಥೆಯನ್ನು ಮಾಡಲಾಗಿತ್ತು. ಗಾಂಧೀಜಿಯವರು ಅಧಿವೇಶನದಲ್ಲಿ ಭಾಗವಹಿಸಿ ಎಲ್ಲ ಕಾರ್ಯಕ್ರಮಗಳ ಬಗ್ಗೆ ತಾವೇ ಮುಂದು ನಿಂತು ವಿಚಾರಿಸಿ ಕ್ರಮ ಕೈಕೊಳ್ಳುತ್ತಿದ್ದರು. ಇದಲ್ಲದೆ ಎಲ್ಲ ಕಾರ್ಯಕರ್ತರನ್ನು ಗಾಂಧೀಜಿಯವರು ಸಮಾನತೆಯಿಂದ ಕಾಣುತ್ತಿದ್ದರು. 'ತಾವು ಉಣ್ಣುವ ಊಟವನ್ನೇ ಕಸಗುಡಿಸುವ ಸಾಮಾನ್ಯ ಕಾರ್ಯಕರ್ತನೂ ಉಣ್ಣಬೇಕು' ಎಂದು ಗಾಂಧೀಜಿ ಹೇಳಿದ್ದರು. ಅದು ಬೆಳಗಾವಿಯ ಅಧಿವೇಶನದ ಮುಂಚೆಯೇ ಅನುಷ್ಠಾನಗೊಂಡಿತು. ಇದು ಕೂಡಾ ಬೆಳಗಾವಿಯ ವೈಶಿಷ್ಟ್ಯವೇ ಆಗಿದೆ. ಈ ಮೊದಲು ಇಂತಹ ಸಭೆ ಸಮಾರಂಭಗಳಲ್ಲಿ ನಾಯಕರಿಗೆ ಬೇರೆ ಊಟದ ವ್ಯವಸ್ಥೆ ಇರುತ್ತಿತ್ತು. ಗಾಂಧೀ ಈ ಹೇಳಿಕೆ ಕೊಟ್ಟ ನಂತರ ಅಂದರೆ ಬೆಳಗಾವಿ ಅಧಿವೇಶನದಿಂದಲೇ ನಾಯಕರನ್ನು ಒಳಗೊಂಡು ಸಾಮಾನ್ಯ ಸ್ವಯಂ ಸೇವಕನು ಒಂದೇ ಭೋಜನವನ್ನು ಸ್ವೀಕರಿಸುವ ಪದ್ಧತಿ ಜಾರಿಗೆ ಬರುತ್ತದೆ.

ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಜರುಗಿದ ಅಧಿವೇಶನಕ್ಕೆ ಸಾಕಷ್ಟು ಜನರು ಅಹಮ್ಮದಾಬಾದನಿಂದ ರೈಲಿನಲ್ಲಿ ಮೂರು ದಿವಸ ಮೊದಲೇ ಬಂದಿದ್ದರು. ಅಧಿವೇಶನದ ಸಮೀಪದಲ್ಲಿಯೇ ಒಂದು ರೈಲು ಮನೆಯನ್ನು ನಿರ್ಮಿಸಲಾಯಿತು. ಈ ಅಧಿವೇಶನದ ಇನ್ನೊಂದು ವೈಶಿಷ್ಟ್ಯವೆಂದರೆ ಇದು ಸಂಪೂರ್ಣ ಕನ್ನಡಮಯವಾಗಿತ್ತು. ಕನ್ನಡ ಸ್ವಾಗತ ಗೀತೆಯನ್ನು ಹಾಡಿಸಬೇಕೆಂಬ ಉದ್ದೇಶದಿಂದ ಸ್ವಾಗತ ಗೀತ ರಚನಾ ಸ್ಪರ್ಧೆಯನ್ನು ಹಮ್ಮಿಕೊಳ್ಳಲಾಗಿತ್ತು. ಹುಯಿಲಗೋಳ ನಾರಾಯಣರಾಯರು ಬರೆದ ಉದಯವಾಗಲಿ ನಮ್ಮ ಚಲುವ ಕನ್ನಡ ನಾಡು ಪದ್ಯವನ್ನು ಆಯ್ಕೆ ಮಾಡಿಕೊಂಡು ಅಧೀವೇಶನದಲ್ಲಿ ಹಾಡಿಸಲಾಯಿತು. ಕರ್ನಾಟಕದ ಸಂಗೀತ ವಿದೂಷಿ ಗಂಗೂಬಾಯಿ ಹಾನಗಲ್ಲ ತಮ್ಮ ಸುಶ್ರಾವ್ಯ ಕಂಠದಿಂದ ಹಾಡಿ ಪ್ರತಿನಿಧಿಗಳನ್ನು ತೃಪ್ತಿಪಡಿಸುತ್ತಾರೆ. ಸುಪ್ರಸಿದ್ಧ ವೀಣಾವಾದಕಿ ರಾಜಮ್ಮಾ ವೀಣೆಯನ್ನು ನುಡಿಸುತ್ತಾರೆ. ಬೆಳಗಾವಿ ಅಧೀವೇಶನದ ಮಂಟಪವು ಕರ್ನಾಟಕದ ಏಕೀಕರಣದ ಮಂಟಪವೂ ಆಗಿತ್ತು. ಆಲೂರು ವೆಂಕಟರಾಯರು, ಮುದುವೀಡು ಕೃಷ್ಣರಾಯರು, ಮಂಗಳವೇಡೆಯ ಶ್ರೀನಿವಾಸರಾಯರು ಈ

ಸಭೆಯಲ್ಲಿ ಭಾಗವಹಿಸಿದ್ದರು. ನಾರಾಯಣರಾವ್ ಹರ್ಡಿಕರ್ ಅವರು ನೇತೃತ್ವವನ್ನು ವಹಿಸಿದ ಈ ಅಧಿವೇಶನದಲ್ಲಿ ಒಂದು ಸಾವಿರದಾ ಏಳನೂರು ಜನ ಸ್ವಯಂ ಸೇವಕರು ಸಕ್ರೀಯವಾಗಿ ಭಾಗವಹಿಸಿದ್ದರು.

ಗಾಂಧೀಜಿಯವರ ವಿಶೇಷ ಗುಣವೆಂದರೆ ಅಧಿವೇಶನದ ಪ್ರತಿಯೊಂದು ಕಾರ್ಯವನ್ನು ತಾವೇ ಖುದ್ದಾಗಿ ಪರಿಶೀಲಿಸುತ್ತಿದ್ದರು. ಈ ಸಂದರ್ಭದಲ್ಲಿ ನಡೆದ ಒಂದು ಘಟನೆ ಆಶ್ಚರ್ಯಕರವೂ ಹೃದಯ ಸ್ಪರ್ಶಿಯೂ ಆಗಿದೆ. ಸುಪ್ರಸಿದ್ಧ ಪರ್ತಕರ್ತರಾಗಿದ್ದ ದುರ್ಗಾದಾಸ ಗಾಂಧೀಜಿಯವರಿಗೆ ಒಂದು ವಿಷಯವನ್ನು ಹೇಳಿ ಆಶ್ಚರ್ಯಪಡಿಸುತ್ತಾರೆ. ಅದು ಜವಾಹರಲಾಲ ನೆಹರು ಮತ್ತು ಅವರ ತಂದೆ ಮೋತಿಲಾಲರ ಮಧ್ಯೆ ಉಂಟಾದ ಮನಸ್ತಾಪ. ಈ ಸಂಗತಿ ಗಾಂಧೀಜಿಯವರಿಗೆ ಸಂಪೂರ್ಣವಾಗಿ ಗೊತ್ತಿರಲಿಲ್ಲ. ಜವಾಹರಲಾಲರು ಬ್ಯಾರಿಷ್ಟರ್ ಪದವಿ ಪಾಸಾಗಿ ವಿದೇಶದಿಂದ ಭಾರತಕ್ಕೆ ಬರುತ್ತಾರೆ. ಅವರಿಗೆ ವಕೀಲಿ ವೃತ್ತಿ ಮಾಡುವುದು ಇಷ್ಟವಿರಲಿಲ್ಲ. ಆದರೆ ತಂದೆ ಮೋತಿಲಾಲರಿಗೆ ತನ್ನ ಮಗನು ವಕೀಲಿ ವೃತ್ತಿಯನ್ನೇ ಮಾಡಬೇಕೆಂಬ ಬಯಕೆ ಇತ್ತು. ಹೇಗಾದರೂ ಮಾಡಿ ತನ್ನ ಮಗ ವಕೀಲಿ ವೃತ್ತಿಯನ್ನು ಮಾಡಿ ತನ್ನಂತೆ ಹಣ ಗಳಿಸಬೇಕೆಂಬ ಇಚ್ಛೆ ಮೋತಿಲಾಲರದು. ಆದರೆ ಮುದ್ದಿನಿಂದ ಬೆಳೆಸಿದ ಮಗನಿಗೆ ಈ ಮಾತನ್ನು ಹೇಗೆ ಹೇಳಬೇಕು ಎಂದು ತಿಳಿಯದೇ ಕೆಲವು ದಿನ ಸುಮ್ಮನೆ ಇದ್ದರು. ಜವಾಹರಲಾಲರು ಮಾತ್ರ ವಕೀಲಿ ವೃತ್ತಿಯೆಂದರೆ ಅವರಿಗೆ ಅಸಡ್ಡೆ ಎನಿಸಿತ್ತು. ಇತರ ವಕೀಲರು ಸಿಕ್ಕಾಪಟ್ಟೆ ಹಣ ಗಳಿಸುವುದನ್ನು ನೋಡಿ ಇವರಿಗೆ ಜಿಗುಪ್ಸೆ ಉಂಟಾಗಿತ್ತು. ವಕೀಲಿ ವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳದೇ ಪತ್ರಕರ್ತರಾಗಿ ಸ್ವತಂತ್ರ ವಿಚಾರಗಳನ್ನು ನಾಡಿನ ಜನರಿಗೆ ಮುಟ್ಟಿಸುವ ವಿಧಾಯಕ ಕಾರ್ಯದಲ್ಲಿ ತೊಡಗಬೇಕೆಂಬ ಬಯಕೆ ಅವರದಾಗಿತ್ತು. ಮೋತಿಲಾಲರು ಮಗನೊಂದಿಗೆ ಊಟಕ್ಕೆ ಕುಳಿತಾಗ ಹಲವು ದಿನಗಳಿಂದ ಹೇಳಬೇಕಾದ ಮಾತುನ್ನು ಗಟ್ಟಿ ಮನಸ್ಸು ಮಾಡಿ ಹೇಳಿಯೇ ಬಿಡುತ್ತಾರೆ. "ತಂದೆಯ ಶ್ರೀಮಂತಿಕೆಯ ಮೇಲೆ ನೀನು ಇನ್ನು ಸ್ವಚ್ಛಂದ ಜೀವನವನ್ನು ನಡೆಸುವುದು ಒಳ್ಳೆಯದಲ್ಲ. ನೀನು ವಕೀಲಿ ವೃತ್ತಿಯಿಂದ ಹಣ ಗಳಿಸಬೇಕು ಎಂದು ಹೇಳುತ್ತಾರೆ"[೨].

ಜವಾಹರಲಾಲ ನೆಹರು ಅವರಿಗೆ ತಂದೆ ಆಡಿದ ಈ ಮಾತು ಮನಸ್ಸಿಗೆ ಆಘಾತವನ್ನುಂಟು ಮಾಡುತ್ತದೆ. ಅವರು ತಂದೆಯವರೊಡನೆ ಕುಳಿತು ಊಟ ಮಾಡುವುದನ್ನು ಬಿಡುತ್ತಾರೆ. ಹುರಿಗಡಲೆಗಳನ್ನು ತಿಂದು ಕಾಲ ಕಳೆಯುತ್ತಾರೆ. ಹೊಸ ಬಟ್ಟೆಗಳನ್ನು ಖರೀದಿಸುವುದನ್ನು ಬಿಟ್ಟರು. ತಮ್ಮ ಮೊದಲಿನ ಐಷಾರಾಮಿ ಜೀವನಕ್ಕೆ ತಿಲಾಂಜಲಿಯನ್ನಿತ್ತರು. ಕೆಲವೊಮ್ಮೆ ಹರಿದ ಬಟ್ಟೆಗಳನ್ನು ಹಾಕಿಕೊಂಡು ಸಭೆ ಸಮಾರಂಭಗಳಿಗೆ ಹೋಗುತ್ತಿದ್ದರು. ಖಾದಿ ಬಟ್ಟೆ ತೊಡುವುದನ್ನು ರೂಢಸಿಕೊಂಡರು. ಹಳೆ ಬಟ್ಟೆಗಳಿಗೆ ತೇಪೆ ಹಚ್ಚಿ ತೊಟ್ಟುಕೊಳ್ಳುತ್ತಿದ್ದರು. ಈ ವಿಚಿತ್ರ ಬದಲಾವಣೆಗಳನ್ನು ಕಂಡು ಮೋತಿಲಾಲರಿಗೆ ಕಸಿವಿಸಿಯಾಯಿತು. ಯಾವ ವಿಷಗಳಿಗೆಯಲ್ಲಿ ನಾನು ಈ ಮಾತನಾಡಿದೇನೋ ಎಂದು ಒಳಗೊಳಗೆ ಅವರು ಮರುಗಿದರು. ತಮ್ಮ ಅಪಾರ ಸಂಪತ್ತಿಗೆ

ಒಬ್ಬನೇ ಮಗ. ಈ ಭೋಗವನ್ನು ಭೋಗಿಸುವವರಾದರೂ ಯಾರು ? ಎಂಬ ಚಿಂತೆ ಕಾಡತೊಡಗಿತು. ನೆಹರು ಅವರು ತಮ್ಮ ಪತ್ನಿ ಕಮಲಾದೇವಿಯವರಿಗೂ ಕೂಡಾ ಆನಂದ ಭವನದಲ್ಲಿ ಊಟ ಮಾಡದಂತೆ ಕಟ್ಟಪ್ಪಣೆ ವಿಧಿಸಿದರು. ಮೋತಿಲಾಲರಿಗೆ ತುಂಬಾ ಕೆಡಕೆನಿಸಿತು. ತಮ್ಮ ಸಂಪತ್ತೆಲ್ಲಾ ನಿರರ್ಥಕವೆನಿಸಿತು. ಆನಂದ ಭವನವು ದೊಡ್ಡದೊಂದು ಶೂನ್ಯದಂತೆ ಕಾಣಿಸತೊಡಗಿತು. ಆಗಿನ ಕಾಂಗ್ರೆಸ್ಸ ಅಧ್ಯಕ್ಷರಾಗಿದ್ದ ಮೌಲಾನಾ ಮಹಮದ್ ಅಲಿಯವರಿಗೆ ಮಹಾವೀರ ತ್ಯಾಗಿ ಜವಾಹರಲಾಲರಿಗೂ ಮತ್ತು ಅವರ ತಂದೆಗೂ ಉಂಟಾದ ಭಿನ್ನಾಭಿಪ್ರಾಯವನ್ನು ಕುರಿತು ತಿಳಿಸುತ್ತಾರೆ. ಆಗ ಮಹಮದ್ ಅಲಿಯವರು ತಕ್ಷಣ ಜವಾಹರಲಾಲರನ್ನು ಕರೆಸಿ ತಂದೆಯವರಲ್ಲಿ ಕ್ಷಮೆ ಕೇಳುವಂತೆ ಸೂಚಿಸುತ್ತಾರೆ. ಜವಾಹರಲಾಲರು ಮರು ಮಾತಾಡದೇ ತಂದೆಯವರಲ್ಲಿ ಕ್ಷಮೆ ಕೋರಿರುತ್ತಾರೆ. ಮೋತಿಲಾಲರಿಗೆ ಆನಂದಬಾಷ್ಪಗಳುದಿರಿದವು. ತಂದೆ ಮಗನ ಮಧ್ಯದಲ್ಲಿ ಉಂಟಾಗಿದ್ದ ವಿರಸವು ಮಾಯವಾಗಿ ಸಮರಸ ನೆಲೆಗೊಂಡದ್ದು ಮತ್ತು ಆ ಸಂಗತಿ ದುರ್ಗಾದಾಸರಿಂದ ಗಾಂಧೀಜಿಗೆ ತಿಳಿದದ್ದು ಬೆಳಗಾವಿ ಅಧೀವೇಶನದಲ್ಲಿ. ಈ ಅಧೀವೇಶನಕ್ಕೆ ಮೋತಿಲಾಲ ಮತ್ತು ಜವಾಹರಲಾಲ ನೆಹರು ಇವರಿಬ್ಬರೂ ಕೂಡಿಯೇ ಬಂದಿದ್ದರು. ಇವರಿಬ್ಬರ ಸಾಮರಸ್ಯದ ಬದುಕಿಗೆ ಬೆಳಗಾವಿ ಅಧಿವೇಶನವು ಸಾಕ್ಷಿಯಾಗಿತ್ತು.

ಈ ಹಿಂದೆ ನೆಹರು ಅವರು ಗಾಂಧೀಜಿಗೆ ಪತ್ರವೊಂದನ್ನು ಬರೆದು ತನಗೆ ತಂದೆಯ ಹಣದ ಮೇಲೆ ಜೀವಿಸುವ ಇಚ್ಛೆ ಇಲ್ಲವೆಂದು ಗಾಂಧೀಜಿಯವರಿಗೆ ತಿಳಿಸಿದರು. ಆಗ ಗಾಂಧೀಜಿ ನೆಹರು ಅವರಿಗೆ ಪತ್ರಿಕಾ ಕ್ಷೇತ್ರದಲ್ಲಾಗಲೀ, ಪ್ರಾಧ್ಯಾಪಕ ಹುದ್ದೆಯಲ್ಲಾಗಲೀ ಅಥವಾ ವಾಣಿಜ್ಯ ಸಂಸ್ಥೆಯಲ್ಲಾಗಲೀ ಕೆಲಸ ಕೊಡಿಸಬೇಕೆಂದು ನಿರ್ಣಯಿಸಿದ್ದರು. ಕೊನೆಗೆ ಕಾಂಗ್ರೆಸ್ ಕಾರ್ಯದರ್ಶಿಯಾಗಿ ಸಂಪೂರ್ಣ ಜವಾಬ್ದಾರಿಯಿಂದ ಕೆಲಸ ಮಾಡುವಂತೆ ನೆಹರು ಅವರನ್ನೇ ನೇಮಿಸುತ್ತಾರೆ ಮತ್ತು ಆ ಹುದ್ದೆಗೆ ತಿಂಗಳಿಗೆ ಮೂರು ಸಾವಿರ ರೂಪಾಯಿ ವೇತನವನ್ನು ಗೊತ್ತು ಮಾಡುತ್ತಾರೆ. ಕಾಂಗ್ರೆಸಿನಲ್ಲಿ ಕೆಲವು ನಾಯಕರಿಗೆ ಈ ಸಂಗತಿ ಹಿಡಿಸಲಿಲ್ಲ. ಆದರೆ ಗಾಂಧೀಜಿಯವರ ದೂರಗಾಮಿ ದೃಷ್ಟಿ ಮುಂದಾಲೋಚನೆ ತಿಳಿದ ಬಳಿಕ ಅವರಿಗೂ ಸಂತೋಷ ಉಂಟಾಯಿತು. ರಾಷ್ಟ್ರಮಟ್ಟದ ಇಂತಹ ಚರ್ಚೆಗಳೆಲ್ಲಾ ಗಾಂಧೀಜಿಗೆ ಗೊತ್ತಾದದ್ದು ಬೆಳಗಾವಿ ಅಧಿವೇಶನದಲ್ಲಿ ಆದ್ದರಿಂದ ಇದೊಂದು ವಿಶಿಷ್ಟವಾದ ಅಧಿವೇಶನ.

ಬೆಳಗಾವಿ ಅಧಿವೇಶನವು ಹಲವು ವೈಶಿಷ್ಟಗಳನ್ನು ಒಳಗೊಂಡಿದೆ. ವಿಭಿನ್ನ ರಾಜಕೀಯ ಹಿನ್ನೆಲೆಯ ಸಂಘಟನೆಗಳನ್ನು ಪ್ರತ್ಯೇಕವಾಗಿ ಮತ್ತು ಜಂಟಿಯಾಗಿ ಚರ್ಚೆ ನಡೆಸಲು ಇಲ್ಲಿ ಆಹ್ವಾನಿಸಲಾಗಿತ್ತು. ಖಿಲಾಫತ್ ಸಂಘಟನೆ, ಮುಸ್ಲಿಂ ಲೀಗ್, ಬ್ರಾಹ್ಮಣೇತರ ಪಕ್ಷ ನಿಮ್ನ ವರ್ಗಗಳ ಸಂಘಟನೆ ಇವೆಲ್ಲವುಗಳನ್ನು ಬೆಳಗಾವಿ ಅಧಿವೇಶನಕ್ಕೆ ಆಹ್ವಾನಿಸಲಾಗಿತ್ತು. ಹಾಗೆ ನೋಡಿದರೆ ಇವೆಲ್ಲಾ ಸಂಘಟನೆಗಳು ಭಿನ್ನ ಭಿನ್ನ ಅಭಿಪ್ರಾಯಗಳನ್ನು ಒಳಗೊಂಡಿದ್ದವು. ಇವುಗಳನ್ನು ಒಂದೆಡೆಗೆ ಸೇರಿಸಿದ್ದು ಮತ್ತು ಪರಸ್ಪರ ವಿರೋಧವಾದ ಭಿನ್ನಾಭಿಪ್ರಾಯಗಳನ್ನು ಬದಿಗಿಟ್ಟು ರಾಷ್ಟ್ರೀಯ ಹೋರಾಟಕ್ಕೆ

ಎಲ್ಲರೂ ಅಣಿಯಾಗುವಂತೆ ಪ್ರೇರಣೆ ನೀಡುವ ಉದ್ದೇಶವು ಈ ಅಧಿವೇಶನದಾಗಿತ್ತು. ಆದ್ದರಿಂದ ಇದನ್ನು ರಾಷ್ಟ್ರೀಯ ವಿಶಾಲ ಮನೋಭಾವದ ಅಧಿವೇಶನವೆಂದು ಗುರುತಿಸಲಾಯಿತು. ಕರ್ನಾಟಕದ ಹಾಗೂ ದೇಶದ ಬೇರೆ ಬೇರೆ ಭಾಗಗಳಿಂದ ಹಲವು ರಾಷ್ಟ್ರೀಯ ಮುಖಂಡರು ಇದರಲ್ಲಿ ಬಾಗವಹಿಸಿದ್ದು ವಿಶೇಷವಾಗಿತ್ತು. ರಾಷ್ಟ್ರಮಟ್ಟದ ನಾಯಕರ ಭಿನ್ನಾಭಿಪ್ರಾಯಗಳು ದೂರವಾಗಿ ಅವರೆಲ್ಲಾ ಒಂದುಗೂಡಿ ಹೋರಾಟಕ್ಕೆ ಅಣಿಯಾಗಲು ವೇದಿಕೆ ನಿರ್ಮಾಣವಾದದ್ದು ಬೆಳಗಾವಿ ಅಧಿವೇಶನದಲ್ಲಿ. ಗಾಂಧೀಜಿಯವರು ಹೇಳುತ್ತಿದ್ದ ಅಸಹಕಾರ, ವಿದೇಶಿ ಬಟ್ಟೆಗಳ ಬಹಿಷ್ಕಾರ, ಖಾದಿ ಧಾರಣೆ, ಕಾಂಗ್ರೆಸ್ ಸದಸ್ಯರೆಲ್ಲರೂ ತಾವು ನೂತ ನೂಲನ್ನೇ ಮಾರಿ ಸದಸ್ಯತ್ವದ ಶುಲ್ಕನ್ನು ಭರಿಸಬೇಕೆಂಬ ನಿರ್ಬಂಧಗಳು ಕೆಲವು ಹಿರಿಯ ಕಾಂಗ್ರೆಸ್ ಮುಖಂಡರಿಗೆ ಒಪ್ಪಿಗೆಯಾಗಿರಲಿಲ್ಲ. ಇಂತಹ ವಿಧಾಯಕ ಕಾರ್ಯಗಳಿಂದ ದೇಶಕ್ಕೆ ಸ್ವಾತಂತ್ರ್ಯ ಸಿಗುವುದು ಅಸಂಭವವೆಂದರು. ಚಿತ್ತರಂಜನದಾಸ, ಮೋತಿಲಾಲನೆಹರು, ವಿಠ್ಠಲಬಾಯಿ ಮುಂತಾದವರು ಕೌನ್ಸಿಲ್ ಸೇರಿದರು. ಗಾಂಧೀಜಿ ಕೌನ್ಸಿಲ್ ಚುನಾವಣೆಗಳನ್ನು ಬಹಿಷ್ಕರಿಸಿದ್ದರು. ಆದ್ದರಿಂದ ಚಿತ್ತರಂಜನದಾಸ ಮತ್ತು ಮೋತಿಲಾಲ ನೆಹರು ಅವರು ಕಾಂಗ್ರೆಸ್ ಪದಾಧಿಕಾರಿಗಳ ಹುದ್ದೆಗೆ ರಾಜೀನಾಮೆ ಕೊಡುತ್ತಾರೆ. ಮುಂದೆ ೧೯೨೩ ರಲ್ಲಿ ಸ್ವರಾಜ್ಯ ಪಕ್ಷವನ್ನು ಕಟ್ಟಿದರಲ್ಲದೆ ಚಿತ್ತರಂಜನದಾಸ ಅವರು ಅಧ್ಯಕ್ಷರಾಗಿದ್ದರು ಮತ್ತು ಮೋತಿಲಾಲರು ಕಾರ್ಯದರ್ಶಿಗಳಾಗಿದ್ದರು. ಇದು ಕಾಂಗ್ರೆಸನಲ್ಲಿ ವಿಪರೀತ ಪರಿಣಾಮವನ್ನುಂಟು ಮಾಡಬಹುದೆಂಬ ಸಂಶಯವು ಗಾಂಧೀಜಿಯವರನ್ನು ಕಾಡುತ್ತಿತ್ತು. ಆದ್ದರಿಂದ ಅವರು ಸ್ವರಾಜ್ಯ ಪಕ್ಷದ ಸದಸ್ಯರಿಗೆ ಕೌನ್ಸಿಲ್ ಸೇರಲು ಅನುಮತಿಯನ್ನು ಕೊಟ್ಟರು. ಆದರೆ ಕೌನ್ಸಿಲ್ ಸೇರುವವರು ಕಾಂಗ್ರೆಸ್ ಸಿದ್ಧಾಂತವನ್ನು ಕೈ ಬಿಡಬಾರದೆಂಬ ಕೋರಿಕೆಯನ್ನು ಇಟ್ಟಿದ್ದರು. ಇದಲ್ಲದೇ ಮೋತಿಲಾಲರನ್ನು ತಮ್ಮ ಕಡೆ ಸೆಳೆದುಕೊಳ್ಳಲು ಗಾಂಧೀಜಿಯವರು ೧೯೨೪ ರಲ್ಲಿ ಬೆಳಗಾವಿ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗಿ ಆಯ್ಕೆಯಾದ ಕೂಡಲೇ ಜವಾಹರಲಾಲ ನೆಹರು ಅವರನ್ನು ಕಾಂಗ್ರೆಸಿನ ಪ್ರಧಾನ ಕಾರ್ಯದರ್ಶಿಯಾಗಿ ಆಯ್ಕೆ ಮಾಡಿದರು. ಈ ಎಲ್ಲ ಸಂಗತಿಗಳು ನಡೆದದ್ದು ಬೆಳಗಾವಿ ಅಧಿವೇಶನದಲ್ಲಿ. ಈ ಅಧಿವೇಶನದಲ್ಲಿ ಗಾಂಧೀಜಿಯವರು ಹೇಳಿದ ಮಾತುಗಳನ್ನು ಇಲ್ಲಿ ಉಲ್ಲೇಖಿಸಲೇಬೇಕು.

'ಈ ಹುದಲಿಯ ಗಾಂಧೀ ಸೇವಾ ಸಮ್ಮೇಲನದ ಸಂದರ್ಭದಲ್ಲಿ ಮೂರು ಕಾರ್ಯಗಳನ್ನು ಮಾಡುವ ನಿರ್ಧಾರ ಮಾಡಲಾಗಿದೆ. ಊರಲ್ಲಿಯ ತಗ್ಗನ್ನು ಕಲ್ಲು ಮಣ್ಣುಗಳಿಂದ ಮುಚ್ಚುವದು ಮೊದಲನೆಯದು, ಶಾರೀರಿಕ ಶ್ರಮದಿಂದ ಅರ್ಧಕ್ಕೆ ನಿಂತಿರುವ ರಸ್ತೆಗೆ ಕಲ್ಲು ಜೋಡಿಸುವ ಕೆಲಸವನ್ನು ಪೂರ್ಣಗೊಳಿಸುವುದು ಎರಡನೆಯದು. ಹನುಮಂತದೇವರ ಗುಡಿಯ ಎದುರು ಒಂದು ಭಾವಿ ತೋಡುವುದು ಮೂರನೆಯದು. ಈ ಮೂರು ಕೆಲಸಗಳನ್ನು ಮಾಡುವ ನಿರ್ಧಾರವನ್ನು ನಾವು ಮಾಡಿದೆವು. ಆದರೆ ಅವುಗಳನ್ನು ಪೂರ್ಣಗೊಳಿಸುವುದು ಆಗಲಿಲ್ಲವೆಂದು ದುಃಖದಿಂದ ಹೇಳಬೇಕಾಗುತ್ತದೆ. ಈ ನಿಟ್ಟಿನಿಂದ ಸ್ತ್ರೀ-ಪುರುಷರು ಬಹಳ ಉತ್ಸಾಹದಿಂದ ಕೆಲಸ ಮಾಡಲು ಬಂದಿದ್ದರು. ಹುದಲಿಯ ಯುವಕರು ಶರೀರ ಶ್ರಮಮಾಡಲು ಉತ್ಸುಕರಾಗಿದ್ದಾರೆ ಆದರೆ ದೇವರ ಇಚ್ಛೆಯೆ ಬೇರೆ ಇದೆ. ದೇವರು ಮನುಷ್ಯ ಪ್ರಯತ್ನವನ್ನು ಸಫಲಗೊಳಿಸುತ್ತಾನೆಂದು

ಕೆಲವರು ಅನ್ನುತ್ತಾರೆ. ಆದರೆ ಒಳ್ಳೆಯ ಕಾರ್ಯವು ಎಂದಿಗೂ ಅಸಫಲವಾಗುವದಿಲ್ಲ ಎಂಬುದನ್ನು ನಾವು ಲಕ್ಷ್ಯದಲ್ಲಿಡಬೇಕು. ಯಾವ ಸ್ತ್ರೀ-ಪುರುಷರು ಭಕ್ತಿಯಿಂದ ಸತ್ಕರ್ಮದಲ್ಲಿ ಭಾಗವಹಿಸಿಕೊಳ್ಳುತ್ತಾರೆಯೋ ಆ ಕಾರ್ಯವು ಎಂದಿಗೂ ಅಸಫಲವಾಗುವುದಿಲ್ಲ ಹುದಲಿಯ ಜನತೆ ಈ ಕಾರ್ಯವನ್ನು ಬೇಗನೆ ಮುಗಿಸುವರೆಂದು ನಾನು ಇಚ್ಛಿಸುತ್ತೇನೆ'.

ಕಸ-ಮುಸುರೆಗಳನ್ನು ಹಾಕಿದ ತಗ್ಗು ಆರೋಗ್ಯದ ದೃಷ್ಟಿಯಿಂದ ಹಾನಿಕಾರಕವೆಂದು ಆ ತಗ್ಗಿನ ಮಾಲೀಕನಿಗೆ ತಿಳಿಸಿದಾಗ ಅವನು ಒಪ್ಪಿಕೊಂಡನು. ಅವನಿಗೂ ಹಾಗೆ ಮನವೊಲಿಸಿದ ಕಾರ್ಯಕರ್ತರಿಗೂ ನಾನು ಧನ್ಯವಾದಗಳನ್ನು ಅರ್ಪಿಸುತ್ತೇನೆ. ಇದೇ ರೀತಿ ಹುದಲಿಯ ಜನತೆ ಮತ್ತು ಕಾರ್ಯಕರ್ತರು ಕೆಲಸ ಮಾಡಿ ತೋರಿಸಿದರೆ ನಿಶ್ಚಯವಾಗಿಯೂ ಈ ಗ್ರಾಮವು ನಮ್ಮ ದೇಶದಲ್ಲಿ ಆದರ್ಶ ಗ್ರಾಮವಾಗುತ್ತದೆ. ನಾವು ಸ್ವಾರ್ಥಕ್ಕಾಗಿ ಬದುಕಿಲ್ಲ. ಲೋಕಕಲ್ಯಾಣಕ್ಕಾಗಿ ನಮ್ಮ ಜನನವಾಗಿದೆಯೆಂದು ನಾವು ಜಗತ್ತಿಗೆ ತೋರಿಸಬಲ್ಲೆವು. ಇದೇ ರೀತಿಯಾಗಿ ಕಾಂಗ್ರೆಸ್ ಕಾರ್ಯಕರ್ತರು ಜನತೆಯ ಸೇವೆ ಮಾಡಿದ್ದಾದರೆ ಅದು ದೇಶ ಸೇವೆಯೆಂದು ನಾನು ತಿಳಿಯುತ್ತೇನೆ. ಚುನಾವಣೆಯಲ್ಲಿ ಜನತೆ ತಮ್ಮ ಮತಗಳಿಂದ ಪ್ರತಿನಿಧಿಗಳನ್ನು ಆಯ್ದು ಕಳಿಸುತ್ತಾರೆ. ಈಗ ಮೂರು ಕೋಟಿ ಜನರಿಗೆ ಮತ ಕೊಡುವ ಅಧಿಕಾರವಿದೆ. ಪ್ರತಿನಿಧಿಗಳು ಪಾರ್ಲಿಮೆಂಟಿಗೆ ಹೋಗಿ ಸೇವೆ ಮಾಡುವದು ಅವರ ಧರ್ಮವಾಗಿದೆ. ಆದ್ದರಿಂದ ಕಾಂಗ್ರೆಸಿಗೆ ಮತ ಕೊಡುವದು ಮತದಾರನ ಕರ್ತವ್ಯವಾಗಿದೆ. ಪ್ರತಿನಿಧಿಯು ಪಾರ್ಲಿಮೆಂಟಿಗೆ ಹೋಗಿ ಬರೀ ಮತ ಚಲಾಯಿಸುತ್ತ ಕೂಡುವದು ಸರಿಯಲ್ಲ. ಮತ ನೀಡುವುದರಿಂದ ಸ್ವಾತಂತ್ರ್ಯ ಸಿಗುವದೆಂದು ಭಾವಿಸುವುದು ತಪ್ಪು. ಸ್ವಾತಂತ್ರ್ಯ ಬಯಸುವವನು ವಿಧಾಯಕ ಕಾರ್ಯ ಮಾಡಬೇಕು. ಯಾವುದೇ ಜಾತಿಯ ಮನುಷ್ಯನಾದರೂ ಅವನು ರಚನಾತ್ಮಕ ಕೆಲಸ ಮಾಡುವದೇ ಪ್ರತಿಯೊಬ್ಬನ ಧರ್ಮ ಮತ್ತು ಕರ್ತವ್ಯವಾಗಿದೆ. ಅದನ್ನರಿತು ಈ ಊರಿನ ಶ್ರೀ ಬಸಪ್ಪ ಮತ್ತು ಬಸವಂತಪ್ಪ ಯಮಕನಮರಡಿ, ಶ್ರೀ ಲಕ್ಷ್ಮಣ ಕಮ್ಮಾರ, ಶ್ರೀ ಗೋವಿಂದಪ್ಪ ಪತ್ತಾರ, ದ್ಯಾಮಪ್ಪ ಬಡಿಗೇರ ಮೊದಲಾದವರು ಜನಸೇವೆ ಮಾಡಿದ್ದಾರೆ. ಅವರಿಗೆಲ್ಲ ನನ್ನ ಧನ್ಯವಾದಗಳು. ದೇಶದ ಎಲ್ಲ ಜನರು ಬಸಪ್ಪನವರಂತಾಗಬೇಕು.

ಸ್ವಾಸ್ಥ್ಯವನ್ನು ಕಾಯ್ದುಕೊಳ್ಳಲು ಇಡೀ ಊರಿನ ಜನರು ಆಕಳ ಹಾಲು ಕುಡಿಯಬೇಕು. ವಿದೇಶಿ ನೂಲಿನ ಒಂದೆಳೆಯೂ ಮೈಮೇಲಿರಬಾರದೆಂದು ಪ್ರತಿಯೊಬ್ಬರು ಖಾದೀ ಬಟ್ಟೆ ಕೊಡಬೇಕೆಂದು ಪ್ರತಿಜ್ಞೆ ಮಾಡಬೇಕು. ಈ ಊರಿನ ಜನರಿಗೆ ಬೇಕಾಗುವಷ್ಟು ಬಟ್ಟೆಯನ್ನು ಇದೇ ಊರಿನವರು ತಯಾರಿಸಲು ಸಮರ್ಥರಿದ್ದಾರೆ.

ಗಾಂಧೀಘರದ ಹತ್ತಿರ ಒಂದು ಪ್ರದರ್ಶನವನ್ನು ತೆರೆದಿದ್ದಾರೆ. ಅದು ಇನ್ನು ಮೂರು ದಿನಗಳವರೆಗೆ ನಡೆಯುತ್ತದೆ. ಅಲ್ಲಿ ತಾವು ದೇಶೀಯ ವಸ್ತುಗಳನ್ನು ನೋಡಬಹುದು. ತಾವೆಲ್ಲರೂ ಅದನ್ನು ನೋಡುವಿರೆಂದು ಆಶೀಸುತ್ತೇನೆ. ಹಳ್ಳಿಯಲ್ಲಿ ಯಾವ ತರದ ವಸ್ತುಗಳನ್ನು

ತಯಾರಿಸಬಹುದೆಂದು ತಾವು ತಿಳಿದುಕೊಳ್ಳಬಹುದು. ಕಾಂಗ್ರೆಸಿನ ಪ್ರತಿಜ್ಞಾ ಪಾಲನೆ ಮಾಡುವವರೆಲ್ಲರೂ ರಚನಾತ್ಮಕ ಕಾರ್ಯದಲ್ಲಿ ಯಶಸ್ಸು ಪಡೆಯಬೇಕು.

ಗಾಂಧೀಜಿಯವರಿಗೆ ಚರಕಾ, ಬಡತನ ಮತ್ತು ಹೆಂಡ ಮುಕ್ತ ಸಮಾಜದ ಬಗ್ಗೆ ಕಾಳಜಿ ಇತ್ತು. 'ಚರಕಾ ಚಲಾಕೆ ಚಲಾಕೆ ಸ್ವರಾಜ್ ಲೇಂಗೆ' ಎಂಬ ಮಂತ್ರವನ್ನು ಅವರು ಉಚ್ಚರಿಸುತ್ತಿದ್ದರು. ಇದಲ್ಲದೇ ಬಡತನ ಹಾಗೂ ಅಸ್ಪೃಶ್ಯತೆ ಬಗ್ಗೆ ತಮ್ಮದೇ ಆದ ನಿಲುವನ್ನು ಅವರು ತಾಳಿದ್ದರು. ರಾಷ್ಟ್ರವು ಕುಡುಕರಿಗೆ ಹೆಂಡವನ್ನು ಒದಗಿಸುವುದು ಅಪರಾಧವೆಂದು ಈ ಅಧಿವೇಶನದಲ್ಲಿ ಗಾಂಧೀ ಮಾತನಾಡಿದರು. ಅಸ್ಪೃಶ್ಯತೆ ನಿವಾರಣೆಯಾಗದೇ ದೇಶಕ್ಕೆ ಸ್ವಾತಂತ್ರ್ಯ ಬಂದರೂ ನಿಜವಾದ ಸ್ವಾತಂತ್ರ್ಯ ಅದು ಅಲ್ಲವೇ ಅಲ್ಲ. ಕಾಂಗ್ರೆಸಿನ ಮೂಲ ಉದ್ದೇಶ ಭಾರತದ ಬಡ ರೈತನ ಪ್ರತಿನಿಧಿಯಾಗುವುದು. ನಾವು ಮಾಡುವ ವೆಚ್ಚವು ಬಡವರ ವೆಚ್ಚಕ್ಕೆ ಸಾಧ್ಯವಾದಷ್ಟು ಮೆಚ್ಚಿಗೆಯಾಗಬೇಕು. ಎಲ್ಲರೂ ಸಮಾನವಾಗಿ ಹಂಚಿಗೊಂಡು ಉಪಭೋಗಿಸಬೇಕು. ಅಡುಗೆ ಎಷ್ಟು ಚೆನ್ನಾಗಿ ಇದ್ದರೂ ಬಡಿಸುವವರು ಸ್ವಾರ್ಥಕ್ಕಾಗಿ ತಮಗಾಗಿ ಇಟ್ಟುಕೊಂಡು ಇನ್ನೊಬ್ಬರನ್ನು ಹಸಿವೆಯಿಂದ ನೆರಳಿಸುವುದು ಮನುಷ್ಯನ ಸ್ವಾರ್ಥದ ನಿದರ್ಶನ. ಈ ಭಾವ ಹೋಗಬೇಕು. ಎಲ್ಲರಲ್ಲಿ ಸಮಾನತೆ ಮೂಡಿ ಬರಬೇಕೆಂದು ಅಧಿವೇಶನದಲ್ಲಿ ಗಾಂಧೀಜಿ ಕರೆ ಕೊಟ್ಟಿದ್ದರು.

ಬೆಳಗಾವಿ ಅಧಿವೇಶನದ ಒಂದು ವೈಶಿಷ್ಟಪೂರ್ಣವಾದ ಘಟನೆಯನ್ನು ಹುದಲಿಯ ಸ್ವಾತಂತ್ರ್ಯ ಹೋರಾಟಗಾರ ಎಸ್. ಎ. ಮಳಗಲಿಯವರು ಹೀಗೆ ನೆನಪಿಸಿಕೊಳ್ಳುತ್ತಾರೆ. ಪುಂಡಲೀಕಜಿ ಕಾತಗಡೆ ಅವರು ಮತ್ತು ರಾಮಚಂದ್ರ ವಡವಿ ಅವರು ಕುಂದರನಾಡಿನ ದಿಟ್ಟ ಹೋರಾಟಗಾರರು. ಪುಂಡಲೀಕಜಿ ಕಾತಗಡೆ ಅವರನ್ನು ಗಾಂಧೀಜಿ ಅವರ ಸೇವೆಗಾಗಿ ನೇಮಿಸಲಾಗಿತ್ತು. ಗಾಂಧೀಜಿ ಅವರ ಎಲ್ಲ ಕಾರ್ಯಕ್ರಮಗಳನ್ನು ಅಚ್ಚುಕಟ್ಟಾಗಿ ಮಾಡುತ್ತಿದ್ದರು. ಒಂದು ದಿನ ಪುಂಡಲೀಕಜಿ ಅವರು ಗಾಂಧೀಜಿ ಅವರ ಕೊಠಡಿಯನ್ನು ಸ್ವಚ್ಛ ಮಾಡಿ ನೆಹರು ಅವರ ಕೊಠಡಿಯ ಮುಂದೆ ಹಾಯ್ದು ಹೋಗುವಾಗ ನೆಹರೂ ಅವರು ಕೂಡಾ ತಮ್ಮ ಕೊಠಡಿಯ ಮುಂಭಾಗವನ್ನು ಸ್ವಚ್ಛ ಮಾಡಲು ಕಾತಗಡೆ ಅವರಿಗೆ ಹೇಳುತ್ತಾರೆ. ಆದರೆ ಕಾತಗಡೆ ಅವರು ನೆಹರು ಅವರ ಮಾತನ್ನು ಕೇಳದೇ ನಿರಾಕರಿಸಿ ಹಾಗೆಯೇ ಮುಂದೆ ಹೋಗುತ್ತಾರೆ. ನೆಹರು ಅವರು ಅತ್ಯಂತ ಕೋಪವನ್ನು ತಾಳುತ್ತಾರೆ. ಒಬ್ಬ ಸಾಮಾನ್ಯ ಸ್ವಯಂ ಸೇವಕ ನನ್ನ ಮಾತನ್ನು ಕೇಳದೇ ಇದ್ದಾಗ ನಾನು ಈ ಅಧಿವೇಶನದಲ್ಲಿ ಏಕೆ ಇರಬೇಕೆಂದು ಇತರರೊಂದಿಗೆ ಹೇಳಿಕೊಳ್ಳುತ್ತಾರೆ. ಈ ವಿಷಯವು ಗಂಗಾಧರರಾವ್ ದೇಶಪಾಂಡೆ ಹಾಗೂ ಗಾಂಧೀಜಿಯವರಿಗೆ ಗೊತ್ತಾಗುತ್ತದೆ. ಅವರು ಪುಂಡಲೀಕಜಿಯವರಿಗೆ ಕ್ಷಮೆ ಕೇಳುವಂತೆ ತಿಳಿಸುತ್ತಾರೆ. ಆದರೆ ಪುಂಡಲೀಕಜಿ ಕ್ಷಮೆ ಕೇಳಲು ನಿರಾಕರಿಸುತ್ತಾರೆ. ನಾನು ತಪ್ಪನ್ನೇ ಮಾಡದೇ ಇದ್ದಾಗ ಏಕೆ ಕ್ಷಮೆ ಕೇಳಬೇಕು ಎಂದು ಪ್ರಶ್ನಿಸುತ್ತಾರೆ. ಯಾಕೆಂದರೆ ಅವರ ಸಂಪೂರ್ಣವಾದ ನಿಷ್ಠೆಯು ಗಾಂಧೀಜಿಯವರ ಸೇವೆಗಾಗಿಯೇ ಇತ್ತು. ಇದಾದ ಬಳಿಕ ಗಂಗಾಧರರಾವ್ ದೇಶಪಾಂಡೆಯವರೇ ನೆಹರು ಅವರ ಬಳಿ ಬಂದು ಪುಂಡಲೀಕಜಿ

ಅವರ ಪರವಾಗಿ ಕ್ಷಮೆ ಕೇಳುತ್ತಾರೆ. ನೆಹರು ಅವರಿಗೆ ಪುಂಡಲೀಕಜಿ ಅವರ ವ್ಯಕ್ತಿತ್ವದ ಪರಿಚಯ ಚೆನ್ನಾಗಿ ಆಗುತ್ತದೆಯಲ್ಲದೆ ಅವರ ಕರ್ತವ್ಯ ನಿಷ್ಠೆಯನ್ನು ಮೆಚ್ಚುತ್ತಾರೆ. ಮುಂದೆ ಕಾಲಾಂತರದಲ್ಲಿ ನೆಹರು ಪುಂಡಲೀಕಜಿ ಅವರನ್ನು ಗೌರವಿಸುತ್ತಾರಲ್ಲದೇ ಅತ್ಯಂತ ಆತ್ಮೀಯತೆಯನ್ನು ಬೆಳಸಿಕೊಳ್ಳುತ್ತಾರೆ[೨]. ಅಧಿವೇಶನದ ಸಂದರ್ಭದಲ್ಲಿ ಜರುಗಿದ ಸಂಗತಿಗಳು ವೈಶಿಷ್ಟಪೂರ್ಣವೂ ಅತ್ಯಂತ ಮಹತ್ವದ್ದೂ ಆಗಿವೆ. ಕುಂದರನಾಡಿನ ಸ್ವಾತಂತ್ರ್ಯ ಹೋರಾಟಕ್ಕೆ ಇದು ಪ್ರೇರಣೆಯಾಗಿದೆ.

## ೪.೨ ಹುದಲಿ ಅಧಿವೇಶನ :

ಬೆಳಗಾವಿ ಕಾಂಗ್ರೆಸ್ ಅಧಿವೇಶನದ ತರುವಾಯ ರಾಷ್ಟ್ರದ ಮತ್ತು ಕರ್ನಾಟಕದ ಕಾಂಗ್ರೆಸ್ ಮುಖಂಡರು ಮೇಲಿಂದ ಮೇಲೆ ಅಧಿವೇಶನಗಳನ್ನು ಹಮ್ಮಿಕೊಳ್ಳುವುದರಿಂದ ಜನರಲ್ಲಿ ರಾಷ್ಟ್ರೀಯ ಮನೋಭಾವ ಮತ್ತು ಸ್ವಾತಂತ್ರ್ಯತೆ ಕುರಿತು ಜಾಗ್ರತಿ ಉಂಟಾಗುತ್ತದೆ ಎಂದು ಭಾವಿಸಿದರು. ಕರ್ನಾಟಕದ ಸಿಂಹವೆಂದೇ ಪ್ರಸಿದ್ಧರಾದ ಗಂಗಾಧರರಾವ್ ದೇಶಪಾಂಡೆಯವರು ಹುದಲಿ ಗ್ರಾಮಕ್ಕೆ ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರನ್ನು ಬರಮಾಡಿಕೊಳ್ಳಬೇಕೆಂದು ಮತ್ತು ಸಮಸ್ತ ಗ್ರಾಮದ ಜನತೆಗೆ ಗಾಂಧೀಜಿಯ ವ್ಯಕ್ತಿತ್ವದ ಪರಿಚಯವನ್ನು ಮಾಡಿಕೊಡಬೇಕೆಂದು ಇಚ್ಛಿಸುತ್ತಾರೆ. ಆ ಕಾರಣಕ್ಕಾಗಿಯೇ ಗಾಂಧೀಜಿಯವರನ್ನು ಭೇಟ್ಟಿಯಾಗಿ ಹುದಲಿಯ ಗಾಂಧೀ ಸೇವಾ ಸಂಘದ ವಾರ್ಷಿಕೋತ್ಸವಕ್ಕೆ ಅವರನ್ನು ಕರೆತರಬೇಕೆಂದು ನಿರ್ಧರಿಸುತ್ತಾರೆ. ಈ ಸಮ್ಮೇಳನವು ಒಂದು ವಾರದವರೆಗೆ ಅಚ್ಚುಕಟ್ಟಾಗಿ ಜರುಗಿದ್ದು ಒಂದು ವಿಶೇಷವೇ ಸರಿ. ಇವರ ಅಚಲವಾದ ನಿರ್ಧಾರ ಗಾಂಧೀಜಿ ಹುದಲಿಗೆ ಬರುವಂತೆ ಮಾಡುತ್ತದೆ.

೧೯೩೭ ಎಪ್ರಿಲ್‌ನಲ್ಲಿ ಬೆಳಗಾವಿ ಜಿಲ್ಲೆಯ ಹುದಲಿ ಎಂಬ ಚಿಕ್ಕ ಗ್ರಾಮದಲ್ಲಿ ಕಾಂಗ್ರೆಸ್ ಅಧಿವೇಶನವನ್ನು ಹಮ್ಮಿಕೊಳ್ಳಲು ನಿರ್ಧರಿಸಲಾಗಿತ್ತು. ಗಂಗಾಧರರಾವ್ ದೇಶಪಾಂಡೆಯವರು ಗಾಂಧೀಜಿಯವರಿಗೆ ಆಮಂತ್ರಣಕೊಟ್ಟು ಹುದಲಿಗೆ ಅವರು ಬರುವಂತೆ ಅತ್ಯಂತ ಒತ್ತಾಯ ಪೂರ್ವಕವಾಗಿ ವಿನಂತಿಸಿ ಕೊಂಡಿದ್ದರು. ಗಾಂಧೀಜಿಯವರು ದೇಶಪಾಂಡೆಯವರ ಕರೆಯ ಮೇರೆಗೆ ಹುದಲಿ ಅಧಿವೇಶನಕ್ಕೆ ಬರಲು ಒಪ್ಪಿಕೊಳ್ಳುತ್ತಾರೆ. ಗಾಂಧೀಜಿಯವರಿಗೆ ಬಡವರ ಉನ್ನತಿಯ ಬಗ್ಗೆ ವಿಶೇಷವಾದ ಕಾಳಜಿ ಇತ್ತು. ಭಾರತದ ಹಳ್ಳಿಗಳು ಸುಧಾರಣೆಯಾದರೆ ದೇಶ ಸುಧಾರಣೆಯಾಗುತ್ತದೆ ಎಂದು ಅವರು ನಂಬಿದ್ದರು. ಹಳ್ಳಿಯ ಬಡ ಜನರ ಪ್ರಗತಿಗಾಗಿ ಗಾಂಧೀಜಿಯವರು ಹಲವಾರು ಯೋಜನೆಗಳನ್ನು ಹಾಕಿ ಕೊಳ್ಳುತ್ತಿದ್ದರು. ಪ್ರತಿಯೊಂದು ಗ್ರಾಮದಲ್ಲಿ ಗಾಂಧಿ ಸೇವಾ ಸಂಘವನ್ನು ಕಟ್ಟಿ ಆ ಮೂಲಕ ಜನರ ಸೇವೆಗಾಗಿ ತಮ್ಮನ್ನು ತೊಡಗಿಸಿಕೊಂಡಿದ್ದರು.

ಹುದಲಿಯಲ್ಲಿ ಗಾಂಧಿ ಸೇವಾ ಸಂಸ್ಥೆ ಹುಟ್ಟಿಕೊಂಡಿತ್ತು. ಈ ಸಂಘದ ಮುಖ್ಯ ಉದ್ದೇಶ ಹಳ್ಳಿಗಳ ಉದ್ಧಾರ, ಗೋವುಗಳ ಸೇವೆ, ರಾಜಕೀಯ ಅಧಿಕಾರದಿಂದ ದೂರವಿರುವುದು. ಹೀಗೆ ಸಂಪೂರ್ಣವಾಗಿ ಗ್ರಾಮ ವಿಕಾಸಕ್ಕಾಗಿಯೇ ಗಾಂಧಿ ಸೇವಾ ಸಂಘವನ್ನು ಕಟ್ಟಲಾಗಿತ್ತು. ಇದರಲ್ಲಿ

ಜವಾಹರಲಾಲ ನೆಹರೂ, ಖಾನ್ ಅಬ್ದುಲ್ ಗಫಾರಖಾನ್ ಮುಂತಾದವರು ಸದಸ್ಯರಾಗಿದ್ದರು. ಹುದಲಿಯವರಾದ ಗಂಗಾಧರರಾವ್ ದೇಶಪಾಂಡೆಯವರ ಸತತ ಪ್ರಯತ್ನದಿಂದಾಗಿ ಗಾಂಧೀಜಿಯವರು ಹುದಲಿಗೆ ಬರಲು ಒಪ್ಪಿಕೊಂಡಿದ್ದರು. 'ಹುದಲಿಯಿಂದ ಎರಡು ಕಿಲೋಮೀಟರ್' ದೂರವಿರುವ ಕುಮರಿ ಎಂಬ ಸ್ಥಳದಲ್ಲಿ ಆಶ್ರಮವನ್ನು ನಿರ್ಮಿಸಲಾಯಿತು. ಈ ಆಶ್ರಮಕ್ಕೆ ಗಂಗಾಧರರಾವ್ ದೇಶಪಾಂಡೆಯವರು ಹನ್ನೆರಡು ಎಕರೆ ಜಮೀನನ್ನು ದಾನವಾಗಿ ಕೊಟ್ಟರು. ಈ ಆಶ್ರಮದ ಮೂಲಕ ಸ್ವಾತಂತ್ರ್ಯ ಚಳುವಳಿಯ ಕಾರ್ಯ ಚಟುವಟಿಕೆಗಳು ಪ್ರಾರಂಭಗೊಂಡವು. ಕರ್ನಾಟಕದಲ್ಲಿ ಗಾಂಧೀಯುಗ ಈ ಆಶ್ರಮದ ಮೂಲಕ ಪ್ರಾರಂಭವಾಯಿತು. ಭಾರತದಲ್ಲಿ ಒಟ್ಟು ಆರು ಆಶ್ರಮಗಳು ಪ್ರಾರಂಭವಾಗಿದ್ದವು. 'ಗುಜರಾತಿನ ಸಾಬರಮತಿ ಆಶ್ರಮವನ್ನು ಅಹಮದಾಬಾದನಲ್ಲಿ ಗಾಂಧೀಜಿ'ಯವರು ಸ್ಥಾಪಿಸಿದರು. ಬಿಹಾರದಲ್ಲಿ ಸದಾಕತ್ ಆಶ್ರಮವನ್ನು ಬಾಬು ರಾಜೇಂದ್ರ ಪ್ರಸಾದವರು ಸ್ಥಾಪಿಸಿದರು. ಅದರಂತೆ ಬಾರ್ಡೋಲಿ ಆಶ್ರಮವನ್ನು ಗುಜರಾತನಲ್ಲಿ ವಲ್ಲಭಭಾಯಿ ಪಟೇಲರು ಪ್ರಾರಂಭಿಸಿದರು. ಸೇವಾಪುರಿ ಆಶ್ರಮವನ್ನು ಉತ್ತರಪ್ರದೇಶದ ವಾರಣಾಸಿಯಲ್ಲಿ ಆಚಾರ್ಯ ಕೃಪಲಾನಿ ಅಡಿಗಲ್ಲು ಹಾಕಿದರು. ತಿರುಚಂಗೂಡು ಆಶ್ರಮವನ್ನು ತಮಿಳನಾಡುವಿನಲ್ಲಿ ರಾಜಗೋಪಾಲಾಚಾರಿಯವರು ಸ್ಥಾಪಿಸಿದರು. ಅದರಂತೆ ಕುಮರಿ ಆಶ್ರಮವನ್ನು ಕರ್ನಾಟಕ ಬೆಳಗಾವಿ ಜಿಲ್ಲೆಯ ಹುದಲಿಯಲ್ಲಿ ಗಂಗಾಧರರಾವ್ ದೇಶಪಾಂಡೆಯವರು ಪ್ರಾರಂಭಿಸಿದ್ದರು. ಹೀಗೆ ದೇಶವ್ಯಾಪ್ತಿ ಪ್ರಾರಂಭಗೊಂಡ ಈ ಆರೂ ಆಶ್ರಮಗಳು ತಮ್ಮ ತಮ್ಮ ಕ್ಷೇತ್ರಗಳಲ್ಲಿ ರಾಷ್ಟ್ರೀಯ ಏಕತೆ ಮತ್ತು ಸ್ವಾತಂತ್ರ್ಯದ ಕುರಿತು ಜನರಲ್ಲಿ ಜಾಗೃತಿಯನ್ನು ಮೂಡಿಸಿದವು.

ಕರ್ನಾಟಕದ ಕುಮರಿ ಆಶ್ರಮದಲ್ಲಿ ಹಮ್ಮಿಕೊಂಡ ವಿಶೇಷ ಅಧಿವೇಶನಕ್ಕೆ ಗಾಂಧೀಜಿಯವರು ರೈಲು ಮಾರ್ಗದಿಂದ ಸುಲಧಾಳಕ್ಕೆ ಬರುತ್ತಾರೆ. ಅದು ಬಿರುಬೇಸಿಗೆಯ ಕಾಲ. ಜನರೆಲ್ಲಾ ಊರ ಹೊರಗಿನ ಜೋಳದ ದಂಟಿನಿಂದಲೇ ಮಂಟಪ ಮತ್ತು ಗುಡಿಸಲುಗಳನ್ನು ಅಣಿಗೊಳಿಸಿದ್ದರು. ಸುಲಧಾಳ ಸ್ಟೇಶನನಿಂದ ಕುಮರಿ ಆಶ್ರಮವು ಎರಡು ಕಿಲೋಮೀಟರ ಅಂತರವಿದೆ. ೧೯೩೭ ಎಪ್ರಿಲ್ ಹದಿನಾರು ಕರ್ನಾಟಕದ ಇತಿಹಾಸದಲ್ಲಿ ಒಂದು ಅಪರೂಪದ ದಿನ. ಸುಲಧಾಳ ಸ್ಟೇಶನ್‌ದಿಂದ ಹುದಲಿವರೆಗೆ ಅವರು ನಡೆಯುತ್ತಲೇ ಬರುತ್ತಾರೆ. ಹುದಲಿಯ ಸಭೆಗೆ ಅಧ್ಯಕ್ಷರಾಗಿ ಕಿಶೋರಿಲಾಲ್ ಮಶ್ರುವಾಲಾ ಆಗಮಿಸಿದ್ದರು. ಇದಲ್ಲದೇ ಬಾಬು ರಾಜೇಂದ್ರ ಪ್ರಸಾದ, ಖಾನ ಅಬ್ದುಲ್ ಗಫಾರಖಾನ ಮುಂತಾದ ಪ್ರಮುಖರು ಸಕ್ರೀಯವಾಗಿ ಅಧಿವೇಶನದಲ್ಲಿ ಪಾಲ್ಗೊಂಡಿದ್ದರು. ಬೆಳಿಗ್ಗೆ ಶ್ರಮದಾನವಾಗುತ್ತಿತ್ತು ಮತ್ತು ಮಧ್ಯಾಹ್ನ ಸಭೆ ಸೇರುತ್ತಿತ್ತು.

ಗಾಂಧೀಜಿ ಬದುಕಿನ ತುಂಬಾ ಹೋರಾಟ ಮಾಡಿದವರು. ಚಳಿ, ಮಳೆ, ಬಿಸಿಲು ಗಾಳಿಗೆ ಜಗ್ಗದೇ ಮುನ್ನುಗ್ಗುವ ಛಲಗಾರ. ಸುಡು ಬಿಸಿಲಿನಲ್ಲಿ ಎರಡು ಕಿಲೋಮೀಟರ್ ನಡೆದ ಗಾಂಧಿ ಅಧಿವೇಶನದ ಮೂರನೇ ದಿನ ಜೋರಾಗಿ ಸುರಿದ ಧಾರಾಕಾರ ಮಳೆಯಲ್ಲಿ ದಂಟಿನ ಗುಡಿಸಲುಗಳು ಬಿದ್ದು ಹೋದಾಗ ಬರೀ ಒಂದು ಛತ್ರಿಯ ಆಶ್ರಯದಲ್ಲಿಯೇ ರಾತ್ರಿಯೆಲ್ಲಾ ಕಳೆಯುತ್ತಾರೆ.

ಇದಲ್ಲದೇ ಹುದಲಿಯಿಂದ ಕುಮರಿವರೆಗೆ ಮಳೆಯಲ್ಲಿಯೇ ನಡೆದು ಆಶ್ರಮದ ಕಾರ್ಯಕರ್ತರಿಗೆ ಕೆಲವು ಸಲಹೆ ಸೂಚನೆಗಳನ್ನು ಕೊಡುತ್ತಾರೆ. ಈ ಗಾಂಧಿ ಸೇವಾ ಸಂಘದ ಇನ್ನೊಂದು ವೈಶಿಷ್ಟ್ಯವೆಂದರೆ ಗೋ-ರಕ್ಷಣೆ. ಅಭಿಯಾನದ ನಿಯಮದಂತೆ ಬರೀ ಆಕಳಹಾಲು ಮತ್ತು ತುಪ್ಪವನ್ನೇ ಬಳಸಬೇಕಾಗುತ್ತಿತ್ತು. ಆದರೆ ಹುದಲಿಯ ಸುತ್ತ ಮುತ್ತ ಆಕಳುಗಳಿಗಿಂತ ಎಮ್ಮೆಗಳೇ ಹೆಚ್ಚಿದ್ದರಿಂದ ಆಕಳ ಹಾಲು ತುಪ್ಪದ ಪೂರೈಕೆ ಕಷ್ಟವಾಯಿತು. ಈ ಅಧಿವೇಶನದಲ್ಲಿ ಇನ್ನೊಂದು ವಿಶೇಷವೆಂದರೆ ಸಂಗದ ಸದಸ್ಯರು ಬ್ರಿಟಿಷ ಸರಕಾರ ಕೊಡಮಾಡಿದ್ದ ಅಧಿಕಾರದಲ್ಲಿ ಭಾಗವಹಿಸಬೇಕೆ? ಬೇಡವೇ? ಎಂಬ ಕುರಿತು ಚರ್ಚೆಯಾಯಿತು. "ಗಾಂಧೀಜಿ ಮಧ್ಯಸ್ತಿಕೆಯನ್ನು ವಹಿಸಿ ಈ ವಿಷಯವನ್ನು ವೈಯಕ್ತಿಕ ನಿರ್ಣಯಕ್ಕೆ ಬಿಡೋಣ ಎಂದು ಹೇಳಿ ಮುಕ್ತಾಯಗೊಳಿಸಿದರು. ಆದರೆ ಮಶ್ರುವಾಲಾ ಅವರಿಗೆ ಈ ಅಭಿಪ್ರಾಯ ಸಮ್ಮತವೆನಿಸಲಿಲ್ಲ. ಅವರು ಗಾಂಧೀಜಿಯವರನ್ನು ಕುರಿತು ಬಾಪೂಜಿ ಹಾಗಾದರೆ ನೀವು ಬೇರೆ ಅಧ್ಯಕ್ಷರನ್ನು ಹುಡುಕಬೇಕಾಗುತ್ತದೆ"[೩] ಎಂದು ಹೇಳುತ್ತಾರೆ. ಹುದಲಿಯ ಅಧಿವೇಶನವು ಒಂದು ವರ್ಣ ರಂಜಿತ ಅಧಿವೇಶನ. ಅಲ್ಲಿ ಎಲ್ಲರೂ ಸಮಾನರು ಮತ್ತು ಆತ್ಮೀಯರು. ಈ ಅಧಿವೇಶನದಲ್ಲಿ ವೈದಿಕ ಪದ್ಧತಿಯಲ್ಲಿ ಎರಡು ಮದುವೆಗಳೂ ನಡೆಯುತ್ತವೆ. ಮಹಾರಾಷ್ಟ್ರದ ತರ್ಕತೀರ್ಥ ಲಕ್ಷ್ಮಣ ಶಾಸ್ತ್ರೀಯವರು ನೆರವೇರಿಸುತ್ತಾರೆ. 'ಗಾಂಧೀಜಿಯವರ ಮೊಮ್ಮಗಳಾದ ಮನುಬೆನ್ ಮದುವೆ ಕಿಶೋರಿಲಾಲರ ಅಣ್ಣನ ಮಗನ ಜೊತೆ ನೆರವೇರುವುದು'. ಮಹಾದೇವ ದೇಸಾಯಿಯವರ ತಂಗಿ ನಿರ್ಮಲಾಳ ಮದುವೆ ಈಶ್ವರದಾಸ ಜೊತೆ ನೆರವೇರುತ್ತದೆ. ಇದಲ್ಲದೇ ಮಹಾದೇವ ಭಾಯಿಯವರ ಮಗ ನಾರಾಯಣನ ಮುಂಜುವೆಯೂ ಅಲ್ಲಿಯೇ ಜರುಗಿತು. ಗಾಂಧೀಜಿಯವರು ಮದುಮಕ್ಕಳಿಗೆ ಮಂತ್ರದ ಅರ್ಥಗಳನ್ನು ಹೇಳಿ ಕೊಡುತ್ತಾರೆ. ಸದ್ಗುಣಿ ಹಾಗೂ ಆರೋಗ್ಯವಂತ ಸಂತತಿಗೆ ತಾಯಿಯಾಗಲಿ ಎಂಬ ವರ ಕೇಳಿಕೊಳ್ಳುತ್ತೇನೆ. ಎಂಬುದು ಆ ಮಂತ್ರದ ಅರ್ಥವಾಗಿತ್ತು. ಹುದಲಿ ಗ್ರಾಮಕ್ಕೂ ಗಾಂಧೀಜಿಯವರಿಗೂ ಅವಿನಾಭಾವ ಸಂಬಂಧವಿದೆ. ಹುದಲಿ ಎಲ್ಲ ವರ್ಗದ ಜನರೂ ಗಾಂಧೀಜಿಯವರ ಮೇಲೆ ಅಪಾರವಾದ ಪ್ರೀತಿಯನ್ನು ಇಟ್ಟಿದ್ದರು. ಅತ್ಯಂತ ಕೆಳವರ್ಗದ ಚರ್ಮಕಾಯಕ ಮಾಡುವ ಕರಿಯಪ್ಪಾ ಎಂಬಾತ ಗಾಂಧೀಜಿಯವರಿಗೆ ಅನೇಕ ವರ್ಷಗಳಿಂದ ಅಹಿಂಸಕ ಚಪ್ಪಲುಗಳನ್ನು ಮಾಡಿ ಕಳಿಹಿಸುತ್ತಿದ್ದನಂತೆ. ಗಾಂಧೀಜಿ ಹುದಲಿಗೆ ಬಂದಾಗ ಗಂಗಾಧರರಾವ್ ದೇಶಪಾಂಡೆ ಅವರು ಈ ಸಂಗತಿಯನ್ನು ನೆನಪಿಸಿಕೊಂಡು ಗಾಂಧೀಜಿಯವರಿಗೆ ಶ್ರೇಷ್ಠ ಚರ್ಮಶಿಲ್ಪಿಯಾದ ಕರಿಯಪ್ಪನನ್ನು ಪರಿಚಯ ಮಾಡಿ ಕೊಡುತ್ತಾರೆ. ಗಾಂಧೀಜಿಯವರು ಕರಿಯಪ್ಪನೊಂದಿಗೆ ಆತ್ಮೀಯ ಮಾತುಗಳನ್ನಾಡಿ ಅವನ ಕಾರ್ಯ ಕ್ಷಮತೆಯನ್ನು ಮೆಚ್ಚಿ ಹೊಗಳುತ್ತಾರೆ.

ಹುದಲಿಯ ಸಮ್ಮೇಳನದ ಈ ನೇತೃತ್ವವನ್ನು ಗಾಂಧೀಜಿಯವರು ವಹಿಸಿಕೊಂಡಿದ್ದರು. ಸಮ್ಮೇಳನದ ವ್ಯವಸ್ಥೆಯನ್ನು ಗಂಗಾಧರರಾಯರ ನೇತೃತ್ವದಲ್ಲಿ ಕುಮರಿ ಆಶ್ರಮದ ಹಿರಿಯ ಕಾರ್ಯಕರ್ತರಾಗಿದ್ದ ಪುಂಡಲೀಕಜಿ ಕಾತಗಡೆ, ರಾಮಚಂದ್ರ ವಡವಿ, ಅಣ್ಣೂ ಗುರೂಜಿ, ವಾಮನರಾವ್ ಬಿದರಿ ಮುಂತಾದವರು ತನು, ಮನ, ಧನದಿಂದ ಸಹಾಯ ಸಲ್ಲಿಸುತ್ತಾರೆ. ತರುಣ ಸಂಘದ ಹಿರಿಯ ಕಾರ್ಯಕರ್ತರಾಗಿದ್ದ ಬಿ. ನಿ. ಭೂಶಿ, ಬಿ. ಚ. ಎಲಿಗಾರ ಇವರು ಗಾಂಧೀಜಿಯವರು

ನೂಲು ಯಜ್ಞ ನಡೆಸುವುದಕ್ಕೆ ಹಂಜಿ ತಯಾರಿಸಿ ಕೊಡುತ್ತಿದ್ದರು. ಗಾಂಧೀಜಿಯವರಿಗೆ ಚರಕಾ ಉದ್ಯಮ ಒಂದು ಯಜ್ಞಕ್ಕೆ ಸಮಾನವಾಗಿತ್ತು. ಸಮ್ಮೇಳನದಲ್ಲಿ ಭಾಗವಹಿಸಿದ ಮುಖಂಡರು, ಕಾರ್ಯಕರ್ತರು ಗಾಂಧೀಜಿಯವರನ್ನು ನೋಡಲು ಬಂದ ಸಾವಿರಾರು ಜನರು ಖಾದಿ ಬಟ್ಟೆಯನ್ನು ಖರೀದಿಸಿ ಪ್ರೋತ್ಸಾಹಿಸಿದರು. ಕಾಂಗ್ರೆಸ್ ಮಂತ್ರಿಮಂಡಲವು ಅಧಿಕಾರಕ್ಕೆ ಬಂದ ಮೇಲೆ ಮಂತ್ರಿಮಂಡಲವು ಜೀವನ ಶಿಕ್ಷಣಕ್ಕೆ ಮಹತ್ವವನ್ನು ಕೊಟ್ಟು ಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ನೇಯ್ಗೆ ತರಬೇತಿ ಕೊಡಲು ಆರಂಭಿಸಲಾಯಿತು. ಇದರಿಂದ ಸಹಜವಾಗಿಯೇ ವಿದ್ಯಾರ್ಥಿಗಳಲ್ಲಿ ಖಾದಿ ಬಗ್ಗೆ ಪ್ರೀತಿ ಉಂಟಾಗುವುದರ ಜೊತೆಗೆ ದೇಶ ಪ್ರೇಮವೂ ಮೂಡಿ ಬರುತ್ತದೆಯಲ್ಲದೆ ಗಾಂಧೀಜಿಯವರ ಮುಂದಾಲೋಚನೆ ಜನರಲ್ಲಿ ಆತ್ಮವಿಶ್ವಾಸವನ್ನು ಬೆಳೆಸುತ್ತದೆ.

ಹುದಲಿ ಅಧಿವೇಶನದ ಪ್ರಭಾವವು ಗಾಢವಾಗಿತ್ತು. ಏಳು ದಿನಗಳವರೆಗೆ ವಾಸ್ತವ್ಯ ಮಾಡಿದ ಗಾಂಧೀಜಿಯವರು ಈ ಊರಿನ ಜನರ ದೇಶಭಕ್ತಿಯನ್ನು ಕಂಡು ಮೂಕ ವಿಸ್ಮಿತರಾದರು. ಇದು ಭಾರತದ ಆದರ್ಶ ಹಳ್ಳಿ ಎಂದು ಹೊಗಳಿದರು. ಸ್ವಾತಂತ್ರ್ಯ ಹೋರಾಟಗಾರರಾದ ಅಲ್ಲಿಸಾಹೇಬ ವಾರೀಮನಿಯವರು ಗಾಂಧೀಜಿಯವರನ್ನು ಕಂಡು ಅವರಿಂದ ಆಶೀರ್ವಾದ ಪಡೆಯುತ್ತಾರೆ. ಗಾಂಧೀಜಿಯವರ ಪವಿತ್ರ ಹಸ್ತ ವಾರೀಮನಿಯವರ ತಲೆಯ ಮೇಲೆ ಆಡಿದ ತಕ್ಷಣ ದೇಶಪ್ರೇಮದ ವಿದ್ಯುತ್ ಸಂಚಾರ ವಾರೀಮನಿಯವರಲ್ಲಿ ಆಯಿತೆಂದು ಅವರೇ ಹೇಳುತ್ತಾರೆ. ಗಾಂಧೀಜಿಯವರ ತತ್ವಗಳಿಂದ ಪ್ರೇರಿತರಾದ ವಾರೀಮನೀಯವರು ರಾಷ್ಟ್ರೀಯ ವಿವಾಹ ಮಾಡಿಕೊಳ್ಳುತ್ತಾರೆ. ಅವರು ತಮ್ಮ ಸಮಾಜದ ವಿರೋಧವನ್ನು ಲೆಕ್ಕಿಸದೇ ಮದುವೆಯಾಗುವ ನಿರ್ಧಾರವನ್ನು ಕೈಕೊಳ್ಳುತ್ತಾರೆ. ಇದೇ ಮೊದಲನೆಯ ರಾಷ್ಟ್ರೀಯ ಮದುವೆ ಮುಂದೆ ಅನೇಕ ಜನ ತರುಣರು ರಾಷ್ಟ್ರೀಯ ಮದುವೆಯನ್ನು ಮಾಡಿಕೊಳ್ಳುತ್ತಾರೆ.

ರಾಷ್ಟ್ರೀಯ ವಿವಾಹ ಒಂದು ಕ್ರಾಂತಿಕಾರಿ ಘಟನೆ. ೧೯೩೭ ರಲ್ಲಿ ಅಂದರೆ ಸುಮಾರು ಎಪ್ಪತ್ತು ವರ್ಷಗಳ ಹಿಂದೆ ಮುಸ್ಲಿಂ ಮಹಿಳೆ ಬುರ್ಖಾ ಧರಿಸಿ ಮನೆಯಲ್ಲಿರಬೇಕಾದವಳು. ಗಾಂಧೀ ಹಚ್ಚಿದ ಸ್ವಾತಂತ್ರ್ಯದ ಬೆಳಕಿನಲ್ಲಿ ತನ್ನನ್ನು ಗುರುತಿಸಿಕೊಂಡ ಸಂಗತಿಯು ಬಹಳ ಮಹತ್ವದ್ದಾಗಿದೆ. ಮುಸ್ಲಿಂ ಸಂಪ್ರದಾಯವಾದಿ ಜಮಾತನ ನೀತಿ ನಿರ್ಬಂಧಗಳ ಹಂಗು ಹರಿದು ಮಹಾತ್ಮಾ ಗಾಂಧೀಜಿಯವರ ಆದೇಶದಂತೆ ಝುಂಡಾ ಸತ್ಯಾಗ್ರಹ ತ್ರಿವರ್ಣ ಧ್ವಜ ಹಾರಿಸಿ ಕಾನೂನು ಭಂಗ ಮಾಡಿ ಝುಂಢಾ ಅಡಿಯಲ್ಲಿ ಸಾರ್ವಜನಿಕರ ಮುಂದೆ ಮಾಲೆ ಬದಲಾಯಿಸಿಕೊಂಡು ಕ್ರಾಂತಿಕಾರಿ ಸತಿಪತಿಯಾಗಿದ್ದು ಒಂದು ಚರಿತ್ರೆ. ಝುಂಡಾ ಸತ್ಯಾಗ್ರಹವೆಂದರೆ ಕಾನೂನು ಭಂಗ ಮಾಡುವುದು ಜೈಲು ಸೇರುವುದು. ಆದರೆ ಈ ನೂತನ ದಂಪತಿಗಳು ಒಟ್ಟಿಗೆ ಝೇಂಡಾ ಹಾರಿಸಿ ಹಸೆಮಣೆಯಿಂದ ಸೀದಾ ಸೆರೆಮನೆಗೆ ಹೋಗುವುದು ನೂರಕ್ಕೆ ನೂರರಷ್ಟು ಖಚಿತ ಎಂಬುದು ಗೊತ್ತಿದ್ದರೂ. ಈ ವಧುವರರು ಝುಂಡಾ ಧ್ವಜಕಟ್ಟೆಯ ಕೆಳಗೆ ಮದುವೆ ಮಾಡಿಕೊಂಡದ್ದು ಇತಿಹಾಸದಲ್ಲಿ ಅಪೂರ್ವ ದಾಖಲೆ ಆಗುತ್ತದೆ. ಮದುವೆಯಾಗಿ ಮಧುಚಂದ್ರಕ್ಕೆ ಹೋಗಬೇಕಾದವರು ಸೆರೆಮನೆಗೆ ಹೋಗಿ

ಬದುಕಿನ ಅನನ್ಯ ಕ್ಷಣಗಳನ್ನು ದೇಶಕ್ಕಾಗಿ ತ್ಯಾಗ ಮಾಡುವುದು ಸಾಮಾನ್ಯ ಸಂಗತಿಯಲ್ಲ. ಇಂತಹ ವೀರ ಪರಂಪರೆಗೆ ಈ ಮುಸ್ಲಿಂ ಕುಟುಂಬಗಳು ಸಾಕ್ಷಿಯಾಗುತ್ತವೆ ಮತ್ತು ಮುಂಬರುವ ಜನಾಂಗಕ್ಕೆ ಇವರು ಮಾರ್ಗದರ್ಶಿವೂ ಆಗುತ್ತಾರೆ. ೧೯೩೨ ನೇ ಇಸ್ವಿಯ ಆಂದೋಲನದಲ್ಲಿ ಸರಕಾರದವರು ರಾಷ್ಟ್ರಧ್ವಜವನ್ನು ಕಿತ್ತು ಹಾಕಿದ ಬಳಿಕ ಇದುವರೆಗೆ ಯಾರೂ ರಾಷ್ಟ್ರಧ್ವಜವನ್ನು ಹಾರಿಸುವ ಧೈರ್ಯ ಮಾಡಿರಲಿಲ್ಲ. ಆದರೆ ಈಗ ಅಲ್ಲಿಸಾಬ ದಂಪತಿಗಳು ರಾಷ್ಟ್ರಧ್ವಜ ಹಾರಿಸಿ ಅದರ ಅಡಿಯಲ್ಲಿಯೇ ಲಗ್ನವಾಗಿ ಸತ್ಯಾಗ್ರಹ ಹೊಸ ಕ್ರಾಂತಿಯ ನಾಂದಿ ಹಾಡಿದ್ದಾರೆ. ಇದು ನಡೆದದ್ದು ಹುದಲಿಯಲ್ಲಿ ಆದ್ದರಿಂದ ಹುದಲಿಗೆ ಸ್ವಾತಂತ್ರ್ಯ ಚಳುವಳಿಯ ಸಂಪುಟದಲ್ಲಿ ವಿಶೇಷವಾದ ಸ್ಥಾನವಿದೆ.

### ೪.೩ ಹುದಲಿಯ ಕುಮರಿ ಆಶ್ರಮ :

ಭಾರತದ ಸ್ವಾತಂತ್ರ್ಯ ಸಂದರ್ಭದಲ್ಲಿ ಕುಮರಿ ಆಶ್ರಮವು ಬಹಳ ಮಹತ್ವದ ಸ್ಥಾನವನ್ನು ಪಡೆಯುತ್ತದೆ. ಇದಕ್ಕೆ ರಾಷ್ಟ್ರವ್ಯಾಪಿ ಮಹತ್ವ ಬರಲು ಮುಖ್ಯವಾದ ಕಾರಣವೆಂದರೆ ಮಹಾತ್ಮಾ ಗಾಂಧೀಜಿಯವರು ಈ ಆಶ್ರಮಕ್ಕೆ ಬಂದು ಭೇಟ್ಟಿ ಕೊಟ್ಟದ್ದು. ಮಹಾತ್ಮಾ ಗಾಂಧಿ ಅವರು ಭಾರತ ದೇಶದಲ್ಲಿ ಸುಮಾರು ಎರಡು ಸಾವಿರಕ್ಕೂ ಮೇಲ್ಪಟ್ಟು ಸ್ಥಳಗಳಿಗೆ ಭೇಟ್ಟಿ ಕೊಟ್ಟಿದ್ದಾರೆ. ಗಾಂಧೀಜಿಯವರು ದಿನಾಂಕ ೧೬-೦೪-೧೯೩೭ ರಂದು ಬೆಳಗಾವಿ ತಾಲೂಕಿನ ಹುದಲಿ ಗ್ರಾಮಕ್ಕೆ ಆಗಮಿಸಿ ಗಾಂಧಿ ಸೇವಾ ಸಂಘದ ವಾರ್ಷಿಕ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಇದಲ್ಲದೆ ಇನ್ನು ಅನೇಕ ಗ್ರಾಮಗಳಿಗೆ ಗಾಂಧೀಜಿಯವರು ಭೇಟ್ಟಿ ಕೊಟ್ಟಿದ್ದಾರೆ.

ಗಾಂಧೀಜಿಯವರಿಗೆ ಸರಳ ಮತ್ತು ಸಾದಾ ಜೀವನ ಅತ್ಯಂತ ಪ್ರೀಯವಾಗಿತ್ತಲ್ಲದೆ ಭಾರತೀಯ ಜನತೆಯಲ್ಲಿ ಸ್ವತಂತ್ರರಾಗಿ ನೆಮ್ಮದಿಯ ಬದುಕನ್ನು ಬದುಕಬೇಕೆಂಬ ಕನಸಿತ್ತು. ಗಾಂಧೀಜಿಯವರು ಮತ್ತು ಅವರ ಅನುಯಾಯಿಗಳು ಸಮಾಜ ಸೇವೆಯ ಸಾತ್ವಿಕ ಯೋಜನೆಗಳನ್ನು ಕಾರ್ಯಗತಗೊಳಿಸಲು ಪ್ರಯತ್ನಿಸುತ್ತಿದ್ದರು. ಮತ್ತು ಜನರಲ್ಲಿಯೂ ಈ ಪ್ರಜ್ಞೆಯನ್ನು ಜಾಗೃತಗೊಳಿಸುವುದಕ್ಕಾಗಿ ಗುಜರಾತಿನ ಸಾಬರಮತಿಯಲ್ಲಿ ಮಹಾತ್ಮಾ ಗಾಂಧೀಜಿಯವರು ೧೯೧೫ ಮೇ ೧೫ ರಂದು ಸತ್ಯಾಗ್ರಹ ಆಶ್ರಮ ಸ್ಥಾಪಿಸಿದರು. ಇದೇ ಮಾದರಿಯಲ್ಲಿ ಕರ್ನಾಟಕದ ಬೆಳಗಾವಿ ಜಿಲ್ಲೆಯ ಹುದಲಿಯಲ್ಲಿ ದೇಶಭಕ್ತ ಗಂಗಾದರರಾವ್ ದೇಶಪಾಂಡೆ ಅವರು ಕುಮರಿ ಆಶ್ರಮವನ್ನು ನಿರ್ಮಿಸಿದ್ದರು. ಈ ಆಶ್ರಮಗಳು ಕೇವಲ ವಿಶ್ರಾಂತಿ ಧಾಮಗಳಾಗಿರದೇ ಸ್ವಾತಂತ್ರ್ಯ ಚಳುವಳಿಯ ಕಾರ್ಯಾಗಾರಗಳಾಗಿಯೂ ಕಾರ್ಯ ನಿರ್ವಹಿಸಿವೆ.

ಗಂಗಾಧರರಾವ್ ದೇಶಪಾಂಡೆಯವರು ಹುದಲಿಯ ಜಾಹಗೀರದಾರರು. ಇದಲ್ಲದೆ ಗಾಂಧೀಜಿಯ ತತ್ವ ಸಿದ್ಧಾಂತಗಳಿಗೆ ಮಾರುಹೋದವರು. ತನು, ಮನ, ಧನದಿಂದ ದೇಶಕ್ಕಾಗಿ ತಮ್ಮ ಬದುಕನ್ನೇ ಮೀಸಲಿಟ್ಟ ಅಪ್ಪಟ ರಾಷ್ಟ್ರ ಭಕ್ತರು. ಇವರು ಹುದಲಿಯಲ್ಲಿ ಕುಮರಿ ಆಶ್ರಮವನ್ನು ನಿರ್ಮಿಸಿದ್ದಾರೆ. ಆ ಆಶ್ರಮವು ಸಹ್ಯಾದ್ರಿ ಶ್ರೇಣಿಯ ಚಿಕ್ಕ ಚಿಕ್ಕ ಗುಡ್ಡಗಳಿಂದ ಆವರಿಸಿದ ಸಮೃದ್ಧ

ಪ್ರದೇಶ. ಇಲ್ಲಿಯ ಜನರು ಸ್ವಾಭಿಮಾನಿಗಳು, ಛಲವಾದಿಗಳು ಹಾಗೂ ರಾಷ್ಟ್ರ ಭಕ್ತರು. ಇದು ಗಂಗಾಧರ ದೇಶಪಾಂಡೆಯವರ ಜನ್ಮಭೂಮಿಯೂ ಹೌದು, ಕರ್ಮ ಭೂಮಿಯೂ ಹೌದು.

ಗಂಗಾಧರರಾವ್ ದೇಶಪಾಂಡೆಯವರು ಕರ್ನಾಟಕದ ಸಿಂಹವೆಂದೇ ಪ್ರಸಿದ್ಧರಾಗಿದ್ದಾರೆ. ಮಹಾರಾಷ್ಟ್ರದ ವೀರಕೇಸರಿಯಾದ ಲೋಕಮಾನ್ಯ ಟಿಳಕರಿಂದ ಪ್ರೇರಿತರಾಗಿ ಮಹಾರಾಷ್ಟ್ರ ಮತ್ತು ಉತ್ತರ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿಯ ಕರ್ಣಧಾರತ್ವವನ್ನು ವಹಿಸಿದರು. ಸ್ವಾತಂತ್ರ್ಯ ಆಂದೋಲನದ ಜೊತೆಗೆ ನಾಡಿನ ಜನರಲ್ಲಿ ರಾಷ್ಟ್ರೀಯತೆ ಮತ್ತು ಸ್ವಾವಲಂಬನೆಯ ಬೀಜವನ್ನು ಬಿತ್ತುವುದಕ್ಕಾಗಿ ೧೯೨೩ ರಲ್ಲಿ ಕುಮರಿ ಆಶ್ರಮವನ್ನು ಇವರು ಹುಟ್ಟು ಹಾಕಿದರು. ಹುದಲಿಯಿಂದ ಸುಮಾರು ಎರಡು ಕಿಲೋಮೀಟರ್ ದೂರದಲ್ಲಿ ಸಹ್ಯಾದ್ರಿ ಬೆಟ್ಟದ ತಪ್ಪಲಿನಲ್ಲಿ ತಮ್ಮ ಸ್ವಂತ ಫಲವತ್ತಾದ ತೋಟದಲ್ಲಿ ಕುಮರಿ ಆಶ್ರಮವನ್ನು ಸ್ಥಾಪಿಸಿದರು. ಆಶ್ರಮದ ಎಡಗಡೆ ತಿಳಿನೀರಿನ ಬಳ್ಳಾರಿ ಹಳ್ಳ ಇದೆ. ಅಂದು ತುಂಬಿ ಹರಿಯುವ ಈ ಹಳ್ಳ ಕುಂದರನಾಡಿನ ಜನರ ಜೀವ ನದಿಯೇ ಆಗಿತ್ತು. ಬಲಗಡೆ ಚಿಕ್ಕ ಚಿಕ್ಕ ದಟ್ಟವಾದ ಬೆಟ್ಟಗಳು. ಗ್ರಾಮೋದ್ಯೋಗ ಮತ್ತು ಗಾಂಧಿ ಸಂದೇಶಗಳನ್ನು ಚುರುಕುಗೊಳಿಸಲು ಮೊದಲು ತಲೆ ಎತ್ತಿನಿಂತ ಮೊದಲ ಖಾದಿ ಸಂಘವೇ ಮುಂದೆ ೧೯೨೫ ರಲ್ಲಿ ಗಾಂಧಿ ಸೇವಾ ಸಂಘದ ಕುಮರಿ ಆಶ್ರಮವಾಯಿತು.

ಸ್ವಾತಂತ್ರ್ಯ ಚಳುವಳಿಯಲ್ಲಿ ಕುಮರಿ ಆಶ್ರಮವು ದೇಶದ ಗಮನವನ್ನು ತನ್ನೆಡೆಗೆ ಸೆಳೆದುಕೊಂಡಿತು. ಅಪಾರ ಸೇನಾನಿಗಳಿಗೆ ರಾಷ್ಟ್ರ ಭಕ್ತರಿಗೆ ಮಾರ್ಗದರ್ಶಿ, ಪ್ರೇರಕ ಶಕ್ತಿಯಾಗಿ ಯುವ ಜನಾಂಗವನ್ನಂತೂ ಲೋಹಚುಂಬಕದಂತೆ ತನ್ನೆಡೆಗೆ ಸೆಳೆದುಕೊಂಡಿತು. ರಾಮಚಂದ್ರ ವಡವಿ, ಬಿದರಿ ವಾಮನರಾಯರು, ಪುಂಡಲಿಕಜೀ ಕಾತಗಡೆ, ಅಣ್ಣೂ ಗುರೂಜಿಯಂತಹ ಮಹಾನ್ ದೇಶ ಪ್ರೇಮಿಗಳು ಆಶ್ರಮ ಸೇರಿ ದೇಶಸೇವೆಗಾಗಿ ತಮ್ಮನ್ನು ಸಮರ್ಪಿಸಿಕೊಂಡಿದ್ದಾರೆ.

ಈ ಆಶ್ರಮವು ಗಾಂಧಿ ಸೇವಾ ಸಂಘದ ರಚನಾತ್ಮಕ ಕಾರ್ಯಗಳಿಗೆ ಮಾತ್ರ ಸೀಮಿತವಾಗದೇ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕುವ ತರುಣರಿಗೆಲ್ಲಾ ಪ್ರೇರಣಾ ಶಕ್ತಿಯಾಗಿತ್ತು. ೧೯೩೦ ರಲ್ಲಿಯ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ ದೇಶಭಕ್ತ ಗಂಗಾಧರರಾವ್ ದೇಶಪಾಂಡೆಯವರು ಆ ಸತ್ಯಾಗ್ರಹದಲ್ಲಿ ಭಾಗವಹಿಸಿದ ಕರ್ನಾಟಕದ ಪ್ರಥಮ ಸತ್ಯಾಗ್ರಹಿಗಳೆಂಬ ಹೆಗ್ಗಳಿಕೆಗೆ ಪಾತ್ರರಾದರು. ಇವರನ್ನು ಅನುಸರಿಸಿ ಹಲವಾರು ಜನ ತರುಣರು ಇದರಲ್ಲಿ ಭಾಗವಹಿಸಿದ್ದಾರೆ. ೧೯೩೨ ರ ಚಳುವಳಿಯು ವಿಶೇಷವಾಗಿ ಕುಂದರನಾಡಿನಲ್ಲಿ ನಡೆದದ್ದು ಬ್ರಿಟಿಷರಿಗೆ ದೊಡ್ಡ ತಲೆನೋವಾಗಿ ಪರಿಣಮಿಸಿತು. ಗಂಗಾಧರರಾವ್ ದೇಶಪಾಂಡೆ ಅವರ ಚಳುವಳಿಗೆ ಬೆನ್ನೆಲುಬಾಗಿ ರಾಮಚಂದ್ರ ವಡವಿ, ವಾಮನಾರಾವ್ ಬಿದರಿ, ಅಣ್ಣೂ ಗುರೂಜಿ, ರಾವಜಿಕಾಕಾ, ಪುಂಡಲೀಕಜಿ ಖಾತಗಡೆ, ಗಂಗಪ್ಪಾ ಯಮಕನಮರಡಿ ಮುಂತಾದವರು ಕ್ರಿಯಾಶೀಲ ಕಾರ್ಯಕರ್ತರಾಗಿ ಹೋರಾಡಿದ್ದಾರೆ. ಸತ್ಯಾಗ್ರಹವು ಅತ್ಯಂತ ಬಿರುಸಾಗಿ ನಡೆದ ಸಂದರ್ಭದಲ್ಲಿ ಕುಮರಿ ಆಶ್ರಮವು ಸತ್ಯಾಗ್ರಹಿಗಳಿಗೆ

ಸ್ಫೂರ್ತಿಯಾದೀತು ಎಂಬ ಹೆದರಿಕೆಯಿಂದ ಪೋಲೀಸರು ೧೯೩೨ ರಲ್ಲಿ ಕುಮರಿ ಆಶ್ರಮವನ್ನು ನಾಶಪಡಿಸುತ್ತಾರೆ.

ಸತ್ಯಾಗ್ರಹದ ಕಾವು ಮೇಲ್ನೋಟಕ್ಕೆ ಶೀತಲವಾಗಿ ಕಂಡರೂ ಒಳಗೊಳಗೆ ಅದು ಸ್ಫೋಟಗೊಳ್ಳಲು ತವಕಿಸುತ್ತಿತ್ತು. ೧೯೩೪ ರಲ್ಲಿ ಸಮಗ್ರ ಗ್ರಾಮಸೇವಾ ವಿಚಾರವನ್ನು ಗಾಂಧೀಜಿಯವರು ದೇಶದ ಮುಂದಿಡುತ್ತಾರೆ. ಆಶ್ರಮದ ಸಂಚಾಲಕರಾದ ರಾಮಚಂದ್ರ ವಡವಿ ಮತ್ತು ಕಾರ್ಯಕರ್ತರು ಈ ವಿಚಾರವನ್ನು ಸವಾಲಾಗಿ ಸ್ವೀಕರಿಸಿ ಕುಂದರನಾಡಿನ ಗುಡ್ಡಗಾಡು ಬೇಡ ಜನಾಂಗವನ್ನು ಮುಖ್ಯ ವಾಹಿನಿಗೆ ತರಲು ಪಣತೊಡುತ್ತಾರೆ. ಅಲ್ಲಿಯ ಅವಿದ್ಯಾವಂತ ಬೇಡ ಮುಗ್ಧ ಜನಾಂಗವು ಉದ್ಯೋಗವಿಲ್ಲದೆ ಕಟ್ಟಿಗೆ ಕಡಿದು ಇದ್ದಿಲು ಮಾಡುವುದು, ಕಳ್ಳ ಬಟ್ಟಿ ಸೆರೆ ತಯಾರಿಸುವುದು, ಕಳ್ಳತನ ಮಾಡುವುದು ಮುಂತಾದವುಗಳಲ್ಲಿ ತೊಡಗಿತ್ತು.

ಗಾಂಧೀಜಿಯವರ ಕಾಯಕ ಸಿದ್ಧಾಂತವು ಚಳುವಳಿಕಾರರ ಮೇಲೆ ದಟ್ಟವಾದ ಪ್ರಭಾವವನ್ನು ಬೀರಿತ್ತು. ಅವರು ಈ ಬೇಡರ ಜೀವನಮಟ್ಟವನ್ನು ಸುಧಾರಿಸಲು ಹಲವು ಉಪಾಯಗಳನ್ನು ಕಂಡುಕೊಂಡರು. ಅವರ ಹೊಟ್ಟೆಯ ಪಾಡಿಗಾಗಿ ಆಶ್ರಮವತಿಯಿಂದ ಧಾನ್ಯಕೋಠಿಯನ್ನು ಪ್ರಾರಂಭಿಸಿದರು. ರೈತರಿಂದ ಧಾನ್ಯವನ್ನು ಸಂಗ್ರಹಿಸಿ ಹಳ್ಳಿಯ ಹಿರಿಯರೊಂದಿಗೆ ಮಾತನಾಡಿ ಆಯಾ ಕುಂಟುಂಬಕ್ಕೆ ಬೇಕಾಗುವಷ್ಟು ಧಾನ್ಯವನ್ನು ನೀಡಲಾಗುತ್ತಿತ್ತು. ಹಳ್ಳಿಯ ಜನರು ಪ್ರಾಮಾಣಿಕವಾಗಿ ಬೆಳೆ ಬಂದ ಕೂಡಲೇ ತಾವು ಪಡೆದ ಧಾನ್ಯವನ್ನು ಹಿಂದುರಿಗಿಸುತ್ತಿದ್ದರು. ಈ ಕಾರ್ಯವನ್ನು ತಿಪ್ಪಣ್ಣಾ ಬೆಟಗೇರಿಯೆಂಬ ಕಾರ್ಯಕರ್ತನು ಯಾಶಸ್ವಿಯಾಗಿ ನಿರ್ವಹಿಸುತ್ತಿದ್ದನು. ಗುಡ್ಡ ಬೆಟ್ಟಗಳಲ್ಲಿ ಮತ್ತು ಸಮತಲ ಪ್ರದೇಶದಲ್ಲಿ ಒಕ್ಕಲುತನ ಮಾಡಲು ಚಳುವಳಿಕಾರರು ಉತ್ತೇಜನ ನೀಡುತ್ತಿದ್ದರು. ಇದಲ್ಲದೆ ಅಕ್ಷರ ಸಂಸ್ಕಾರದಿಂದ ವಂಚಿತರಾದ ಬೇಡರಿಗೆ ಒಳ್ಳೆಯ ಸಂಸ್ಕಾರವನ್ನು ನೀಡುತ್ತಿದ್ದರು. ಮನುಷ್ಯನ ಮೌಢ್ಯವನ್ನು ಕಳೆಯುತ್ತಾ ಆಶ್ರಮದ ಸೇವಾ ಸಮಿತಿಯು ಗುಡ್ಡಗಾಡು ಪ್ರದೇಶದ ಹಳ್ಳಿಯ ಮಕ್ಕಳಿಗಾಗಿ ಶಾಲೆಯನ್ನು ಪ್ರಾರಂಭಿಸಿದರು.

೧೯೩೬ ರಲ್ಲಿ ಗಾಂಧೀಜಿಯವರ ಗಾಂಧಿ ಸೇವಾ ಸಮ್ಮೇಳನ ಬಿಹಾರದ ಸಾವಳಿಯಲ್ಲಿ ಜರುಗಿತ್ತು. ಆ ಸಮ್ಮೇಳನದಲ್ಲಿ ಭಾಗವಹಿಸಲು ಕರ್ನಾಟಕದಿಂದ ರಾಮಚಂದ್ರ ವಡವಿ, ಪುಂಡಲಿಕಜೀ ಖಾತಗಡೆ, ದಾದಾ ಕಾಳೆ ಮುಂತಾದವರು ಹೋಗುತ್ತಾರೆ. ಇದಲ್ಲದೆ ಮುಂದಿನ ಸೇವಾ ಸಮ್ಮೇಳನವು ಕರ್ನಾಟಕದ ಹುದಲಿಯಲ್ಲಿ ಜರುಗಬೇಕೆಂದು ಆಗ್ರಹಿಸಿದರು. ಗಾಂಧೀಜಿಯವರು ಕರ್ನಾಟಕದ ಆಮಂತ್ರಣವನ್ನು ಮಾನ್ಯ ಮಾಡಿ ಹುದಲಿಗೆ ಬರಲು ಒಪ್ಪಿಕೊಳ್ಳುವರು. ೧೯೩೭ ಎಪ್ರೀಲ್ ೧೭ ರಿಂದ ೨೩ ರವರೆಗೆ ಹುದಲಿಯಲ್ಲಿ ಅರ್ಥಪೂರ್ಣವಾದ ಸಮ್ಮೇಳನವನ್ನು ಜರುಗಿ ಊರೆಲ್ಲಾ ಶ್ರಮದಾನದಿಂದ ರಸ್ತೆ ನಿರ್ಮಾಣ, ನೀರಿನ ವ್ಯವಸ್ಥೆ, ಸಮ್ಮೇಳನಕ್ಕೆ ಆಗಮಿಸುವ ಹತ್ತು ಸಾವಿರ ಪ್ರತಿನಿಧಿಗಳಿಗೆ ಜೋಳದ ದಂಟಿನ ಕುಟೀರಗಳನ್ನು ರೈತರು ನಿರ್ಮಿಸಿದ್ದರು.

'ಕುಂದರನಾಡಿನ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದ ಅಮೃತಗಳಿಗೆ ೧೯೩೭ ಎಪ್ರಿಲ್ ಹದಿನೇಳು. ಅಂದು ಬೆಳಗಿನ ಜಾವ ಮಿರಜದಿಂದ ಹೊರಡುವ ರೈಲಿಗೆ ಮಹಾತ್ಮಾ ಗಾಂಧೀಜಿಯವರು. ಮಹಾದೇವ ದೇಸಾಯಿ ಕೆ. ಎಫ್. ಪಾಟೀಲರ ಜೊತೆಗೂಡಿ ಸುಲಧಾಳ ರೈಲು ನಿಲ್ದಾಣಕ್ಕೆ ಆಗಮಿಸುತ್ತಾರೆ. ಗಂಗಾಧರರಾವ್ ದೇಶಪಾಂಡೆಯವರು ಸ್ವಾಗತಕ್ಕೆ ಸಕಲ ಸಿದ್ಧತೆಯನ್ನು ಮಾಡಿದರು. ಗಾಂಧೀಜಿಯವರು ಯಾರಿಂದಲೂ ಹಾರ ತುರಾಯಿ ಸ್ವೀಕರಿಸದೇ ಎರಡು ಕಿಲೋಮೀಟರ ದೂರದ ಹುದಲಿಗೆ ನಡೆದುಕೊಂಡೇ ಬರುತ್ತಾರೆ'. ಸುಲಧಾಳ ಗ್ರಾಮವನ್ನು ಪ್ರವೇಶ ಮಾಡುವಾಗ ಹಳ್ಳಿಯ ತರುಣ ಪೈಲವಾನ ಬಸವಂತೆಪ್ಪಾ ಬಡ್ಲಮಗೋಳ ದಾರಿಗೆ ಅಡ್ಡಗಟ್ಟಿ ನಿಂತು ಗಾಂಧೀಜಿಯವರಿಗೆ ಮಾಲೆ ಹಾಕುತ್ತಾನೆ.ಸುಲಧಾಳದ ಹಿರಿಯ ನಾಗರಿಕರಾದ ಬಸವಣ್ಣೆಪ್ಪಾ. ಆರ್. ಪಾಟೀಲ ಗ್ರಾಮಕ್ಕೆ ಸ್ವಾಗತಿಸುತ್ತಾರೆ. ಹುದಲಿಯಲ್ಲಿ ಚಪ್ಪರವನ್ನು ನಿರ್ಮಿಸಿ ಕಾರ್ಯಕ್ರಮ ಅಣಿಗೊಳಸಲಾಗುತ್ತದೆ. ಸ್ವಾಗತಾಧ್ಯಕ್ಷರಾದ ಮತ್ತು ಕುಮರಿ ಆಶ್ರಮದ ರೂವಾರಿಯು ಆದ ಗಂಗಾಧರರಾವ್ ದೇಶಪಾಂಡೆ, ವಿನೋಭಾ ಬಾವೆ, ಕಸ್ತೂರಬಾ ಗಾಂಧಿ, ಸರದಾರ್ ಪಟೇಲ್, ಬಾಬು ರಾಜೇದ್ರ ಪ್ರಸಾದ್, ಗಡಿನಾಡ ಗಾಂಧಿ ಅಬ್ದಲ್ ಗಫಾರಖಾನ್, ಚಮನ ಲಾಲ್ ಬಜಾಜ್, ಶೌಕತ್ಅಲಿ, ಸರೋಜಿನಿ ನಾಯ್ಡು, ರಾಜಗೋಪಾಲಾಚಾರಿ, ಕಮಲಾಬಾಯಿ ಪಟೇಲ್, ಮಣಿಬೆನ್ ಪಟೇಲ್, ಸರದಾರ್ ವೀರನಗೌಡರು, ಆಚಾರ್ಯ ಕೃಪಲಾನಿ, ಕಿಶೋರಲಾಲಜಿ, ಕಾಕಾ ಕಾಲೇಕರ್, ರಂಗರಾವ್ ದಿವಾಕರ್, ಗುದ್ಲೆಪ್ಪಾ ಹಳ್ಳಿಕೇರಿ, ಕುಮಾರೆಪ್ಪಾ, ಶಂಕರಾವ್ ದೇವ್ ಮುಂತಾದ ಗಣ್ಯಾತಿ ಗಣ್ಯ ನಾಯಕರನ್ನು ಗಂಗಾಧರರಾವ್ ಅವರು ಸ್ವಾಗತಿಸಿದರು. ನೆಹರೂ ಅವರನ್ನು ಹೊರೆತು ಪಡಿಸಿ ದೇಶದ ಎಲ್ಲ ನಾಯಕರೂ ಸಮ್ಮೇಳನದಲ್ಲಿ ಪಾಲ್ಗೊಂಡಿದ್ದರು. ಸಮ್ಮೇಳನದಲ್ಲಿ ಗಾಂಧೀಜಿಯವರು ಮಾತನಾಡುತ್ತಾ "ವಿಚಾರಗಳ ಅಪಚನವು ಅನ್ನದ ಅಪಚನಕ್ಕಿಂತ ಹೆಚ್ಚು ಅಪಾಯಕಾರಿಯಾಗಿರುತ್ತದೆ"'.

ಗಾಂಧೀಜಿಯವರ ಮಾತುಗಳನ್ನು ಕೇಳಲು ಸಭೆಯಲ್ಲಿ ಹತ್ತುಸಾವಿರ ಪ್ರತಿನಿಧಿಗಳು ಉಸಿರು ಬಿಗಿಹಿಡಿದು ಮಹಾತ್ಮಾಜಿಯವರ ಸಂದೇಶಕ್ಕಾಗಿ ಕಾಯುತ್ತಿದ್ದರು. ಅಧ್ಯಕ್ಷತೆ ವಹಿಸಿದ್ದ ಮಶ್ರುವಾಲಾ ಅವರು ಸಿದ್ಧ ಪಡಿಸಿದ್ದ ಇಪ್ಪತ್ತೇಳು ಪುಟದ ಭಾಷಣದ ಮೇಲೆ ಇಪ್ಪತ್ತು ಜನ ಸದಸ್ಯರು ಚರ್ಚಿಸಿದರು. ಏಳು ದಿನದ ಈ ಕಾರ್ಯಕ್ರಮವು ಸಿದ್ಧಪಡಿಸಿದ ವೇಳಾಪಟ್ಟಿಯಂತೆ ವ್ಯವಸ್ಥಿತವಾಗಿ ನಡೆಯಿತು. ಸಾಮೂಹಿಕ ಪ್ರಾರ್ಥನೆ, ಶ್ರಮದಾನಗಳಲ್ಲಿ ಹಿರಿಯರು ಕಿರಿಯರು ಎನ್ನದೆ ಎಲ್ಲರೂ ಸಮಾನವಾಗಿ ಭಾಗವಹಿಸುತ್ತಿದ್ದರು. ಕಾರ್ಯಕ್ರಮದ ಮೊದಲ ದಿನವೇ ಆಕಸ್ಮಿತವಾಗಿ ಧಾರಾಕಾರವಾಗಿ ಮಳೆ ಸುರಿಯಲಾರಂಭಿಸಿತು. ಕುಟೀರಗಳಲ್ಲಿ ನೀರು ತುಂಬಿಕೊಂಡಿತ್ತು. ಗಾಂಧೀಜಿಯವರೂ ಸಂಪೂರ್ಣ ತೋಯ್ದು ಹೋಗಿದ್ದರು. ಇಂತಹ ಕಠಿಣ ಪ್ರಸಂಗದಲ್ಲಿಯೂ ಗಂಗಾಧರರಾಯರು ಎಲ್ಲರಿಗೂ ಅಚ್ಚುಕಟ್ಟಾಗಿ ವಸತಿ ವ್ಯವಸ್ಥೆಯನ್ನು ಮಾಡಿದ್ದರು. ಗಾಂಧೀಜಿಯವರ ಕಾಗದ ಪತ್ರಗಳು ತೋಯ್ದು ಹಾಳಾಗಬಾರದೆಂದು ಮಂಡಲೀಕಜಿಯವರು ಅವುಗಳನ್ನೆಲ್ಲಾ ಕಂಬಳಿಯಲ್ಲಿ ಸುತ್ತಿ ಕುಮರಿ ಆಶ್ರಮಕ್ಕೆ ಕಳಿಸಿ ಕೊಡುತ್ತಾರೆ.

ಬೆಳಗಾವಿಯ 'ತ್ರಿವಿಧ ದಾಸೋಹಿಗಳಾದ ನಾಗನೂರ ಶಿವಬಸವ ಸ್ವಾಮಿಗಳವರ ಮತ್ತು ಮಹಾತ್ಮಾಜಿಯವರ ಭೇಟ್ಟಿಯನ್ನು ಬೆಳಗಿನ ಜಾವ ಆಶ್ರಮದಲ್ಲಿ ನಿಗದಿಪಡಿಸಲಾಗಿತ್ತು. ಗಂಗಾಧರರಾವ್ ದೇಶಪಾಂಡೆಯವರು ಇಬ್ಬರು ಧಾರ್ಶನಿಕರ ಮಧ್ಯೆ ದ್ವಿಭಾಷಿಕರಾಗಿ ಕೆಲಸ ಮಾಡುತ್ತಾರೆ. ಇವರಿಬ್ಬರ ಸೌಹಾರ್ದಯುತ ಮಾತುಕತೆಗಳಲ್ಲಿ ಶ್ರೀಗಳವರ ಜಾತ್ಯಾತೀತತೆ, ಮತ್ತು ಬಡ ಮಕ್ಕಳ ಸಲುವಾಗಿ ಪ್ರಸಾದದ ವ್ಯವಸ್ಥೆ, ಅಲ್ಲದೆ ಅವರ ಸ್ವಾತಂತ್ರ್ಯ ಪ್ರೇಮ ಮುಂತಾದವುಗಳನ್ನು ಕಂಡು ಗಾಂಧೀಜಿಯವರು ಹರ್ಷಗೊಳ್ಳುತ್ತಾರೆ. ಇದಲ್ಲದೆ ಪೂಜ್ಯ ಶ್ರೀಗಳನ್ನು ಕರೆದು ತಾವು ಖಾದಿಧಾರಿಗಳಾಗಬೇಕೆಂದು ವಿನಂತಿಸಿಕೊಳ್ಳುತ್ತಾರೆ'. ಕೊನೆಯ ದಿನ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಭಾರತೀಯರು ಕೌನ್ಸಿಲ್ ಪ್ರವೇಶ ಮಾಡಬೇಕೆಂಬ ಚರಿತ್ರಾರ್ಹ ನಿರ್ಣಯವನ್ನು ಕೈಕೊಳ್ಳುತ್ತಾರೆ. ಗಾಂಧೀಜಿಯವರು ಸಮಾರೋಪ ಭಾಷಣ ಮಾಡುತ್ತಾ ನುಡಿದ ಮಾತುಗಳು ತುಂಬಾ ಪರಿಣಾಮಕಾರಿಯಾಗಿವೆ. "ಈ ಸಮ್ಮೇಳನ ವಿಷಯಕ್ಕೆ ಈಶ್ವರನ ಯೋಜನೆ ಬೇರೆಯೇ ಇದ್ದಿತು. ಈಶ್ವರನು ಮಾನವೀಯ ಯತ್ನಗಳನ್ನು ನಿಷ್ಫಲಗೊಳಿಸಲಾರನೆಂಬ ನಂಬಿಕೆ ಜನರಲ್ಲಿತ್ತು. ನಾವು ಜನ್ಮ ತಾಳಿದ್ದೇವೆ. ನಿಜವಾದ ಸ್ವಾತಂತ್ರ್ಯಕ್ಕಾಗಿ ನಾವು ರಚನಾತ್ಮಕ ಕಾರ್ಯಗಳನ್ನು ಕೈಕೊಳ್ಳುತ್ತಲೇ ಇರಬೇಕು"[೫]. ಹೀಗೆ ಗಾಂಧೀಜಿಯವರು ಮಾತನಾಡಿ ವಿಧಾಯಕ ಕಾರ್ಯಕ್ರಮಗಳಿಗೆ ಗ್ರಾಮಸ್ಥರನ್ನು ಅಭಿನಂದಿಸಿ ವೇದಿಕೆಯಿಂದ ಇಳಿದು ಕಾಲ್ನಡಿಗೆಯಿಂದಲೇ ಸುಲಧಾಳ ರೈಲು ನಿಲ್ದಾಣದತ್ತ ಹೆಜ್ಜೆ ಹಾಕುತ್ತಾರೆ.

ಕುಮರಿ ಆಶ್ರಮದ ರೂವಾರಿಯದ ದೇಶಭಕ್ತ ಗಂಗಾಧರರಾವ್ ದೇಶಪಾಂಡೆಯವರು ಮಹಾತ್ಮಾ ಗಾಂಧೀಜಿಯವರ ಧ್ಯೇಯಗಳಾದ ಸ್ವಾವಲಂಬನೆ, ಸ್ವದೇಶಿ ಪ್ರೇಮ, ಅಹಿಂಸೆ, ರಾಷ್ಟ್ರೀಯತೆ, ಅಸ್ಪೃಶ್ಯತೆ ನಿವಾರಣೆ, ಗ್ರಾಮೋದ್ಯೋಗ ಮುಂತಾದವುಗಳ ಬಗ್ಗೆ ಯುವಕರಲ್ಲಿ ಜಾಗೃತಿಯನ್ನು ಮೂಡಿಸುತ್ತಾರೆ. ಇಡೀ ಭಾರತದ ತುಂಬಾ ಕುಂದರನಾಡಿನ ಸ್ವಾತಂತ್ರ್ಯ ಚಳುವಳಿಯ ಪ್ರಭಾವವು ವ್ಯಾಪಿಸುತ್ತದೆ. ಈ ಸ್ವಾತಂತ್ರ್ಯದ ಜ್ವಾಲೆ ಪ್ರಚಂಡವಾಗಿ ಪ್ರಜ್ವಲಿಸಿದರೂ ಹಿಂಸೆಗೆ ಎಡೆಯಾಗಿರಲಿಲ್ಲ. ಸತ್ಯಾಗ್ರಹಿಗಳು ನೋವನ್ನು ಉಂಡರೇ ಹೊರತು ವಿರೋಧಿಗಳಿಗೆ ನೋವನ್ನು ಉಂಟು ಮಾಡಲಿಲ್ಲ. ಇದಕ್ಕೆ ಮುಖ್ಯವಾದ ಕಾರಣವೆಂದರೆ ಗಾಂಧಿ ಸೇವಾ ಸಂಘದ ಕುಮರಿ ಆಶ್ರಮದ ಸಂಸ್ಕಾರ. ಕುಮರಿ ಆಶ್ರಮದ ಕತೆಯೆಂದರೆ ಸ್ವಾತಂತ್ರ್ಯ ಆಂದೋಲನದ ಕತೆಯೇ ಆಗಿದೆ. ಹೋರಾಟಗಾರರ ಅದ್ಭುತರಮ್ಯ ಅನುಭವಗಳೇ ಕುಮರಿ ಆಶ್ರಮದಲ್ಲಿ ಹುಟ್ಟಿ ವಿಕಾಸ ಹೊಂದಿವೆ. ಹೀಗಾಗಿ ಆಶ್ರಮಕ್ಕೂ ಹೋರಾಟಗಾರರಿಗೂ ಅವಿನಾಭಾವ ಸಂಬಂಧವಿದೆ.

ಗಾಂಧೀಜಿಯವರ ಗ್ರಾಮ ವಿಕಾಸ ಯೋಜನೆಯ ಕನಸು ಕುಮರಿ ಆಶ್ರಮದ ಕಾರ್ಯಕರ್ತರ ಮೂಲಕ ಸಾಕಾರಗೊಳ್ಳುವಲ್ಲಿ ಒಂದು ಪ್ರಯತ್ನ ನಡೆದಿತ್ತು. ಈಗ ಹುದಲಿ ಗ್ರಾಮದಲ್ಲಿ ಕುಮರಿ ಆಶ್ರಮವಿಲ್ಲ. ಅದು ಇಂದು ನಾಶವಾಗಿದೆ. ಆದರೆ ಗಂಗಾಧರ ದೇಶಪಾಂಡೆ, ರಾಮಚಂದ್ರ ವಡವಿ, ಪುಂಡಲಿಕಜೀ ಕಾತಗಡೆ ಮುಂತಾದವರು ಸುರಿಸಿದ ಬೆವರಿನ ಬೆಲೆ ಇಂದಿನ ಜನತೆಗೆ ಅರ್ಥವಾಗಬೇಕಾದರೆ ಇಂದು ಆಶ್ರಮದ ಪುನರುಜ್ಜೀವನವಾಗುವುದು ಅತ್ಯಂತ ಅವಶ್ಯವಾಗಿದೆ.

ಕುಮರಿ ಆಶ್ರಮವು ಸ್ವಾತಂತ್ರ್ಯ ಚಳುವಳಿಯ ಮುಖ್ಯ ಸ್ಥಳವಾಗಿತ್ತು. ಗಾಂಧೀಜಿಯವರು ಹಾಕಿಕೊಟ್ಟ ಮಾರ್ಗದಲ್ಲಿ ಕುಮರಿ ಆಶ್ರಮದ ಚಳುವಳಿಗಾರರು ಹಲವು ಹತ್ತು ವಿಧಾಯಕ ಕಾರ್ಯಗಳನ್ನು ಮಾಡುತ್ತಿದ್ದರು. ಚರಕದಿಂದ ನೂಲು ತೆಗೆಯುವುದು. ಕೈ ಮಗ್ಗಗಳ ಮೂಲಕ ಬಟ್ಟೆ ನೇಯುವುದು, ಸ್ವದೇಶಿ ವಸ್ತುಗಳನ್ನು ತಯಾರಿಸುವದು ಮುಂತಾದ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದರು. ಬ್ರಿಟಿಷ ಸರಕಾರ ಈ ಸ್ವಾತಂತ್ರ್ಯ ಹೋರಾಟಗಾರರೆಲ್ಲರನ್ನೂ ಹಿಡಿದು ಸೆರೆಮನೆಗೆ ಕಳುಹಿಸಿ ಆಶ್ರಮವನ್ನು ಜಪ್ತು ಮಾಡಿ ಬೀಗ ಹಾಕಿ ಮುದ್ರೆಯನ್ನೊತ್ತಿದ್ದರು. ಕಾವಲಿಗೆ ಪೊಲೀಸರನ್ನು ಇಟ್ಟಿತ್ತು.

## ೪.೫ ಕುಂದರನಾಡಿನ ಸ್ವಾತಂತ್ರ್ಯ ಚಳುವಳಿಯ ಪ್ರಮುಖ ಘಟನೆಗಳು :

ಕುಂದರನಾಡಿನ ಸ್ವಾತಂತ್ರ್ಯ ಚಳುವಳಿಗಾರರು ಬ್ರಿಟಿಷರನ್ನು ಭಾರತದಿಂದ ಹೊಡೆದೋಡಿಸುವುದಕ್ಕಾಗಿ ಸರಕಾರಿ ವಸ್ತುಗಳನ್ನು ಮತ್ತು ಕಚೇರಿಗಳನ್ನು ಲೂಟಿ ಮಾಡುತ್ತಿದ್ದರು. ಅವರು ಗುಪ್ತವಾಗಿ ಸಭೆ ಸಮಾರಂಭಗಳನ್ನು ಹಮ್ಮಿಕೊಂಡು ರೈಲ್ವೆ ಹಳಿ ಕೀಳುವುದು, ಪೋಸ್ಟ ಆಫೀಸಿಗೆ ಬೆಂಕಿ ಹಚ್ಚುವುದು, ಸರ್ಕಾರಿ ದಫ್ತರಗಳನ್ನು ಸುಡುವುದು ಹೀಗೆ ಹಲವಾರು ವಿಧ್ವಂಸಕ ಕೃತ್ಯಗಳನ್ನು ಮಾಡುತ್ತಿದ್ದರು. ಈ ಕಾರಣಕ್ಕಾಗಿ ಬ್ರಿಟಿಷರು ಅನೇಕ ಭಾರತೀಯ ಹೋರಾಟಗಾರರನ್ನು ಬಂಧನದಲ್ಲಿ ಇಟ್ಟಿದ್ದರು. ಆದರೆ ಚಳುವಳಿಗಾರರು ಅವರನ್ನು ಸೆರೆಮನೆಯಿಂದ ಗುಪ್ತವಾಗಿ ಹೊರತರುವ ಯೋಜನೆಯನ್ನು ಹಾಕುತ್ತಿದ್ದರು. ಇಂತಹ ಒಂದು ಘಟನೆ ಪುಂಡಲೀಕಜಿ ಕಾತಗಡೆ ಅವರ ಬದುಕಿನಲ್ಲಿ ನಡೆದದು ತುಂಬಾ ಸ್ವಾರಸ್ಯಕರವಾಗಿದೆ.

ಪುಂಡಲಿಕಜೀಯವರು ಮೀರಜದಲ್ಲಿ ಭೂಗತರಾಗಿ ಕಾರ್ಯ ಮಾಡುತ್ತಿದ್ದರು. ಪುಂಡಲೀಕಜಿಯವರಿಗೆ ರಾಮಚಂದ್ರ ವಡವಿ ಹಾಗೂ ಅವರ ಗೆಳೆಯರ ಗುಂಪಿನಲ್ಲಿ ಸೇರಿಕೊಂಡು ಕಾರ್ಯ ಮಾಡಬೇಕೆಂಬ ಆಸೆ. ಆದರೆ ಅವರ ಮೇಲೆ ಪೊಲೀಸರ ಹದ್ದಿನ ಕಣ್ಣು. ಪುಂಡಲೀಕಜಿಯವರು ಬೆಳಗಾವಿಯಲ್ಲಿ ಸ್ವಾತಂತ್ರ್ಯ ಚಳುವಳಿ ಕುರಿತು ಮೇಲಿಂದ ಮೇಲೆ ವ್ಯಾಖ್ಯಾನ ಮಾಡುತ್ತಿದ್ದರು. ಈ ಸಂಗತಿ ಪೊಲೀಸರಿಗೂ ಗೊತ್ತಿತ್ತು. ಹೀಗಾಗಿ ಬೆಳಗಾವಿ ಕಡೆ ಬರುವುದು ಪುಂಡಲೀಕಜಿಯವರಿಗೆ ತುಂಬಾ ಕಠಿಣವೆನಿಸಿತ್ತು. ಆದರೂ ಧೈರ್ಯಮಾಡಿ ವೇಷ ಬದಲಾಯಿಸಿಕೊಂಡು ಬೆಳಗಾವಿಗೆ ಬರಬೇಕೆಂದು ಹೊರಡುತ್ತಾರೆ. ಇದು ಪೊಲೀಸರಿಗೆ ಗೊತ್ತಾಗಿ ಪುಂಡಲಿಕಜೀಯವರನ್ನು ಬಂಧಿಸಿ ಅವರನ್ನು ಸಾಂಗ್ಲಿ ಜೈಲಿನಲ್ಲಿಡುತ್ತಾರೆ. ಸಾಂಗ್ಲಿಯಿಂದ ಪುಂಡಲಿಕಜೀಯವರನ್ನು ಪೊಲೀಸರು ಬೆಳಗಾವಿಗೆ ತರಬೇಕಾಗಿತ್ತು. ಪೊಲೀಸರು ಯಾವ ಗಾಡಿಗೆ ಪುಂಡಲಿಕಜೀಯವರನ್ನು ಕರೆದು ತರುತ್ತಾರೆ ಎನ್ನುವುದನ್ನು ಪತ್ತೆ ಹಚ್ಚಿ ಅದೇ ಗಾಡಿಗೆ ನಾಲ್ಕೈದು ಜನ ಹೋರಾಟಗಾರರು ಗೋಕಾಕ ಸ್ಟೇಷನ್‌ದಲ್ಲಿ ಏರಬೇಕೆಂದು ಲೆಕ್ಕ ಹಾಕುತ್ತಾರೆ. ಸುಲದಾಳ ಹಾಗೂ ಸುಳೇಭಾವಿ ಗುಡ್ಡಗಳ ನಡುವೆ ೧೦/೧೨ ಜನ ಕಾರ್ಯಕರ್ತರು ನಿಲ್ಲುತ್ತಾರೆ. ಗಾಡಿ ದೂರದಲ್ಲಿ ಬರುವಾಗ ವಡವಿ ಹಾಗೂ ಅವರ ಸ್ನೇಹಿತರು ಸಮ್ಮತಿಯನ್ನು ಸೂಚಿಸುತ್ತಾರೆ. ಆಗ

ಗಾಡಿಯಲ್ಲಿದ್ದವರು ಚೇನ್ ಜಗ್ಗಿ ಗಾಡಿಯನ್ನು ನಿಲ್ಲಿಸಬೇಕು ತಕ್ಷಣ ಪುಂಡಲಿಕಜೀಯವರು ಗಾಡಿಯಿಂದ ಜಿಗಿದು ಪಾರಾಗಬೇಕು ಮತ್ತು ಗಾಡಿಯಲ್ಲಿದ್ದವರು ಪೊಲೀಸರ ಬಂದೂಕನ್ನು ಕಸಿದೊಗೆದು ತಾವು ಜಿಗಿದು ಬರಬೇಕು ಎಂದು ಯೋಚಿಸಿ ಆ ರೀತಿ ಕಾರ್ಯಾಚರಣೆಗೆ ಅಣಿಯಾಗುತ್ತಾರೆ. ಆದರೆ ಇವರು ಹಾಕಿದ ತಂತ್ರ ಫಲಕಾರಿಯಾಗದೆ ಪೊಲೀಸರು ಪುಂಡಲೀಕಜಿಯವರನ್ನು ನೇರವಾಗಿ ಬೆಳಗಾವಿಗೆ ಕರೆದೊಯ್ದು ಹಿಂಡಲಗಾ ಜೈಲಿಗೆ ಹಾಕುತ್ತಾರೆ. ಕುಂದರನಾಡಿನಲ್ಲಿ ನಡೆದ ಇಂಥ ಹಲವು ಘಟನೆಗಳ ಕುರಿತು ರಾಮಚಂದ್ರ ವಡವಿಯವರು 'ಕುಂದರನಾಡಿನಲ್ಲಿ ಒಂದು ಅಧ್ಯಾಯ' ಎಂಬ ಕೃತಿಯಲ್ಲಿ ಹೇಳಿದ್ದಾರೆ.

**ಸೂಳೆಬಾವಿ ಪೋಸ್ಟ್ ಲೂಟಿ :**

ರಾಮಚಂದ್ರ ವಡವಿ ಹಾಗೂ ಸಂಗಡಿಗರು ಅನೇಕ ದಿನಗಳವರೆಗೆ ಸುಳೆಭಾವಿ ಸ್ಟೇಷನ್ ಹತ್ತಿರವಿರುವ ಗುಡ್ಡದಲ್ಲಿಯೇ ವಾಸವಾಗಿದ್ದರು. ಆಗಾಗ ಇವರ ಗುಪ್ತ ಸಭೆಗಳು ನಡೆಯುತ್ತಿದ್ದವು. ಆ ಸಭೆಯಲ್ಲಿ ಯಾವ ನಿರ್ಣಯವನ್ನು ಕೈಕೊಳ್ಳುತ್ತಾರೆಯೋ ಮರುದಿನ ಎಲ್ಲಾ ಹೋರಾಟಗಾರರು ಬದ್ಧರಾಗಿ ಬೇರೆ ಬೇರೆ ಕಡೆ ಹೋಗಿ ನಿಗದಿತ ಕಾರ್ಯವನ್ನು ಮಾಡುವುದು ಅವರ ಕರ್ತವ್ಯವಾಗಿತ್ತು. ಈಗ ಪೋಸ್ಟ ಒಡೆಯಬೇಕೆಂಬ ಸಂದೇಶ ಚಳುವಳಿಕಾರರಿಂದ ಬಂದ ಕಾರಣ ಇವರು ಸೂಳೆಭಾವಿಯ ಪೋಸ್ಟ ಒಡೆಯುವುದನ್ನು ನಿರ್ಣಯಿಸಿದ್ದರು. ಸುಳೇಭಾವಿಯ ಪೋಸ್ಟ ಆಫೀಸು, ರೈಲ್ವೆ ಸ್ಟೇಷನ್‌ನಿಂದ ಒಂದೂವರೆ ಮೈಲು ದೂರದಲ್ಲಿದೆ. ದಿನಾಲು ಸುಳೇಭಾವಿಯಿಂದ ರನ್ನರನು ಸ್ಟೇಷನ್ನಿಗೆಂದು ಪೋಸ್ಟ ಬ್ಯಾಗನ್ನು ಒಯ್ಯುತ್ತಾನೆ. ಇವರೆಲ್ಲ (ಹೋರಾಟಗಾರರು) ಪೋಸ್ಟನ್ನು ಹೊಡೆಯಬೇಕೆಂದು ವಿಚಾರ ಮಾಡಿ ಗಾಡಿಬರುವ ಪೂರ್ವದಲ್ಲಿಯ ೪/೬ ಜನ ಸುಳೇಭಾವಿಯ ರಸ್ತೆಯ ಮೇಲೆ ಕೂಡುತ್ತಾರೆ. ರನ್ನರನು ಪೋಸ್ಟ ಬ್ಯಾಗ ತೆಗೆದುಕೊಂಡು ಸುಳೇಭಾವಿ ಕಡೆ ಸಾಗುತ್ತಾನೆ. ವಡವಿಯವರ ಜೊತೆಗಿದ್ದ ೪/೬ ಜನ ಹೋರಾಟಗಾರರು ಅವನ ಹಿಂದಿನಿಂದ ಹೋಗಿ ಆತನನ್ನು ತೆಕ್ಕೆಯಲ್ಲಿ ಹಿಡಿದು ಅವನಲ್ಲಿದ್ದ ಪೋಸ್ಟ ಬ್ಯಾಗನ್ನು ಕಸಿದುಕೊಂಡು ಬರುತ್ತಾರೆ. ರನ್ನರನು ನಿರುಪಾಯನಾಗಿ ಬರಿಗೈಯಿಂದ ಸುಳೆಭಾವಿ ಕಡೆ ಸಾಗುತ್ತಾನೆ.

ಈ ಚಳುವಳಿಕಾರರು ಯಾವುದೇ ಹೋರಾಟ ಮಾಡಿದರೂ ಅದರಲ್ಲಿ ಒಂದು ಬದ್ಧತೆ ಇತ್ತು. ಅವರ ಮುಖ್ಯ ಉದ್ದೇಶ ಕಂಪನಿ ಸರಕಾರಕ್ಕೆ ಕೀಟಲೆ ಕೊಡುವುದು ಮತ್ತು ಅವರ ಕೆಲಸ ಆಗದಂತೆ ನೋಡಿಕೊಳ್ಳುವುದು. ಜನಸಾಮಾನ್ಯರಿಗೆ ಯಾವುದೇ ತೊಂದರೆಯಾಗದೆ ನೋಡಿಕೊಳ್ಳುತ್ತಿದ್ದರು. ಆ ಕಾರಣಕ್ಕಾಗಿ ಪೋಸ್ಟ ಒಡೆದರೂ ಕೂಡ ಆ ಟಪಾಲು ಚೀಲದಲ್ಲಿ ಇದ್ದ ಮನಿಯಾರ್ಡರ್ ಹಾಗೂ ರಜಿಸ್ಟರ್‌ಗಳನ್ನು ಅವು ಯಾರ ಹೆಸರಿಗಿದ್ದವೋ ಅವರಿಗೆ ಮುಟ್ಟಿಸುತ್ತಿದ್ದರು. ಅದರಲ್ಲಿದ್ದ ಸರಕಾರಿ ಟಪಾಲುಗಳನ್ನು ಮಾತ್ರ ಹರಿದು ಸುಟ್ಟು ಹಾಕುತ್ತಿದ್ದರು. ಇವರ ಮುಖ್ಯ ಉದ್ದೇಶ ಜನರಿಗೆ ಯಾವುದೇ ರೀತಿಯಿಂದ ತೊಂದರೆಯಾಗಬಾರದು ಮತ್ತು ಪರರ ಹಣವನ್ನು ತಾವೆಂದೂ ಮುಟ್ಟಬಾರದು ಎಂದಿತ್ತು. ಆದ್ದರಿಂದ ಲೂಟಿ ಮಾಡಿದ ಮನಿಯಾರ್ಡ ಮತ್ತು ವಸ್ತುಗಳನ್ನು ಅವರಿಗೆ ಒಪ್ಪಿಸಿ ಟಪಾಲ ಬ್ಯಾಗಿಗೆ ಬೆಂಕಿ ಹಚ್ಚುತ್ತಾರೆ.

**ಹುದಲಿ ಪೋಸ್ಟ ಆಫೀಸ ಲೂಟಿ :**

ಚಳುವಳಿಗಾರರು ತಾವು ನಿರ್ಧರಿಸಿದಂತೆ ಪೋಸ್ಟಲೂಟಿ ಕಾರ್ಯದಲ್ಲಿ ತೊಡಗುತ್ತಾರೆ. ಅವುಗಳಲ್ಲಿ ಹುದಲಿ ಪೋಸ್ಟ ಆಫೀಸಿನ್ನು ಲೂಟಿ ಮಡಿದ ಘಟನೆ ಅತ್ಯಂತ ಸ್ವಾರಸ್ಯಕರವಾಗಿದೆ. ಹುದಲಿಯವರಾದ ಶ್ರೀ ರಾಮಚಂದ್ರ ವಡವಿಯವ ಮನೆಯ ಪಕ್ಕದಲ್ಲಿಯೇ ಶ್ರೀ ಗೋಪಾಳರಾವ ಚಿಕ್ಕೋಡಿ ಎಂಬುವರು ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದರು. ಆಗ ಪೋಸ್ಟಿನ ಕೆಲಸವೆಲ್ಲ ಸಾಮಾನ್ಯವಾಗಿ ಶಾಲಾ ಶಿಕ್ಷಕರಿಗೆ ವಹಿಸಿಕೊಡಲಾಗಿತ್ತು. ಹಾಗೆಯೆ ಹುದಲಿಯ ಪೋಸ್ಟಿನ ಕೆಲಸವನ್ನು ಶ್ರೀ ಗೋಪಾಳರಾವರಿಗೂ ವಹಿಸಿಕೊಡಲಾಗಿತ್ತು. ರಾಮಚಂದ್ರ ವಡವಿಯವರಿಗೂ ಮತ್ತು ಗೋಪಾಳರಾವರಿಗೂ ತುಂಬಾ ಪರಿಚಯವಿತ್ತಲ್ಲದೆ ಅವರಿಬ್ಬರೂ ಸ್ನೇಹಿತರೂ ಆಗಿದ್ದರು. ವಡವಿಯವರು ಭೂಗತರಾದ ಸುದ್ಧಿ ಪೊಲೀಸರಿಗೆ ಗೊತ್ತಾದ ಬಳಿಕ ಅವರು ಮೇಲಿಂದ ಮೇಲೆ ಗೋಪಾಲರಾವರನ್ನು ಪೀಡಿಸುತ್ತಿದ್ದರು. ವಡವಿಯವರು ಎಲ್ಲಿದ್ದಾರೆ ಹೇಳಿರೆಂದು ತೊಂದರೆ ಕೊಡುತ್ತಿದ್ದರು. ಗೋಪಾಲರಾವರವರ ತಮ್ಮ ಕೃಷ್ಣಪ್ಪ ಅತ್ಯಂತ ಸಂಭಾವಿತ ವ್ಯಕ್ತಿ. ಯಾರಿಗೂ ಏನೂ ಹೇಳದ ಸಭ್ಯ ಮನುಷ್ಯ. ಪೋಸ್ಟ ಟಪಾಲನ್ನು ತೆಗೆದುಕೊಂಡು ಆತ ಸ್ಟೇಷನ್ನಿಗೆ ಹೋಗುವಾಗ ಚಳುವಳಿಕಾರರಾದ ಬಸಪ್ಪ ಕೊಂತಿ, ಭೀಮಪ್ಪ ಯಲಿಗಾರ, ಮಲ್ಲಪ್ಪ ರಾಮಪ್ಪ ಹೆಗ್ಗನಾಯಕ, ಘಟಗೆಪ್ಪ ಯಮಕಣಮರಡಿ ಮತ್ತು ಯಲ್ಲಪ್ಪ ಕಂಟಿ ಇವರೆಲ್ಲ ಹೋಗಿ ಟಪಾಲ ಚೀಲ ಕಸಿದುಕೊಂಡು ಓಡಿ ಹೋಗುತ್ತಾರೆ. ಪೋಸ್ಟಮನನಾದ ಕೃಷ್ಣಪ್ಪ ಟಪಾಲು ಬಡಿದ ಸುದ್ಧಿಯನ್ನು ಪೋಸ್ಟ ಮಾಸ್ಟರರಿಗೆ ಅಳುತ್ತ ತಿಳಿಸುತ್ತಾನೆ. ಪೋಸ್ಟ ಮಾಸ್ತರರು ನಡೆದ ಸಂಗತಿಯನ್ನು ಪೋಲಿಸ ಪಾಟೀಲರಿಗೆ ತಿಳಿಸಿಕೊಡುತ್ತಾರೆ. ಪೋಲಿಸ ಪಾಟೀಲರು ಪೊಲೀಸರಿಗೆ ರಿಪೋರ್ಟ ಮಾಡುತ್ತಾರೆ. ಪೊಲೀಸರು ಬಂದು ಕೃಷ್ಣಪ್ಪನಿಂದ ಜವಾಬ ತೆಗೆದುಕೊಳ್ಳುತ್ತಾರೆ. ಅಲ್ಲದೆ 'ಟಪಾಲ ಒಡೆದವರು ಯಾರು? ನೀನು ಇದೇ ಊರವನಿದ್ದು ಊರವರ ಗುರುತು ನಿನಗೆ ಹತ್ತುವದಿಲ್ಲವೆ ಸುಳ್ಳು ಹೇಳಬೇಡ ನಿಜಸಂಗತಿ ಹೇಳಿದರೆ ಸರಿ ಇಲ್ಲವಾದರೆ ನಿನ್ನ ಪರಿಣಾಮ ನೆಟ್ಟಗಾಗಲಾರದೆಂದು ಹೆದರಿಸುತ್ತಾನೆ'. ತಾನು ಟಪಾಲ ಚೀಲ ತೆಗೆದುಕೊಂಡು ಹೊರಟಾಗ ಯಾರು ಬಂದು ತನ್ನನ್ನು ಗಟ್ಟಿಯಾಗಿ ಹಿಡಿದು ಕೈಯೊಳಗಿನ ಟಪಾಲು ಚೀಲನ್ನು ಕಸಿದರೋ ತಿಳಿಯದು. ಅವರು ಮುಖಕ್ಕೆ ಎಲ್ಲ ಕಪ್ಪುಬಣ್ಣ ಬಳಿದಿದ್ದರು. ಚೀಲ ಕಸಿದುಕೊಂಡವರೆ ಓಡಿ ಹೋದರು ಹೀಗಾಗಿ ಅವರ ಗುರುತು ನನಗೆ ಸಿಗಲಿಲ್ಲ ಎಂದು ಹೆದರುತ್ತ ಹೇಳುತ್ತಾನೆ. ಇಷ್ಟೇ ಹೇಳಿದ್ದರೆ ಸಾಕಾಗಿತ್ತು. ಆದರೆ ಕೃಷ್ಣಪ್ಪನು ಭೀಮಾ ಎಂದು ಯಾರೋ ಕೂಗಿದ್ದನ್ನು ಸಹಿತ ಪೊಲೀಸರಿಗೆ ತಿಳಿಸುತ್ತಾನೆ. ಆ ಭೀಮ ಯಾರು ಗೊತ್ತಿಲ್ಲ ಎಂದು ಹೇಳುತ್ತಾನೆ ಇದರಿಂದ ಪೊಲೀಸರಿಗೆ ಸಂಶಯ ಬರುತ್ತದೆ. ಟಪಾಲ ಚೀಲದೊಂದಿಗೆ ಪರಾರಿಯಾದವರು. ಇದೇ ಊರಿನವನು ಇರಬೇಕೆಂದು ಅವರು ಪತ್ತೆ ಹಚ್ಚುವ ಕೆಲಸದಲ್ಲಿ ತೊಡಗುತ್ತಾರೆ.

ಪೊಲೀಸರ ತಲೆಯಲ್ಲಿ ಬರೀ ಭೀಮಗಳದ್ದೆ ಸುದ್ದಿ ಊರಲ್ಲಿ ಭೀಮ ಎಂಬ ಹೆಸರಿನ ಜನರು ಯಾರ‍್ಯಾರಿದ್ದಾರೆ. ಅವರೆಲ್ಲರನ್ನು ಇನಾಮದಾರರ ವಾಡೆಗೆ ಕರೆತಂದು ಚವಕಶಿ ಮಾಡುತ್ತಾರೆ.

ಬ್ರಾಹ್ಮಣ, ಲಿಂಗಾಯತ, ಹರಿಜನ, ಮರಾಠಾ ಎಲ್ಲ ಜಾತಿಯ ಜನರಲ್ಲಿ ಭೀಮ ಎಂಬ ಹೆಸರಿನ ಜನರು ಇದ್ದವರೇ. ಹಾಗಾಗಿ ಪೋಸ್ಟ ಒಡೆದ ಭೀಮ ಯಾರು ಎಂಬುದನ್ನು ತಿಳಿಯುವುದು ಅವರಿಗೆ ಕಷ್ಟವಾಗುತ್ತದೆ. ಭೀಮ ಹೆಸರಿನ ಎಲ್ಲರನ್ನು ಸಾಲಾಗಿ ನಿಲ್ಲಿಸಿ ಇವರಲ್ಲಿ ಟಪಾಲು ಒಯ್ದುವರು ಯಾರು ಎಂದು ಮತ್ತೆ ಕೃಷ್ಣಪ್ಪನನ್ನು ಬೆದರಿಸಿ ಕೇಳುತ್ತಾರೆ. ಆದರೆ ಟಪಾಲು ಬಡಿದ ಭೀಮ ಅಲ್ಲಿ ಇರುವುದೇ ಇಲ್ಲ. ಆತ ಪರಾರಿಯಾಗಿ ಬಿಟ್ಟಿದ್ದ. ಎಷ್ಟು ಹುಡುಕಿದರೂ ಪೋಲೀಸರಿಗೆ ಟಪಾಲು ಹೊಡೆದವನ ಸುಳಿವು ಸಿಗುವುದಿಲ್ಲ. ಸಿಟ್ಟಿಗೆದ್ದ ಪೊಲೀಸರು ಬಸವಣ್ಣೆಪ್ಪ ಕೊಂತಿಯವರ ತಂದೆಯಾದ ಬಾಳಪ್ಪನನ್ನು ಬಂಧಿಸಿ ಸುಲಧಾಳ ಸ್ಟೇಷನ್ನಿಗೆ ಕರೆದುಕೊಂಡು ಹೋಗುತ್ತಾರೆ. ಈ ಸುದ್ಧಿ ಗೊತ್ತಾದ ಕೂಡಲೆ ಅವನೇ ಪೋಲಿಸ ಸ್ಟೇಷನ್ನಿಗೆ ಹಾಜರಾಗುತ್ತಾನೆ. ಪೊಲೀಸರು ಭೂಗತರಾದವರು ಯಾರ‍್ಯಾರು ಎಂದು ಮತ್ತೆ ಪೀಡಿಸಿ ಪೀಡಿಸಿ ಕೇಳುತ್ತಾರೆ. ಟಪಾಲು ಲೂಟಿಯಾದ ಪೋಸ್ಟ ಬ್ಯಾಗ ಬಗ್ಗೆಯೂ ಕೇಳುತ್ತಾರೆ. ಏನೇ ಮಾಡಿದರೂ ಅವನ ಬಾಯಿಂದ ಯಾವ ಸಂಗತಿ ಹೊರ ಬರುವುದಿಲ್ಲ. ಗುಜನಾಳ–ಪೊಲೀಸ ಸಬ್–ಇನ್‌ಸ್ಪೇಕ್ಟರ್ ನಿಜಾಮುದ್ದೀನನು ಸಿಟ್ಟಿಗೆದ್ದು ಬಸವಣ್ಣಿ ಕೊಂತಿಯವನ ಕಪಾಳಕ್ಕೆ ಹೊಡೆಯುತ್ತಾನೆ. ಇದನ್ನು ಸಹಿಸಿಕೊಳ್ಳಲಾಗದ ಸ್ವಾತಂತ್ರ್ಯ ಹೋರಾಟಗಾರ (ಬಸವಣ್ಣೆಪ್ಪ ಕೊಂತಿ) ತಿರುಗಿ ಇನ್‌ಸ್ಪೆಕ್ಟರ್ ಕಪಾಳಕ್ಕೆ ಹೊಡೆಯುತ್ತಾನೆ. ಇದರಿಂದ ಇನ್ನೂ ಸಿಟ್ಟಿಗೆದ್ದ ಪೊಲೀಸರು ಅವನ ಕೈಗೆ ಬೇಡಿ ಹಾಕಿ ಇಡೀ ರಾತ್ರಿ ಆತನನ್ನು ಹೊಡೆಯುತ್ತಾರೆ. ಹೊಡೆತದಿಂದ ಆತನ ಕೈಬೆರಳು ಮುರಿಯುತ್ತದೆ.

ಮ್ಯಾಜಿಸ್ಟ್ರೇಟರು ಕೊಂತಿಯವರ ಮಾತುಗಳನ್ನು ಗಮನಿಸಿ ನಿರ್ದೋಷಿಯೆಂದು ಬಿಡುಗಡೆ ಮಾಡುತ್ತಾರೆ. ಸ್ವಾತಂತ್ರ್ಯ ಚಳುವಳಿಕಾರರು ಜೀವನ ಹಂಗು ತೊರೆದು ಒಗ್ಗಟ್ಟಿನಿಂದ ಹೋರಾಟ ಮಾಡಿದ್ದು ಭಾರತದ ಇತಿಹಾಸದಲ್ಲಿಯೇ ಅಪೂರ್ವ ಘಟನೆ.

ಇದಾದ ಕೆಲವು ದಿವಸಗಳ ನಂತರ ಹುದಲಿ ಟಪಾಲು ಲೂಟಿ ಮಾಡಿದ ಇತರ ಹುಡುಗರು ಪೊಲೀಸರ ಕೈಗೆ ಸಿಗುತ್ತಾರೆ. ಪೋಲಿಸರು ಅವರನ್ನು ಚೆನ್ನಾಗಿ ಥಳಿಸಿ ಭೂಗತರ ಬಗ್ಗೆ ಮಾಹಿತಿ ಕೇಳುತ್ತಾರೆ. ಆದರೆ ಅವರಲ್ಲಿ ಒಬ್ಬನೂ ಒಂದು ಮಾತನ್ನೂ ಹೇಳುವುದಿಲ್ಲ. ಅವರ ಮೇಲೆ ಖಟ್ಲೆ ಹಾಕುತ್ತಾರೆ. ಒಂದೊಂದು ವರ್ಷ ಕಠಿಣ ಶಿಕ್ಷೆ ಮತ್ತು ೧೦೦ ರೂ. ದಂಡ ವಿಧಿಸುತ್ತಾರೆ. ಇದಾದ ಕೆಲವು ದಿವಸಗಳ ನಂತರ ಹುದಲಿ ಪೋಸ್ಟ ಆಫೀಸನಲ್ಲಿ ಎಲ್ಲ ಕಾಗದ ಪತ್ರಗಳನ್ನು ಯಲ್ಲಪ್ಪ ಲೋಕರಿ, ಲಕ್ಷ್ಮಣ ಉಪರಿ ಮುಂತಾದವರು ಸೇರಿ ಸುಟ್ಟು ಬೂದಿ ಮಾಡುತ್ತಾರೆ.

**ಬೆಳಗಾವಿ ಟಿಳಕವಾಡಿ ಟಪಾಲು ಲೂಟಿಯ ಘಟನೆ :**

ಭೂಗತ ಕಾರ್ಯಕರ್ತರು ಗುಪ್ತ ಸಭೆಯಲ್ಲಿ ನಿರ್ಣಯಿಸಿದಂತೆ ಟಪಾಲು ಲೂಟಿ ಮಾಡುವುದರಲ್ಲಿ ನಿಸ್ಸೀಮರಾಗಿದ್ದರು. ಎರಡು ಮೂರು ಜನ ಸೇರಿದರೆ ಸಾಕು ಪೋಸ್ಟಮನ್

ಟಪಾಲ ಚೀಲ ಒಯ್ಯುತ್ತಿದ್ದರೆ ಅದನ್ನು ನೋಡಿದ ತಕ್ಷಣ ಕೂಡಲೇ ಇವರು ಲೂಟಿ ಮಾಡಿಯೇ ಬಿಡುತ್ತಿದ್ದರು. ಹಳ್ಳಿಗಳಲ್ಲಿ ಸಾಮಾನ್ಯವಾಗಿ ಇಂತಹ ಲೂಟಿಗಳು ನಡೆಯುತ್ತಲೇ ಇದ್ದವು. ಆದರೆ ಶಹರಗಳಲ್ಲಿ ಮಾಡುವುದು ಅತ್ಯಂತ ಕಠಿಣವಾದ ಕೆಲಸವಾಗಿತ್ತು. ಒಮ್ಮೆ ಬೆಳಗಾವಿ ಶಹರದಲ್ಲಿಯೇ ಟಿಳಕವಾಡಿಯ ಪೋಸ್ಟ ಆಫೀಸಿನ ಟಪಾಲ ಚೀಲವನ್ನು ಹೊಡೆಯಬೇಕೆಂದು ಶ್ರೀ ಕೃಷ್ಣ ಯಾಳಗಿಯವರ ಮಗ ಗಜಾನನ ಯಾಳಗಿ ಮತ್ತು ಬಿ. ಆರ್. ಪಾಟೀಲರು ವಿಚಾರ ಮಾಡುತ್ತಾರೆ. ಟಿಳಕವಾಡಿಯ ಪೋಸ್ಟ ಆಫೀಸಿಗೆ ದಿನಾಲು ಒಬ್ಬ ಪೇದೆಯು ಸಾಯಂಕಾಲ ಬಂದು ಟಪಾಲು ಒಯ್ಯುತ್ತಿದ್ದ. ಆತ ಯಾಳಗಿಯವರ ಮನೆಯ ಮುಂದೆ ಹಾದು ಹೋಗುತ್ತಿದ್ದ. ಯಾಳಗಿಯವರ ಮಗನಾದ ಗಜಾನನ ಯಾಳಗಿ ಮತ್ತು ಬಿ. ಆರ್. ಪಾಟೀಲ ಕೂಡಿಕೊಂಡು ಲೂಟಿ ಮಾಡುತ್ತಾರೆ. ಬೆಳಗಾವಿಯಂಥ ಶಹರದಲ್ಲಿ ಅದು ಮುಂಜಾನೆ ೧೦.೧೦ ಗಂಟೆಗೆ ಟಪಾಲು ಲೂಟಿಯಾದ ಸುದ್ದಿ ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡುತ್ತದೆ.

**ಹುದಲಿ ಗ್ರಾಮದ ದಫ್ತರಗಳನ್ನು ಸುಟ್ಟು ಹಾಕಿದ್ದು :**

ಭಾರತದ ಸ್ವಾತಂತ್ರ್ಯ ಚಟುವಟಿಕೆಗಳು ಚಳುವಳಿಕಾರರ ಮುಖಂಡರ ಮಾರ್ಗದರ್ಶನದ ಮೇರೆಗೆ ನಡೆಯುತ್ತಿದ್ದವು. ಒಮ್ಮೆ ಟಪಾಲು ಒಡೆಯುವುದು, ಒಮ್ಮೆ ರೇಲ್ವೆ ಹಳಿ ಕೀಳುವುದು, ದಫ್ತರ ಸುಡುವುದು ಹೀಗೆ ಜರುಗುವ ಎಲ್ಲ ವಿಧ್ವಂಸಕ ಕಾರ್ಯಗಳು ಬ್ರಿಟಿಷರು ದೇಶ ಬಿಟ್ಟು ಹೋಗಲೆಂಬ ಉದ್ದೇಶಕ್ಕಾಗಿಯೇ ಭೂಗತರು ಈಗ ಹುದಲಿಯ ದಫ್ತರಗಳನ್ನು ಸುಡುವ ನಿರ್ಧಾರವನ್ನು ಕೈಕೊಂಡಿದ್ದರು. ಗ್ರಾಮಗಳಲ್ಲಿ ಸಾಮಾನ್ಯವಾಗಿ ಸರ್ಕಾರಿ ಕಾಗದ ಪತ್ರಗಳು ಕುಲಕರ್ಣಿ ಹತ್ತಿರವೇ ಇರುತ್ತಿದ್ದುದರಿಂದ ಇದನ್ನು ಮನಗೊಂಡ ಭೂಗತರು ಎಂಟು ಹತ್ತು ಜನ ಸೇರಿ ಕುಲಕರ್ಣಿ ಹತ್ತಿರ ಬಂದು ಬಾಗಿಲು ಬಡಿಯುತ್ತಾರೆ. ಕುಲಕರ್ಣಿಯವರು ಸುಮ್ಮನೆ ನಿಲ್ಲುತ್ತಾರೆ. ಭೂಗತರು ಕುಲಕರ್ಣಿಯವರ ಕಡೆಯಿಂದ ಸರ್ಕಾರಿ ದಫ್ತರಗಳನ್ನು ಕೊಡಿರಿ ಎಂದು ಕೇಳುತ್ತಾರೆ. ಅವರು ಮರುಮಾತನಾಡದೆ ತಮ್ಮಲ್ಲಿದ್ದ ಎಲ್ಲ ದಫ್ತರಗಳನ್ನು ಚಳುವಳಿಗಾರರಿಗೆ ಕೊಡುತ್ತಾರೆ. ಚಳುವಳಿಕಾರರು ಹೊರಗೆ ಬಯಲಿನಲ್ಲಿ ಬಂದು ಸರ್ಕಾರಿ ದಫ್ತರಗಳನ್ನೆಲ್ಲ ಬೆಂಕಿಹಚ್ಚಿ ಸುಟ್ಟು ಜೈಕಾರ ಹಾಕುತ್ತಾರೆ. ಇದರಂತೆ ಹುದಲಿಯ ಸುತ್ತಮುತ್ತಲಿನ ಗ್ರಾಮಗಳ ಸರ್ಕಾರಿ ಕಾಗದ ಪತ್ರಗಳಿಗೂ ಬೆಂಕಿ ಹಚ್ಚುತ್ತಾರೆ.

ಭಾರತದ ಚಳುವಳಿಕಾರರು ಮೇಲಿಂದ ಮೇಲೆ ಏನಾದರೂ ವಿಧ್ವಂಸಕ ಕಾರ್ಯಗಳನ್ನು ಮಾಡುತ್ತಲೇ ಇದ್ದರು. ಈಗ ತುಮರಗುದ್ದಿಯ ಹಳ್ಳಕ್ಕೆ ಇರುವ ರೈಲು ಸೇತುವೆಯನ್ನು ನಾಶ ಮಾಡಬೇಕೆಂಬುದು ಇವರ ಗುರಿಯಾಗಿತ್ತು. ಈ ಸೇತುವೆ ತುಂಬಾ ದೊಡ್ಡದು. ಇದನ್ನು ಕೆಡುವಬೇಕಾದರೆ ತುಂಬಾ ನುರಿತ ಮತ್ತು ಬಹಳಷ್ಟು ಜನ ಈ ಕಾರ್ಯಕ್ಕೆ ಬೇಕಾಗುತ್ತಿದ್ದರು. ವಡವಿ ಹಾಗೂ ಅವರ ಸ್ನೇಹಿತರ ಬಳಿ ಹಾರಿ-ಗುದ್ದಲಿಯನ್ನು ಬಿಟ್ಟರೆ ಬೇರೆ ಯಾವ ಸಾಧನಗಳಿರಲಿಲ್ಲ. ಆದ್ದರಿಂದ ಆ ರೇಲ್ವೆ ಪೂಲ್ ಹತ್ತಿರವಿರುವ ಟೆಲಿಫೋನ್ ವಾಯರ್‌ನ್ನು ಮೊದಲು ಕತ್ತರಿಸಿ

ಯಾವುದೇ ಸಂಪರ್ಕವಿಲ್ಲದಂತೆ ಪೋಲಿಸರಿಗೂ ರೈಲ್ವೆ ಅಧಿಕಾರಿಗಳಿಗೂ ತಿಳಿಯದಂತೆ ಮುನ್ನೆಚ್ಚರಿಕೆಯನ್ನು ಕೈಕೊಂಡು ಸೇತುವೆ ಕೆಡುವ ನಿರ್ಧಾರ ಮಾಡುತ್ತಾರೆ. ಆದರೆ ರೈಲ್ವೆ ಇಲಾಖೆಯವರು ರೈಲು ಬರುವ ಮುಂಚಿತವಾಗಿ ರಸ್ತೆ ಸರಿಯಾಗಿದೆಯೋ ಇಲ್ಲವೋ ಎಂಬುದನ್ನು ನೋಡುವ ಸಲುವಾಗಿ ಒಂದು ಪೈಲಟ್ ಗಾಡಿಯನ್ನು ಓಡಿಸುತ್ತಾರೆ. ಇವರು ಏನೇ ವಿಧ್ವಂಸಕ ಕೆಲಸ ಮಡಿದರೂ ಪೈಲಟ್ ಗಾಡಿ ಬಂದು ಹೋದ ಬಳಿಕವೇ ಮಾಡಬೇಕು. ಆ ಕಾರಣಕ್ಕಾಗಿ ಪೂಲಿನ ಕೆಳಗೆ ಐದಾರು ಜನ ಅವಿತುಕೊಂಡು ಕುಳಿತು ಪೈಲಟ್ ಗಾಡಿ ಹೋಗುವುದನ್ನು ನೋಡುತ್ತಾರೆ. ಅದು ಹೋದಬಳಿಕ ಟೆಲಿಫೋನ ತಂತಿಯನ್ನು ಕತ್ತರಿಸಿ ಹಾರಿ ಗುದ್ದಲಿಗಳಿಂದ ಸೇತುವೆ ಕಮಾನು ಕಲ್ಲನ್ನು ಕೀಳುತ್ತಾರೆ. ಆ ದೊಡ್ಡ ಸೇತುವೆಯನ್ನು ಕೆಡವಬೇಕಾದರೆ ಇವರಿಗೆ ಕೈಬಾಂಬುಗಳ ಅವಶ್ಯಕತೆಯಿತ್ತು. ಆದರೆ ಇದರಿಂದ ರೈಲಿನಲ್ಲಿದ್ದ ಜನರಿಗೆ ಪ್ರಾಣಾಪಾಯವಾಗಬಹುದೆಂಬ ಭೀತಿಯು ಇವರಿಗಿತ್ತು. ಆ ಕಾರಣಕ್ಕಾಗಿ ಸೇತುವೆಯನ್ನು ಸಂಪೂರ್ಣ ಹಾಳು ಮಾಡದೆ ರೈಲು ಸಂಚಾರಕ್ಕೆ ವಿಳಂಬ ಮಾಡುವುದೇ ಇವರ ಮುಖ್ಯ ಗುರಿಯಾಗಿತ್ತು. ಆ ಕಾರಣಕ್ಕಾಗಿ ಪೂಲಿನ ಕೆಲವು ಕಲ್ಲುಗಳನ್ನು ತೆಗೆದು ಅಸ್ತವ್ಯಸ್ತಗೊಳಿಸಿದರು. ಇದರಿಂದ ರೈಲು ಪ್ರಯಾಣಕ್ಕೆ ಸುಮಾರು ೮/೧೦ ತಾಸು ವಿಳಂಬವಾಗುತ್ತದೆ. ಹೀಗೆ ಚಳುವಳಿಕಾರರು ಬ್ರಿಟಿಷ್ ಸರಕಾರಕ್ಕೆ ತೊಂದರೆ ಕೊಡುತ್ತಾ ಅಸಹಕಾರ ಚಳುವಳಿಯನ್ನು ಮುಂದುವರೆಸಿದ್ದರು.

ಸುಲಧಾಳ, ಹುದಲಿ ಪರಿಸರದ ಗುಡ್ಡಗಾಡ ಪ್ರದೇಶದಲ್ಲಿ ಬೇಡರು ವಾಸಿಸುತ್ತಿದ್ದರು. ಭೂಗತರಾಗಿ ಚಳುವಳಿ ಮಾಡುವ ಚಳುವಳಿಕಾರರಿಗೆ ಬೇಡರ ಸಂಪೂರ್ಣ ಸಹಕಾರವಿತ್ತು. ವಡವಿಯವರು ಹಾಗೂ ಅವರ ಸ್ನೇಹಿತರು ಕೂಡಿ ಸುಲದಾಳ ಸ್ಟೇಷನ್ ಸುಡುವ ಕಾರ್ಯಕ್ರಮದ ಬಗ್ಗೆ ವಿಚಾರ ಮಾಡುತ್ತಿದ್ದರು. ಕುಮರಿ ಆಶ್ರಮದಲ್ಲಿದ್ದುಕೊಂಡು ಯಾವ ರೀತಿ ಹೋರಾಟವನ್ನು ಮಾಡಬೇಕೆಂಬ ಯೋಚನೆಯಲ್ಲಿದ್ದಾಗ ಅದರ ಸಮೀಪದಲ್ಲೆ ಇದ್ದ ಇನ್ನೊಂದು ಗುಡ್ಡದ ಬೇಡರು ಯಾವುದೋ ಕಾರಣಕ್ಕಾಗಿ ಒಂದೆಡೆ ಕೂಡಿದ್ದರು. ಸುಮಾರು ಆರು ಏಳು ಜನ ಇರಬಹುದು. ಅವರ ಹತ್ತಿರ ಬೇರೆ ಬೇರೆ ತರಹದ ಆಯುಧಗಳಿದ್ದವು. ಕೆಲವರು ಲೈಸನ್ಸರಹಿತ ಬಂದೂಕುಗಳನ್ನು ಹೊಂದಿದ್ದರು. ಅವರ ಸಮೀಪದಲ್ಲಿಯೇ ಕುಳಿತು ವಡವಿಯವರು ಸುಲದಾಳ ಸ್ಟೇಷನ್ ಸುಡುವ ಕಾರ್ಯದ ಬಗ್ಗೆ ಚರ್ಚಿಸುವುದನ್ನು ಕೇಳಿ 'ಸ್ಟೇಷನ್ ಸುಡಲು ನಾವು ತಯಾರೆಂದು ಇದೇನ ದೊಡ್ಡ ಕೆಲಸ ನಾವು ಮಾಡೇ ತೀರುತ್ತೇವೆಂದು' ಆ ಸಶಸ್ತ್ರ ಬೇಡರು ಒಮ್ಮೆಲೆ ಸಿದ್ಧರಾಗುತ್ತಾರೆ. ವಡವಿಯವರಿಗೆ ಆತಂಕ. ಯಾಕೆಂದರೆ ಗಾಂಧೀಜಿ ಪ್ರೇರಣೆಯಿಂದ ಅಹಿಂಸಾತ್ಮಕ ಚಳುವಳಿಯನ್ನು ಮಾಡುವ ನಾವು ಬೇಡರ ನೆರವನ್ನು ಪಡೆದರೆ ಹೇಗೆ? ಈ ಚಳುವಳಿಯ ದುರುಪಯೋಗವನ್ನು ಪಡೆದುಕೊಂಡು ಬೇಡರು ಹಿಂಸಾಚಾರ ಮಾಡಿದರೆ ಚಳುವಳಿಕಾರರಿಗೆ ಕೆಟ್ಟ ಹೆಸರು ಬರುತ್ತದೆ ಎಂದು ತಿಳಿದು ಸ್ಟೇಷನ್ ಸುಡುವುದೋ ಅಥವಾ ಬಿಡುವುದೋ ಎಂಬ ಸಂದೇಹಕ್ಕೆ ಒಳಗಾಗುತ್ತಾರೆ. ಸುಲದಾಳ ಸ್ಟೇಷನ್ನಿಗೆ ಹೋಗಬೇಕಾದರೆ ಹುದಲಿ ಊರನ್ನು ದಾಟಿ ಹೋಗಬೇಕು. ಅಲ್ಲಿ ಹುದಲಿಯಲ್ಲಿ ಅನೇಕ ಜನ ಗಾಂಧೀಜಿಯವರ ಹೆಸರಿನಿಂದ ಜೈ ಜೈಕಾರ ಹಾಕುತ್ತ ಬರುತ್ತಾರೆ. ಸಾಯಂಕಾಲ ೫

ಗಂಟೆ ಆಗಿರಬಹುದು. ಈ ಗದ್ದಲ ಕೇಳಿ ಹುದಲಿಯ ಊರವರು ಹೌಹಾರುತ್ತಾರೆ. ಹುದಲಿ ಊರಿಗೆ ಸಶಸ್ತ್ರ ದರೋಡೆ ತಂಡ ಬಂತೆಂದು ಎಷ್ಟೋ ಜನರು ತಮ್ಮ ಮನೆಗೆ ಬಾಗಿಲು ಹಾಕಿಕೊಳ್ಳುತ್ತಾರೆ. ಅಷ್ಟರಲ್ಲಿ ಊರ ಪ್ರಮುಖರಾದ ಶ್ರೀ ಯಲ್ಲಪ್ಪ ತುಕ್ಕಾರರವರು ಬಂದು ಹುದಲಿ ಗ್ರಾಮದಲ್ಲಿ ೩೦ ಜನ ಪೋಲಿಸರು, ಸಬ್‌ಇನ್‌ಸ್ಪೆಕ್ಟರರು ಇರುವುದರಿಂದ ನೀವು ಹೋರಾಟ ಮಾಡುವುದು ಸರಿಯಲ್ಲ ಎಂದು ಹೇಳುತ್ತಾರೆ. ಒಂದು ವೇಳೆ ಹೋರಾಟವಾದರೆ ಇಲ್ಲಿ ಹೆಣಗಳ ರಾಶಿ ಬೀಳುವುದು ಖಂಡಿತ ಎಂದು ತಿಳಿಸುತ್ತಾರೆ. ವಡವಿಯವರಿಗೆ ಈ ಮಾತು ಸರಿ ಎನಿಸಿ ಆ ಬೇಡರನ್ನೆಲ್ಲ ಒಂದೆಡೆ ಕೂಡಿಸಿ ಅವರಿಗೆ ತಿಳಿ ಹೇಳುತ್ತಾರೆ. ಮೊದಲು ಹುದಲಿಯಲ್ಲಿ ಮೆರವಣಿಗೆ ಮಾಡೋಣ, ಬಳಿಕ ಸ್ಟೇಷನ್ ಸುಡಲು ಹೋಗೋಣ ಎಂದು ಹೇಳುತ್ತಾರೆ. ಬೇಡರು ಇದಕ್ಕೆ ಒಪ್ಪಿಕೊಂಡು ಶಸ್ತ್ರಾಸ್ತ್ರಗಳನ್ನು ತಮ್ಮ ಹೆಗಲಿಗೇರಿಸಿ ಗಾಂಧೀಜಿಯವರ ಹೆಸರಿನ ಜಯಕಾರ ಹಾಕುತ್ತಾ ಊರಲ್ಲಿ ಮೆರವಣಿಗೆ ತೆಗೆಯುತ್ತಾರೆ. ಬಾಗಿಲು ಮುಚ್ಚಿಕೊಂಡು ಕುಳಿತ ಗ್ರಾಮಸ್ಥರು ಈ ಬೇಡರು ಚಳುವಳಿಕಾರರೆಂದು ತಿಳಿದು ಮೆರವಣಿಗೆ ನೋಡಲು ಉತ್ಸಾಹದಿಂದ ಬಾಗಿಲು ತೆರೆದು ಬೀದಿಗೆ ಬರುತ್ತಾರೆ. ಜನ ಸಂತೋಷದಿಂದ ಸಶಸ್ತ್ರ ಬೇಡರನ್ನು ಮತ್ತು ಚಳುವಳಿಯ ಮುಖಂಡತ್ವವನ್ನು ವಹಿಸಿದ ರಾಮಚಂದ್ರ ವಡವಿಯವರನ್ನು ಆದರದಿಂದ ಬರಮಾಡಿಕೊಳ್ಳುತ್ತಾರೆ. ಪೋಲೀಸರು ಈ ಸಶಸ್ತ್ರ ಸೈನ್ಯವನ್ನು ನೋಡಿ ಗಾಬರಿಗೊಳ್ಳುತ್ತಾರೆ. ಯಾರನ್ನು ಬಂಧಿಸಬೇಕು? ಯಾವ ಕಾರಣಕ್ಕೆ ಬಂಧಿಸಬೇಕು ಎಂಬುದು ಗೊತ್ತಾಗದೆ ಮೂಕ ಪ್ರೇಕ್ಷಕರಂತೆ ಮೆರವಣಿಗೆ ನೋಡುತ್ತ ನಿಂತು ಬಿಡುತ್ತಾರೆ.

ಹೀಗೆ ಸ್ವಾತಂತ್ರ್ಯ ಚಳುವಳಿಯು ಬೇಡರ ಪಾಲುಗಾರಿಕೆಯಿಂದ ಹೊಸ ದಿಸೆಯನ್ನೇ ಪಡೆಯಿತು. ಪೋಲೀಸರು ಈ ಸ್ವಾತಂತ್ರ್ಯ ಚಳುವಳಿಕಾರರಲ್ಲಿ ಶಸ್ತ್ರಾಸ್ತ್ರಗಳಿವೆಯೆಂದು ಇವರ ಬೆಂಬಲಕ್ಕೆ ಸಾವಿರಾರು ಜನರು ಬರುತ್ತಾರೆಂದು ತಿಳಿದುಕೊಂಡರು. ಒಂದು ವೇಳೆ ಆವತ್ತೂ ಸ್ಟೇಷನ್ ಸುಡುವ ಕೆಲಸಕ್ಕೆ ಕೈಹಾಕಿದ್ದರೆ ದೊಡ್ಡ ಅನಾಹುತವಾಗುತ್ತಿತ್ತು. ಸ್ವಾತಂತ್ರ್ಯ ಚಳುವಳಿಯ ಮೆರವಣಿಗೆಯು ಅನಾಹುತವನ್ನು ತಪ್ಪಿಸಿತಲ್ಲದೆ ಚಳುವಳಿಗಾರರ ಬಲವನ್ನು ಪ್ರಕಟಿಸಿ ತನ್ನ ಶಕ್ತಿಯನ್ನು ಅದು ಮೆರೆಯಿತು. ಹೀಗೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹಿಂಸಾ ಕಾರ್ಯಕ್ಕೆ ತೊಡಗುವಂತಹ ಬೇಡರು ಸಹಿತ ತಮ್ಮ ಮನೋಪ್ರವೃತ್ತಿಯನ್ನು ಬದಲಿಸಿಕೊಂಡು ದೇಶಕ್ಕಾಗಿ ಹೋರಾಟ ಮಾಡಿದ್ದು ಒಂದು ಅಚ್ಚರಿಯ ಸಂಗತಿ.

### ೪.೬ ಸ್ವಾವಲಂಬನೆ ಮತ್ತು ಸ್ವರಾಜ್ಯ :

ಅಹಿಂಸೆ ಸತ್ಯಾಗ್ರಹದ ಶಸ್ತ್ರವಾಗಿದ್ದರೆ ಖಾದಿ ಮತ್ತು ಗುಡಿ ಕೈಗಾರಿಕೆಗಳು ಗಾಂಧೀಜಿಯವರ ಜೀವನ ವಿಧಾನಗಳಾಗಿದ್ದವು. ದೇಶವನ್ನು ಪ್ರೀತಿಸುವ ಜನ ದೇಶೀಯ ವಸ್ತುಗಳನ್ನು ಪ್ರೀತಿಸಬೇಕು. ಈ ಹಿನ್ನೆಲೆಯಲ್ಲಿ ಗಾಂಧೀಜಿಯವರು ಸ್ವದೇಶಿ ಚಳುವಳಿಯನ್ನು ಕೈಕೊಂಡರು. ಈ ಸ್ವದೇಶಿ ಚಳುವಳಿಯಲ್ಲಿ ಸ್ವದೇಶಿ ವಸ್ತುಗಳ ಸಂಪೂರ್ಣ ಬಳಕೆ ಮತ್ತು ವಿದೇಶಿ ವಸ್ತುಗಳ ಬಹಿಷ್ಕಾರವು ಪ್ರಮುಖ ಉದ್ದೇಶವಾಗಿತ್ತು.

ಭಾರತದಲ್ಲಿ ಬೆಳೆದ ಹತ್ತಿ ವಿದೇಶಕ್ಕೆ ಹೋಗಿ ಅಲ್ಲಿಯ ದೊಡ್ಡ ದೊಡ್ಡ ಮಿಲ್ಲುಗಳಿಂದ ಬಟ್ಟೆಯಾಗಿ ನಿರ್ಮಾಣಗೊಂಡು ಮತ್ತೆ ಭಾರತಕ್ಕೆ ಮಾರಾಟಗೊಳ್ಳಲು ಸಿದ್ಧವಾಗುತ್ತಿತ್ತು. ವಿಪರೀತ ಲಾಭದ ಬಟ್ಟೆಗಳಾಗಿ ಮತ್ತೆ ಭಾರತದಲ್ಲೆ ಮಾರಾಟವಾಗುತ್ತಿರುವ ವಿಪರ್ಯಾಸವನ್ನು ಕಂಡು ಗಾಂಧೀಜಿಯವರಿಗೆ ಸಹಿಸಲಾಗಲಿಲ್ಲ. ಅವರ ಒಂದು ಕರೆಗೆ ಇಡೀ ರಾಷ್ಟ್ರವೇ ತುದಿಗಾಲಿನ ಮೇಲೆ ನಿಲ್ಲುತ್ತಿತ್ತು. ಇದನ್ನು ಮನಗಂಡ ಗಾಂಧೀಜಿಯವರು ಸ್ವದೇಶಿ ಚಳುವಳಿಗೆ ಕರೆಕೊಟ್ಟರು.

“ಹತ್ತಿಯಿಂದ ತಯಾರಾದ ಬಟ್ಟೆ ಮನುಷ್ಯನ ಶರೀರಕ್ಕೆ ಹಿತವು ಆರೋಗ್ಯಕರವೂ ಆಗಿದೆ. ಇದು ಭಾರತೀಯ ಹವಾಮಾನಕ್ಕೆ ಹೊಂದಿಕೊಳ್ಳುತ್ತದೆ. ಆದಿ ಅನಾದಿ ಕಾಲದಿಂದಲೂ ಕೈಯಿಂದ ನೂಲು ತೆಗೆಯುವುದು. ಕೈಮಗ್ಗದಿಂದ ಬಟ್ಟೆ ನೂಲುವುದು ನಡೆದುಕೊಂಡು ಬಂದಿದೆ. ಈ ಹತ್ತಿ ಬಟ್ಟೆಗೆ ಖಾದಿ ಎಂದು ಹೆಸರಿಟ್ಟು ಮೆರಗು ತಂದವರು ಮಹಾತ್ಮಾ ಗಾಂಧೀಜಿಯವರು. ಬರು-ಬರುತ್ತಾ ‘ಖಾದಿ’ ಎಷ್ಟು ಪ್ರಸಿದ್ಧವಾಯಿತೆಂದರೆ ಬ್ರಿಟಿಷರನ್ನು ಎದುರು ಹಾಕಿಕೊಂಡು ಹೋರಾಟ ಮಾಡುವಾಗ ಈ ಸ್ವದೇಶಿ ಬಟ್ಟೆ ಖಾದಿಯು ಒಂದು ಅಸ್ತ್ರವಾಗಿ ಪರಿಣಮಿಸಿತು. ವಸ್ತ್ರ ಅಸ್ತ್ರವಾದದ್ದು ಜಗತ್ತಿನ ಇತಿಹಾಸದ ಚರಿತ್ರೆಯಲ್ಲಿ ಭಾರತ ಒಂದನ್ನು ಬಿಟ್ಟರೆ ಬೇರೆ ಯಾವ ದೇಶದಲ್ಲಿಯೂ ನಡೆದಿಲ್ಲ. ಅದಕ್ಕಾಗಿಯೇ ಕಾಲದಲ್ಲಿ ‘ಖಾದಿಯೇ ಸ್ವರ್ಗಕ್ಕೆ ಹಾದಿ ಎಂಬ ನುಡಿಮುತ್ತು’ ರೂಪಗೊಂಡಿತ್ತು”[೬].

೧೯೦೮ರಲ್ಲಿ ಮಹಾತ್ಮಾ ಗಾಂಧೀಜಿಯವರು ಹಿಂದ ಸ್ವರಾಜ್ಯ ಎಂಬ ಚಿಕ್ಕ ಗ್ರಂಥವೊಂದನ್ನು ಬರೆದರು. ಗಾಂಧೀಜಿಯವರು ಸ್ವದೇಶಿ ಚಳುವಳಿಯ ಸಂದರ್ಭದಲ್ಲಿ ಕರ್ನಾಟಕವನ್ನು ಮೇಲಿಂದ ಮೇಲೆ ಉಲ್ಲೇಖಿಸುತ್ತಾರೆ. ೧೯೨೦ ರಲ್ಲಿ ಗಾಂಧೀಜಿಯವರು ಕರ್ನಾಟಕದಲ್ಲಿ ಸ್ವದೇಶಿ ಪ್ರಚಾರದ ಸಲುವಾಗಿ ಸಂಚಾರ ಮಾಡುವಾಗ ‘ಕರ್ನಾಟಕದಲ್ಲಿ ನಿಜವಾದ ಖಾದಿ ಗಣಿಯೇ ಇದೆ’ ಎಂದು ಹೇಳುತ್ತಿದ್ದರು.

ಈ ಖಾದಿಯು ಸ್ವಾತಂತ್ರ್ಯ ಹೋರಾಟಗಾರರ ಸಮವಸ್ತ್ರವಾಗಿ ಪರಿಣಮಿಸಿತು. ಕಾರ್ಯಕರ್ತರನ್ನು ನಿರ್ಮಾಣಗೊಳಿಸುವ ಒಂದು ಕೇಂದ್ರವಾಗಿಯೂ ಈ ಖಾದಿ ರೂಪಗೊಂಡಿತು. ಮೊಟ್ಟಮೊದಲ ಬೆಳಗಾವಿ ಜಿಲ್ಲೆಯ ಹುದಲಿ ಎಂಬ ಗ್ರಾಮದಲ್ಲಿ ಖಾದಿ ವಿದ್ಯಾಲಯವು ಪ್ರಾರಂಭಗೊಂಡಿತು. ಕರ್ನಾಟಕದ ಖಾದಿ ಹುದ್ದರಿಗಳೆಲ್ಲ ನಿರ್ಮಾಣಗೊಂಡಿದ್ದು ಇದೇ ಗ್ರಾಮದಿಂದ ಹುದಲಿ ಗ್ರಾಮದ ಜೊತೆ-ಜೊತೆಗೆ ಉಪ್ಪಿನ ಬೆಟಗೇರಿ, ಕಲಾದಗಿ ಮೊದಲಾದ ಊರುಗಳು ಖಾದಿ ಉತ್ಪತ್ತಿಯ ಕೇಂದ್ರಗಳಾದವು. ಮೊದಮೊದಲು ಖಾದಿ ಬಟ್ಟೆಯು ತುಂಬಾ ಒರಟಾಗಿತ್ತು. ಅಲ್ಲದೇ ಅಲ್ಲಲ್ಲಿ ಹಸಿರು-ಹಸಿರು, ಚಿಕ್ಕ ಚಿಕ್ಕ ಗಂಟುಗಳಿದ್ದು ಬಟ್ಟೆ ಒಂದು ರೀತಿಯಿಂದ ಬಿರುಸು-ಬಿರುಸಾಗಿತ್ತು. ಆದರೂ ಜನ ಈ ಬಟ್ಟೆಯನ್ನು ಅತ್ಯಂತ ಪ್ರೀತಿಯಿಂದ ಧರಿಸುತ್ತಿದ್ದರು. ಇದರ ಮುಖ್ಯ ಉದ್ದೇಶವೆಂದರೆ ಇದು ಸ್ವದೇಶಿ ಬಟ್ಟೆ. ಅದಲ್ಲದೆ ಸ್ವಾತಂತ್ರ ಹೋರಾಟಗಾರರು, ನಿಷ್ಠಾವಂತ

ಕಾರ್ಯಕರ್ತರು ಇದನ್ನು ಧರಿಸುತ್ತಿದ್ದರೆಂಬುದು ಅಭಿಮಾನದ ಸಂಗತಿಯಾಗಿತ್ತು. ಆ ಕಾರಣಕ್ಕಾಗಿ ಖಾದಿ ತೊಟ್ಟವರು, ಗಾಂಧೀ ಟೋಪಿಯನ್ನು ಧರಿಸಿಕೊಂಡವರು ಸ್ವಾತಂತ್ರ ಹೋರಾಟಗಾರರು. ಗಾಂಧೀಜಿಯ ಅನುಯಾಯಿಗಳು ಆಗಿದ್ದರೆಂದು ಜನ ಪರಿಗಣಿಸಹತ್ತಿತು. ಪಂಡಿತ ಜವಾಹರಲಾಲ ನೆಹರೂ ಅವರು ಹೇಳಿದಂತೆ ಅಂದಿನ ಖಾದಿಯು ಸ್ವಾತಂತ್ರ ಯೋಧರ ಸಮವಸ್ತ್ರವಾಗಿತ್ತು. ಹಾಗಾಗಿ ಖಾದಿಗೆ ಮತ್ತು ಸ್ವಾತಂತ್ರ ಸಂಗ್ರಾಮಕ್ಕೆ ಅನ್ಯೋನ್ಯವಾದ ಸಂಬಂಧವಿತ್ತು. ಬ್ರಿಟಿಷರ ವಿರುದ್ಧ ಹೋರಾಟ ಮಾಡುವ ಈ ಸ್ವಾತಂತ್ರ ಸೇನಾನಿಗಳು ಖಾದಿ ಬಟ್ಟೆಯನ್ನು ಧರಿಸುತ್ತಿದ್ದರು. ಬ್ರಿಟಿಷರು ಇವರ ಮೇಲೆ ಲಾಟಿಚಾರ್ಜ್ ಮಾಡಿದರೆ, ಗೋಲಿಬಾರ ಮಾಡಿದರೆ, ಇವರನ್ನು ಖೈದಿಗೊಳಿಸಿದರೆ ಅಂದು 'ಖಾದಿ' ಮಳಿಗೆಗಳಲ್ಲಿ ಹೆಚ್ಚು ಮಾರಾಟವಾಗುತ್ತಿತ್ತು. ಹೀಗೆ ಖಾದಿ ಮತ್ತು ಕಾಂಗ್ರೆಸ್ ಇವೆರಡು ಪರಸ್ಪರ ಅವಿನಾಭಾವ ಸಂಬಂಧವನ್ನು ಹೊಂದಿದ್ದವು ಅಲ್ಲದೆ ಹಾಸು ಹೊಕ್ಕಾಗಿದ್ದವು.

೧೯೩೧ ರಿಂದ ೧೯೪೦ರ ಈ ಅವಧಿಯಲ್ಲಿ ಸ್ವಾತಂತ್ರ್ಯ ಆಂದೋಲನವು ತೀವ್ರಗೊಂಡಿತ್ತು. ಚಳುವಳಿಕಾರರನ್ನು ಬ್ರಿಟಿಷರು ಬಂಧಿಸಿದರೆ ಅವರು ಸೆರೆಮನೆಯಲ್ಲಿಯೂ ಕೂಡ ನೂಲು ತೆಗೆಯುವ ಕಾಯಕವನ್ನು ಮಾಡುತ್ತಿದ್ದರು. ಸಭೆ-ಸಮಾರಂಭಗಳಲ್ಲಿ ಭಾಗವಹಿಸಿದ ಹಲವು ಕಾಂಗ್ರೆಸ್ ಕಾರ್ಯಕರ್ತರು ಭಾಷಣಗಳನ್ನು ಕೇಳುತ್ತಲೇ ನೂಲು ತೆಗೆಯುತ್ತಿದ್ದರು. ಕೆಲವರು ತಿರುಗಾಡುತ್ತ ಸಹ ತಕಲಿಯಿಂದ ನೂಲು ತೆಗೆಯುತ್ತಿದ್ದರು. ಜೈಲಿನ ತುಂಬ ಅನೇಕ ಸಲ ನೂಲುವವರೇ ಹೆಚ್ಚಾಗಿರುತ್ತಿದ್ದರು. ಒಂದರ್ಥದಲ್ಲಿ ನೂಲು ವಿನಿಮಯದ ಸಾಧನವಾಗಿತ್ತು. ಜನರು ನೂಲನ್ನು ಕೊಟ್ಟು ಎಣ್ಣೆ, ಕೇಂದ್ರಗಳಲ್ಲಿ ದುಡಿಯುವ ಚಳುವಳಿಕಾರರು ಚಳುವಳಿ ಕುರಿತು ಕೆಲವು ರೂಪ-ರೇಷೆಗಳನ್ನು ಹಾಕುತ್ತಿದ್ದರು. ಬ್ರಿಟಿಷರ ವಿರುದ್ಧ ಯಾವ ರೀತಿ ಹೋರಾಟ ಮಾಡಬೇಕು, ತಮ್ಮ ಆಂದೋಲನದ ಸ್ವರೂಪವೇನು? ಮುಂದೆ ಕೈಗೊಳ್ಳಬೇಕಾದ ಕೆಲಸ ಕಾರ್ಯಗಳೇನು? ಎಂಬುದನ್ನೆಲ್ಲ ಗಂಭೀರವಾಗಿ ಚರ್ಚಿಸುತ್ತಿರುವುದು ಇಂತಹ ಖಾದಿ ಕೇಂದ್ರಗಳಲ್ಲಿಯೇ. ಹೀಗಾಗಿ ಚರಕಾ ಸಂಘಗಳು ಸ್ವಾತಂತ್ರ್ಯ ಕಿಡಿಗಳನ್ನು ಹುಟ್ಟುಹಾಕುವ ಕೇಂದ್ರಗಳಾಗಿದ್ದವು. ಬ್ರಿಟಿಷರು ಇದನ್ನು ಮನಗಂಡು ಕೆಲವು ಚರಕಾ ಕೇಂದ್ರಗಳನ್ನು ಕೂಡ ಬಹಿಷ್ಕರಿಸಿ ತಮ್ಮ ವಶಕ್ಕೆ ತೆಗೆದುಕೊಂಡಿದ್ದರು.

೧೯೨೭ರಲ್ಲಿ ಗಾಂಧೀಜಿಯವರು ವಿಶ್ರಾಂತಿಗಾಗಿ ಬೆಂಗಳೂರಿನ ಪಕ್ಕದಲ್ಲಿರುವ ನಂದಿಬೆಟ್ಟಕ್ಕೆ ಬಂದಿದ್ದರು. ಅಂದಿನ ಮೈಸೂರು ಮಹಾರಾಜ ಸರಕಾರವು ಗಾಂಧೀಜಿಯವರನ್ನು ಅತ್ಯಂತ ಆದರದಿಂದ ಬರಮಾಡಿಕೊಂಡು ಎಲ್ಲ ನೆರವನ್ನು ಅವರಿಗೆ ಒದಗಿಸಿತ್ತು. ಆಗಿನ ದಿವಾನರಾಗಿದ್ದ ಸರ್. ಮಿರ್ಜಾರವರು ಗಾಂಧೀಜಿಯವರೊಡನೆ ಖಾದಿಯ ಬಗ್ಗೆ ಚರ್ಚಿಸಿ ಗಾಂಧೀಜಿಯವರ ಆಣತಿಯಂತೆ ಮೈಸೂರಿನ ಹತ್ತಿರದಲ್ಲಿರುವ ಪುಣ್ಯಕ್ಷೇತ್ರ ನಂಜನಗೂಡಿನ ಸಮೀಪ ಬದನವಾಳದಲ್ಲಿ ೧೯೨೭ರಲ್ಲಿ ಸರ್ಕಾರದ ಪರವಾಗಿ ಪ್ರಪ್ರಥಮವಾಗಿ ಖಾದಿ ಕೇಂದ್ರವನ್ನು ಪ್ರಾರಂಭಿಸಿದರು. ಸರ್ಕಾರದ ಪರವಾಗಿ ಮೊಟ್ಟಮೊದಲು ಖಾದಿಕಾರ್ಯ ಪ್ರಾರಂಭವಾದದ್ದು ಮೈಸೂರಿನಲ್ಲಿಯೇ ಎಂಬುದನ್ನು

ಇಲ್ಲಿ ಸ್ಮರಿಸಿಕೊಳ್ಳಬಹುದು. ಈ ಕಾರ್ಯಕ್ಕೆ ನೆರವಾಗಲು ಕರ್ನಾಟಕದ ಚರಕಾ ಸಂಘದ ಪರವಾಗಿ ಸಿದ್ಧರಾವ ಪೂಜಾರ ಅವರನ್ನು ಕಳುಹಿಸಲಾಗಿತ್ತು. ಈ ಭಾಗದಲ್ಲಿ ಸುಮಾರು ೪೦ ಹಳ್ಳಿಗಳಲ್ಲಿ ಖಾದಿ ಚಟುವಟಿಕೆಗಳು ಪ್ರಾರಂಭವಾದವು. ಇಲ್ಲಿ ದುಡಿದ ಇನ್ನೊಬ್ಬ ವ್ಯಕ್ತಿಯೆಂದರೆ ಶ್ರೀ ರಾಜಾರಾಮ ಅಯ್ಯಂಗಾರ. ಇವರು ಚಿತ್ರದುರ್ಗದ ಓಮಂಗಲ ವಿಭಾಗದಲ್ಲಿ ಇನ್ನೊಂದು ಕೇಂದ್ರವನ್ನು ಸ್ಥಾಪಿಸಿದರು. ಹೀಗೆ ಖಾದಿಯು ಕರ್ನಾಟಕದ ತುಂಬಾ ಹಂತ-ಹಂತವಾಗಿ ತನ್ನ ಹಸ್ತವನ್ನು ಚಾಚತೊಡಗಿತ್ತು.

ಖಾದಿ ಇತಿಹಾಸದಲ್ಲಿಯೇ ಅತ್ಯಂತ ಮಹತ್ವದ ಖಾದಿ ವಿದ್ಯಾಲಯವೆಂದರೆ ಹುದಲಿಯ ಜಮನಲಾಲ ಖಾದಿ ವಿದ್ಯಾಲಯ. ಈ ವಿದ್ಯಾಲಯಕ್ಕೆ ಸೇರ್ಪಡೆಯಾದ ಪಾಂಡುರಂಗ ಭೀಮರಾವ ಪಾಟೀಲರು ತಮ್ಮ ನೆನಪಿನ ಬುತ್ತಿಯನ್ನು ಹೀಗೆ ಬಿಚ್ಚಿಡುತ್ತಾರೆ. '೧೯೪೧ನೇ ಜೂನ ನನ್ನ ಜೀವನದ ಅವಿಸ್ಮರಣೀಯ ತಿಂಗಳು. ಪೂಜ್ಯ ಮಹಾತ್ಮಾ ಗಾಂಧೀಜಿಯವರ ಅಮೃತ ಹಸ್ತದಿಂದ ಸೇವಾ ಗ್ರಾಮದಲ್ಲಿ ಉದ್ಘಾಟಿಸಲ್ಪಟ್ಟ ಖಾದಿ ವಿದ್ಯಾಲಯಕ್ಕೆ ನನಗೆ ವಿದ್ಯಾರ್ಥಿಯಾಗಿ ಶ್ರೀ ನೀಲಕಂಠ ಗಣಾಚಾರಿಯವರೊಂದಿಗೆ ಹೋಗುವ ಸುವರ್ಣಾವಕಾಶ ದೊರಕಿತು. ಕರ್ನಾಟಕ ಚರಕಾ ಸಂಘದಿಂದ ನಾವು ಆರಿಸಲ್ಪಟ್ಟಿದ್ದೇವು. ಅದರಂತೆ ಭಾರತದ ಎಲ್ಲ ಪ್ರಾಂತಗಳಿಂದಲೂ ಒಬ್ಬರೂ ಇಲ್ಲವೇ ಇಬ್ಬರಂತೆ ವಿದ್ಯಾರ್ಥಿಗಳು ಬಂದಿದ್ದರು. ನಾವೆಲ್ಲ ಬಿಸಿ ರಕ್ತದ ಯುವಕರು, ಖಾದಿ ಗ್ರಾಮೋದ್ಯೋಗ ತತ್ವಗಳಲ್ಲಿ ಅಚಲ ನಂಬಿಕೆಯುಳ್ಳವರಾಗಿದ್ದೆವು. ಪೂಜ್ಯ ಗಾಂಧೀಜಿಯವರ ಸಾನಿಧ್ಯದಲ್ಲಿರುವ ಸುಸಂಧಿ ದೊರಕಿದ್ದಕ್ಕಾಗಿ ನಾವೆಲ್ಲರೂ ಧನ್ಯರೆಂದು ಭಾವಿಸಿದ್ದೆವು'. ಖಾದಿ ಗ್ರಾಮೋದ್ಯೋಗದಲ್ಲಿ ದಿನನಿತ್ಯ ಎಡೆಬಿಡದ ಚಟುವಟಿಕೆಗಳು ಪ್ರಾರಂಭವಾಗುತ್ತಿದ್ದವು. ಮು-೪.೦೦ ಗಂಟೆಯಿಂದ ರಾತ್ರಿ ೯.೦೦ ಗಂಟೆವರೆಗೆ ನಿರಂತರವಾಗಿ ಚಟುವಟಿಕೆಗಳು ನಡೆಯುತ್ತಿದ್ದವು. ಮೊದಮೊದಲು ಈ ವಿದ್ಯಾಲಯದಲ್ಲಿ ಸೇರಿದವರಿಗೆ ಹೊಂದಿಕೊಳ್ಳುವುದು ಕಷ್ಟವೆನಿಸುತ್ತಿತ್ತು. ನಿಧಾನವಾಗಿ ಎಲ್ಲರೂ ಹೊಂದಿಕೊಂಡು ನಿಷ್ಠೆಯಿಂದ ತಮ್ಮ ತಮ್ಮ ಪಾಲಿನ ಕೆಲಸವನ್ನು ಮಾಡುತ್ತಿದ್ದರು. ಇದು ಸ್ವಾವಲಂಬಿ ಜೀವನ. ಅಲ್ಲಿ ಪ್ರವೇಶ ಪಡೆದ ಎಲ್ಲ ವಿದ್ಯಾರ್ಥಿಗಳು ಕಸಗುಡಿಸುವ, ಮೂತ್ರಾಲಯಗಳನ್ನು ಸ್ವಚ್ಛಗೊಳಿಸುವ, ಗಿಡ ನೆಡುವ, ತೋಟಗಾರಿಕೆಯ ಹಣ್ಣು-ಹಂಪಲು ಬೆಳೆಸುವ ಕೆಲಸಗಳನ್ನು ಅವರೇ ಸ್ವತಃ ಬೀಸುವ ಮತ್ತು ಅಡಿಗೆ ಮಾಡುವ ಕಾರ್ಯವನ್ನು ನೆರವೇರಿಸಬೇಕಾಗುತ್ತಿತ್ತು. ಏನೇ ಶ್ರಮವಾದರೂ ಕೂಡ ಸಾಯಂಕಾಲ ಪೂಜ್ಯ ಗಾಂಧೀಜಿಯವರೊಂದಿಗೆ ಸಾಮೂಹಿಕ ಪ್ರಾರ್ಥನೆಯಲ್ಲಿ ಭಾಗವಹಿಸಿದ ಬಳಿಕ ದಿನದ ಶ್ರಮವೆಲ್ಲ ಪರಿಹಾರವಾಗುತ್ತಿತ್ತು.

"ಪ್ರತಿನಿತ್ಯ ೮.೦೦ ಗಂಟೆಗೆ ಹಂಜಿ ಮಾಡುವುದು, ನೂಲು ತೆಗೆಯುವುದು ನಡೆಯುತ್ತಿತ್ತು. ಒಂದು ತಾಸು ಬುದ್ಧಿವಿಕಾಸಕ್ಕೆ ಸಂಬಂಧಪಟ್ಟಂತೆ ಬೌದ್ಧಿಕ ಚರ್ಚೆಗಳು ನಡೆಯುತ್ತಿದ್ದವು. ಗಾಂಧಿ ವಿಚಾರವಾದವನ್ನು ಅರಗಿಸಿಕೊಂಡ ಖ್ಯಾತ ಪೂಜ್ಯ ಧೋತ್ರೆಯವರು ಹಾಗೂ ಪೂಜ್ಯ ಕಿಶೋರಿಲಾಲ ಮಶ್ರುವಾಲಾ ಮೊದಲಾದ ಮಹನೀಯರು ವರ್ಗಗಳನ್ನು ತೆಗೆದುಕೊಳ್ಳುತ್ತಿದ್ದರು. ಕೃಷ್ಣದಾಸ ಗಾಂಧೀಜಿಯವರು 'ಕತಾಯಿ ಗಣಿತ ಹಾಗೂ ತಂತ್ರ' ಎಂಬ ವಿಷಯ ಕುರಿತು ಪಾಠ ಪ್ರವಚನಗಳನ್ನು ನಡೆಸುತ್ತಿದ್ದರು. ಅವರು ಹೇಳಿಕೊಡುವ ಪಾಠ ಹಿಂದಿ ಭಾಷೆಯಲ್ಲಿದ್ದರೂ ವಿಷಯ ಮನನವಾಗುತ್ತಿತ್ತು.

ಪಾಂಡುರಂಗ ಭೀಮರಾವ ಪಾಟೀಲ ಹಾಗೂ ನೀಲಕಂಠ ಗಂಗಾಚಾರಿಯವರು ಓಮಾಸಾಲಾಲಿ ಖಾದಿ ವಿದ್ಯಾಲಯಯದಲ್ಲಿ ಕಷ್ಟಪಟ್ಟು ತರಬೇತಿಯನ್ನು ಪಡೆದುಕೊಂಡು ಅದೇ ಮಾದರಿಯ ಖಾದಿ ವಿದ್ಯಾಲಯವನ್ನು ಹುದಲಿಯಲ್ಲಿ ಪ್ರಾರಂಭಿಸಬೇಕೆಂದು ನಿರ್ಧಾರ ಮಾಡಿದ್ದರು. ಅವರು ವಿದ್ಯಾರ್ಥಿಯಾಗಿದ್ದಾಗ ಆಲೋಚನೆ ಮಾಡಿದ ಈ ಸಂಗತಿಯು ೧೯೪೧ ನೇ ಜೂನ ತಿಂಗಳಿನಲ್ಲಿ ಕಾರ್ಯರೂಪಕ್ಕೆ ಬಂದದ್ದು ಅತ್ಯಂತ ಆನಂದದಾಯಕ ಸಂಗತಿಯಾಗಿದೆ”[೬]. ಹೀಗೆ ಪಾಂಡುರಂಗ ಭೀಮರಾವ ಪಾಟೀಲರು ತಮ್ಮ ಅನುಭವ ಹೇಳಿಕೊಳ್ಳುತ್ತಾರೆ.

೧೯೪೧ ನೇ ಅಗಷ್ಟ ತಿಂಗಳಿನಲ್ಲಿ ಹುದಲಿಯಲ್ಲಿ ಪ್ರಾರಂಭಗೊಂಡ ಈ ಖಾದಿ ವಿದ್ಯಾಲಯದಲ್ಲಿ ೧೨ ಜನ ವಿದ್ಯಾರ್ಥಿಗಳಿದ್ದರು. ಅವರಲ್ಲಿ ಇವರಿಬ್ಬರು ಸೇರಿ ೧೪ ಜನ ವಿದ್ಯಾರ್ಥಿಗಳಾಗಿ ಹೊಂದಾಣಿಕೆಯ ಮತ್ತು ಸೊಗಸಾದ ವಿದ್ಯಾರ್ಥಿ ಜೀವನ ನಡೆಸಿದರು. ಈ ವಿದ್ಯಾಲಯಕ್ಕೆ ರಾಮಚಂದ್ರ ವಡವಿಯವರು ಪ್ರಾಚಾರ್ಯರಾಗಿ ಕಾರ್ಯ ನಿರ್ವಹಿಸಿದ್ದಾರೆ. ಪೂಜ್ಯ ಪುಂಡಲಿಕಜೀಯವರು ವಿದ್ಯಾಲಯಕ್ಕೆ ಆರ್ಥಿಕ ನೆರವನ್ನು ನೀಡುವುದರ ಜೊತೆಗೆ ಇನ್ನುಳಿದ ವಿಧಾಯಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ಈ ಇಬ್ಬರೂ ಚಳುವಳಿಕಾರರ ಬಗ್ಗೆ ಜನರಲ್ಲಿ ಅಪಾರವಾದ ಪ್ರೀತಿ ಮತ್ತು ವಿಶ್ವಾಸವಿತ್ತು. ಹುದಲಿಯ ಜನ ಯಾವ ಫಲಾಪೇಕ್ಷೆಯಿಲ್ಲದೆ ವಿದ್ಯಾಲಯಕ್ಕೆ ತನು-ಮನ-ಧನದಿಂದ ಸಹಾಯವನ್ನು ಸಲ್ಲಿಸುತ್ತಿದ್ದರು.

ಗಾಂಧೀ ಯುಗದಲ್ಲಿ ಶಿಸ್ತು ಮತ್ತು ಪ್ರಾಮಾಣಿಕತೆಗೆ ಬಹಳ ಮಹತ್ವವಿತ್ತು. ಯಾವುದೇ ಕ್ಷೇತ್ರದಲ್ಲಿ ದುಡಿಯುವ ಮನುಷ್ಯನಿಗೆ ಗಾಂಧೀಜಿಯವರ ಪ್ರಾಮಾಣಿಕತೆಯ ಪ್ರಭಾವ ಅವರ ಮೇಲೆ ಆಗುತ್ತಿತ್ತು. ಹೀಗಾಗಿ ಕರ್ತವ್ಯದಕ್ಷತೆ, ನಿಷ್ಠೆ ಇವರಲ್ಲಿ ಮನೆ ಮಾಡಿದವು. ಈ ವಿದ್ಯಾಲಯಕ್ಕೆ ಮುಖ್ಯ ಶಿಕ್ಷಕರಾಗಿ ಮಹಾರಾಷ್ಟ್ರದಿಂದ ಶ್ರೀ ದುರ್ಯೋಧನಶಿಂಗ ಅವರು ಬಂದಿದ್ದರು. ಹೆಸರು ದುರ್ಯೋಧನವೆಂದಿದ್ದರೂ ಅವರು ಸಾತ್ವಿಕ ಸ್ವಭಾವದ ಶಿಷ್ಟ ವ್ಯಕ್ತಿಯಾಗಿದ್ದರು. ಕರ್ತವ್ಯದಲ್ಲಿ ಶಿಸ್ತು ಮತ್ತು ದಕ್ಷತೆಗೆ ಹೆಸರಾಗಿದ್ದರು. ವಿದ್ಯಾರ್ಥಿಗಳು ವರ್ಗಕ್ಕೆ ೩/೪ ನಿಮಿಷ ತಡಮಾಡಿ ಬಂದರೆ ಅವರನ್ನು ಹೊರಗೆ ನಿಲ್ಲಿಸಿ ಬಿಡುತ್ತಿದ್ದರು. ವಿದ್ಯಾರ್ಥಿಗಳ ಜೊತೆಯಲ್ಲಿದ್ದುಕೊಂಡು ದಿನಾಲು ೭/೮ ತಾಸು ಅವರು ನೂಲುತ್ತಿದ್ದರು. ಸೇವಾಗ್ರಾಮದ ವಿದ್ಯಾಲಯಗಳಂತೆ ಇಲ್ಲಿಯೂ ಬೆಳಿಗ್ಗೆ ೪ ಗಂಟೆಯಿಂದ ರಾತ್ರಿ ೯.೦೦ ಗಂಟೆವರೆಗೆ ಕೆಲಸ ಮಾಡಬೇಕಾಗುತ್ತಿತ್ತು. ಇದರಲ್ಲಿ ಒಂದು ನಿಮಿಷ ಹೆಚ್ಚು ಕಡಿಮೆಯಾಗದಂತೆ ಈ ಎಲ್ಲ ವಿದ್ಯಾರ್ಥಿಗಳು ಸಮಯ ಪರಿಪಾಲನೆಯನ್ನು ಮಾಡುತ್ತಿದ್ದರು. ರಾತ್ರಿ ೮ ರಿಂದ ೯ರವರೆಗೆ ಪೂಜ್ಯ ಪುಂಡಲೀಕಜಿಯವರು ಬೌದ್ಧಿಕ ವರ್ಗಗಳನ್ನು ತೆಗೆದುಕೊಳ್ಳುತ್ತಿದ್ದರು. ರಾಮಚಂದ್ರ ವಡವಿ ಹಾಗೂ ಪುಂಡಲಿಕಜೀಯವರ ಮಾರ್ಗದರ್ಶನದಿಂದ ಇಲ್ಲಿಯ ವಿದ್ಯಾರ್ಥಿಗಳು ಸರ್ವಾಂಗೀಣ ಪ್ರಗತಿಯನ್ನು ಹೊಂದುತ್ತಿದ್ದರು. ಒಳ್ಳೆಯ ಗುರುವಿನ ಪ್ರಭಾವದಿಂದ ಒಳ್ಳೆಯ ಶಿಷ್ಯರು ನಿರ್ಮಾಣಗೊಳ್ಳುತ್ತಾರೆ ಎಂಬ ನಂಬಿಕೆಯಿದೆ. ಅದರಂತೆ ರಾಮಚಂದ್ರ ವಡವಿ ಮತ್ತು ಪುಂಡಲಿಕಜೀಯವರ ಪ್ರಭಾವವು ಈ ಖಾದಿ ವಿದ್ಯಾಲಯದ

ವಿದ್ಯಾರ್ಥಿಗಳ ಮೇಲೆ ಎಷ್ಟಾಗಿತ್ತೆಂದರೆ ಅವರಲ್ಲಿ ನೀಲಕಂಠ ಗಣಾಚಾರಿ ಎಂಬುವವರು ತಮ್ಮ ಇಡಿಯಾದ ಬದುಕನ್ನೆ ಸಮಾಜ ಸೇವೆಗಾಗಿ ಮೀಸಲಿರಿಸಿದರು. ಮದುವೆಯಾಗಿ ಸಂಸಾರಿಯಾಗದೇ ಸನ್ಯಾಸವನ್ನು ಸ್ವೀಕರಿಸಿ ತಮ್ಮ ಬದುಕಿನ ಗುರಿ ದೇಶಸೇವೆ ಎಂದು ನಿರ್ಧರಿಸಿ ಮುಂದೆ ಅಖಂಡ ಭಾರತದ ತುಂಬ ಸಂಚರಿಸಿ ಖಾದಿ ಮತ್ತು ದೇಶಪ್ರೇಮದ ಬಗ್ಗೆ ಜನರಲ್ಲಿ ಅರಿವು ಮೂಡಿಸಿದರು. ಹುದಲಿ ಗ್ರಾಮದ ಜಮನಾಲಾಲ ಖಾದಿ ವಿದ್ಯಾಲಯವು ದೇಶಕ್ಕೆ ಕೊಟ್ಟ ಅಮೂಲ್ಯ ರತ್ನಗಳಲ್ಲಿ ನೀಲಕಂಠ ಗಣಾಚಾರಿಯವರು ಒಬ್ಬರು. ಇವರಂತೆ ಇನ್ನೂ ಹಲವು ಜನ ಈ ಮಹಾವಿದ್ಯಾಲಯದಲ್ಲಿ ತರಬೇತಿಯನ್ನು ಹೊಂದಿದ್ದಾರೆ. ಅವರಲ್ಲಿ ಪ್ರಮುಖರೆಂದರೆ ಶ್ರೀ ನೀಲಕಂಠ ಗಣಾಚಾರಿ, ಸೋಮಲಿಂಗಪ್ಪ ಮಳಗಲಿ, ನಿಂಗಪ್ಪ ತುಕ್ಕಾರ, ಭಿ. ನಿಂ. ಭೂಸಿ, ಭ. ಚ. ಯಲಿಗಾರ, ಕ. ಮ. ಪಾಟೀಲ, ಅ. ಶಿ. ವಾರಿಮನಿ ಹಾಗೂ ಹೂ. ಬಾ. ಹೊಳೆಯಾಚಿ ಮುಂತಾದವರು.

ಹುದಲಿ ಖಾದಿ ಸಂಸ್ಥೆಯು ಅಖಿಲ ಭಾರತ ಮಟ್ಟದಲ್ಲಿ ಉತ್ತಮವಾದ ಸಂಸ್ಥೆಯೆಂಬ ಕೀರ್ತಿಗೆ ಭಾಜನವಾಗಿದೆ. ಸೋಮಲಿಂಗಪ್ಪ ಮಳಗಲಿ, ನಿಂಗಪ್ಪ ತುಕ್ಕಾರ ಇವರು ವಿಶೇಷವಾಗಿ ಅರ್ಹನಿಸಿ ದುಡಿದಿದ್ದಾರೆ. ಆದ್ದರಿಂದಲೇ ಹುದಲಿ ಖಾದಿ ಸಂಸ್ಥೆಯು ಅತ್ಯಂತ ಉತ್ತಮ ಸಂಸ್ಥೆಯೆಂದು ಹೆಸರನ್ನು ಗಳಿಸಿತು. ಈ ಇಬ್ಬರ ಮಹನೀಯರ ಹಿಂದೆ ಹುದಲಿ ಗ್ರಾಮದ ಜನರ ಬೆಂಬಲವೂ ಇದೆ. ೨ನೇ ತಂಡದಲ್ಲಿ ಹುದಲಿಯ ನ. ಬ. ದೇಶಪಾಂಡೆ ಅಕ್ಕತಂಗೇರಹಾಳದ ಅಪ್ಪಣ್ಣ ಮರಿಲಿಂಗನ್ನವರ, ಈರಪ್ಪ ಮಾವಿನಕಟ್ಟಿ ಹಿಂದಿನ ಬೆಂಗಳೂರಿನ ಮೇಯರರು, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣ ಮತ್ತು ಗರುಡಶರ್ಮ ಮುಂತಾದವರು ಶ್ರಮಿಸಿದ್ದಾರೆ.

ಖಾದಿ ಚಟುವಟಿಕೆಗಳ ಮೇಲೆ ನಿಗಾವಹಿಸಿದ ಬ್ರಿಟಿಷ ಸರಕಾರವು ಈ ಚಳುವಳಿಕಾರರನ್ನು ಹತ್ತಿಕ್ಕಲು ಮತ್ತು ಸ್ವಾತಂತ್ರ್ಯ ಹೋರಾಟದಲ್ಲಿ ಇವರು ಸಕ್ರೀಯ ಭಾಗವಹಿಸುವುದರಿಂದ ಯಾವುದಾದರೊಂದು ನೆಪವೊಡ್ಡಿ ಈ ಕಾರ್ಯಕರ್ತರನ್ನು ಸೆರೆಮನೆಗೆ ಅಟ್ಟುತ್ತಿದ್ದರು. ಗಾಂಧೀಜಿಯವರು ೧೯೪೨ರಲ್ಲಿ ಚಲೇಜಾವ ಚಳುವಳಿಯನ್ನು ಪ್ರಾಂಭಿಸಿದ ಮೇಲೆ ಬ್ರಿಟಿಷರಿಗೆ ಈ ಖಾದಿ ಕೇಂದ್ರಗಳು ನುಂಗಲಾರದ ತುತ್ತುಗಳಾದವು. ಖಾದಿ ಕೇಂದ್ರಗಳಲ್ಲಿ ಕೆಲಸ ಮಾಡುವ ಶ್ರೀ ಗಂಗಪ್ಪ ಯಮಕನಮರಡಿ, ಅಣ್ಣಾ ಬಸಪ್ಪಾ ಮರಿಲಿಂಗನವರ, ತಿಪ್ಪಣ್ಣ ಬೇಟೆಗಾರ ಮುಂತಾದವರನ್ನು ಸೆರೆಮನೆಯಲ್ಲಿಡಲಾಯಿತು. ಕೆಲವು ದಿವಸ ಶ್ರೀ ವಾಸುದೇವ ಗೋಸಾವಿಯವರು ಖಾದಿ ಕೇಂದ್ರವನ್ನು ನಡೆಸಿ ಈ ಕೇಂದ್ರವು ಸ್ಥಗಿತಗೊಳ್ಳದಂತೆ ನೋಡಿಕೊಂಡರು. ಬ್ರಿಟಿಷರು ಖಾದಿ ವಿದ್ಯಾಲಯಗಳನ್ನು ಹತ್ತಿಕ್ಕಿಸುವ ಸಲುವಾಗಿ ವಾಸುದೇವ ಗೋಸಾವಿಯವರನ್ನು ಪತ್ನಿ ಸಹಿತ ಸೆರೆಮನೆಗೆ ಕಳುಹಿಸುತ್ತಾರೆ. ಈ ನಡುವೆ ಕೆಲವು ದಿನ ಈ ಖಾದಿ ವಿದ್ಯಾಲಯವು ತನ್ನ ಚಟುವಟಿಕೆಗಳಿಂದ ಸ್ಥಗಿತಗೊಳ್ಳುತ್ತದೆ. ಕೆಲವು ತಿಂಗಳು ಗತಿಸಿದ ಬಳಿಕ ಮತ್ತೇ ಖಾದಿ ವಿದ್ಯಾಲಯವು ಪ್ರಾರಂಭಗೊಳ್ಳುತ್ತದೆ. ದೇಶದ ನಾನಾ ಭಾಗಗಳಿಂದ ಚಳುವಳಿಕಾರರು ಖಾದಿ ವಿದ್ಯಾಲಯಕ್ಕೆ ಬಂದು ಸೇರಿಕೊಳ್ಳುತ್ತಾರೆ. ಮಂಗಳೂರು, ಕಾರವಾರಗಳಿಂದ

ಶ್ರೀ ಕಾಮತ, ಬಾಳಿಗಾರ, ಪ್ರಭು ಮುಂತಾದವರು ಧಾರವಾಡ ಭಾಗದಿಂದ ಶ್ರೀ ಬನಗಾರ, ಹನುಮಂತಗೌಡ, ಲಮಾಣಿ ಶ್ರೀನಿವಾಸ ಕುಲಕರ್ಣಿ, ಎಮ್. ಜಿ. ಕುಲಕರ್ಣಿ, ದಿವಾನಜಿ, ಪದಕಿ, ಹೊಂಬಾಳ, ಮೈಲಾರ ಮುಂತಾದವರು ಸೇರಿಕೊಳ್ಳುತ್ತಾರೆ. ಹೀಗೆ ವಿದ್ಯಾಲಯದ ಚಟುವಟಿಕೆಯು ಪುನಶ್ಚೇತನಗೊಂಡು ತನ್ನ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತದೆ.

## ಹುದಲಿಯ ಖಾದಿ ವಿದ್ಯಾಲಯ :

ಕುಂದರನಾಡಿನ ಕುಂದನದಂತೆ ರಾರಾಜಿಸುವ ಹುದಲಿ ಗ್ರಾಮದ ಖಾದಿ ವಿದ್ಯಾಲಯಕ್ಕೊಂದು ತನ್ನದೆಯಾದ ಚರಿತ್ರೆಯಿದೆ. ಇದರ ಹುಟ್ಟಿಗೆ ಬಾಪೂಜಿಯವರ ಪ್ರೇರಣಾಶಕ್ತಿ ಕಾರಣವಾಗಿದೆ. ಇದು ರೂಪಗೊಳ್ಳಲು ಕರ್ನಾಟಕದ ಸಿಂಹವೆಂದೇ ಹೆಸರಾದ ಗಂಗಾಧರರಾವ ದೇಶಪಾಂಡೆಯವರ ಪ್ರಯತ್ನವಿದೆ. ರಾಮಚಂದ್ರ ವಡವಿ, ಪುಂಡಲೀಕಜಿಯವರ ಸೇವಾ ಮನೋಭಾವವಿದೆ. ನೀಲಕಂಠ ಗಣಾಚಾರಿ ಅವರಂಥ ನಿಸ್ವಾರ್ಥ ವಿದ್ಯಾರ್ಥಿಗಳ ಚೈತನ್ಯವಿದೆ. ಆಗ ಗಂಗಾಧರರಾಯರು ಹಳ್ಳಿ ಹೆಣ್ಣು ಮಕ್ಕಳಲ್ಲಿ ಒಂದು ವಿನಂತಿ ಮಾಡುತ್ತ 'ನೀವು ನಿಮ್ಮ ಆರತಿಗಳಲ್ಲಿ ಒಂದೊಂದು ರೂಪಾಯಿಯನ್ನು ಇಟ್ಟು ನನಗೆ ನೀಡಿದರೆ ಅದು ನೀವು ದೇಶಕ್ಕೆ ಅಪಾರವಾದ ಕೊಡುಗೆಯನ್ನು ಕೊಟ್ಟಂತೆಯೇ ಸರಿ' ಎಂದು ಹೇಳುತ್ತಾರೆ. ಹೀಗೆ ಸಾಮಾನ್ಯರಿಂದ ಸಂಗ್ರಹಗೊಂಡ ಹಣದಿಂದ ಹುದಲಿಯ ಕುಮರಿ ಆಶ್ರಮಕ್ಕೆ ಸಂಜೀವಿನಿ ಶಕ್ತಿಯನ್ನು ತುಂಬಿ ಆಶ್ರಮ ಮತ್ತೇ ಎದ್ದು ನಿಲ್ಲುವಂತೆ ದೇಶಪಾಂಡೆಯವರು ಮಾಡುತ್ತಾರೆ.

೧೯೪೧ರಲ್ಲಿ ಜಮನಾಲಾಲ ಖಾದಿ ವಿದ್ಯಾಲಯದಲ್ಲಿ ತರಬೇತಿ ಹೊಂದಿ ಬಂದ ವಿದ್ಯಾರ್ಥಿಗಳು ಮತ್ತು ಅದಕ್ಕೆ ಹೊಸ ಆಯಾಮವನ್ನು ಒದಗಿಸಿದ ರಾಮಚಂದ್ರ ವಡವಿಯವರು ಮತ್ತು ಪುಂಡಲಿಕಜೀಯವರು ಮಾರ್ಗದರ್ಶಕರಾಗಿ ನಿಂತು ಮತ್ತೇ ಅದು ತಲೆ ಎತ್ತುವಂತೆ ಮಾಡುತ್ತಾರೆ. ೧೯೪೪ ನೇ ಇಸ್ವಿಯಲ್ಲಿ ಆಶ್ರಮವನ್ನು ಸಮಗ್ರ ಗ್ರಾಮಸೇವಾ ಸಮಿತಿ ಹೆಸರಿನಲ್ಲಿ ಮಾರ್ಪಡಿಸಿ ವಿಧಾಯಕ ಕಾರ್ಯಗಳನ್ನು ಮಾಡುತ್ತಾರಲ್ಲದೆ ಬರಿ ಖಾದಿಗೆ ಸೀಮಿತಗೊಂಡ ಈ ಸಂಸ್ಥೆ ಸ್ವಾತಂತ್ರ್ಯ ಚಳುವಳಿ ಮತ್ತು ನವರಾಷ್ಟ್ರ ನಿರ್ಮಾಣ ಇವುಗಳ ಕನಸು ಹೊತ್ತು ನಿರಂತರ ಶ್ರಮ ಸಂಸ್ಕೃತಿಯಲ್ಲಿ ರೂಪಗೊಳ್ಳತೊಡಗುತ್ತದೆ. ಈಗ ಈ ಸಂಘವು ಸಹಕಾರಿ ತತ್ವದ ಮೇಲೆ ತನ್ನ ವಿರಾಟ ಸ್ವರೂಪದಿಂದ ನಾಡಿನುದ್ದಕ್ಕೂ ಪ್ರಗತಿಯ ಹಸ್ತವನ್ನು ಚಾಚಿಕೊಂಡಿದೆ.

ಹುದಲಿಯು ಖಾದಿ ಉತ್ಪತ್ತಿಯ ಪ್ರಧಾನ ಕೇಂದ್ರವಾಗಿ ಕಾರ್ಯ ನಿರ್ವಹಿಸುತ್ತ ತನ್ನ ಹಲವಾರು ಶಾಖೆಗಳನ್ನು ಹೊಂದಿದ್ದು ಅವುಗಳ ಮುಖಾಂತರ ಹಲವು ಹತ್ತು ನೆಲೆಗಳಲ್ಲಿ ಅಭಿವೃದ್ಧಿಯನ್ನು ಹೊಂದುತ್ತ ಮುನ್ನಡೆದಿದೆ. ೧೯೫೪ ರಲ್ಲಿ ಕೇವಲ ೫೦೦ ರೂಪಾಯಿ ಬಂಡವಾಳದಿಂದ ೧೧ ಜನ ಸದಸ್ಯರು ಹಾಗೂ ೩ ಜನ ಕಾರ್ಯಕರ್ತರಿಂದ ಪ್ರಾರಂಭಗೊಂಡ ಈ ಸಂಘವು ಇಂದು ವಿರಾಟ ಸ್ವರೂಪವನ್ನು ತಳೆದಿದೆ. ಸಂಘವು ಇಂದು ೨೪೬೪೦ ಶೇರ

ಬಂಡವಾಳವು ೨೫ ಜನ ಸದಸ್ಯರು ೩೭ ಜನ ಖಾಯಂ ಕಾರ್ಯಕರ್ತರು, ೧೫ ಜನ ತರಬೇತಿ ಕಾರ್ಯಕರ್ತರು ಹಾಗೂ ಇತರ ಕೆಲಸಗಾರರನ್ನು ಒಳಗೊಂಡು ಒಟ್ಟು ೨೦ ಗ್ರಾಮಗಳಲ್ಲಿ ಸುಮಾರು ೮೦೦ ಜನರು ಇದರಲ್ಲಿ ಕಾರ್ಯಪ್ರವರ್ತರಾಗಿದ್ದಾರೆ. ಇಂದು ಸಂಘವು ೨,೭೦,೫೧೩/- ರೂ ರಿಜರ್ವ ಫಂಡ ಮತ್ತು ೧,೯೯,೨೦೦/- ಬಿಲ್ಡಿಂಗ ಫಂಡ್ ಹೊಂದಿದೆ. ಹುದಲಿಯೇ ಇದರ ಮುಖ್ಯ ಕಾರ್ಯಾಲಯವಾಗಿದ್ದು ಹಿರೇಬಾಗೇವಾಡಿಯಲ್ಲಿ ಹಣ್ಣು ಹಾಗೂ ತರಕಾರಿ ಸಂಸ್ಕರಣ ಕೇಂದ್ರವನ್ನು ಸ್ಥಾಪಿಸಲಾಗಿದೆ. ಇದರ ಏಜಂಟರು ಬೆಳಗಾವಿ, ಬೆಂಗಳೂರು, ಮೈಸೂರು, ಕೋಲ್ಲಾಪೂರ ಮತ್ತು ಸಾಗರಗಳಲ್ಲಿ ಕೆಲಸ ಮಾಡುತ್ತಾರೆ. ಇದರ ಅಡಿಯಲ್ಲಿ ಸ್ಥಾಪನೆಗೊಂಡ ಊರುಗಳೆಂದರೆ ಹುದಲಿ, ಮಲ್ಲಾಪೂರ, ಅಕ್ಕತಂಗೇರಹಾಳ, ಪಂಜಾನೆಟ್ಟಿ, ಈ ಗ್ರಾಮಗಳಲ್ಲಿ ಮಸ್ಲಿನ್ ನೂಲಿನ ಉತ್ಪತ್ತಿ ಕೇಂದ್ರಗಳನ್ನು ತೆರೆಯಲಾಗಿದೆ. ಪಾಶ್ಚಾಪೂರ, ಕರಡಿಗುದ್ದಿ, ಸುಳೆಭಾವಿ, ಮಾರಿಹಾಳ, ಪಂತ ಬಾಳೇಕುಂದ್ರಿ, ಉರುಬಿನಹಟ್ಟಿ, ಬೆನಚಿನಮರಡಿ, ನರಸಿಂಹಪೂರ, ಹೊಸವಂಟಮೂರಿ, ಡೋಂಬರಕೊಪ್ಪ, ಹಿರೇಬಾಗೇವಾಡಿ, ಯಮಕನಮರಡಿ ಇವುಗಳಲ್ಲಿ ಹೊಸ ಮಾದರಿಯ ಚರಕಾಗಳಿಂದ ನೂಲು ಉತ್ಪತ್ತಿ ಕೇಂದ್ರಗಳನ್ನು ತೆರೆಯಲಾಯಿತು.

ಖಾದಿ ಉತ್ಪತ್ತಿ ಕೇಂದ್ರಗಳಾದ ಹುದಲಿ, ಯಮಕನಮರಡಿ, ಸುಳೆಭಾವಿ, ಡೋಂಬರಕೊಪ್ಪ, ಹಿರೇಬಾಗೇವಾಡಿ, ಮುತ್ನಾಳ, ಉರಬೀನಹಟ್ಟಿ, ದೇಶನೂರ, ಹೊಸ ವಂಟಮೂರಿ ಈ ಗ್ರಾಮೀಣ ಪ್ರದೇಶಗಳಲ್ಲಿ ವಿವಿಧ ಬಗೆಯ ಖಾದಿಯನ್ನು ಉತ್ಪಾದಿಸಲಾಗುತ್ತದೆ. ಇಲ್ಲಿ ೧೨೪ ಜನ ನೇಕಾರರಿಗೆ ಉಪಜೀವನದ ದಾರಿ ದೊರಕಿದೆ. ಹುದಲಿ ಹಾಗೂ ಮಾರಿಹಾಳಗಳಲ್ಲಿ ಕಾರ್ಡರ್ ಮತ್ತು ಕ್ರಶರ್ ವಿಭಾಗಗಳನ್ನು ತೆರೆಯಲಾಗಿದೆ. ಈ ಸಂಘ ೧೯೫೭ ರಿಂದ ಮೇಸ್ತ್ರಿ ವಿದ್ಯಾಲಯವನ್ನು ತೆರೆಯಲಾಯಿತು. ಹಳೇ ಪರಂಪರೆಯ ಕೈರಾಟಿ, ಜಂತ್ರ, ಯರವಡಾ ಚರಕಾ, ಕಿಸಾನ ರಾಟಿಗಳು ಇಲ್ಲಿ ತಯಾರಾಗುತ್ತಿದ್ದವು. ನೂಲುವ ಸಾಧನಗಳಲ್ಲಿ ಸುಧಾರಣೆಯಾಗಿ ಹೆಚ್ಚು ನೂಲು ತೆಗೆಯುವ ಅಂಬರ ಚರಕಾ ಬಳಕೆಯಲ್ಲಿ ಬಂತು. ಶ್ರೀ ತುಕ್ಕಾರವರು ಶ್ರೀ ಭೂಸಿಯರು ಅಂಬರ ಚರಕಾದ ತರಬೇತಿಯನ್ನು ಪಡೆದುಕೊಂಡು ಬಂದ ನಂತರ ಈ ಸಂಸ್ಥೆಗೆ ಹೆಚ್ಚು ಪ್ರಾವೀಣ್ಯತೆ ದೊರೆಯಿತು. ಇದರ ಪ್ರಯೋಜನ ಪಡೆಯುವುದಕ್ಕಾಗಿ ಕರ್ನಾಟಕದ ಮೂಲೆಮೂಲೆಗಳಿಂದ ಜನ ಬರುತ್ತಿದ್ದರು. ಕೈಮಗ್ಗದ ಸಾಧನಗಳು ಈ ವಿದ್ಯಾಲಯದಲ್ಲಿಯೇ ತಯಾರಾಗುತ್ತಿದ್ದವು.

೧೯೫೪ ಕ್ಕೆ ಈ ಸಂಘವು ಲಖನೌದಿಂದ ಮಾನ್ಯತೆಯನ್ನು ಪಡೆದ ಪತ್ರವನ್ನು ಸ್ವೀಕರಿಸಿತು. ಆ ಸಂದರ್ಭಗಳಲ್ಲಿ ಕೆ. ವೆಂಕಟರಾಮಯ್ಯನವರು ರಾಜ್ಯ ವಿಭಾಗದ ಸಂಚಾಲಕರಾಗಿ ನಿಯುಕ್ತಗೊಂಡರು. ಈ ಖಾದಿ ಆಯೋಗ ಪ್ರಭಾವಿಯಾಗಿ ಕಾರ್ಯ ನಿರ್ವಹಿಸುವ ರೂಪರೇಷೆಯನ್ನು ಇವರು ಹಾಕಿದರು. ಇದರಿಂದ ಖಾದಿ ಜೊತೆ ಇತರ ಗುಡಿ ಕೈಗಾರಿಕೆಗಳು ಕೂಡ ವೃದ್ಧಿಯಾಗಿ ಜನರು ಸ್ವಾವಲಂಬಿ ಜೀವನವನ್ನು ನಡೆಸಲು ತುಂಬಾ ಅನುಕೂಲವಾಯಿತು. ಬದುಕಿನ ಎಲ್ಲ ಹಂತಗಳಿಗೆ ಖಾದಿ ಉತ್ತರವಾಯಿತು. ಆದ್ದರಿಂದಲೇ 'ಖಾದಿ ಸ್ವರ್ಗಕ್ಕೆ ಹಾದಿ' ಎಂಬ ಉಕ್ತಿ

ಜಾರಿಗೆ ಬಂತು. ಗುಡಿ ಕೈಗಾರಿಕೆಗಳಾದ ಸಾಬೂನು ತಯಾರಿಕೆ, ಊದಬತ್ತಿ ನಿರ್ಮಾಣ, ಜೈವಿಕ ಅನಿಲ ಮುಂತಾದ ಗ್ರಾಮೋದ್ಯೋಗ ಘಟಕಗಳನ್ನು ರಚಿಸಲಾಯಿತು. ಹಲವಾರು ಉದ್ಯೋಗಗಳು ಸೃಷ್ಟಿಯಾಗಿ ಜನರು ಸ್ವಾವಲಂಬಿಯಾದರು. ಪ್ರಾರಂಭದಲ್ಲಿ ಪರಂಪರಾಗತ ರಾಟೆಗಳ ಮೇಲೆ ಹಂಜಯ ಮೂಲಕ ನೂತ ನೂಲನ್ನು ಸುತ್ತಲಿನ ಹಳ್ಳಿಗಳಿಂದ ಖರೀದಿಸಿ ಕೇವಲ ಬೆರಳಣಿಕೆಯ ಮಗ್ಗಗಳಿಂದ ತಯಾರಿಸಲ್ಪಟ್ಟ ಖಾದಿಯನ್ನು ಸ್ಥಾನಿಕವಾಗಿ ಮಾರಾಟ ಮಾಡುತ್ತಿದ್ದರು. ಹಂತಹಂತವಾಗಿ ಕಿಸಾನ ರಾಡಿ, ಯರವಡಾ ಚರಕಾ ಮೂಲಕ ಮನೆಮನೆಯಲ್ಲಿ ನೂಲುವುದು ಪ್ರಾರಂಭವಾಯಿತು. ನೂಲುಗರ ಸಂಖ್ಯೆ ಹೆಚ್ಚಾದರೂ ಅವರ ಶ್ರಮಕ್ಕೆ ಸರಿಯಾದ ಮಜೂರಿ ಸಿಗುತ್ತಿರಲಿಲ್ಲ. ಆದ್ದರಿಂದ ನೂಲುವ ಸಾಧನದಲ್ಲಿ ಹೆಚ್ಚು ನೂಲು ಉತ್ಪಾದನೆ ಹಾಗೂ ಹೆಚ್ಚು ನಂಬರಿನ ನೂಲು ತೆಗೆಯುವುದು ಇದನ್ನು ಸಾಧಿಸಲು ಖಾದಿ ಪ್ರಪಂಚದಲ್ಲಿ ಚಿಂತನೆ ನಡೆದು ಅಂಬರ ಚರಕಾದ ಶೋಧವಾಯಿತು. ಹುದಲಿ ಕಾರ್ಯಕರ್ತರು ಅಂಬರ ನೂಲು ತೆಗೆಯುವ ತರಬೇತಿಯನ್ನು ಪಡೆದು ಯಶಸ್ವಿಯಾಗಿ ಕಾರ್ಯ ಸಾಧನೆಗೈದರು. ಕುಂದರನಾಡಿನ ಈ ಸಂಘದ ಕಾರ್ಯ ಕ್ಷೇತ್ರಕ್ಕೆ ಒಳಪಟ್ಟ ಅಂಕಲಗಿ, ಅಕ್ಕತಂಗೇರಹಾಳ, ಮಲ್ಲಾಪೂರ, ಉರಬಿನಹಟ್ಟಿ, ಪಾಶ್ಚಾಪೂರ, ಮಾರಿಹಾಳ, ಕರಡಿಗುಡ್ಡ, ಸುಳೇಭಾವಿ, ಪಂತ ಬಾಳೇಕುಂದ್ರಿ ಮುಂತಾದ ಊರುಗಳಲ್ಲಿ ಅಂಬರ ಘಟಕಗಳನ್ನು ತೆರೆದು ಹುದಲಿ ಪರಿಶ್ರಮಾಲಯದಲ್ಲಿ ತರಬೇತಿ ಪಡೆದ ಕಾರ್ಯಕರ್ತರನ್ನು ನೇಮಿಸಿ ನೂಲುವ ಕೇಂದ್ರಗಳನ್ನು ತೆರೆಯಲಾಯಿತು.

ಯೋಜನಾ ಆಯೋಗವು ಖಾದಿ ಕೇಂದ್ರಗಳಿಗೆ ಹಣ ಒದಗಿಸಿ ಅವುಗಳಿಂದ ಖಾದಿ ಬಟ್ಟೆ ಮತ್ತು ಇತರ ವಸ್ತುಗಳ ಉತ್ಪಾದನೆಗೆ ನೆರವಾಯಿತು. ದೇಶದಲ್ಲಿ ಒಟ್ಟು ೫೦೧೧ ಬ್ಲಾಕುಗಳು ನಿರ್ಮಾಣಗೊಂಡವು. ಪ್ರತಿಯೊಂದು ಬ್ಲಾಕಿನಲ್ಲಿ ಪ್ರತಿವರ್ಷ ೬೦೦ ನಿರುದ್ಯೋಗಿಗಳಿಗೆ ಉದ್ಯೋಗ ಕೊಡುವ ಯೋಜನೆಯನ್ನು ರೂಪಿಸಲಾಯಿತು. ಹೀಗಾಗಿ ಪ್ರತಿವರ್ಷ ೩೦ ಲಕ್ಷ ಜನರಿಗೆ ಹಾಗೂ ೫ ವರ್ಷಗಳಲ್ಲಿ ಒಂದೂವರೆ ಕೋಟಿ ಗ್ರಾಮೀಣ ಜನರಿಗೆ ೬ನೇ ಪಂಚವಾರ್ಷಿಕ ಯೋಜನೆಯಲ್ಲಿ ಉದ್ಯೋಗ ಕೊಡುವ ಗುರಿ ಹೊಂದಿತ್ತಲ್ಲದೆ ಅದನ್ನು ಜಾರಿಗೊಳಿಸಿತ್ತು.

ಹೀಗೆ ಗ್ರಾಮೀಣ ನಿರುದ್ಯೋಗಿಗಳನ್ನು ಉದ್ಯೋಗದಲ್ಲಿ ತೊಡಗಿಸಿ ಅವರ ಮಾನಸಿಕ ಹಾಗೂ ಬೌದ್ಧಿಕ ವಿಕಾಸದತ್ತ ಗಮನಕೊಡಲಾಯಿತು. ಇದಕ್ಕಾಗಿ ಜಿಲ್ಲೆಯ ಡೆಪ್ಯೂಟಿ ಕಮೀಷನರ್ ಅಧ್ಯಕ್ಷತೆಯಲ್ಲಿ ಜಿಲ್ಲಾಮಟ್ಟದ ಒಂದು ಸಮಿತಿ ನೇಮಿಸಲಾಗಿತ್ತು. ಜಿಲ್ಲಾ ಕೈಗಾರಿಕಾ ಕೇಂದ್ರದ ಮೂಲಕ ಜಿಲ್ಲೆಯಲ್ಲಿನ ಸಮಗ್ರ ಗ್ರಾಮೀಣ ವಿಕಾಸ ಕಾರ್ಯಕ್ರಮವು ಜಾರಿಯಲ್ಲಿ ಬಂತು. ಉದ್ಯೋಗವನ್ನು ಬಯಸಿ ಬಂದ ತರುಣರು ತಾವು ಕೈಕೊಳ್ಳಬೇಕಾದ ಯೋಜನೆಯ ರೂಪ-ರೇಷೆಗಳನ್ನು ಸಿದ್ಧಪಡಿಸಿ ಜಿಲ್ಲಾ ಸಮಿತಿಗೆ ಅರ್ಜಿಯನ್ನು ಕಳಿಸಬೇಕು. ಅವರು ಶಿಫಾರಸ್ಸು ಮಾಡಿ ಆ ಯೋಜನೆಗಳನ್ನು ಕಾರ್ಯರೂಪಕ್ಕೆ ತರುತ್ತಿದ್ದರು.

ಇಂತಹ ಯೋಜನೆಯ ಅಡಿಯಲ್ಲಿ ಗ್ರಾಮಗಳಲ್ಲಿಯ ೧೫ ರಿಂದ ೩೫ ವರ್ಷದ ಒಳಗಿನ ಯುವಕರನ್ನು ಕಲೆಹಾಕಿ ಅವರಿಗೆ ತರಬೇತಿಯನ್ನು ಕೊಡಲಾಗುತ್ತಿತ್ತು. ಈ ತರಬೇತಿಯಿಂದ ಅವರು ಸ್ವತಂತ್ರವಾಗಿ ಸ್ವಂತ ಉದ್ಯೋಗವನ್ನು ಸ್ಥಾಪಿಸಿ ಅದರಿಂದ ಜೀವನವನ್ನು ನಿರ್ವಹಣೆ ಮಾಡಿಕೊಳ್ಳುತ್ತಿದ್ದರು. ಇದು ದೇಶ ಸೇವೆಯ ಜೊತೆಗೆ ನಿರುದ್ಯೋಗ ಸಮಸ್ಯೆಗೆ ಒಂದು ಪರಿಹಾರವು ಆಗಿತ್ತು. ಈ ಯೋಜನೆಯ ಅಡಿಯಲ್ಲಿ ಖಾದಿ ಗ್ರಾಮೋದ್ಯೋಗಗಳಲ್ಲಿ ತರಬೇತಿ ಹೊಂದಿ ಕೆಲಸ ಮಾಡುವ ಜನರಿಗೆ ಮತ್ತು ಕೆಲಸವನ್ನು ಕೊಡುವ ಸಂಸ್ಥೆಗಳಿಗೆ ಕೇಂದ್ರದಿಂದ ಧನ ಸಹಾಯ ದೊರೆಯುತ್ತಿತ್ತು. ಗ್ರಾಮೀಣ ಯುವಕರಿಗೆ ಖಾದಿ ಗ್ರಾಮೋದ್ಯೋಗದಲ್ಲಿ ಸೇರುವ ಮೊದಲು ಅವರಿಗೆ ಕೆಲವು ಉಪಯುಕ್ತ ಸೂಚನೆಗಳನ್ನು ಕೊಡಲಾಗುತ್ತಿತ್ತು.

೧. ತರಬೇತಿಯು ೬ ತಿಂಗಳ ಅವಧಿಯದ್ದು.

೨. ತರಬೇತಿ ಹೊಂದುವವರಿಗೆ ಪ್ರತಿ ತಿಂಗಳು ತಲಾ ೧೦೦/- ರೂ ಯಂತೆ ೬ ತಿಂಗಳುಗಳವರೆಗೆ ಶಿಷ್ಯವೇತನವನ್ನು ಕೊಡಲಾಗುತ್ತಿತ್ತು.

೩. ಪ್ರತಿ ತಿಂಗಳು ತರಬೇತಿದಾರರಿಗೆ ತರಬೇತಿ ಸಲುವಾಗಿ ೫೦ರೂ ಯಂತೆ ೬ ತಿಂಗಳವರೆಗೆ ಖಾದಿ ಸಂಸ್ಥೆಗೆ ಹಣ ಬರುತ್ತಿತ್ತು.

೪. ತರಬೇತಿ ಹೊಂದಿದ ನಂತರ ಅವರ ಉದ್ಯೋಗಕ್ಕಾಗಿ ಬೇಕಾಗುವ ಉಪಕರಣಗಳನ್ನು ಖರೀದಿಸಲು ಅವು ೨೫೦ ರೂ.ಗಿಂತ ಕಡಿಮೆ ಬೆಲೆ ಇದ್ದಲ್ಲಿ ಪೂರ್ತಿ ಸಹಾಯಧನ ದೊರೆಯುತ್ತಿತ್ತು. ೨೫೦ ರೂ.ಗಿಂತ ಹೆಚ್ಚಿಗೆ ಬೆಲೆ ಇದ್ದಲ್ಲಿ ೧/೩ ದಷ್ಟು ಧನ ಸಹಾಯ ಉಳಿದ ೨/೩ ರಷ್ಟು ಬ್ಯಾಂಕಿನಿಂದ ಸಾಲ ದೊರಕಿಸಿ ಕೊಡಲಾಗುತ್ತಿತ್ತು. ೩೦೦೦ ರೂ.ಗಳವರೆಗೆ ಉಪಕರಣಗಳ ಬೆಲೆ ಇದ್ದಲ್ಲಿ ಈ ೧/೩ ದಷ್ಟು ಸಹಾಯಧನ ಸವಲತ್ತು ದೊರೆಯುತ್ತಿತ್ತು. ಹರಿಜನ-ಗಿರಿಜನರಿಗೆ ೫೦೦೦ ರೂ.ಗಳವರೆಗೆ ಸವಲತ್ತು ದೊರೆಯುತ್ತಿತ್ತು.

೫. ತರಬೇತಿ ಹೊಂದಿದ ನಂತರ ಕಸಬುದಾರರು ಒಂದೆಡೆ ಉದ್ಯೋಗ ಮಾಡುವದಿದ್ದಲ್ಲಿ ಆ ಉದ್ಯೋಗ ಪೂರೈಸುವ ಸಂಸ್ಥೆಗೆ ಶೆಡ್ ಕಟ್ಟಲು ಅವಶ್ಯಕತೆಗೆ ಅನುಗುಣವಾಗಿ ಜಿಲ್ಲಾ ಸಮಿತಿಯವರು ಧನ ಸಹಾಯ ಮಂಜೂರು ಮಾಡುತ್ತಿದ್ದರು.

೧೯೨೨ರಲ್ಲಿ ಕರ್ನಾಟಕದಲ್ಲಿ ಮಹಾತ್ಮಾ ಗಾಂಧೀಜಿಯವರ ನೇತೃತ್ವದಲ್ಲಿ ಖಾದಿ ಪುನರುಜ್ಜೀವನಗೊಂಡಿತು. ೧೯೨೫ ರಲ್ಲಿ ಅದಕ್ಕೊಂದು ರಚನಾತ್ಮಕ ಸ್ವರೂಪ ಬಂದು ಅಖಿಲ ಭಾರತ ಚರಕಾ ಸಂಘದ ಅಡಿಯಲ್ಲಿ ತನ್ನ ಕಾರ್ಯವನ್ನು ಅದು ನಿರ್ವಹಿಸುತ್ತ ಬಂದಿತು. ಕರ್ನಾಟಕದಲ್ಲಿ ಗಾಂಧೀಜಿಯವರ ಸಲಹೆಯ ಮೇರೆಗೆ ವಿಕೇಂದ್ರೀಕರಣಗೊಂಡು ಸ್ವತಂತ್ರವಾಗಿ ಖಾದಿ ಸಂಸ್ಥೆ 'ಗ್ರಾಮೋದ್ಯೋಗ ಮಂಡಲ' ಎಂಬ ಹೆಸರಿನೊಂದಿಗೆ ತನ್ನ ಕಾರ್ಯವ್ಯಾಪ್ತಿಯನ್ನು ವಿಸ್ತರಿಸುತ್ತ ಬಂದಿತು. ಸ್ವತಂತ್ರ ಕರ್ನಾಟಕ ಪ್ರಾಂತ ರಚನೆಗೊಂಡ ನಂತರ ಕರ್ನಾಟಕ ರಾಜ್ಯ ಖಾದಿ ಗ್ರಾಮೋದ್ಯೋಗ ಬೋರ್ಡ ಎಂದು ರಾಜ್ಯ ಸರ್ಕಾರದ ಮನ್ನಣೆಯನ್ನು ಪಡೆಯಿತು. ೧೯೫೬

ರಲ್ಲಿ ಕರ್ನಾಟಕ ಖಾದಿ ಬೋರ್ಡ ರಚಿತವಾಗುವ ಪೂರ್ವದಲ್ಲಿ ಅಲ್ಲಲ್ಲಿ ಖಾದಿ ಗ್ರಾಮೋದ್ಯೋಗ ಸಂಘ-ಸಂಸ್ಥೆಗಳನ್ನು ಆಯಾ ಭಾಗದ ಪ್ರಮುಖ ಖಾದಿ ಕಾರ್ಯಕರ್ತರು ತಮ್ಮ ತಮ್ಮ ಭಾಗದಲ್ಲಿ ಖಾದಿ ಗ್ರಾಮೋದ್ಯೋಗ ಸಹಕಾರಿ ಸಂಘವನ್ನು ಸ್ಥಾಪಿಸಿಕೊಂಡು ಕಾರ್ಯ ಪ್ರವೃತ್ತರಾಗಿದ್ದರು. ಆ ಕಾಲಕ್ಕೆ ಎಲ್ಲ ಸಂಸ್ಥೆಗಳಿಗೆ ಸಹಾಯ ಸಹಕಾರ ಮಾರ್ಗದರ್ಶನ ನೀಡಲು ಒಂದು ಪ್ರಾಂತೀಯ ಮಟ್ಟದಲ್ಲಿ ಸಂಯುಕ್ತ ಸಂಘವನ್ನು ಸ್ಥಾಪಿಸಲು ಸಂಸ್ಥೆಗಳ ಮುಖಂಡರು ಕೂಡಿ ನಿರ್ಧರಿಸಿದರು. ೦೧-೧೧-೧೯೫೭ ರಂದು ಕರ್ನಾಟಕದ ಖಾದಿ ಗ್ರಾಮೋದ್ಯೋಗ ಸಂಘವು ಹುಬ್ಬಳ್ಳಿಯ ಶ್ರೀಮಾನ ವೆಂಕಟೇಶ ಮಾಗಡಿಯವರ ನೇತೃತ್ವದಲ್ಲಿ ರಚನೆಗೊಂಡಿತು. ಅಂದಿನ ಮುಂಬೈ ಗ್ರಾಮೋದ್ಯೋಗದ ಮಂಡಳಿ ಉಳಿದ ಕೆಲಸವನ್ನು ಫೆಡರೇಶನ್ನಿಗೆ ವಹಿಸಿಕೊಡಲಾಯಿತು. ಈ ಫೆಡರೇಶನ್ ಸಂಸ್ಥೆಯ ಪ್ರಮುಖ ಸಂಸ್ಥಾಪಕರು ಈ ಕೆಳಗಿನಂತಿದ್ದರು.

೧. ಧಾರವಾಡ ಜಿಲ್ಲಾ ಖಾದಿ ಗ್ರಾಮೋದ್ಯೋಗ ಸಂಘ – ಹುಬ್ಬಳ್ಳಿ ಶ್ರೀ ವಿ.ಡಿ.ಮಾಗಡಿ
೨. ಬೆಳಗಾಂವ ಜಿಲ್ಲಾ ಖಾದಿ ಗ್ರಾಮೋದ್ಯೋಗ ಸಂಘ – ಶ್ರೀ ಶ್ರೀರಂಗ ಕಾಮತ
೩. ಕರ್ನಾಟಕ ಗ್ರಾಮ ಸೇವಾ ಸಂಘ ರಾಯಚೂರು – ಶ್ರೀ ಪಿ. ಎಚ್. ಇನಾಮದಾರ
೪. ಕರ್ನಾಟಕ ಖಾದಿ ಗ್ರಾಮೋದ್ಯೋಗ ಸಂಘ ಬಿಜಾಪೂರ – ಶ್ರೀ ಪಿ. ಎಚ್. ಅನಂತಭಟ್ಟ
೫. ಮೈಸೂರು ಚರಕಾ ಪ್ರಚಾರ ಸಂಘ ಮಡಿಕೇರಿ – ಶ್ರೀ ಎಸ್. ವಾಸುದೇವರಾವ
೬. ಉತ್ತರಕನ್ನಡ ಜಿಲ್ಲಾ ಗ್ರಾಮ ಸೇವಾ ಸಂಘ – ಅಂಕೋಲಾ, ಶ್ರೀ ಶ್ರೀಹರಿ ಅನಂತಪೈ
೭. ಧಾರವಾಡ ತಾಲೂಕಾ ಸೇವಾ ಸಂಘ – ಶ್ರೀ ಶಂಕರ ಕುರ್ತಕೋಟಿ
೮. ಹುಕ್ಕೇರಿ ತಾಲೂಕ ಖಾದಿ ಸಂಘ – ಶ್ರೀ ಜಯದೇವ ಕುರ್ತಕೋಟಿ

ಗಾಂಧೀಜಿಯವರು ಗ್ರಾಮೀಣ ವಿಕಾಸದಡಿಯಲ್ಲಿ ಹುಟ್ಟು ಹಾಕಿದ ಖಾದಿ ಯೋಜನೆಯು ಇಂದು ದೇಶವ್ಯಾಪ್ತಿಯಲ್ಲಿ ಬೆಳೆದು ನೂರಾರು ಜನ ನಿರುದ್ಯೋಗಿಗಳಿಗೆ ಉದ್ಯೋಗದ ನೆರಳನ್ನು ಕಲ್ಪಿಸಿಕೊಟ್ಟಿದೆ. ಆ ಜನರ ಕೈಗಳಿಗೆ ಕೆಲಸ ಕೊಟ್ಟು ಹೊಟ್ಟೆ ತುಂಬ ಅನ್ನವನ್ನು ಕೊಟ್ಟು ಮೈತುಂಬ ಬಟ್ಟೆ ಹೊದಿಸಿದ ಖಾದಿ ಸಂಸ್ಥೆಗೆ ಮತ್ತು ಅದನ್ನು ಹುಟ್ಟು ಹಾಕಿದ ಗಾಂಧೀಜಿಯವರಿಗೆ ನಾವೆಷ್ಟು ಕೃತಜ್ಞರಾದರೂ ಸಾಲದು.

ಗಾಂಧೀಜಿಯವರ ಸ್ವರಾಜ್ಯದ ಕನಸು ಖಾದಿ ಮೂಲಕ ನನಸಾದುದನ್ನು ನಾವು ಕಾಣುತ್ತೇವೆ. ಆದರೆ ಅವರು ಹಾಕಿಕೊಟ್ಟ ಖಾದಿ ಹಾದಿಯಲ್ಲಿ ಇಂದು ಎಷ್ಟು ಜನ ನಾವು ಭಾರತೀಯರು ಸಾಗಿದ್ದೇವೆ ಎಂಬುದನ್ನು ಆತ್ಮ ವೀಕ್ಷಣೆ ಮಾಡಿಕೊಳ್ಳಬೇಕು. ಯಾವುದು ದೇಶಕ್ಕೆ ಮತ್ತು ಸಮಾಜಕ್ಕೆ ಅತ್ಯಂತ ಅವಶ್ಯವೋ ಅದನ್ನು ಬಿಟ್ಟು ಭಾರತೀಯ ಪರಂಪರೆ ಮತ್ತು ಪೂರಕವಲ್ಲದೆ ವಿದೇಶಿ ವಸ್ತುಗಳ ಮೋಹ ಮತ್ತು ಬಳಕೆ ತುಂಬಾ ಅಪಾಯಕಾರಿಯಾದುದು. ಆದ್ದರಿಂದ ಖಾದಿಯನ್ನು ಮತ್ತು ಇತರ ಗುಡಿ ಕೈಗಾರಿಕೆ ವಸ್ತುಗಳನ್ನು ಉಳಿಸಿ ಬೆಳೆಸಬೇಕಾದರೆ ನಮ್ಮ ತರುಣ ಜನರು

ಎಚ್ಚರವಾಗಿ ಖಾದಿಯನ್ನು ಪ್ರೀತಿಸಬೇಕು ಮತ್ತು ಅದನ್ನು ಧರಿಸಬೇಕು ಎಂಬುದು ಕುಂದರನಾಡಿನ ಸ್ವಾತಂತ್ರ್ಯ ಹೋರಾಟಗಾರರ ಆಶಯವಾಗಿತ್ತು.

**ಕೊನೆ ಟಿಪ್ಪಣಿಗಳು :**

೧. ಗೋವಿಂದಮೂರ್ತಿ ದೇಸಾಯಿ : ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ ಅಧೀವೇಶನ : ಪು.ಸಂ–೩೦

೨. ಅದೇ : ಪು.ಸಂ–೩೦

೩. ಸೋಮಲಿಂಗಪ್ಪ ಬೆಳಗಲಿ ಹಾಗೂ ಅಚ್ಯುತ ವಡವಿ : ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸ ಮತ್ತು ಗಾಂಧೀಜಿ : ಪು.ಸಂ–೨೪೨

೪. ಗೋವಿಂದಮೂರ್ತಿ ದೇಸಾಯಿ : ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ ಅಧೀವೇಶನ : ಪು.ಸಂ–೪೩

೫. ಎನ್. ಆರ್. ವಿಶೂಕುಮಾರ (ಸಂ.) : ಜನಪದ ಗಾಂಧಿ (ವಿಶೇಷಾಂಕ) : ೨೦೧೨ : ನಿರ್ದೇಶಕರು, ವಾರ್ತಾ ಇಲಾಖೆ : ಪು.ಸಂ–೪೩

೬. ಸಂಗಮೇಶ ಹಂಡಗಿ ಮತ್ತು ಪ್ರೊ. ಎನ್. ಪಿ. ದಾನಪ್ಪಗೌಡರ (ಸಂ) : ಕುಂದರನಾಡಿನ ಕುಂದಣ : ಚರಕಾ ಕೈನೂಲು, ಕೈಮಗ್ಗದ ಹೊರತಾಗಿ ಭಾರತಕ್ಕೆ ಮೋಕ್ಷವಿಲ್ಲ (ಲೇ): ಪು.ಸಂ–೭೨

೭. ಅದೇ : ಪು.ಸಂ–೨೯

# ಅಧ್ಯಾಯ – ೫

# ಕುಂದರನಾಡಿನ ಸ್ವಾತಂತ್ರ್ಯ ಹೋರಾಟಗಾರರು ಮತ್ತು ಹೋರಾಟದ ಅನನ್ಯತೆ

ಭಾರತ ಸ್ವಾತಂತ್ರ್ಯ ಹೋರಾಟದ ಚರಿತ್ರೆಯಲ್ಲಿ ಕುಂದರನಾಡಿನ ಹೋರಾಟಗಾರರು ಗಮನಾರ್ಹವೆನಿಸುತ್ತಾರೆ. ಭಾರತ ಚಳುವಳಿಯ ಪ್ರೇರಣೆಯು ಗಾಢವಾಗಿ ಪ್ರಭಾವ ಬೀರಿದ್ದು ಉತ್ತರ ಕರ್ನಾಟಕದ ಮೇಲೆ. ಕುಂದರನಾಡು ಸ್ವಾತಂತ್ರ್ಯ ಚಳುವಳಿಗೆ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ಸ್ವಾತಂತ್ರ್ಯ ಹೋರಾಟಕ್ಕೆ ಒಂದು ಹೊಸ ಆಯಾಮವನ್ನು ಒದಗಿಸಿತ್ತು. ಕುಂದರನಾಡಿನ ನಾಲವತ್ನಾಲ್ಕು ಹಳ್ಳಿಗಳ ಜನರು ಸಂಪೂರ್ಣವಾಗಿ ತಮ್ಮನ್ನು ಸ್ವಾತಂತ್ರ್ಯ ಚಳುವಳಿಯಲ್ಲಿ ತೊಡಗಿಸಿಕೊಂಡಿದ್ದರು. ಹೋರಾಟಗಾರರು ಬಂಧು ಬಾಂಧವರ ಕರುಳು ಸಂಬಂಧವನ್ನು ಹರಿದುಕೊಂಡು ದೇಶಕ್ಕಾಗಿ ಹೋರಾಡಿದ್ದಾರೆ. ಸ್ವಾತಂತ್ರ್ಯವೇ ತಮ್ಮ ಉಸಿರೆಂದು ಶ್ರಮಿಸಿದ ವೀರರು ಇಂದಿನ ಜನಾಂಗಕ್ಕೆ ಆದರ್ಶವೂ, ಸ್ಫೂರ್ತಿದಾಯಕವೂ ಆಗಿದ್ದಾರೆ.

ಕುಂದರನಾಡಿನ ಸ್ವಾತಂತ್ರ್ಯ ಹೋರಾಟದ ಚರಿತ್ರೆಯಲ್ಲಿ ಗುರುತಿಸಿಕೊಂಡವರು ಕೆಲವರಾದರೆ, ಅನಾಮಧೇಯರಾಗಿ ಹಲವಾರು ಇತಿಹಾಸದಲ್ಲಿ ದಾಖಲಾಗದೆ ಉಳಿದು ಬಿಟ್ಟಿದ್ದಾರೆ. ಪ್ರಸ್ತುತ ಪ್ರಬಂಧದಲ್ಲಿ ಅಂಥಃ ಹೋರಾಟಗಾರರ ಪರಿಚಯವನ್ನು ಮಾಡಿಕೊಡಲು ಪ್ರಯತ್ನಿಸಲಾಗಿದೆ.

ಕುಂದರನಾಡಿನ ಒಂದು ಭಾಗವಾದ ಹುದಲಿ ಗ್ರಾಮವು ದೇಶದ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿರುತ್ತದೆ. ಹುದಲಿಯಲ್ಲಿ ಸ್ವಾತಂತ್ರ್ಯ ಚಳುವಳಿಯ ಹೋರಾಟದ ಗುಣ ಸ್ವಭಾವವನ್ನು ಹೊಂದಿದ ಅನೇಕ ಚಳುವಳಿಗಾರರು ಕಾಣಸಿಗುತ್ತಾರೆ. ಅವರಲ್ಲಿ ಗಂಗಾಧರರಾವ ದೇಶಪಾಂಡೆಯವರು ಪ್ರಮುಖರು. ಇವರು ಹುದಲಿಯಲ್ಲಿ ಜನಿಸಿ 'ಕುಮರಿ' ಆಶ್ರಮ ಸ್ಥಾಪಿಸಲು ಕಾರಣರಾದರು. ಇದರಿಂದ ದೇಶದ ಬಹುಜನ ಮುಂದಾಳುಗಳ ಗಮನ ಸೆಳೆಯಲು ಇವರು ಕಾರಣರಾದರು. ಅಲ್ಲದೆ ಈ ಗ್ರಾಮವು ಅನೇಕ ಚಳುವಳಿಕಾರರನ್ನು ತನ್ನತ್ತ ಸೆಳೆದುಕೊಂಡು ಕುಂದರನಾಡಿನ ಸ್ವಾತಂತ್ರ್ಯ ಹೋರಾಟದ ಕೇಂದ್ರವಾಯಿತು.

ಬೆಳಗಾವಿ ತಾಲೂಕು ದೇಶದ ಇತಿಹಾಸದಲ್ಲಿ ಹಲವು ದೃಷ್ಟಿಯಿಂದ ಗಮನಾರ್ಹವಾಗಿದೆ. ಸ್ವಾತಂತ್ರ್ಯಕ್ಕಾಗಿ ಹೋರಾಡಲು ಅಣಿಯಾದವರಲ್ಲಿ ಈ ಭಾಗದ ಜನ ಅಗ್ರಸ್ಥಾನದಲ್ಲಿದ್ದಾರೆ. ಈ

ಕೀರ್ತಿಯು ಉತ್ತರ ಕರ್ನಾಟಕಕ್ಕೂ ಅದರ ಭಾಗವಾದ ಬೆಳಗಾವಿಗೂ ಸಲ್ಲುತ್ತದೆ. ಕಾಂಗ್ರೆಸಿನ ಐತಿಹಾಸಿಕ ಅಧಿವೇಶನ ೧೯೨೪ ನೆಯ ಇಸ್ವಿಯಲ್ಲಿ ಜರುಗಿತು. ೨೯ನೆಯ ಈ ಅಧಿವೇಶನವು ಬೆಳಗಾವಿಯಲ್ಲಿ ನೆರವೇರಿದ್ದು ಒಂದು ಐತಿಹಾಸಿಕ ಘಟನೆ. ಅದರ ಅಂಗವಾಗಿ ಅಖಿಲ ಭಾರತ 'ಚರಖಾ ಸಂಘ'ವನ್ನು ಖಾದಿಬೋರ್ಡು ಸ್ಥಾಪಿಸಿತು. ಆ ಸಂದರ್ಭದಲ್ಲಿ ಮುಂದಾಳುಗಳು ಹಲವಾರು ಕಡೆಗೆ ಆಶ್ರಮಗಳನ್ನು ತೆರೆದರು. ಖಾದಿಯೇ ಸ್ವಾತಂತ್ರ್ಯದ ಹಾದಿ ಎಂದು ನಂಬಿ ಅಲ್ಲಿ ಖಾದಿ ಗ್ರಾಮೋದ್ಯೋಗ ಕಾರ್ಯ ಮಾಡುತ್ತ ಜನರೊಂದಿಗೆ ಸಂಪರ್ಕವನ್ನಿಟ್ಟುಕೊಂಡು ಜನಜಾಗೃತಿ ಮಾಡತೊಡಗಿದರು. ಇದೇ ಉದ್ದೇಶದಿಂದ ಗಾಂಧೀಜಿಯವರು ಸಾಬರಮತಿಯಲ್ಲಿ ಆಶ್ರಮ ಸ್ಥಾಪಿಸಿದ್ದರು. ಗಂಗಾಧರರಾವ ದೇಶಪಾಂಡೆಯವರು ಅಧೀವೇಶನದ ತರುವಾಯ ಗಾಂಧೀಜಿಯವರ ವ್ಯಕ್ತಿತ್ವಕ್ಕೆ ಪ್ರಭಾವಿತರಾಗಿ ಹುದಲಿಯ ಹತ್ತಿರದ ತಮ್ಮದೇ ಆದ ಜಮೀನಿನಲ್ಲಿ ಕುಮರಿ ಆಶ್ರಮ ಸ್ಥಾಪಿಸಿದರು. ಈ ಆಶ್ರಮದಲ್ಲಿ ಹಲವು ವಿಧಾಯಕ ಕಾರ್ಯಗಳನ್ನು ಹಮ್ಮಿಕೊಳ್ಳಲಾಗಿತ್ತು. ಇಲ್ಲಿ ಖಾದೀ ಗ್ರಾಮೋದ್ಯೋಗ, ಅಸ್ಪೃಶ್ಯತಾ ನಿವಾರಣೆ, ಗಾಂಧೀ ತತ್ವ ಪ್ರಚಾರ, ಸ್ವಾತಂತ್ರ್ಯ ಸಂಗ್ರಾಮದ ಬಗೆಗೆ ಜಾಗೃತಿ ಮೂಡಿಸುವ ಕಾರ್ಯ ನಡೆಯುತ್ತಿದ್ದವು. ನಾಡಿನ ಬೇರೆ-ಬೇರೆ ರಾಜ್ಯಗಳಿಂದ ಸ್ವಾತಂತ್ರ್ಯ ಹೋರಾಟಗಾರರು ಇಲ್ಲಿ ಬಂದು ಕಾರ್ಯ ಮಾಡುತ್ತಿದ್ದರು. ಮಹಾರಾಷ್ಟ್ರ ಮತ್ತು ಕರ್ನಾಟಕದ ಇತರ ಭಾಗಗಳಿಂದ ಕಾರ್ಯಕರ್ತರು ಬಂದು ಇಲ್ಲಿ ಕೆಲಸ ಮಾಡುತ್ತಿದ್ದರು. ನಾರಾಯಣ ತಮ್ಮಾಜಿ ಕಾತಗಡೆ, ರಾಮಚಂದ್ರ ವೆಂಕಟೇಶ ವಡವಿ, ವಾಮನ ಬಾಳಾಜಿ ದೇಸಾಯಿ, ಬಾಳಕೃಷ್ಣ ಯಮಾಜಿ ದೇಶಪಾಂಡೆ (ಅಣ್ಣೂ ಗುರೂಜಿ), ಭಾಸ್ಕರ ವಿಷ್ಣು ಕಾಳೆ, ಗಂಗಪ್ಪ ಬಸವಂತಪ್ಪ ಯಮಕನಮರಡಿಯವರು ಮುಂತಾದವರು ಅಲ್ಲಿದ್ದರು. ಹುತಾತ್ಮ ಮಹದೇವಪ್ಪ ಮೈಲಾರರು ಕೂಡ ಈ ಆಶ್ರಮದಲ್ಲಿ ಕೆಲವು ಕಾಲ ಇದ್ದು ತರಬೇತಿ ಪಡೆದಿದ್ದರು.

ಕುಮರಿ ಆಶ್ರಮದಲ್ಲಿ ನಾರಾಯಣ ತಮ್ಮಾಜಿ ಕಾತಗಡೆ, ಹುದಲಿಯಲ್ಲಿ ರಾಮಚಂದ್ರ ವಡವಿ, ಗಂಗಪ್ಪ ಬಸವಂತಪ್ಪ ಯಮಕನಮರಡಿ, ಅಕ್ಕತಂಗೇರಹಾಳದಲ್ಲಿ ವಾಮನ ಬಾಳಾಜಿ ದೇಸಾಯಿ, ಸುಲಧಾಳದಲ್ಲಿ ಭಾಸ್ಕರ ವಿಷ್ಣು ಕಾಳೆ, ಪಾಚ್ಚಾಪೂರದಲ್ಲಿ ಬಾಳಕೃಷ್ಣ ಯಮಾಜಿ ದೇಶಪಾಂಡೆ (ಅಣ್ಣೂ ಗುರೂಜಿ)ಯವರು ಆಶ್ರಮದ ವತಿಯಿಂದ ಕಾರ್ಯ ಮಾಡುತ್ತಿದ್ದರು ಮತ್ತು ಈ ಕಾರ್ಯಕ್ರಮದ ಅಂಗವಾಗಿ ಅಣ್ಣೂ ಗುರೂಜಿ ೫೦ ಸೈಕಲ್ ಸವಾರರೊಂದಿಗೆ ಗ್ರಾಮಕ್ಕೆ ಆಗಮಿಸಿದ್ದರು. ಸ್ವಾತಂತ್ರ್ಯ ಸಂಗ್ರಾಮದ ಜೊತೆಗೆ ಆಶ್ರಮದ ನಾಯಕರು ಬೇರೆ ಬೇರೆ ಊರುಗಳಿಗೆ ಹೋಗಿ ಜನಜಾಗ್ರತಿಯನ್ನುಂಟು ಮಾಡಿ ಅವರಲ್ಲಿ ಸ್ವಾತಂತ್ರ್ಯದ ಕಿಚ್ಚನ್ನು ಹಚ್ಚುತ್ತಿದ್ದರು.

ಹುದಲಿಯಲ್ಲಿ ರಾಷ್ಟ್ರೀಯ ಶಾಲೆ (ಹರಿಜನ ಶಾಲೆ)ಯು ಪ್ರಾರಂಭವಾಯಿತು. ಗಾಂಧೀಜಿಯವರ ವಿಚಾರದಂತೆ ಅಸ್ಪೃಶ್ಯತಾ ನಿವಾರಣೆಯ ಕಾರ್ಯಗಳನ್ನು ಕೈಕೊಂಡಿತು. ೧೯೨೩ ರಲ್ಲಿ ಸ್ಥಾಪನೆಯಾದ ನಂತರ ವಡವಿಯವರು ಇದರ ನೇತೃತ್ವವನ್ನು ವಹಿಸಿಕೊಂಡು ಮುನ್ನಡೆಸಿದರು. ವಡವಿಯವರು ಕುಮರಿ ಆಶ್ರಮದಿಂದ ಖಾದೀ ಗ್ರಾಮೋದ್ಯೋಗ ಕಾರ್ಯ ನಿಮಿತ್ತ ಹೋಗಬೇಕಾಗಿ

ಬಂದಾಗ ಗಂಗಪ್ಪ ಯಮಕನಮರಡಿಯವರು, ಗೋಪಾಳರಾವ ಯಕ್ಕುಂಡಿಯವರು ೧೯೨೫ ರಿಂದ ಆ ಶಾಲೆಯಲ್ಲಿ ಕೆಲಸ ಮಾಡತೊಡಗಿದರು. ಯಕ್ಕುಂಡಿಯವರು ಅನಾರೋಗ್ಯ ನಿಮಿತ್ತ ಬಿಟ್ಟುಹೋದ ಮೇಲೆ ಯಮಕನಮರಡಿಯವರು ನಡೆಸತೊಡಗಿದರು. ೧೯೨೭ರಲ್ಲಿ ತಿಮ್ಮಪ್ಪ ಶ್ರೀನಿವಾಸ ನಾಯಕ (ಭೂದಾನ ಕಾರ್ಯಕರ್ತರಾಗಿದ್ದರು) ಇವರು ಕಾರವಾರದಿಂದ ಬಂದು ಈ ಶಾಲೆಯಲ್ಲಿ ಗಂಗಪ್ಪನವರ ಜೊತೆಗೆ ೨ ವರ್ಷ ಕೆಲಸ ಮಾಡಿದ್ದಾರೆ. ಆಗ ಬಾಬು ರಾಜೇಂದ್ರಪ್ರಸಾದ, ಶಂಕರಲಾಲ ಬ್ಯಾಂಕರ, ಜಯರಾಮದಾಸ ದೌಲತರಾಮ, ರಾಜ ಗೋಪಾಲಾಚಾರ್ಯ ಮೊದಲಾದವರು ಈ ಶಾಲೆಗೆ ಭೇಟಿಕೊಟ್ಟಿದ್ದು ಚಾರಿತ್ರಿಕ ಸಂಗತಿಯಾಗಿದೆ.

ರಾಷ್ಟ್ರೀಯ ಶಾಲೆ ವೈಶಿಷ್ಟ್ಯವೆಂದರೆ ಆ ಶಾಲೆಗಳನ್ನು ನಡೆಸಲು ಚಳುವಳಿಕಾರರು ಮುಕ್ತ ಮನಸ್ಸಿನಿಂದ ಮುಂದಾಗುತ್ತಿದ್ದರು. ಅನಾರೋಗ್ಯ, ವಯುಕ್ತಿಕ ತೊಂದರೆ ಏನೇ ಬಂದರೂ ಶಾಲೆಯನ್ನು ಸ್ಥಗಿತಗೊಳಿಸುತ್ತಿರಲಿಲ್ಲ. ಅವರಿಗೆ ಯಾವುದಾದರೂ ಕಷ್ಟ ಬಂದರೆ ಅದು ಬ್ರಿಟಿಷ ಪ್ರೇರಿತ ಜನರಿಂದಲೇ. ಅಂದಿನ ಕಾರ್ಯಕರ್ತರಿಗೂ ಅನೇಕ ಸಾಮಾಜಿಕ ಪಿಡುಗುಗಳಿಂದ ಒಳಗಾದ ಜನರ ಬಾಧೆ ತಪ್ಪಿರಲಿಲ್ಲ. ಆದರೂ ಕೆಲವು ಪೂರ್ವಗ್ರಹ ಪೀಡಿತರಾದ ಜನರು ಚಳುವಳಿಗಾರರಿಗೆ ಸ್ಪಂಧಿಸುತ್ತಿರಲಿಲ್ಲ. ರಾಷ್ಟ್ರೀಯ ಶಾಲೆಯಲ್ಲಿ ಕೆಲಸ ಮಾಡುವವರಿಗೆ ಬಹಿಷ್ಕಾರ ಹಾಕುತ್ತಿದ್ದರು. ಇದನ್ನು ಅರಿತು ಮುಖಂಡರು ಜನರಿಗೆ ತಿಳುವಳಿಕೆ ಹೇಳಿ ಸರಿಪಡಿಸುತ್ತಿದ್ದರು. ಗಣಪತಿ ಉತ್ಸವ, ಬಸವ ಜಯಂತಿ ಕಾರ್ಯಕ್ರಮಗಳು ರಾಷ್ಟ್ರೀಯ ಹಬ್ಬಗಳಾಗಿ ಸಾಮೂಹಿಕ ಆಚರಣೆಯಲ್ಲಿ ಬಂದವು. ಸಾಮೂಹಿಕ ಆಚರಣೆಗಳನ್ನು ಸ್ವಾತಂತ್ರ್ಯ ಹೊರಾಟದ ಒಂದು ಶಕ್ತಿಯಾಗಿ ಇವರು ಬಳಸಿಕೊಂಡರು. ಹಬ್ಬಗಳನ್ನು ಆಚರಿಸುವುದರ ಮೂಲಕ ಜನರಲ್ಲಿ ಸಂಘಟನಾ ಶಕ್ತಿ ಮತ್ತು ರಾಷ್ಟ್ರಪ್ರೇಮ ವೃದ್ಧಿಯಾಗುತ್ತಿತ್ತು. ಗಂಗಪ್ಪನವರು ಈ ಹಬ್ಬಗಳನ್ನು ಹುದಲಿಯ ಭಾಗದಲ್ಲಿ ಸಂಘಟಿಸಿ ಉತ್ಸಾಹದಿಂದ ಆಚರಿಸಲು ಕಾರಣರಾಗಿದ್ದಾರೆ. ರಾಷ್ಟ್ರೀಯ ಶಾಲೆಯ ಕೆಲಸವು ೧೯೩೧ ನೆಯ ಇಸ್ವೀಯವರೆಗೆ ನಡೆದು ನಂತರದಲ್ಲಿ ದಂಡಿಯಾತ್ರೆ ಉಪ್ಪಿನ ಸತ್ಯಾಗ್ರಹದ ಪರಿಣಾಮವಾಗಿ ನಿಂತುಹೋದವು.

ದಂಡಿಯಾತ್ರೆಯ ಕಾಯ್ದೆಭಂಗ ಚಳುವಳಿಯು ೦೫-೦೩-೧೯೩೧ ರಂದು ಗಾಂಧೀ ಈರ್ವಿನ್ ಒಪ್ಪಂದದ ಮೇರೆಗೆ ನಿಂತು ಹೋಯಿತು. ಇದರಿಂದ ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡಲಾಯಿತು. ಹುದಲಿಯ ಕಾರ್ಯಕರ್ತರು ತಮ್ಮ ನೆಲೆಗಳಿಗೆ ಮರಳಿದರು. ಆಗ ಜನರು ತಮಗೆ ಸ್ವರಾಜ್ಯ ಸಿಕ್ಕಿತೆಂದು ಭಾವಿಸಿದರು.

ಹುದಲಿ ಸ್ವಾತಂತ್ರ್ಯವೀರರು ಗ್ರಾಮದೇವತೆಯ ಜಾತ್ರೆಯನ್ನು ಸ್ವಾತಂತ್ರ್ಯ ಹೋರಾಟದ ಒಂದು ಭಾಗವಾಗಿ ಬಳಸಿಕೊಂಡಿದ್ದು ವಿಶೇಷ. ಆ ಮೂಲಕ ಅದು ಸ್ವಾತಂತ್ರ್ಯದ ಅರಿವು ಮೂಡಿಸುವ ಒಂದು ವೇದಿಕೆಯಾಗುತ್ತದೆ.

ದೇವಿಯ ರಥವು ಸಂಪ್ರದಾಯದಂತೆ ಇನಾಮದಾರ (ಮುಸಲ್ಮಾನ) ರ ಅಂಗಳದ ಬೈಲಿನಲ್ಲಿ ನಿಂತಿರುತ್ತದೆ. ಗ್ರಾಮದೇವತೆಯು ಅಲ್ಲಿಂದಲೆ ರಥಾರೂಢಳಾಗಿ ಹೊರಡುತ್ತಾಳೆ. ರಥವು ಬುಧವಾರ ಹೊರಟು ಗುರುವಾರ ಸಾಗುತ್ತಾ ಶುಕ್ರವಾರ ಮಧ್ಯಾಹ್ನ ಪಾದಗಟ್ಟೆ ಮುಟ್ಟುತ್ತದೆ. ಪಾದಗಟ್ಟೆಯು ಊರ ಹೊರಗೆ ಪೂರ್ವ ದಿಕ್ಕಿನಲ್ಲಿದೆ. ಎರಡನೆಯ ದಿನ ಊರದೇವತೆ ಹೊರಗೆ ಅಗಸಿ ಬಾಗಿಲಿಗೆ ಬಂದು ತಂಗುತ್ತಾಳೆ. ಕೊನೆಯ ದಿನ ಪಾದಗಟ್ಟೆಯನ್ನು (ಗದ್ದಿಗೆ) ಏರಿ ಆಸನ್ನಳಾಗುತ್ತಾಳೆ. ನಂತರ ನಾಲ್ಕು ದಿನ ಆಟ, ನೋಟ, ಕುಸ್ತಿಗಳು ನಡೆದು ಒಂಬತ್ತು ದಿನಕ್ಕೆ ಜಾತ್ರೆ ಮುಕ್ತಾಯವಾಗುತ್ತದೆ. ಬ್ರಿಟಿಷರು ಹೆದರಿಸಿದಂತೆ ಜಾತ್ರೆಯಲ್ಲಿ ಯಾವುದೇ ಅಹಿತಕರ ಘಟನೆ ಸಂಭವಿಸುವುದಿಲ್ಲ. ಯಾವುದೇ ರೋಗ ರುಜಿನ, ತೊಂದರೆ ಇಲ್ಲದೆ ಹುದಲಿಯ ಸ್ವರಾಜ್ಯಯಾತ್ರೆ ಸಾಂಗವಾಗಿ ನೆರವೇರಿತು. ಜಾತ್ರೆ ನಡೆಸುವುದರಿಂದ ಮಾರಿಬೇನೆ ಉಂಟಾಗುವುದೆಂದು ಹೆದರಿಕೆ ಹಾಕಿದ ಬ್ರಿಟಿಷರ ಯಾವ ಕುತಂತ್ರವೂ ಫಲಕಾರಿಯಾಗಲಿಲ್ಲ. ಸ್ವಾತಂತ್ರ್ಯ ಹೋರಾಟಗಾರರ ಹುದಲಿಯ ಸ್ವರಾಜ್ಯ ಯಾತ್ರೆ ಸಾಂಗವಾಗಿ ನೆರವೇರಿದುದು ಜನರಿಗೆ ಅತ್ಯಂತ ಸಂತೋಷವನ್ನುಂಟು ಮಾಡಿದುದಲ್ಲದೆ ಬ್ರಿಟಿಷರಿಗೆ ಒಂದು ರೀತಿಯ ಹಿನ್ನಡೆಯುಂಟಾಯಿತು.

ಊರಲ್ಲಿ ಜಾತ್ರೆ ನಡೆದಾಗ ದಿನ ನಿತ್ಯದ ಕಾರ್ಯವನ್ನು ವರದಿ ಮಾಡುವ ಕೆಲಸ ಊರಿನ ಪೋಲಿಸ ಪಾಟೀಲದಾಗಿತ್ತು. ಬಸನಗೌಡಾ ಪಾಟೀಲರು ವರದಿ ಮಾಡಿದರೋ ಇಲ್ಲವೋ ಎಂಬುದನ್ನು ದೇಶಪಾಂಡೆಯವರು ದಿನವೂ ಕೇಳುತ್ತಿದ್ದರು. ಜಾತ್ರೆಯ ನಂತರ ತಹಶೀಲದಾರ ಖಾಜೀಸಾಹೇಬರು ನೋಟೀಸ ಪಾಲಿಸದ ಹುದಲಿಯ ಜಾತ್ರಾ ಸಮಿತಿಯ ೩೩ ಜನರ ಮೇಲೆ ಖಟ್ಲೆ ಹಾಕಿದರು. ಕೋರ್ಟಿನಲ್ಲಿ ಕೇಸ್ ದಾಖಲಾಯಿತು. ವಿಚಾರಣೆಗೆ ಆರಂಭವಾಯಿತು. ಹುದಲಿಯವರಿಗೆ ಅನಂತರಾವ ಮಂಡಗಿಯವರು ವಕೀಲರಾಗಿದ್ದರು. ಹಿಂದೂ ಸಂಸ್ಕೃತಿಯ ಪ್ರಕಾರ ಸಾರ್ವಜನಿಕ ಉತ್ಸವ, ಜಾತ್ರೆಗಳನ್ನು ನಡೆಸಲು ಸರಕಾರದ ಒಪ್ಪಿಗೆ ಬೇಕಾಗಿರಲಿಲ್ಲ. ಅವರ ಒಪ್ಪಿಗೆ ಪಡೆಯದೆ ನಡೆಸಬಹುದೆಂದು ಕಾರ್ಯಕ್ರಮಗಳ ವರದಿಯಯನ್ನು ಬ್ರಿಟಿಷರಿಗೆ ತಿಳಿಸುತ್ತಿರಬೇಕೆಂಬ ಆಗಿನ ನಿಯಮದಂತೆ ಹುದಲಿಯವರು ನಡೆದುಕೊಂಡ ಪ್ರಕಾರ ಸಮಿತಿಯ ಎಲ್ಲರನ್ನು ನಿರ್ದೋಷಿಗಳೆಂದು ಬಿಡುಗಡೆ ಮಾಡಿದರು. ಹಾಗಾಗಿ ನಿಜವಾಗಿಯೂ ಜಾತ್ರೆ ಸ್ವರಾಜ್ಯ ಯಾತ್ರೆಯಾಗಿ ಹೆಸರುವಾಸಿಯಾಯಿತು.

ಗಾಂಧೀಜಿಯವರು ದುಂಡುಮೇಜಿನ ಪರಿಷತ್ತಿನಲ್ಲಿ ಭಾಗವಹಿಸಲು ಭಾರತದ ಪರವಾಗಿ ಲಂಡನ್ನಿಗೆ ೨೮-೧೨-೧೯೩೧ರಲ್ಲಿ ಹೋಗಿದ್ದರು. ಆದರೆ ಯಾವುದೇ ಫಲ ಕೈಗೂಡದೇ ಗಾಂಧೀಜಿಯವರು ಮರಳಿ ಭಾರತಕ್ಕೆ ಬರಬೇಕಾಯಿತು. ಬ್ರಿಟಿಷ ಸರಕಾರದ ಸುಗ್ರೀವಾಜ್ಞೆಯ ಮೇರೆಗೆ ೦೪-೦೧-೧೯೩೨ ರಂದು ಗಾಂಧೀಜಿಯವರನ್ನು ಬಂಧಿಸಿ ಯರವಡಾ ಜೈಲಿಗೆ ಹಾಕಿದರು. ದೇಶದ ಎಲ್ಲ ಕಾಂಗ್ರೆಸ್ ಕಮಿಟಿಗಳನ್ನು ಆಶ್ರಮಗಳನ್ನು, ರಾಷ್ಟ್ರೀಯ ಶಾಲೆಗಳನ್ನು, ರಾಷ್ಟ್ರೀಯ ಸಂಸ್ಥೆಗಳನ್ನು ಅಕ್ರಮ ಸಂಸ್ಥೆಗಳೆಂದು ಸಾರಿ ಸರಕಾರವು ತನ್ನ ವಶಕ್ಕೆ ತೆಗೆದುಕೊಂಡಿತು. ಸೇವಾದಳ,

ಬಾಗಲಕೋಟೆ ವ್ಯಾಯಾಮ ಶಾಲೆ, ಹುಬ್ಬಳ್ಳಿಯ ವಾಚನಾಲಯ, ಕರ್ಮವೀರ ವಾರಪತ್ರಿಕೆಯ ಕಾರ್ಯಾಲಯ, ಕುಮರಿ ಆಶ್ರಮ ಮೊದಲಾದವುಗಳನ್ನು ಜಪ್ತಮಾಡಿ ವಶಪಡಿಸಿಕೊಂಡಿತು.

ಆಗ ಆಶ್ರಮದ ಕಾರ್ಯಕರ್ತರಲ್ಲದೆ ಮತ್ತೆ ಅನೇಕ ತರುಣರನ್ನು ಸೇರಿಸಿಕೊಂಡು ಕಾರ್ಯಚಟುವಟಿಕೆಗಳನ್ನು ಮಾಡಲು ೧೪-೦೧-೧೯೩೬ ರಂದು (ಮಕರ ಸಂಕ್ರಾಂತಿಯಂದು) ಒಂದು ತರುಣ ಸಂಘವನ್ನು ಸ್ಥಾಪಿಸಿದರು.

ತರುಣ ಸಂಘಗಳು ವಿಧಾಯಕ ಕಾರ್ಯಗಳನ್ನು ಕೈಕೊಳ್ಳುವಲ್ಲಿ ಅತ್ಯಂತ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಇದಕ್ಕೆ ೧೯೩೭ ರಲ್ಲಿ ಜರುಗಿದ ಸಮ್ಮೇಲನ ಸಾಕ್ಷಿಯಾಗಿದೆ. ಹುದಲಿಯ ಇತಿಹಾಸದಲ್ಲಿ ಪ್ರಮುಖ ಘಟನೆಯಾಗಿ ಮೆರೆದದ್ದು ೧೯೩೭ ನೆಯ ಎಪ್ರಿಲ್ ೧೭ರಂದು. ಅದು ಗಾಂಧಿ ಸೇವಾ ಸಂಘ ಸಮ್ಮೇಲನ. ಈ ಸಮ್ಮೇಲನದ ಸಿದ್ಧತೆಯು ತಿಂಗಳ ಮೊದಲೇ ಆರಂಭವಾಗಿತ್ತು. ಸಮ್ಮೇಲನಕ್ಕೆ ಬರುವ ಸದಸ್ಯರಿಗಾಗಿ ಸಂಘವು ೧೦೦ ಕೋಣೆಗಳನ್ನು ನಿರ್ಮಿಸಿತು. ಇದಲ್ಲದೆ ಗಾಂಧೀಜಿಯವರಿಗಾಗಿ ಒಂದು ಕುಟೀರ ಮತ್ತು ಇವುಗಳ ನಡುವೆ ಸಭೆ ನಡೆಸಲು ಒಂದು ಮಂಟಪವನ್ನು ಸಿದ್ಧತೆ ಮಾಡುವಲ್ಲಿ ಸಹಕರಿಸಿದರು. ಎಪ್ರಿಲ್ ೧೭ರಂದು ಗಾಂಧೀಜಿಯವರು ಮುಂಜಾನೆ ಮೇಲ್ ಗಾಡಿಯಿಂದ ಸುಲದಾಳ ಸ್ಟೇಶನದ ಮೂಲಕ ಹುದಲಿಗೆ ಬಂದರು.

ಗಾಂಧೀಜಿಯವರ ಜೊತೆಗೆ ಸರದಾರ ವಲ್ಲಭಬಾಯಿ ಪಟೇಲ, ಗಡಿನಾಡ ಗಾಂಧಿಯೆನಿಸಿದ ಖಾನ ಅಬ್ದುಲ್ ಗಫಾರಖಾನ್, ಸಿ. ರಾಜಗೋಪಾಲಾಚಾರ್ಯ, ಬಾಬು ರಾಜೇಂದ್ರ ಪ್ರಸಾದ, (ಮಾಜಿ ರಾಷ್ಟ್ರಪತಿ) ಆಚಾರ್ಯ ಕೃಪಲಾನಿ, ವಿನೋಬಾ ಭಾವೆ, ಕಾಕಾ ಸಾಹೇಬ ಕಾಲೇಲಕರ, ಕಿಶೋರಲಾಲ ಮಶ್ರುವಾಲಾ, ಮಹಾದೇವಭಾಯಿ ದೇಸಾಯಿ, ಗೋಪ ಬಂಧು, ಚೌಧರಿ ಸ್ವಾಮಿ, ಆನಂದ ಅಪ್ಪಾಸಾಹೇಬ ಪಟವರ್ಧನ, ಜಮುನಾಲಾಲ್ ಬಜಾಜ, ಮೀರಾಬೆನ್, ಕಸ್ತೂರಿಬಾಯಿ, ಮಣಿಬೆನ್ ಪಟೇಲ, ಪ್ರೇಮಾಬಾಯಿ ಕಂಟಕ ಮೊದಲಾದ ದೇಶದ ನೇತಾರರೆಲ್ಲರೂ ಬಂದಿದ್ದರು. ಏಳು ದಿನದ ಈ ಸಮ್ಮೇಲನದಲ್ಲಿ ಮೊದಲನೆಯ ದಿನ ಗಾಂಧೀಜಿ ತಿರುಗಾಡಲು ಹೊರಟಿದ್ದರು. ಗಾಂಧೀಜಿಯವರು ಕುಟೀರಗಳ ಸಮೀಪದ ಗುಡ್ಡವನ್ನು ನೋಡಿ ಅತ್ತ ಹೊರಟರು. ಪಾದಗಟ್ಟಿ ನೋಡಿ 'ಈ ಗುಡ್ಡದ ಮೇಲೆ ಏನಿದೆ' ಎಂದು ಕೇಳುತ್ತಾರೆ. ಜೊತೆಗಿದ್ದ ಪುಂಡಲೀಕಜಿ ಕಾತಗಡೆಯವರು 'ದೇವರ ಗುಡಿ' ಇದೆ ಎಂದರು. ಆಗ ಗಾಂಧೀಜಿಯವರು ಕೂತೂಹಲದಿಂದ ದೇವರ ಹೆಸರೇನು? ಎಂದು ಕೇಳುತ್ತಾರೆ. 'ನನಗೆ ಗೊತ್ತಿಲ್ಲ'ವೆಂದು ಕಾತಗಡೆಯವರು ಮರು ಉತ್ತರ ನೀಡುತ್ತಾರೆ. ಅದಕ್ಕೆ ಪ್ರತಿಯಾಗಿ ಗಾಂಧೀಜಿಯವರು 'ಈ ಊರಲ್ಲಿ ಎಷ್ಟು ವರ್ಷಗಳಿಂದ ನೀನು ಕಾರ್ಯಕರ್ತನಾಗಿದ್ದೇ' ಎಂದು ಪ್ರಶ್ನಿಸುತ್ತಾರೆ. 'ಹದಿನೈದು ವರ್ಷಗಳಿಂದ' ಎಂದು ಉತ್ತರಿಸಿದಾಗ ಗಾಂಧೀಜಿ 'ಇಷ್ಟು ದಿವಸಗಳವರೆಗೆ ಇದ್ದ ನೀನು ಇಂಥ ವಿಷಯಗಳನ್ನು ಅರಿತುಕೊಳ್ಳಬೇಕಾಗಿತ್ತು' ಎನ್ನುತ್ತಾರೆ. ಗಾಂಧೀಜಿಯವರಿಗೆ ಯಾವುದೇ ಪ್ರದೇಶ, ಗುಡಿ ಗುಂಡಾರ, ಪರಿಸರ ಕುರಿತಾಗಿ

ಕುತೂಹಲವಿರುತ್ತಿತ್ತು. ಗಾಂಧೀಜಿಯವರ ಸಮೀಪದಲ್ಲಿದ್ದ ಯುವಕಮುಖಂಡ ಗಂಗಪ್ಪನವರು 'ಇದು ನಿರ್ವಾಣೇಶ್ವರ ಗುಡಿ' ಎಂದಾಗ, 'ಓ ಹಾಗೋ' ಎಂದು ಗಾಂಧೀಜಿ [illegible] ಮೆಟ್ಟಿಲುಗಳನ್ನು ಸರಸರನೆ ಏರಿ ದೇವರ ದರ್ಶನ ಪಡೆಯುತ್ತಾರೆ. ಗಾಂಧೀಜಿಯವರು ಹಿಂದೂ ದೇವಾಲಯಗಳಿಗೆ ಕೊಡುವ ಮರ್ಯಾದೆಯನ್ನು ಚರ್ಚುಗಳಿಗೂ, ಮಸೀದಿಗಳಿಗೂ ಕೊಡುತ್ತಿದ್ದರು. ಇದು ಗಾಂಧೀಜಿಯವರ ಸರ್ವಧರ್ಮ ಸಮನ್ವಯ ದೃಷ್ಟಿ ತಿಳಿಸಿಕೊಡುತ್ತದೆ.

ಸಮ್ಮೇಳನದ ಸಿದ್ಧತೆಯನ್ನು ಕಂಡು ಗಾಂಧೀಜಿಯವರಿಗೆ ಅಪಾರ ಸಂತೋಷವೆನಿಸಿತು. ಮರುದಿವಸ ಗಾಂಧೀಜಿಯವರ ಜೊತೆಗೆ ಎಲ್ಲ ಮುಖಂಡರು ಶ್ರಮದಾನಕ್ಕಾಗಿ ಹೊರಟರು. ಗಾಂಧೀಜಿಯವರು ನಿತ್ಯ ಶಾರೀರಿಕ ಶ್ರಮವನ್ನು ಮಾಡುತ್ತಿದ್ದರು. ಅಂದು ಆ ಊರಿನ ಆಂಜನೇಯ ದೇವಸ್ಥಾನದ ಎದುರಿಗೆ ಒಂದು ಭಾವಿ ಅಗಿಯುವುದಕ್ಕಾಗಿ ಗುದ್ಲಿ ಪೂಜೆ ಹಮ್ಮಿಕೊಳ್ಳಲಾಗಿತ್ತು. ಗಾಂಧೀಜಿಯವರ ಹಸ್ತದಿಂದ ನೆರವೇರಬೇಕೆಂದು ಮೊದಲೇ ನಿರ್ಧರಿಸಲಾಗಿತ್ತು.

ಗುರುತು ಹಾಕಿದ ಜಾಗೆಯಲ್ಲಿ ಐದು ಸಲ ಗುದ್ದಲಿಯಿಂದ ಗಾಂಧೀಜಿಯವರು ಅಗಿಯುತ್ತಾರೆ. ಇದಾದ ಮೇಲೆ ಜನರು ಹುಣಸೆಗಿಡ ಕಡಿಯಲು ತೊಡಗಿದರು. ಆಗ ಬಾಪೂಜಿ ಗಿಡ ಕಡಿಯುವದನ್ನು ತಡೆದರು. ಮರ ಅಲ್ಲಿಯೇ ಇರಲೆಂದು ಹೇಳುವುದರ ಮೂಲಕ ತಮ್ಮ ನಿಸರ್ಗ ಪ್ರೇಮವನ್ನು ವ್ಯಕ್ತಪಡಿಸುತ್ತಾರೆ.

ಗಾಂಧೀಜಿಯವರ ಶ್ರಮದಾನದ ಕಾರ್ಯಕರ್ತರ ಮೇಲೆ ಗಾಢವಾದ ಪ್ರಭಾವವನ್ನು ಬೀರಿತ್ತು. ಅವರು ಕಡ್ಡಾಯವಾಗಿ ಶ್ರಮದಾನ ಮಾಡುವುದನ್ನು ರೂಢಿಸಿಕೊಂಡರು. ಮೊದಲೆರಡು ದಿನ ಎಲ್ಲ ಮುಖಂಡರು ಶಾರೀರಿಕ ಶ್ರಮ ಮಾಡಿ ಊರಲ್ಲಿ ಇನಾಮದಾರರ ವಾಡೆಯೆದುರಿನ ತಗ್ಗನ್ನು ಮುಚ್ಚಿದರು. ಆಗ ಪ್ರೇಮಾಬಾಯಿ ಕಂಟಕರವರು ರಾಷ್ಟ್ರಗೀತೆಯನ್ನು ಹೇಳುತ್ತಿದ್ದರು. ಅವರು ಹೇಳಿದಂತೆ ಉಳಿದವರು ಸಾಮೂಹಿಕವಾಗಿ ಅನ್ನುತ್ತಿದ್ದರು. ಹೀಗೆ ರಾಷ್ಟ್ರಗೀತೆಯನ್ನು ಹೇಳುತ್ತಾ ಶ್ರಮದಾನವನ್ನು ಸಂತೋಷದಿಂದ ಅವರು ಕೈಕೊಳ್ಳುತ್ತಿದ್ದರು. ಮುಂದೆ ೨೧-೦೪-೧೯೩೭ ಮೂರನೆಯ ದಿನ ಯಥಾ ಪ್ರಕಾರ ಶ್ರಮದಾನದೊಂದಿಗೆ ಸಮ್ಮೇಳನ ಪ್ರಾರಂಭವಾಗಬೇಕಿತ್ತು. ಆದರೆ ರಾತ್ರಿ ಅಡ್ಡ ಮಳೆಯಾಗಿ ಮುಂಜಾನೆಯವರೆಗೆ ಸಮ್ಮೇಲನದ ಜನರು ತೊಯಿಸಿಕೊಂಡ ಕಾರಣ ಸಭೆಯನ್ನು ಕುಮರಿ ಆಶ್ರಮಕ್ಕೆ ಸ್ಥಳಾಂತರಿಸಬೇಕಾಯಿತು. ಸಮ್ಮೇಳನವು ನಾಲ್ಕನೆಯ ದಿನದಲ್ಲಿ ಪಾದಾರ್ಪಣೆ ಮಾಡಿತು.

ಕುಮರಿ ಆಶ್ರಮದಲ್ಲಿ ನಡೆದ ನಾಲ್ಕು ದಿನದ ಸಮ್ಮೇಲನದಲ್ಲಿ ಮಹತ್ವದ ಠರಾವು ಪಾಸಾಯಿತು. ಕಾಂಗ್ರೆಸ ಪಕ್ಷವು ಮುಂಬೈ ಪ್ರಾಂತದಲ್ಲಿ ಬಹುಮತ ಗಳಿಸಿ ಆರಿಸಿ ಬಂತು. ಇದರಿಂದ ಕಾಂಗ್ರೆಸ್ ಪಕ್ಷವು ಕೌನ್ಸಿಲ್‌ದಲ್ಲಿ ಸೇರಬೇಕೆಂಬ ಠರಾವು ಪಾಸಾಯಿತು. ಇದು ಅತ್ಯಂತ ಮಹತ್ವದ ಘಟನೆಯೆಂದೇ ಹೇಳಬೇಕು. ಇದರ ಮುಂದಿನ ಹಂತವೇ ಖೇರ ಮಂತ್ರಿಮಂಡಳ ರಚನೆ.

ಹುದಲಿ ಆಶ್ರಮದಲ್ಲಿ ಗಾಂಧೀಜಿಯವರ ಮುಖಂಡತ್ವದಲ್ಲಿ ನಡೆದ ಕಾರ್ಯಚಟುವಟಿಕೆಗಳು ಜನರನ್ನು ಆಕರ್ಷಿಸಿದವು. ಗಾಂಧೀಜಿಯವರು ಹಾಕಿಕೊಟ್ಟ ಶ್ರಮದಾನ, ಪ್ರಾರ್ಥನೆ, ದೇಶಪ್ರೇಮ ಕುರಿತು ಅವರ ಭಾಷಣಗಳು ನಾಡಿನ ಜನತೆಯ ಮೇಲೆ ಗಾಢವಾದ ಪ್ರಭಾವನ್ನು ಬೀರಿದವು. ಇದರಿಂದ ಬಾಪೂಜಿಯನ್ನು ನೋಡಲು ದೂರ ದೂರಿನ ಹಳ್ಳಿಯ ಜನ ಚಕ್ಕಡಿ ಕಟ್ಟಿಕೊಂಡು ಬರುತ್ತಿದ್ದರು. ಕೊನೆಯ ದಿನ ನಿರ್ವಾಣೇಶ್ವರ ಪಾದಗಟ್ಟೆಯ ಹತ್ತಿರ ದೊಡ್ಡ ಮಂಟಪ ಹಾಕಿ ಜಾಹೀರ ಸಭೆ ಮಾಡಲಾಯಿತು. ಆಗ ೨೦ ಸಾವಿರಕ್ಕೂ ಮಿಕ್ಕಿ ಜನರು ಕೂಡಿದ್ದರು. ಯಮಕನಮರ್ಡಿ ಗಂಗಪ್ಪನವರ ಚಿಕ್ಕಪ್ಪನಾದ ಬಸಪ್ಪ ಸಿದ್ದಪ್ಪ ಯಮಕನಮರ್ಡಿಯವರು ಊರ ಮಧ್ಯದ ಫರಸಿಯನ್ನು ನಾಲ್ಕು ತಿಂಗಳು ಸಂಬಳವಿಲ್ಲದೆ ದುಡಿದು ಮಾಡಿದ್ದುದನ್ನು ಗಂಗಾಧರ ದೇಶಪಾಂಡೆಯವರು ಗಾಂಧೀಜಿಯವರಿಗೆ ಪರಿಚಯಿಸಿಕೊಟ್ಟರು. ಈ ಸಂಗತಿಯನ್ನು ಅವರು ತಮ್ಮ ಭಾಷಣದಲ್ಲಿ ಈ ವಿಷಯವನ್ನು ಉದಾಹರಣೆ ಕೊಟ್ಟು ಹೇಳಿದ್ದರು. ನಂತರ ಹುದಲಿಯು 'ಗಾಂಧಿ ಗ್ರಾಮ'ವೆಂದು ಖ್ಯಾತಿ ಪಡೆಯಿತು.

ಬೆಳಗಾವಿ ತಾಲೂಕಿನ ಮತ್ತು ಕುಂದರನಾಡಿನ ಪ್ರದೇಶದಲ್ಲಿ ಸ್ವಾತಂತ್ರ್ಯದ ಚಳುವಳಿಯು ನಿರಂತರವಾಗಿ ಸಾಗಿ ಬಂದದ್ದು ಇತಿಹಾಸದಲ್ಲಿ ದಾಖಲಾಗಿದೆ. ಹಲವಾರು ಸ್ವಾತಂತ್ರ್ಯ ಹೋರಾಟಗಾರರು ದೇಶ ಸೇವೆಗಾಗಿ ತಮ್ಮ ಬದುಕನ್ನು ಮೀಸಲಾಗಿರಿಸಿದ್ದಾರೆ. ಕುಂದರನಾಡಿನ ಸ್ವಾತಂತ್ರ್ಯ ಹೋರಾಟಗಾರರ ಕುರಿತು ನಡೆದ ಅಧ್ಯಯನಗಳು ತೀರ ವಿರಳ. ಹುದಲಿಯ ನೂರಕ್ಕೂ ಹೆಚ್ಚು ಹೋರಾಟಗಾರರ ಬಗ್ಗೆ ತಲಸ್ಪರ್ಶಿ ಅಧ್ಯಯನಗಳು ನಡೆದೇ ಇಲ್ಲವೆಂದರೂ ತಪ್ಪಾಗದು. ಅದರಲ್ಲಿಯೂ ಹುದಲಿಯೊಂದನ್ನೇ ಕೇಂದ್ರವಾಗಿಟ್ಟುಕೊಂಡು ಅಧಯನ ಮಾಡುವ ಅಗತ್ಯವಿದೆ. ಇಲ್ಲಿ ಮನೆಗೊಬ್ಬ ಸ್ವಾತಂತ್ರ್ಯವೀರರು ಕಾಣಸಿಗುತ್ತಾರೆ. ಅವರ ವಿವರಗಳು ಸರೋಜನಿ ಚವಲಾರರ ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರ ಹಾಗೂ ಸೂರ್ಯನಾಥ ಕಾಮತರ ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಕೃತಿಯಲ್ಲಿ ಮಾತ್ರ ಸಿಗುತ್ತವೆ. ಆ ವಿವರಗಳನ್ನು ಗಮನಿಸಿ ಇಲ್ಲಿಯ ಸ್ವಾತಂತ್ರ್ಯ ಚಳುವಳಿಗಾರರ ಸಾಹಸವನ್ನು ನಿರೂಪಿಸಲಾಗಿದೆ. ಕುಂದರನಾಡಿನ ಹೋರಾಟಗಾರರ ಕುರಿತು ಲಭ್ಯವಿರುವ ಪೂರಕ ಸಾಮಗ್ರಿಗಳನ್ನು ಬಳಸಿಕೊಳ್ಳಲಾಗಿದೆ. ಇದರೊಂದಿಗೆ ಕ್ಷೇತ್ರ ಕಾರ್ಯದಲ್ಲಿ ಸಿಕ್ಕ ಮಾಹಿತಿಗಳನ್ನು ಜೋಡಿಸಲಾಗಿದೆ. ಪ್ರಸ್ತುತ ಪ್ರಬಂಧದಲ್ಲಿ ಹೋರಾಟ ಮಂಚೂಣಿಯ ನಾಯಕರನ್ನು ಮಾತ್ರ ಪ್ರಾತಿನಿಧಿಕವಾಗಿ ಪರಿಚಯಿಸಲಾಗಿದೆ.

೧) ಗಂಗಾಧರರಾವ ದೇಶಪಾಂಡೆ
೨) ಪುಂಡಲೀಕಜೀ ಕಾತಗಡೆ
೩) ರಾಮಚಂದ್ರ ವಡವಿ
೪) ಗಂಗಪ್ಪ ಯಮಕನಮರಡಿ
೫) ತಿಪ್ಪಣ್ಣ ಬೆಟಗೇರಿ
೬) ಚನ್ನಬಸಪ್ಪ ಮಾಳಗಿ
೭) ವಾಸುದೇವ ಗೋಸಾವಿ
೮) ಭವಾನಿಬಾಯಿ ಕಾನಗೋ
೯) ಗೌಡಪ್ಪ ಚನ್ನಬಸಪ್ಪ ಭದ್ರಕಾಳಿ
೧೦) ಮೋಹನ ಬಿ. ದೇಸಾಯಿ
೧೧) ಭೀಮಪ್ಪ ಯಲಿಗಾರ
೧೨) ಮಲ್ಲಪ್ಪ ರಾಮಪ್ಪ ಹೆಗ್ಗನಾಯಕ

೧೩) ವಾಸುದೇವ ನಾಗಪ್ಪ ಕಥಮ

೧೪) ವಸಂತ ಗೋಪಾಲ ದೇಶಪಾಂಡೆ

೧೫) ನಾರಾಯಣ ಬಂಡೋ ದೇಶಪಾಂಡೆ

೧೬) ಅಪ್ಪಣ್ಣ ಮರಲಿಂಗನವರ

೧೭) ಬಸವನಗೌಡ ಪಾಟೀಲ

೧೮) ಅಪ್ಪಣ್ಣ ಸಾತಪ್ಪ ಹೂಗಾರ

೧೯) ಮಲ್ಲಪ್ಪ ನಿಂಗಪ್ಪ ಗುಂಡ್ಲೂರ

೨೦) ಬಾಳಪ್ಪ ಭೀಮಪ್ಪ ಕಥಮ

೨೧) ಫಕೀರ ಬಸಲಿಂಗ ಬಲದವರ

೨೨) ರಾಮಪ್ಪ ಗಾಂವಕರ

೨೩) ಭರತ ಸತ್ಯಪ್ಪ ತೋಲಿ

೨೪) ನಾಗಪ್ಪ ಭೀಮಪ್ಪ ಹುಪರಿ

೨೫) ಲಕ್ಷ್ಮಣ ಸತ್ಯಪ್ಪ ತೋಲಿ

೨೬) ಯಮನಪ್ಪ ಬಾಳಪ್ಪ ಅಡಕಾಯಿ

೨೭) ಪುಂಡಲೀಕ ಭೀಮಪ್ಪ ಮುಸಲಿ

೨೮) ಸೋಮಲಿಂಗ ಅಪ್ಪಣ್ಣ ಮಳಗಲಿ

೨೯) ಗಣಪತಿ ಬಸಪ್ಪ ಉಪರಿ

೩೦) ಅಲಿಸಾಬ ವಾಡಿಮನಿ

೩೧) ಶಿವಲಿಂಗ ಬೊಡಕಿ

೩೨) ಬಾಸ್ಕರ ವಿಷ್ಣು ಕಾಳೆ

೩೩) ಹೀರಾಲಾಲ ರಜಪೂತ

೩೪) ರುದ್ರಗೌಡ ಪಾಟೀಲ

೩೫) ಅಡಿವೆಪ್ಪ ಅಂಗಡಿ

೩೬) ದೇವೆಂದ್ರ ಬಡಿಗೇರ

೩೭) ಶಿವರಾಜ ಗಾಣಗಿ

೩೮) ರಾಚಪ್ಪ ಅಂಗಡಿ

೩೯) ಇಂದಿಶೆಟ್ಟಿ ಬಾಗೇವಾಡಿ

೪೦) ಅಡಿವೆಪ್ಪ ವಸ್ತ್ರದ

೪೧) ನಾಗಪ್ಪ ಬಸರಕೋಳ

೪೨) ನಿಂಗಪ್ಪ ಬಾಸ್ಕರ ಕಮ್ಮಾರ

೪೩) ರಾಚಪ್ಪ ಜಮಖಂಡಿ

೪೪) ಚನ್ನಬಸಪ್ಪ ಗಾಣಗಿ

೪೫) ಚಂಬಪ್ಪ ಕುಂಬಾರ

೪೬) ದುಂಡಪ್ಪ ಅಂಗಡಿ

೪೭) ಮಾನಸಿಂಗ ರಜಪೂತ

೪೮) ಅಡಿವೇಪ್ಪ ಬಸರಕೋಲ

೪೯) ಶಿವಲಿಂಗಪ್ಪ ಬೊಡಕಿ

೫೦) ವೀರಭದ್ರಪ್ಪ ಶಾಸ್ತ್ರಿ

೫೧) ಕೇಶಪ್ಪ ಯಲಿಗಾರ

೫೨) ಬಸಪ್ಪ ಭೀ. ಇಟಗಿ

೫೩) ಕಲ್ಲಪ್ಪ ಹಂಚಿನಮನಿ

೫೪) ದಿಗಂಬರ ಎಸ್. ಕುಲಕರ್ಣಿ

೫೫) ಮಲ್ಲಪ್ಪ ಹಂಚಿನಮನಿ

೫೬) ಬಸಲಿಂಗಪ್ಪ ರೊಟ್ಟಿ

೫೭) ಧರೆಪ್ಪ ಬಸರಕೋಲ

೫೮) ಹೊಳೆಪ್ಪ ವಾಗರವಾಡಿ

೫೯) ಫಡಪ್ಪಾ ಸೋನಪ್ಪನವರ

೬೦) ಸಿದ್ರಾಯಪ್ಪ ಬಸರಕೋಲ

೬೧) ಮಲಗೌಡ ದೊಡ್ಡಗೌಡರ

೬೨) ಶಂಕರೆಪ್ಪ ಗಾಣಗಿ

೬೩) ಶಿವರಾಯಗೌಡ ದೊಡ್ಡಗೌಡರ

೬೪) ಬಸಗೌಡ ದೇಮಪ್ಪನವರ

೬೫) ಸೋಮಯ್ಯ ಅರಳಿಕಟ್ಟಿ

೬೬) ಪರಸಪ್ಪ ಕರಿಯತ್ತದವರ

೬೭) ಫಕೀರಪ್ಪ ಉಪ್ಪಾರ

೬೮) ಅಪ್ಪಯ್ಯ ತೋಟಗಿ

೬೯) ಈರಪ್ಪ ರೊಟ್ಟಿ

೭೦) ವೀರಪಾಕ್ಷಪ್ಪ ಓಂಕಾರಿ

೭೧) ರುದ್ರಪ್ಪ ನಾವಲಗಿ

೭೨) ರಾಯಪ್ಪ ಇಟಗಿ

೭೩) ಮಲ್ಲಪ್ಪ ಬಾವಿಮನಿ

೭೪) ಬಸಪ್ಪ ಸೋಮಪ್ಪನವರ

೭೫) ಬಸವನ್ನೆಪ್ಪ ತೊಟಗಿ
೭೬) ಬಸಪ್ಪ ಸಪ್ಪದಾಳ
೭೭) ಚನ್ನಬಸಪ್ಪ ಪಾಟೀಲ
೭೮) ಶಿವನಗೌಡ ಭೀ. ಪಾಟೀಲ
೭೯) ಬಾಬುಗೌಡ ಆರ್. ಪಾಟೀಲ
೮೦) ಶಿವಬಸಪ್ಪ ಜಕಾತಿ
೮೧) ಮಲ್ಲಪ್ಪ ಭೀ. ಪಾಟೀಲ
೮೨) ಗೌಡಪ್ಪ ಭೀ. ಪಾಟೀಲ
೮೩) ಅನ್ನಾಗೌಡ ಭೀ. ಪಾಟೀಲ
೮೪) ರಾಯಣಗೌಡ ಭೀ. ಪಾಟೀಲ
೮೫) ಯಲ್ಲಪ್ಪ ನಿಂಗಪ್ಪ ಜಾಬಗೌಡರ
೮೬) ಅಣ್ಣಬಸಪ್ಪ ಫ. ಮರಲಿಂಗಣ್ಣವರ
೮೭) ರಾಜಾರಾಮ ದೇಶಪಾಂಡೆ
೮೮) ಮಹಾಂತಪ್ಪ ಉದೋಶಿ
೮೯) ಗುಡುಸಾಹೇಬ ಮದಿಹಳ್ಳಿ
೯೦) ಶ್ಯಾಮಜಿ ವಿನಾಯಕ ಜೋಶಿ
೯೧) ವಾಮನರಾವ ಬೀದರಿ / ದೇಸಾಯಿ
೯೨) ಪದ್ಮಾವತಿ ಬೀದರಿ / ದೇಸಾಯಿ
೯೩) ರಾಮಚಂದ್ರ ಬಾಳಪ್ಪ ಬಡಿಗೇರ
೯೪) ಶಿವರಾಯಪ್ಪ ಭೀಮಪ್ಪ ಇಟ್ಟಣ್ಣವರ
೯೫) ಗಂಗಪ್ಪ ಮುದ್ದಪ್ಪ ಮಾಳಗಿ
೯೬) ಅಪ್ಪಾಜಿ ಕೃಷ್ಣಾಜಿ ದೇಸಾಯಿ
೯೭) ವಾಮನ ರುದ್ರೋ ದೇಶಪಾಂಡೆ
೯೮) ಡಾ. ರಾಮಚಂದ್ರ ದೇಶಪಾಂಡೆ
೯೯) ವಿಶ್ವಂಭರರಾವ ದೇಶಪಾಂಡೆ
೧೦೦) ಸದಾಶಿವ ಯಾಮಾಜಿ ದೇಶಪಾಂಡೆ
೧೦೧) ಬಾ. ಯ. ದೇಶಪಾಂಡೆ (ಅಣ್ಣೂ ಗೂರುಜಿ)
೧೦೨) ವಿನಾಯಕ ಜೋಶಿ
೧೦೩) ಡಾ. ನಾರಾಯಣ ಜೋಶಿ
೧೦೪) ಫಕ್ರುರುದ್ದೀನ ಅರಳಿಕಟ್ಟಿ
೧೦೫) ತಮ್ಮಣ್ಣಾ ಜಮಖಂಡಿ
೧೦೬) ಖಾದೀರ ಶೇಖ
೧೦೭) ಧಶರತ ಮೀರಾಜ
೧೦೮) ಜಂಬೂ ಬಂಡಾಳೆ
೧೦೯) ಬಸವಣ್ಣಪ್ಪ ಕೊಟ್ಟಗಿ
೧೧೦) ಬಸವಣ್ಣೆಪ್ಪ ಜಕ್ಕೆಣ್ಣವರ
೧೧೧) ಸಿದ್ದಪ್ಪ ಹೊಣಗೇಕರ
೧೧೨) ಅಪ್ಪಣ್ಣ ಹೂಗಾರ
೧೧೩) ಮೀನಾಕ್ಷಿ ಗಾಂವಕರ
೧೧೪) ರಾಮಪ್ಪ ಬನದವರ
೧೧೫) ರಾಮಪ್ಪ ಸೊಂಟಕ್ಕಿ
೧೧೬) ಬಸಪ್ಪ ಸೋನಪ್ಪನವರ
೧೧೭) ಸದಾಶಿವಪ್ಪ ಕುಡೋಳ್ಳಿ
೧೧೮) ಹುಚ್ಚಪ್ಪ ಹೋಳೆಯಾಚೆ
೧೧೯) ಮಲ್ಲಪ್ಪ ಹೆಗ್ಗನಾಯಕ
೧೨೦) ಭೀಮಪ್ಪ ನಿಂಗಪ್ಪ ಭೂಶಿ
೧೨೧) ಸಂಗಮ್ಮ ಯಮಕನಮರಡಿ
೧೨೨) ಯಲ್ಲಪ್ಪ ಕೃಷ್ಣಪ್ಪ ಲೋಕರೆ
೧೨೩) ಮಲ್ಲಪ್ಪ ಬಸವಂತಪ್ಪ ಕಿವಡಿ
೧೨೪) ಬಸಪ್ಪ ಭೀಮಪ್ಪ ಹಳ್ಳೂರ
೧೨೫) ಬಾಳಪ್ಪ ಭೀಮಪ್ಪ ಅಡಕಾಯಿ
೧೨೬) ಅಡಿವಯ್ಯ ನಮಸಯ್ಯ ಹಿರೇಮಠ
೧೨೭) ಬಸಪ್ಪ ಮಾಲಿಂಗಪ್ಪ ತೇಲಿ
೧೨೮) ಬಾಳಕೃಷ್ಣ ರಾಮಚಂದ್ರ ದೇಶಪಾಂಡೆ
೧೨೯) ರಾಮಪ್ಪ ಮಲ್ಲಪ್ಪ ಗವಣ್ಣವರ
೧೩೦) ಪಕೀರ ಬಸಲಿಂಗಪ್ಪ ಬನದವರ
೧೩೧) ಗೋಪಾಲ ಶಿವರುದ್ರ ಸುಂಬಳಿ
೧೩೨) ಅಲಿಸಾಬ ಹುಸೇನಸಾಬ ವಾರಿಮನಿ

**ಗಂಗಾಧರರಾವ್ ದೇಶಪಾಂಡೆ :**

ಗಂಗಾಧರರಾವ ದೇಶಪಾಂಡೆ ತಮ್ಮ ಬದುಕಿನುದ್ದಕ್ಕೂ ದೇಶಸೇವೆಯನ್ನು ಮಾಡಿ ಸಾರ್ಥಕತೆಯನ್ನು ಪಡೆದಿದ್ದಾರೆ. 'ಸ್ವರಾಜ್ಯವೇ ನಮ್ಮ ಜನ್ಮ ಸಿದ್ಧ ಹಕ್ಕು' ಎಂದು ಸಾರಿದ ಲೋಕಮಾನ್ಯ ತಿಳಕರ ಶಿಷ್ಯರಾಗಿ ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳಲ್ಲಿ ಕೆಲಸ ಮಾಡಿದ್ದಾರೆ. ಗಂಗಾಧರರಾವ್ ದೇಶಪಾಂಡೆಯವರನ್ನು ಕುರಿತು ರಾಷ್ಟ್ರಪತಿ ಡಾ. ರಾಜೇಂದ್ರ ಪ್ರಸಾದ ಅವರು 'ಅತ್ತ ಕಡೆಗೆ ಹೋದಾಗ ನಾನು ಅವಶ್ಯವಾಗಿ ಅವರನ್ನು ಭೆಟ್ಟಿಯಾಗಿ ಬರುತ್ತೇನೆ. ನನಗಂತೂ ಆನಂದದ ಜೊತೆಗೆ ಲಾಭವೂ ಆಗುತ್ತದೆ. ಇಂತಹ ಹಿರಿಯರ ಆಶೀರ್ವಾದ ಹಾಗೂ ಸದ್ಭಾವನೆಗಳು ದೊರೆಯುತ್ತವೆ. ಹಿಂದಿನ ಸ್ಮೃತಿಯಿಂದ ಹೊಸ ಪ್ರೇರಣೆಯೂ ಉಂಟಾಗುತ್ತದೆ' ಎಂದಿದ್ದಾರೆ. ಅವರು ಗಂಗಾಧರರಾವ್ ದೇಶಪಾಂಡೆಯವರ ಬಗ್ಗೆ ಮಾತನಾಡಿದ್ದು ಅವರ ಉನ್ನತ ವ್ಯಕ್ತಿತ್ವಕ್ಕೆ ಸಾಕ್ಷಿಯಾಗುತ್ತದೆ. ರಾಜೇಂದ್ರ ಪ್ರಸಾದರಂತಹ ಮಹಾನ್ ವ್ಯಕ್ತಿಗಳಿಗೆ ರಾಷ್ಟ್ರ ಸೇವೆ ಮಾಡುವಲ್ಲಿ ಪ್ರೇರಣೆಯನ್ನು ಒದಗಿಸಿದವರು ಗಂಗಾಧರರಾವ್ ದೇಶಪಾಂಡೆಯವರು.

ಗಂಗಾಧರರಾವ್ ದೇಶಪಾಂಡೆ ಬೆಳಗಾವ್ ಜಿಲ್ಲೆ ಹುದಲಿ ಗ್ರಾಮದವರು. ಇವರ ತಂದೆಯ ಹೆಸರು ಬಾಳಕೃಷ್ಣರಾಯರು. ತಾಯಿ ರಾಧಾಬಾಯಿ. ಇವರು ೩೧-೦೩-೧೮೭೧ ರಲ್ಲಿ ಜನಿಸಿದರು. ತಮ್ಮ ಸ್ವಗ್ರಾಮದಲ್ಲಿ ವಿದ್ಯಾಭ್ಯಾಸವನ್ನು ಪ್ರಾರಂಭಿಸಿ ಬೆಳಗಾವಿಯಲ್ಲಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ಮುಗಿಸಿದರು. ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ಅಧ್ಯಯನ ಮಾಡಿ ಬಿ.ಎ. ಪದವಿಯನ್ನು ಸಂಪಾದಿಸಿದರು. ಮುಂದೆ ಮುಂಬೈಯಲ್ಲಿ ಎಲ್.ಎಲ್.ಬಿ. ಪರೀಕ್ಷೆಯನ್ನು ಪಾಸ ಮಾಡಿ ವಕೀಲಿ ವೃತ್ತಿಯನ್ನು ಆರಂಭಿಸಿದರು. ಬೆಳಗಾವಿಯಲ್ಲಿ ದೇಶಪಾಂಡೆಯವರು ಅತ್ಯಂತ ಸುಪ್ರಸಿದ್ಧ ವಕೀಲರೆಂದೇ ಖ್ಯಾತರಾಗಿದ್ದರು. ೧೮೯೭ ರಿಂದ ೧೯೦೫ ರವರೆಗೆ ಬೆಳಗಾವಿ ನಗರ ಸಭೆಯ ಉಪಾಧ್ಯಕ್ಷರಾಗಿ ಸಾರ್ವಜನಿಕ ಜೀವನದಲ್ಲಿ ಪಾದಾರ್ಪಣೆ ಮಾಡಿದರು.

"ತಂದೆಯವರಾದ ಭಾವು ಸಾಹೇಬರಿಗೆ ಸ್ವಾಭಾವಿಕವಾಗಿಯೇ ತಮ್ಮ ಮಗ ಬೆಳಗಾವಿಯಲ್ಲಿ ದೊಡ್ಡ ವಕೀಲನಾಗಬೇಕೆಂಬ ಹಂಬಲವಿತ್ತು. ಆದರೆ ಗಂಗಾಧರ ರಾಯರು ವೈಯಕ್ತಿಕ ಲಾಭದ ಕಡೆಗೆ ಗಮನಕೊಡದೆ ದೇಶದ ವಕೀಲಿಯನ್ನೇ ನಡೆಸಿದರು. ಧಾರವಾಡ, ವಿಜಾಪೂರಗಳಿಗೂ ಹೋಗಿ ಮಿತ್ರರನ್ನು ಕಲೆಹಾಕಿ ಲೋಕಮಾನ್ಯರ ಅನುಯಾಯಿಗಳಾದರು. ಭಾವೂಸಾಹೇಬರು ಪುಣೆಗೆ ಹೋಗಿ ಲೋಕಮಾನ್ಯರನ್ನು ಕಂಡು ಅವರಿಗೆ ಕೈಮುಗಿದು ಕೇಳಿದರು. 'ಲೋಕಮಾನ್ಯರೇ, ನೀವು ಮಾಡುತ್ತಿರುವ ಕಾರ್ಯ ನಿಸ್ಸಂಶಯವಾಗಿ ದೊಡ್ಡದು. ದೇಶಕ್ಕೆ ಸ್ವರಾಜ್ಯ ಬರಬೇಕೆಂದು ನೀವು ಪ್ರಯತ್ನಿಸುತ್ತಿರುವಿರಿ. ಇದು ಸರಿಯೇ. ಆದರೆ ನನ್ನ ಮಗನನ್ನು ನಿಮ್ಮೊಂದಿಗೆ ಎಳೆಯ ಬೇಡಿರಿ. ನನಗೆ ಇವನೊಬ್ಬನೇ ಮಗ. ಮೇಲಾಗಿ ನಮ್ಮ ಮನೆತನವು ಶ್ರೀಮಂತಿಕೆಯದು. ಶ್ರೀಮಂತರ ಒಬ್ಬನೇ ಒಬ್ಬ ಮಗ ಎಲ್.ಎಲ್.ಬಿ. ಪಾಸು ಆಗಿರುವಾಗ ಅವನನ್ನೇಕೆ ನಿಮ್ಮಡನೆ ಎಳೆಯುತ್ತೀರಿ? ಬೇಕಾದಷ್ಟು ದಡ್ಡ ಹುಡುಗರೂ, ಬಡವರ ಹುಡುಗರೂ ಇರುವಾಗ ಅವರನ್ನು ಬಿಟ್ಟು ನನ್ನ ಮಗನ

ಮೇಲೆಯೇ ಏಕೆ ನಿಮ್ಮ ಕಣ್ಣು?' ಆಗ ತಟ್ಟನೆ ಲೋಕಮಾನ್ಯರು – 'ಭಾವುಸಾಹೇಬರೇ, ಬಡವರಿಗೆ ತಮ್ಮ ಹೊಟ್ಟೆ ತುಂಬಿಕೊಳ್ಳಲು ದುಡ್ಡಿನ ಸಂಪಾದನೆಗಾಗಿ ಉದ್ಯೋಗ ಮಾಡಬೇಕಾಗುವುದು. ನೀವು ಹೇಗೂ ಸುದೈವಿಗಳು, ಮನೆಯಿಂದ ಸ್ಥಿತಿವಂತಿರಿದ್ದೀರಿ. ಅಲ್ಲದೆ ನನ್ನ ಕೆಲಸದಲ್ಲಿ ದಡ್ಡರಿಗೆ ಸ್ಥಾನವಿಲ್ಲ. ಎಲ್ಲ ಅನುಕೂಲತೆ ಇದ್ದ ನೀವೇ ಹೀಗೆ ಅಂರೆ ಬಡವರು ತಮ್ಮ ಮಕ್ಕಳನ್ನು ಹೇಗೆ ಚಳುವಳಿಗೆ ಕೊಡಬಲ್ಲರು?' ಎಂದು ಮರುಪ್ರಶ್ನೆಯನ್ನು ಹಾಕಿದರು. ಭಾವುಸಾಹೇಬರು ನಿರುತ್ತರರಾಗಿ 'ಆಗಲಿ, ತಿಲಕ ಮಹಾರಾಯರೇ, ಇಂದಿನಿಂದ ನನ್ನ ಮಗನನ್ನು ದೇಶಕ್ಕಾಗಿ ನಿಮ್ಮ ಕಡೆಗೆ ಅರ್ಪಿಸಿದ್ದೇನೆ' ಎಂದು ಹೇಳಿ ಬಂದರು"[೨].

ದೇಶಪಾಂಡೆಯವರು ವೃತ್ತಿಯಿಂದ ವಕೀಲರಾದರೂ, ಪ್ರವೃತ್ತಿಯಿಂದ ಇವರೊಬ್ಬ ಒಳ್ಳೆಯ ಪತ್ರಕರ್ತರು. ರಾಷ್ಟ್ರಮತ ಎಂಬ ಪತ್ರಿಕೆಯನ್ನು ಮುಂಬೈಯಲ್ಲಿ ಹೊರಡಿಸಿದರು. ಗಂಗಾಧರರಾಯರಲ್ಲಿ ಅಪಾರವಾದ ಧೈರ್ಯವಿತ್ತು. ಅವರು ಕೊಲ್ಲಾಪುರದ ಸಂಸ್ಥಾನಾಧಿಪತಿಯಾದ ಶಾಹೂ ಮಹಾರಾಜರ ಕಾರಸ್ಥಾನಗಳಿಗೆ ಎದೆಕೊಟ್ಟು ಹೋರಾಡಿ ವಿಜಯಶಾಲಿಗಳಾಗಿದ್ದರು. ಗಂಗಾಧರರಾಯರ ಧೈರ್ಯ ಮತ್ತು ದೂರದೃಷ್ಟಿಯನ್ನು ಕಂಡು ಜನ ಇವರೊಬ್ಬ ಶ್ರೇಷ್ಠ ನಾಯಕನೆಂದು ಗುರುತಿಸಿದರು. ೧೯೧೬ ರಲ್ಲಿ ಮುಂಬೈ ಇಲಾಖೆಯ ರಾಜಕೀಯ ಪರಿಷತ್ತನ್ನು ಸಂಘಟಿಸಿ ಯಶಸ್ವಿಯಾದರು.

ಗಂಗಾಧರರಾಯರಿಗೆ ರಾಷ್ಟ್ರೀಯ ಮುಖಂಡರ ನಿಕಟ ಪರಿಚಯವಿತ್ತು. ಶ್ರೀ ಅಗರಕರ್, ಶ್ರೀ ಗೋಖಲೆ, ಡಾ॥ ಭಂಡಾರಕರ್ ಅವರಿಂದ ಪ್ರಭಾವಿತರಾಗಿದ್ದರು. ಗಂಗಾಧರರಾಯರ ಇಂಗಿತವನ್ನರಿತ ಗೋಖಲೆಯವರು ರಾಯರನ್ನು ಲೋಕಮಾನ್ಯ ಟಿಳಕರ ಕಡೆ ಕಳಿಸುತ್ತಾರೆ. ಟಿಳಕರು ಗಂಗಾಧರರಾಯರಲ್ಲಿರುವ ರಾಜಕಾರಣದಲ್ಲಿರುವ ಒಲವನ್ನು ಅರಿತು ಕರ್ನಾಟಕದಲ್ಲಿ ರಾಷ್ಟ್ರೀಯ ಚಳುವಳಿಯನ್ನು ಸಂಘಟಿಸಲು ಆದೇಶ ಕೊಡುತ್ತಾರೆ. ಲೋಕಮಾನ್ಯರ ನಿಷ್ಠಾವಂತ ಅನುಯಾಯಿಯಾಗಿ ಕೆಲಸ ಮಾಡಿದರು. ಬೆಳಗಾವಿಯ ರಾಷ್ಟ್ರೀಯ ಚಳುವಳಿಯ ಧುರೀಣತ್ವವನ್ನು ವಹಿಸಿಕೊಂಡರು. ಗಂಗಾಧರರಾಯಯ ಪ್ರಭಾವಶಾಲಿ ಮುಖಂಡತ್ವವನ್ನು ಕಂಡು ಮಹಾರಾಷ್ಟ್ರದವರು ರಾಯರಿಗೆ 'ಕರ್ನಾಟಕದ ತಿಳಕ'ರಂದು ಕರೆಯುತ್ತಿದ್ದರು. ಸ್ವರಾಜ್ಯ ಎಂಬ ಶಬ್ಧವನ್ನು ಉಚ್ಚರಿಸಲು ಜನ ಹೆದರುತ್ತಿದ್ದ ಕಾಲದಲ್ಲಿ ಗಂಗಾಧರರಾಯರು ಸ್ವರಾಜ್ಯ ಧುರೀಣತ್ವವನ್ನು ವಹಿಸಿಕೊಂಡಿದ್ದರು. ಗಂಗಾಧರರಾಯರನ್ನು ತಿಲಕರು ೧೯೨೦ ರಲ್ಲಿ ಮುಂಬಯಿ ಶಾಸನ ಸಭೆಗೆ ಉಮೇದುವಾರರೆಂದು ನಾಮಕರಣ ಮಾಡಿದರು.

ಭಾರತದಲ್ಲಿ ಟಿಳಕರ ತರುವಾಯ ಗಾಂಧೀಯುಗ ಪ್ರಾರಂಭವಾಯಿತು. ಗಾಂಧೀಜಿಯವರ ಪ್ರಭಾವಕ್ಕೆ ಒಳಗಾದ ಗಂಗಾಧರರಾಯರು ಗಾಂಧೀಜಿಯವರ ಅನುಯಾಯಿಗಳಾದರು. ಗಂಗಾಧರರಾಯರ ವಿಶೇಷ ಗುಣವೆಂದರೆ ಅದ್ಭುತವಾದ ಸಂಘಟನಾ ಶಕ್ತಿ. ಅದಕ್ಕೆ ಉದಾಹರಣೆಯೆಂದರೆ ರಾಷ್ಟ್ರೀಯ ಇಬ್ಬರು ಮಹಾ ನಾಯಕರಾದ ಟಿಳಕ ಹಾಗೂ ಗಾಂಧಿಯವರನ್ನು

ಭೆಟ್ಟಿ ಮಾಡಿಸಿದ್ದು ಗಂಗಾಧರರಾಯರು. ೧೯೧೬ ರಲ್ಲಿ ಬೆಳಗಾವಿಯಲ್ಲಿ ಏರ್ಪಡಿಸಿದ್ದ ಪ್ರಾಂತೀಯ ಪರಿಷತ್ತಿಗೆ ತಿಲಕರನ್ನು ಆಮಂತ್ರಿಸಲಾಗಿತ್ತು. ಆ ಸಂದರ್ಭದಲ್ಲಿ ಅದೇ ಸಮಾರಂಭಕ್ಕೆ ಗಾಂಧೀಜಿ ಅವರಿಗೂ ಆಮಂತ್ರಣ ಕೊಡಲಾಗಿತ್ತು. ಕಾಂಗ್ರೆಸನಲ್ಲಿ ಎರಡು ಪ್ರಭಲವಾದ ಬಣಗಳು ನಿರ್ಮಾಣವಾಗಿದ್ದವು. ತಿಳಕರ ಮುಖಂಡತ್ವದಲ್ಲಿ ತೀವ್ರಗಾಮಿ ಮತ್ತು ಗಾಂಧಿ ಅವರ ಮುಖಂಡತ್ವದಲ್ಲಿ ಮಂದಗಾಮಿ. ಮಂದಗಾಮಿಗಳು ಗಾಂಧೀಜಿಯವರಿಗೆ ಈ ಪರಿಷತ್ತಿನ ಸಮಾವೇಶಕ್ಕೆ ತಾವು ಹೋಗಬಾರದೆಂದು ತಿಳಿಸಿದ್ದರು. ಆದರೆ ಗಂಗಾಧರರಾವ್ ದೇಶಪಾಂಡೆ ಅವರ ಮೂಲಕ ಸಭೆಯಲ್ಲಿ ಏನೇನು ನಡೆಯುವುದೆಂಬುದನ್ನು ತಿಳಿದುಕೊಳ್ಳಲು ಗಾಂಧೀಜಿಯವರು ಆ ಪರಿಷತ್ತಿಗೆ ಹೋಗಲು ನಿರ್ಣಯಿಸುತ್ತಾರೆ. ಇದಲ್ಲದೇ ಮರಣ ಮಾತ್ರ ಈ ಪರಷತ್ತಿಗೆ ಬಾರದಂತೆ ನನ್ನನ್ನು ತಡೆಯಬಹುದು ಎಂದು ಗಾಂಧೀಜಿ ಅವರು ತಮ್ಮ ಅನುಯಾಯಿಗಳಿಗೆ ತಿಳಿಸಿದರು. ಈ ಪರಿಷತ್ತಿನಲ್ಲಿ ಗಾಂಧೀಜಿ ಹಾಗೂ ತಿಳಕರು ಪ್ರಥಮ ಸಲ ಭೆಟ್ಟಿಯಾದರು. ಪರಸ್ಪರ ಭೆಟ್ಟಿಯ ನಂತರ ಗಂಗಾಧರರಾಯರನ್ನು ಕುರಿತು ತಿಲಕರು 'ಈತನೊಬ್ಬ ಮಾಣಿಕ್ಯ' ಎಂದು ಉದ್ಗಾರ ತೆಗೆದರು. ತಿಳಕರ ಬಾಯಿಂದ ಇಂತಹ ಹೆಮ್ಮೆಯ ಮಾತುಗಳು ಬಂದದ್ದು ಗಂಗಾಧರರಾಯರ ವ್ಯಕ್ತಿತ್ವಕ್ಕೆ ಸಾಕ್ಷಿಯಾಗುತ್ತದೆ.

ಗಂಗಾಧರರಾಯರು ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳಲ್ಲಿ ಸಂಚರಿಸಿ ಅಸಹಕಾರ ಆಂದೋಲನದ ಸಂದೇಶವನ್ನು ಹಳ್ಳಿಗಳಲ್ಲಿ ಪ್ರಚಾರ ಮಾಡಿದರು. ಇವರೊಬ್ಬ ಅತ್ಯಂತ ಪ್ರಭಾವೀ ಭಾಷಣಕಾರರಾಗಿದ್ದರು. ಇವರ ಮಾತೃಭಾಷೆ ಮರಾಠಿಯಾಗಿತ್ತು. ಮುಂದೆ ಕನ್ನಡವನ್ನು ಕಲಿತು ಕನ್ನಡದಲ್ಲಿಯೂ ಅಸ್ಖಲಿತವಾಗಿ ಮಾತನಾಡುವ ಕಲೆಗಾರಿಕೆಯನ್ನು ಬೆಳೆಸಿಕೊಂಡರು. ೧೯೨೪ ರಲ್ಲಿ ಬೆಳಗಾವಿ ಅಧಿವೇಶನ ರೂಪುಗೊಳ್ಳಬೇಕಾದರೆ ಅದರ ಹಿಂದಿನ ಶಕ್ತಿ ಗಂಗಾಧರರಾವ್ ದೇಶಪಾಂಡೆ. ಭಾರತದ ಕಾಂಗ್ರೆಸ ಅಧಿವೇಶನದ ಸ್ವಾಗತಾಧ್ಯಕ್ಷರಾಗಿ ಗಂಗಾಧರರಾಯರು ಪಟ್ಟ ಶ್ರಮ ಅಪಾರವಾದುದು. ಸ್ವತಃ ಕುದುರೆಯನ್ನು ಏರಿಕೊಂಡು ಅಧಿವೇಶನದ ಎಲ್ಲ ತಯಾರಿಯನ್ನು ದಿನನಿತ್ಯ ನೋಡಿಕೊಳ್ಳುತ್ತಿದ್ದರು.

"೧೯೨೧, ೧೯೩೦, ೧೯೩೨, ೧೯೩೬ ಹಾಗೂ ೧೯೪೨ ರಲ್ಲಿ – ಹೀಗೆ ಐದು ಸಲ ಜೈಲು ಸೇರಿ, ದೇಶಕ್ಕಾಗಿ ಶಿಕ್ಷೆ ಅನುಭವಿಸಿದರು. ದೇಶ ಸ್ವತಂತ್ರವಾಯಿತು. ತಮ್ಮ ಇಡೀ ಜೀವನವನ್ನೇ ಚಂದನದಂತೆ ದೇಶಕ್ಕಾಗಿ ಸವಿಸಿದರೂ ಮಂತ್ರಿಮಂಡಲಗಳನ್ನು ನಾಮಕರಣ ಮಾಡಿದ್ದರಲ್ಲದೆ ಅವರು ಸ್ವತಃ ಎಂದೂ ಮಂತ್ರಿಯಾಗದೆ ಅಪೇಕ್ಷೆ ಮಾಡಲಿಲ್ಲ. ಅಸೆಂಬ್ಲಿ, ಪಾರ್ಲಿಮೆಂಟ್ ಚುನಾವಣೆಗೆ ನಿಲ್ಲಲಿಲ್ಲ. ಬೆಳಗಾವಿ ಜಿಲ್ಲಾ ಕಾಂಗ್ರೆಸ್ ಕಮಿಟಿ, ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿ, ಅಖಿಲ ಭಾರತ ಕಾಂಗ್ರೆಸ್ ಕಮಿಟಿಗಳಿಗೆ ಅಧ್ಯಕ್ಷರಾಗಿ ಕೆಲಸ ಮಾಡಿದ್ದರಲ್ಲದೆ ಮಂತ್ರಿಮಂಡಲ ಸೇರಲಿಲ್ಲ. ಕೌನ್ಸಿಲ್ ಪ್ರವೇಶ ಮಾಡಲಿಲ್ಲ"[೨]. ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಆರ್. ಎಚ್. ಕುಲಕರ್ಣಿಯವರು ಗಂಗಾಧರರಾವ ಅವರ ಬಗ್ಗೆ ಹೇಳುವ ಈ ಮಾತುಗಳು ನಿಜಕ್ಕೂ ಉಲ್ಲೇಖನೀಯವಾಗಿದೆ'. "ಗಂಗಾಧರರಾವ ದೇಶಪಾಂಡೆ ಅಪಾರ ಶಕ್ತಿ ಮತ್ತು ಕರ್ತವ್ಯದ ಭಕ್ತಿ ಹೊಂದಿರುವ ಉಗ್ರ

ಭಾಷಣಕಾರರಾಗಿದ್ದರು. ಗಂಗಾಧರರಾವ ದೇಶಪಾಂಡೆ ಕರ್ನಾಟಕದ ಎಲ್ಲಾ ಚಳುವಳಿಗಳ ಒಂದೆ ವಿಶೇಷವಾಗಿ ಬೆಳಗಮ್ ಜಿಲ್ಲೆಯ ಚೈತನ್ಯರಾಗಿದ್ದರು"[೩].

ಸಾಬರಮತಿಯಲ್ಲಿ ಗಾಂಧೀಜಿಯವರ ಆಶ್ರಮವನ್ನು ಸ್ಥಾಪಿಸಿದಂತೆ ಹುದಲಿಯಲ್ಲಿ ಕುಮರಿ ಆಶ್ರಮವನ್ನು ಇವರು ಸ್ಥಾಪಿಸಿದರು. ಅದಕ್ಕಾಗಿ ಹನ್ನೆರಡು ಎಕರೆ ಸ್ವಂತ ಜಮೀನನ್ನು ಧಾನವಾಗಿಕೊಟ್ಟು ಆಶ್ರಮದ ಬೇಕು ಬೇಡಿಕೆಗಳನ್ನೆಲ್ಲಾ ಈಡೇರಿಸುತ್ತಿದ್ದರು. ರಾಮಚಂದ್ರ ವಡವಿ, ಪುಂಡಲೀಕಜಿ ಕಾತಗಡೆ, ಇವರಂತ ನಿಷ್ಠಾವಂತ ಸ್ವಾತಂತ್ರ್ಯ ಸೇನಾನಿಗಳನ್ನು ನಾಡಿಗೆ ಕೊಟ್ಟದ್ದು ಗಂಗಾಧರರಾವ್ ದೇಶಪಾಂಡೆಯವರು. ಹುದಲಿಯಲ್ಲಿ ಖಾದಿ ಗ್ರಾಮೋದ್ಯೋಗ ಸಂಘವನ್ನು ಸ್ಥಾಪಿಸಿ, ಹಳ್ಳಿಯ ಜನರಿಗೆ ಉದ್ಯೋಗವನ್ನು ಒದಗಿಸಿ ಕೊಟ್ಟರಲ್ಲದೇ ಅವರು ಸ್ವಾವಲಂಭಿಯಾಗಿ ಬದುಕುವಂತೆ ದಾರಿ ತೋರಿದ್ದಾರೆ.

ಅವರು ೧೯೬೦ ಜುಲೈ ೩೦ ರಂದು ಬೆಳಗಾವಿಯಲ್ಲಿ ನಿಧನರಾದಾಗ ರಾಷ್ಟ್ರವೇ ಕಂಬನಿಮಿಡಿಯಿತು. ಸಂಯುಕ್ತ ಕರ್ನಾಟಕ ದಿನಪತ್ರಿಕೆಯು ತನ್ನ ಸಂಪಾದಕೀಯದಲ್ಲಿ ತೀವ್ರ ಕಳಕಳಿ ವ್ಯಕ್ತಪಡಿಸಿತು. "೧೯ ಮತ್ತು ೨೦ನೇ ಶತಮಾನದಲ್ಲಿ ರಾಷ್ಟ್ರಭಕ್ತಿ ಮತ್ತು ಸ್ವಾತಂತ್ರ್ಯ ಹೋರಾಟಗಳಿಗೆ ಪ್ರತಿನಿಧಿಯಾಗಿದ್ದ ಗಂಗಾಧರರಾಯರು ತಮ್ಮ ರಚನಾತ್ಮಕ ಕಾರ್ಯಗಳ ಮೂಲಕ ಇಡೀ ಭಾರತೀಯರ ಮನದಲ್ಲಿ ಭದ್ರವಾದ ಸ್ಥಾನವನ್ನು ಪಡೆದಿದ್ದಾರೆ. ೧೯೧೬ ರಲ್ಲಿ ಲೋಕಮಾನ್ಯ ಟಿಳಕರನ್ನು ಮರಳಿ ಕಾಂಗ್ರೆಸ್‌ಗೆ ಕರೆದುಕೊಂಡು ಬರುವ ಮೂಲಕ ಅವರೊಂದು ಐತಿಹಾಸಿಕ ಮಹತ್ವದ ಕಾರ್ಯ ಮಾಡಿದ್ದಾರೆ. ಹೀಗಾಗಿಯೇ ಗಾಂಧೀಜಿಯವರು ಕೂಡ ಗಂಗಾಧರರಾಯರ ವ್ಯಕ್ತಿತ್ವದ ಹಿರಿಮೆಯನ್ನು ಬಹುವಾಗಿ ಕೊಂಡಾಡಿದ್ದಾರೆ. ಅವರನ್ನು ಕಳೆದುಕೊಂಡು ನಾವು ನಿಜವಾಗಿ, ದೇಶದ ಬಗೆಗೆ ಕಾಳಜಿ ಮಾಡುವ, ಒಬ್ಬ ಕಾರ್ಯಕರ್ತರನ್ನು ಕಳೆದುಕೊಂಡಿದ್ದೇವೆ"[೪] ಎಂದು ಸಂಯುಕ್ತ ಕರ್ನಾಟಕ ತನ್ನ ದೀರ್ಘ ಸಂಪಾದಕೀಯದಲ್ಲಿ ಕಂಬನಿ ಮಿಡಿಯಿತು.

**ರಾಮಚಂದ್ರ ವಡವಿ :**

ರಾಮಚಂದ್ರ ವಡವಿಯವರು ಅಪ್ಪಟ ದೇಶ ಭಕ್ತರು. ಸ್ವಾತಂತ್ರ್ಯ ಚಳುವಳಿಗಾಗಿ ತಮ್ಮ ಬದುಕನ್ನೇ ಮೀಸಲಿಟ್ಟಿದ್ದರು. ಮೂಲತಃ ಅಂದಿನ ಧಾರವಾಡ ಜಿಲ್ಲೆಯವರಾದ ವಡವಿಯವರಿಗೆ ಹುದಲಿ ಕರ್ಮಭೂಮಿಯಾಗಿತ್ತು. ಮಹಾತ್ಮಾ ಗಾಂಧೀಜಿ ಹಾಗೂ ಗಂಗಾಧರರಾವ್ ದೇಶಪಾಂಡೆಯವರ ಪ್ರಭಾವದಿಂದಾಗಿ ಸಾರ್ವಜನಿಕ ಜೀವನದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ವಡವಿ ಗ್ರಾಮದವರಾದ ರಾಮಚಂದ್ರ ಅವರ ತಂದೆ ವೆಂಕಟರಮಣಾಚಾರ್ಯ, ತಾಯಿ ತುಂಗಾಬಾಯಿ. ಇವರು ಒಟ್ಟು ಆರು ಜನ ಅಣ್ಣ ತಮ್ಮಂದಿರು. ವಡವಿಯವರು ಹತ್ತು ವರ್ಷದವರಿದ್ದಾಗ ತಮ್ಮ ತಂದೆಯವರನ್ನು ಕಳೆದುಕೊಳ್ಳುತ್ತಾರೆ. ತಾಯಿಯೇ ಮಕ್ಕಳ ಜವಾಬ್ದಾರಿಯನ್ನು ಹೊತ್ತು ಧಾರವಾಡಕ್ಕೆ ಬಂದು ವಿದ್ಯಾರಣ್ಯ ಹೈಸ್ಕೂಲಕ್ಕೆ ವಡವಿಯವರ

ಹೆಸರನ್ನು ದಾಖಲಿಸುತ್ತಾರೆ. ಧಾರವಾಡದಲ್ಲಿ ಆಗ ಮರಾಠಿ ಭಾಷೆಯು ಪ್ರಭಲವಾಗಿತ್ತು. ಜನ ಭಾಷೆಯಾದ ಕನ್ನಡವನ್ನು ಪ್ರೀತಿಸುವ ವಡವಿಯವರು ಕಡಪಾ ರಾಘವೇಂದ್ರರಾಯ್, ಮುದವೀಡು ಕೃಷ್ಣರಾಯ್, ವೆಂಕಟ ರಂಗೋ ಕಟ್ಟಿ ಮುಂತಾದವರೊಂದಿಗೆ ಕೂಡಿಕೊಂಡು ಕನ್ನಡ ಪ್ರಾತಿನಿಧ್ಯಕ್ಕಾಗಿ ಹೋರಾಡಿದರು.

ವಡವಿಯವರಿಗೆ ಹೋರಾಟ ಹುಟ್ಟು ಗುಣವಾಗಿತ್ತು. ಇದೇ ಸಂದರ್ಭದಲ್ಲಿ ಸ್ವಾತಂತ್ರ್ಯ ಚಳುವಳಿಯ ಗಾಳಿ ಅವರನ್ನು ತಟ್ಟಿದ ಬಳಿಕ ಶಾಲೆಗೆ ಶರಣು ಹೊಡೆದು ಚಳುವಳಿಯಲ್ಲಿ ಧುಮುಕಿದರು. ವಡವಿಯವರು ಹತ್ತನೇ ತರಗತಿಯಲ್ಲಿ ಓದುತ್ತಿದ್ದಾಗ ಗಾಂಧೀಜಿಯವರ ವಿಚಾರಗಳಿಂದ ಪ್ರಭಾವಿತರಾಗಿ ದೇಶಕ್ಕಾಗಿ ಏನಾದರೂ ಮಾಡಬೇಕೆಂಬ ನಿರ್ಣಯವನ್ನು ಕೈಕೊಳ್ಳುತ್ತಾರೆ. ಇವರಿಗೆ ಆತ್ಮೀಯರೂ ಮತ್ತು ಸಹಪಾಠಿಗಳೂ ಆದ ಹನುಮಂತ ಜೋಶಿ ಹಾಗೂ ದೇಸಾಯಿ ಇವರೂ ಕೂಡಾ ವಡವಿಯವರ ಜೊತೆ ಚಳುವಳಿಯಲ್ಲಿ ಸೇರಿಕೊಂಡು ಚಳುವಳಿಯಲ್ಲಿ ಧುಮುಕಬೇಕೆಂದು ನಿರ್ಣಯಿಸಿದರು. ಅದಕ್ಕಾಗಿ ಶಾಲೆಯನ್ನು ಬಹಿಷ್ಕರಿಸಿ ಅಹಮದಾಬಾದಿಗೆ ಹೋಗಬೇಕೆಂದು ನಿರ್ಧರಿಸಿದರು. ಕನ್ನಡ ಭಾಷೆಯನ್ನು ಬಿಟ್ಟು ಬೇರೆ ಭಾಷೆ ಗೊತ್ತಿರಲಿಲ್ಲ. ಕೈಯಲ್ಲಿ ಹಣವೂ ಇರಲಿಲ್ಲ. ಆದರೆ ದೇಸಾಯಿ ಮತ್ತು ಜೋಶಿಯವರು ಶ್ರೀಮಂತರಿದ್ದು ವಡವಿಯವರಿಗೆ ನೆರವಾಗುವ ಭರವಸೆಯನ್ನು ಕೊಟ್ಟು ಅಹಮದಾಬಾದಿಗೆ ಹೊರಡುತ್ತಾರೆ. ಶಾಲೆಯ ಫೀಜಗಾಗಿ ಇಟ್ಟುಕೊಂಡ ಹನ್ನೆರಡು ರೂಪಾಯಿ ಮಾತ್ರ ವಡವಿಯವರ ಹತ್ತಿರ ಇದ್ದವು. ಇದೇ ಹಣ ರೈಲಿಗಾಗುತ್ತದೆಂದು ಮಿರಜದಿಂದ ಅಹಮದಾಬಾದಿಗೆ ಪ್ರಯಾಣ ಬೆಳಸಿದರು.

ಹೇಗೋ ಅಹಮದಾಬಾದ ಮುಟ್ಟಿದ ಬಳಿಕ ಅವರಿಗೆ ಅನೇಕ ರೀತಿಯ ಸಮಸ್ಯೆಗಳು ಎದುರಾದವು. ಒಬ್ಬ ಟಾಂಗಾವಾಲಾನನ್ನು ಕರೆದು ಸಾಬರಮತಿ ಆಶ್ರಮವನ್ನು ವಿಚಾರಿಸಿ ಅತ್ತ ಸಾಗಿದರು. ಸಾಬರಮತಿ ಆಶ್ರಮದಲ್ಲಿ ಗಾಂಧೀಜಿಯವರನ್ನು ಕಾಣುವ ಮೊದಲು ಮಹಾದೇವಬಾಯಿ ದೇಸಾಯಿಯವರನ್ನು ಕಂಡು ತಾವು ಕರ್ನಾಟಕದವರೆಂದು ಮತ್ತು ಗಾಂಧೀಜಿಯವರನ್ನು ಕಾಣಲು ಬಂದಿದ್ದೇವೆಂದು ಹೇಳುತ್ತಾರೆ. ಮಹಾದೇವ ದೇಸಾಯಿಯವರು ಗಾಂಧೀಜಿಯವರನ್ನು ಭೆಟ್ಟಿ ಮಾಡಿಸುತ್ತಾರೆ. ಗಾಂಧೀಜಿಯವರು ಇವರನ್ನು ಕಂಡು ಅವರ ಪರಿಚಯ ಮಾಡಿಕೊಂಡು ಚಳುವಳಿ, ಹಾಗೂ ಸ್ವಾವಲಂಬನ ಕುರಿತು ತಿಳಿ ಹೇಳಿ ಅವರಿಗೆ ಮಾಡಬೇಕಾದ ಕಾರ್ಯವನ್ನು ತಿಳಿಸುತ್ತಾರೆ. ಗಾಂಧಿ ದರ್ಶನವಾದ ಬಳಿಕ ವಡವಿಯವರು ತಮ್ಮ ಬದುಕನ್ನೇ ಚಳುವಳಿಗೆ ಮೀಸಲಿಡುತ್ತಾರೆ. "ರಾಮಚಂದ್ರ ವಡವಿ ೧೯೩೦, ೧೯೩೨, ೧೯೪೧ ಮತ್ತು ೧೯೪೨ ಚಳುವಳಿಗಳಲ್ಲಿ ಭಾಗವಹಿಸಿ ವಿವಿಧ ಅವಧಿಯ ಜೈಲು ಶಿಕ್ಷೆಯನ್ನು ಅನುಭವಿಸಿದರು. ೧೯೩೦ರ ಸಮಯದಲ್ಲಿ ಅವರು ಅಂಕೋಲಾಕ್ಕೆ ಹೋಗಿ ಕರ ನಿರಾಕರಣೆ ಚಳುವಳಿಯಲ್ಲಿ ಭಾಗವಹಿಸಿದರು. ಅವರು ಕಾರವಾರ ಜಿಲ್ಲೆಯ ಸೂರ್ವೆ ಗ್ರಾಮದಲ್ಲಿ ಉಳಿದು ಕರ ನಿರಾಕರಣೆ ಎಂಬ ಅಭಿಯಾನವನ್ನು ಆಯೋಜಿಸಿದರು. ಆತ ಬ್ರಿಟಿಷರಿಗೆ ಭಯೋತ್ಪಾದನೆ ಉಂಟು ಮಾಡಿದನು ಮತ್ತು ಪೋಲೀಸರು ಆತನನ್ನು ಬಂಧಿಸಲು ಬಯಸಿದ್ದರು"[೫].

ವಡವಿಯವರು ಚಳುವಳಿಯೊಂದಿಗೆ ಹಲವಾರು ಗ್ರಾಮ ಸುಧಾರಣಾ ಕಾರ್ಯಗಳನ್ನು ಅವರು ಕೈಗೊಂಡಿದ್ದಾರೆ. ಮನುಷ್ಯ ತಾನೊಬ್ಬನೆ ಬದುಕುವುದು ಮಹತ್ವದ್ದಲ್ಲ, ತನ್ನೊಂದಿಗೆ ಇತರರ ಬಾಳು ಸುಧಾರಣೆ ಆಗಬೇಕು, ಅವರಿಗೆ ಕೂಡಾ ಒಂದು ನೆಲೆ ದೊರೆಯಬೇಕು ಎಂಬ ಉದ್ದೇಶದಿಂದ ರಾಮಚಂದ್ರ ವಡವಿಯವರು ಹಲವಾರು ವಿದಾಯಕ ಕಾರ್ಯವನ್ನು ಅವರು ಕೈಗೊಂಡಿದ್ದಾರೆ. ಹುದಲಿಯಲ್ಲಿ ಅನೇಕ ನೇಕಾರರು ಗಿರಣಿ ನೂಲ ನೆಯುವುದನ್ನು ಬಿಟ್ಟು ಖಾದಿ ನೆಯುವುದನ್ನು ಪ್ರಾರಂಭಿಸಿದರು. ಗಂಗಾಧರರಾವ ದೇಶಪಾಂಡೆ ಹಾಗೂ ವಡವಿಯವರ ಪ್ರೇರಣೆಯಿಂದ ನೇಕಾರರು ಕುಡಿಯುವ ಚಟದಿಂದ ಸಾಲ ಬಾದೆಗೆ ತುತ್ತಾಗಿದ್ದರು. ಅವರನ್ನು ಸಾಲ ಬಾದೆಯಿಂದ ಮುಕ್ತ ಮಾಡಿ ಅವರಿಗೆ 'ಅಪನಾ ಭಂಡಾರ'ದಿಂದ ವಾರಕ್ಕೊಮ್ಮೆ ಜೀವನಕ್ಕೆ ಬೇಕಾಗುವ ಎಲ್ಲ ವಸ್ತುಗಳನ್ನು ಪೂರೈಸುತ್ತಿದ್ದರು. ಅವರ ಪಗಾರದಲ್ಲಿ ಉಳಿದ ಹಣವನ್ನು ಸಾಲಕ್ಕೆ ಮುರಿದುಕೊಳ್ಳುತ್ತಿದ್ದರು. ಇದರಿಂದ ನೇಕಾರರು ಕುಡಿತದ ಚಟದಿಂದ ಮುಕ್ತರಾದರಲ್ಲದೆ ಅವರ ಜೀವನವು ಸುಧಾರಣೆಗೊಂಡಿತು.

ಬೇಡ ಜನಾಂಗ ಕಾಳು ಕಡಿಯನ್ನು ದನಗಳನ್ನು ಕದಿಯುತ್ತಿದ್ದರು. ಕದಿಯುವುದೇ ಅವರ ವೃತ್ತಿಯಾಗಿತ್ತು. ಅವರಿಗಾಗಿ ಧಾನ್ಯ ಕೋಟೆಯನ್ನು ಪ್ರಾರಂಭಿಸಿ ಮಳೆಗಾಲದಲ್ಲಿ ಈ ಬೇಡರರಿಗೆ ಬೇಕಾಗುವ ಜೋಳವನ್ನು ಕೊಟ್ಟು ಸುಗ್ಗಿಯಾದ ಬಳಿಕ ಅವರಿಂದ ಒಂದು ಕಾಲು ಪಟ್ಟು ತಿರುಗಿ ಪಡೆಯುತ್ತಿದ್ದರು. ಇದರಿಂದ ಅವರ ಜೀವನದಲ್ಲಿ ಹೊಸ ಬದಲಾವಣೆಗಳು ಆರಂಭವಾದವು. ಅಲ್ಲದೆ ೧೯೪೨ರ ಆಂದೋಲನದಲ್ಲಿ ಈ ಚಳುವಳಿಕಾರರಿಗೆ ಪೂರಕವಾಗಿ ಅವರು ಕಾರ್ಯ ಮಾಡಿದರು. ಬೇಡರ ಸಲುವಾಗಿಯ ೧೯೩೮ರಲ್ಲಿ ಶಾಲೆಯನ್ನು ಪ್ರಾರಂಭಿಸಿ ಅವರ ಮಕ್ಕಳು ಸುಶಿಕ್ಷಿತರಾಗಲೆಂದು ಪ್ರಯತ್ನಿಸಿದರು. ಇದಲ್ಲದೆ ಹುದಲಿ ಗ್ರಾಮದಲ್ಲಿ ಹರಿಜನ ಕೇರಿಯಲ್ಲಿ ಶಾಲೆಯನ್ನು ಪ್ರಾರಂಭ ಮಾಡಿದರು. ಅದನ್ನು ರಾಮಚಂದ್ರ ವಡವಿಯವರು ನಡೆಸಿಕೊಂಡು ಹರಿಜನರಲ್ಲಿ ಶಿಸ್ತು ಹಾಗೂ ಗ್ರಾಮ ನೈರ್ಮಲ್ಯ ಕುರಿತು ಎಚ್ಚರಿಕೆ ಮೂಡಿಸಿದರು. ಬ್ರಾಹ್ಮಣರಾದ ವಡವಿ ಮಾಸ್ತರರು ಹರಿಜನ ಕೇರಿಯಲ್ಲಿ ಕೆಲಸ ಮಾಡಿದ್ದರಿಂದ ಊರಲ್ಲಿಯ ಕೆಲವು ಬ್ರಾಹ್ಮಣ ಸಂಪ್ರದಾಯವಾದಿಗಳು ಅವರನ್ನು ಧರ್ಮಬಾಹಿರ ಮಾಡುವ ನಿರ್ಣಯ ಕೈಕೊಂಡರು. ಆಗ ಗಂಗಾಧರರಾವ ದೇಶಪಾಂಡೆಯವರು ಆ ಬ್ರಾಹ್ಮಣರೆನ್ನಲ್ಲಾ ತಮ್ಮ ವಾಡೆಗೆ ಕರೆಯಿಸಿ ಸಾಮಾಜಿಕ ಬದಲಾವಣೆಗೆ ವಡವಿಯವರು ಹೇಗೆ ದುಡಿಯುತ್ತಾರೆ ಎಂಬುದನ್ನು ಆ ಜನರಿಗೆ ತಿಳಿಸಿ ಕೊಡುತ್ತಾರೆ. ಮುಂದೆ ದೇಶಭಕ್ತರಾದ ವಡವಿಯವರನ್ನಾಗಲಿ ದೇಶಪಾಂಡೆಯವರನ್ನಾಗಲಿ ಎದುರು ಹಾಕಿಕೊಳ್ಳವ ಧೈರ್ಯ ಯಾರೂ ಮಾಡುವುದಿಲ್ಲ.

ಬಡತನ ಅನಾರೋಗ್ಯ ನಿತ್ಯ ಕಾಡುವ ಅಂದಿನ ಪರಿಸ್ಥಿತಿಯಲ್ಲಿ ಊರಲ್ಲಿ ದವಾಖಾನೆಯನ್ನು ಪ್ರಾರಂಭಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳುತ್ತಾರೆ. ಮನೆಗಳನ್ನು ಸ್ವಚ್ಛವಾಗಿಡುವುದು, ಓಣಿಗಳನ್ನು ಸ್ವಚ್ಛವಾಗಿಡುವುದು ನಮ್ಮೆಲ್ಲರ ಜವಾಬ್ದಾರಿ ಎಂಬುದನ್ನು ವಡವಿ ಮಾಸ್ತರರು ತಮ್ಮ ಶಿಷ್ಯರಿಗೆ ಹೇಳಿ ಅವರ ಮೂಲಕ ಗ್ರಾಮ ಸ್ವಚ್ಛತಾ ಅಭಿಯಾನವನ್ನು ಪ್ರಾರಂಭಿಸುತ್ತಾರೆ. ಇದಲ್ಲದೆ ಹುದಲಿ

ಗ್ರಾಮದ ಜನತೆಯನ್ನು ಗಾಂಧಿ ಮಾರ್ಗಕ್ಕೆ ತರಲು ತುಂಬಾ ಪ್ರಯತ್ನ ಮಾಡಿದರು. ಗ್ರಾಮ ಸುಧಾರಣೆ, ಖಾದಿ ಗ್ರಾಮೋದ್ಯೋಗ, ಚರಕಾ ಸಂಘ, ಆಸ್ಪತ್ರೆ ನಿರ್ಮಾಣ ಹೀಗೆ ಹಲವಾರು ವಿಧಾಯಕ ಕಾರ್ಯಗಳನ್ನು ಮಾಡಿ ಸ್ವಾತಂತ್ರ್ಯದೊಂದಿಗೆ ಸ್ವಾವಲಂಬನೆಯ ಬದುಕನ್ನು ಕೂಡಾ ವಡವಿಯವರು ಕಲಿಸಿಕೊಟ್ಟಿದ್ದಾರೆ.

೧೯೩೮ ರಲ್ಲಿ ವಡವಿಯವರು ವರ್ಧಾಕ್ಕೆ ಹೋಗಿದ್ದರು. "ಅಲ್ಲಿ ಕಿಶೋರಿಲಾಲಜಿಯವರನ್ನು ಭೆಟ್ಟಿಯಾಗಿ ಅವರ ಹರಿಜನದಲ್ಲಿಯ ಲೇಖನದಿಂದ ಪ್ರೇರಿತರಾಗಿ ತಾವು ಭೂಗತರಾಗಿ ಮಾಡಿದ ಕಾರ್ಯವನ್ನೆಲ್ಲ ಸವಿಸ್ತಾರವಾಗಿ ಹೇಳಿದರು. ಅಷ್ಟರಲ್ಲಿ ಗಾಂಧೀಜಿಯವರೂ ಅಲ್ಲಿಗೆ ಬಂದರು. ಕಿಶೋರಲಾಲಜಿ ಅವರಿಗೆ ರಾಮಚಂದ್ರ ಅವರು ನಿಮ್ಮೊಡನೆ ಮಾತನಾಡಬೇಕೆನುತ್ತಾರೆ ಎಂದರು. ಗಾಂಧೀಜಿ ಕೂಡಲೇ 'ಚಲೋ ರಾಮಚಂದ್ರ' ಎಂದರು. ಇಬ್ಬರೂ ಒಟ್ಟಾಗಿ ಹೋದರು ಯೋಗಕ್ಷೇಮದ ವಿಚಾರವಾದ ಮೇಲೆ ಆಂದೋಲನದ ಕಾಲಕ್ಕೆ 'ನೀನು ಏನು ಮಾಡಿದೆ?' ಎಂದು ಕೇಳಿದರು. ವಡವಿಯವರು ಅವರಿಗೆ ಎಲ್ಲವನ್ನು ಸಂಕ್ಷಿಪ್ತವಾಗಿ ಹೇಳಿದರು. ಆಗ ಗಾಂಧೀಜಿಯವರು ನಕ್ಕುಬೆಡನ್ನ ಮೇಲೆ ಚಪ್ಪರಿಸಿ, 'ನೀನು ಆಶ್ರಮದಲ್ಲಿದ್ದು ಅಹಿಂಸೆಯನ್ನು ಚೆನ್ನಾಗಿ ಕಲಿತೆ' ಎಂದು ಮೆಚ್ಚಿಗೆ ಸೂಚಿಸಿದರು"[೬].

ರಾಮಚಂದ್ರ ವಡವಿಯವರು ಸ್ವಾತಂತ್ರ್ಯ ಚಳುವಳಿಕಾರರಾಗುವುದರ ಜೊತೆಗೆ ಅವರೊಬ್ಬ ಒಳ್ಳೆಯ ಸಾಹಿತಿಗಳಾಗಿಯು ರೂಪಗೊಂಡಿದ್ದರು. ಹಲವು ಕೃತಿಗಳನ್ನು ರಚಿಸಿದವರು. ಖಾದಿ ವಿಷಯದಲ್ಲಿ ಅತ್ಯಂತ ಪರಿಣಿತರಾದ ಇವರು ಅದಕ್ಕೆ ಸಂಬಂಧಪಟ್ಟಂತೆ ೩ ಗ್ರಂಥಗಳನ್ನು ಬರೆದಿದ್ದಾರೆ.

೧) ಬಡವರ ಭಾಗ್ಯ : ಹತ್ತಿಯಿಂದ ನೂಲೂವವರೆಗಿನ ಎಲ್ಲ ಪ್ರಕ್ರಿಯೆಗಳನ್ನು ಈ ಕೃತಿ ಒಳಗೊಂಡಿದೆ.

೨) ಖಾದಿ ದರ್ಶನ : ಇದು ಹತ್ತಿಯಿಂದ ನೇಯ್ಗೆವರೆಗಿನ ಎಲ್ಲ ಕ್ರಿಯೆಗಳನ್ನು ಹೇಳುತ್ತದೆ. ಅಲ್ಲದೆ ಗಣಿತಕ್ಕೆ ಸಂಬಂಧಿಸಿದ ಸಂಗತಿಗಳನ್ನು ಇಲ್ಲಿ ವಿವರಿಸಲಾಗಿದೆ.

೩) ಖಾದಿ : ಖಾದಿಯ ಹಿಂದಿನ ತತ್ವಜ್ಞಾನ ಮತ್ತು ಆರ್ಥಿಕ, ಸಾಮಾಜಿಕ ಚಿಂತನೆಗಳು :

ಖಾದಿ ಗಾಂಧೀಜಿಯವರಿಗೆ ಕೇವಲ ಬಟ್ಟೆಯಾಗಿರಲಿಲ್ಲ. ಅದೊಂದು ಜೀವನ ವಿಧಾನವಾಗಿತ್ತು. ಈ ನೆಲೆಯಲ್ಲಿಯ ಖಾದಿಯ ಹಿಂದಿನ ತತ್ವಜ್ಞಾನವನ್ನು ಆರ್ಥಿಕ, ರಾಜಕೀಯ, ಸಾಮಾಜಿಕ ವಿಚಾರಗಳನ್ನು ಈ ಪುಸ್ತಕದಲ್ಲಿ ಹೇಳಲಾಗಿದೆ. ಇದರಂತೆ ಪ್ರೌಢ ಶಿಕ್ಷಣಕ್ಕೆ ಕುರುಡರು ಕಣ್ಣು ಎಂಬ ಸಚಿತ್ರ ಪುಸ್ತಕವನ್ನು ಬರೆದಿದ್ದಾರೆ. ದಿನನಿತ್ಯದ ವ್ಯವಹಾರದ ಉದಾಹರಣೆಗಳ ಮೂಲಕ ಅಕ್ಷರಗಳ ಪರಿಜ್ಞಾನವನ್ನು ನೀರಕ್ಷರಿಗೆ ಸುಲಭವಾಗಿ ತಿಳಿಯುವಂತೆ ರಚಿಸಿದ್ದಾರೆ. ಅವರ ಕಾಲದಲ್ಲಿ ಅತ್ಯಂತ ಜನಪ್ರೀಯವಾದ ಪುಸ್ತಕವು ಇದಾಗಿತ್ತು. ಪ್ರೌಢ ಶಿಕ್ಷಣಕ್ಕಾಗಿ ಮೂಲಾಕ್ಷರ

ಬೋಧೆ, ಗುಣಿತಾಕ್ಷರ ಬೋಧೆ ಮುಂತಾದ ಸ್ವಾನುಭವ ಕೃತಿಗಳನ್ನು ಇವರು ರಚಿಸಿದ್ದಾರೆ. ಗಾಂಧೀಜಿಯವರ ಪ್ರೇರಣೆ ಪ್ರಭಾವಕ್ಕೆ ಒಳಗಾಗಿ ಗಾಂಧೀಜಿಯನ್ನು ಕುರಿತು ಗಾಂಧೀಜಿಯ ಕಥೆಯೆಂಬ ಚಿಕ್ಕ ಪುಸ್ತಕವನ್ನು ಇವರು ಬರೆದಿದ್ದಾರೆ. ಕರ್ನಾಟಕ ಸರಕಾರದವರು ಎಲ್ಲಾ ಶಾಲೆಗಳಲ್ಲಿ ಈ ಪಠ್ಯವನ್ನು ಓದಬೇಕೆಂದು ಸೂಚಿಸಿದ್ದಾರೆ. ಆ ಕಾರಣಕ್ಕಾಗಿ ಈ ಪುಸ್ತಕದ ಸುಮಾರು ೪೫,೦೦೦/- ಪ್ರತಿಗಳು ಮುದ್ರಿತವಾಗಿ ಕರ್ನಾಟಕದ ಎಲ್ಲಾ ಗಾಂಧಿ ಆಸಕ್ತರಿಗೆ ದೊರಕಲೆಂಬ ಉದ್ದೇಶದಿಂದ ಸರಕಾರ ಈ ಕ್ರಮಕೈಗೊಂಡಿತು.

ವಡವಿಯವರು ರಾಷ್ಟ್ರೀಯ ಆಂದೋಲನದಲ್ಲಿ ತುಂಬಾ ಕ್ರಿಯಾತ್ಮಕವಾಗಿ ದುಡಿದು ಎಲ್ಲರ ಪ್ರೀತಿಗೆ ಪಾತ್ರರಾಗಿದ್ದಾರೆ. ೧೯೭೧ರಲ್ಲಿ ಗಂಗಾಧರರಾವ ದೇಶಪಾಂಡೆಯವರ ಜನ್ಮಶತಾಬ್ದಿಗಾಗಿ 'ಛೊಡೋ ಭಾರತ ಪರ್ವದಲ್ಲಿ' ಎಂಬ ಕೃತಿಯನ್ನು ಬರೆದಿದ್ದಾರೆ. ಹುದಲಿ ಖಾದಿ ಗ್ರಾಮೋದ್ಯೋಗ ಸಂಘವು ಈ ಗ್ರಂಥವನ್ನು ಪ್ರಕಟಿಸಿದೆ. ಇದಲ್ಲದೆ ಕರ್ನಾಟಕದಲ್ಲಿ ಖಾದಿ ಇತಿಹಾಸ ಎಂಬ ಪುಸ್ತಕವನ್ನು ಸಂಪಾದಿಸಿ ಅದರಲ್ಲಿ ಖಚಿತವಾದ ಅಂಕಿ ಸಂಖ್ಯೆಗಳಲ್ಲಿ ಖಾದಿಯ ಎಲ್ಲ ಸಂಘಟಿತಗಳನ್ನು ದಾಖಲಿಸಿದ್ದಾರೆ. ಈ ಪುಸ್ತಕವನ್ನು ಕರ್ನಾಟಕ ರಾಜ್ಯ ಖಾದಿ ಗ್ರಾಮೋದ್ಯೋಗ ಮಂಡಳಿಯು ಪ್ರಕಟಿಸಿದೆ. ಇದಲ್ಲದೆ ಗಾಂಧಿ ಬೋಧೆ, ಮಂಗಳ ಪ್ರಭಾತ, ಮಹಾದೇವಿ ಭಾಯೀ ದಿನಚರಿ ಭಾಗ-೧, ಸರ್ವೋಧಯ ದರ್ಶನ, ದೇಶಪಾಂಡೆ ಗಂಗಾಧರರಾಯರ ಆತ್ಮ ಚರಿತ್ರೆ ಎಂಬ ೫ ಪುಸ್ತಕಗಳನ್ನು ಹಿಂದಿ, ಗುಜರಾತ ಹಾಗೂ ಮರಾಠಿ ಭಾಷೆಗಳಿಂದ ಕನ್ನಡಕ್ಕೆ ಇವರು ಅನುವಾದ ಮಾಡಿದ್ದಾರೆ.

ವಿನೋಭಾ ಭಾವೆಯವರ ಭೂದಾನ ಆಂದೋಲನದಿಂದ ಪ್ರೇರಣೆಗೊಂಡು ಭೂದಾನದ ಮಹತ್ವವನ್ನು ತಿಳಿಸುವ ಒಂದು ಸೊಗಸಾದ ಕೃತಿ 'ಭೂ ದಾನವೆ ಏಕೆ?' ಕೃತಿಯನ್ನು ಬರೆದಿದ್ದಾರೆ. ಅವರ ಬರವಣಿಗೆಯಲ್ಲಿ ಖಚಿತವಾದ ಅಂಕಿ-ಅಂಶಗಳಿವೆ. ಸರಳವಾದ ಶೈಲಿ, ಆಕರ್ಷಕ ನಿರೂಪಣೆ ಇವು ಎದ್ದು ಕಾಣಿಸುತ್ತವೆ. 'ಗಾಂಧಿ ಮತ್ತು ಕರ್ನಾಟಕ' ಎಂಬ ಬೃಹತ ಗ್ರಂಥಕ್ಕೆ ಅವರ ಮಹತ್ತ್ವದ ಕೃತಿಯಾಗಿದೆ.

ಹೀಗೆ ವಡವಿಯುವರು ಕೇವಲ ಸ್ವಾತಂತ್ರ್ಯ ಹೋರಾಟಗಾರರು ಮಾತ್ರವಲ್ಲ ಅವರೊಬ್ಬ ಸಾಹಿತಿಗಳು, ಸಮಾಜ ಸುಧಾರಕರು, ಶಿಸ್ತಿನ ಸಿಪಾಯಿಗಳು ಆಗಿ ಗಮನ ಸೆಳೆಯುತ್ತಾರೆ. ಕುಂದರನಾಡಿನ ಚರಿತ್ರೆಯಲ್ಲಿ ಅಪರೂಪದ ವ್ಯಕ್ತಿಯಾಗಿ ಇವರು ದಾಖಲೀಕರಣಗೊಂಡಿದ್ದಾರೆ. "ಕೊನೆಯ ಉಸಿರಾಟದವರೆಗೂ ಅವರು ಸಕ್ರೀಯರಾಗಿದ್ದರು. ಅವರು ಯಾವುದೇ ನಿರೀಕ್ಷೆಯಿಲ್ಲದೆ ರಚನಾತ್ಮಕ ಕ್ಷೇತ್ರದಲ್ಲಿ ಕೆಲಸ ಮಾಡಿದರು. ಸ್ವಾತಂತ್ರ್ಯದ ನಂತರ ಅವರು ಯಾವುದೇ ಪಿಂಚಣಿ ತೆಗೆದುಕೊಳ್ಳಲಿಲ್ಲ. ತಮ್ಮ ಜೀವನದಲ್ಲಿ ಯಾವುದೇ ಸಮಯದಲ್ಲಿ ಯಾವುದೇ ಹುದ್ದೆಗೆ ಆಶಿಸಲಿಲ್ಲ"[೬]. ಅವರು ೧೯೮೮ ಡಿಸೆಂಬರ್ ೨೬ ರಂದು ಬೆಳಗಾವಿಯಲ್ಲಿ ನಿಧನರಾದರು.

**ಭಾ. ಯ. ದೇಶಪಾಂಡೆ (ಅಣ್ಣೊ ಗುರೂಜಿ) :**

ಅಣ್ಣೊ ಗುರೂಜಿಯೆಂದೇ ಖ್ಯಾತರಾಗಿದ್ದ ಬಾಳಕೃಷ್ಣ ಯಾಮಾಜಿ ದೇಶಪಾಂಡೆ ಕುಂದರಗಿಯವರು. ೧೨-೦೧-೧೯೦೫ರಲ್ಲಿ ಜನಿಸಿದ ಇವರು ಕನ್ನಡ ಮುಲ್ಕಿ ಪರೀಕ್ಷೆಯನ್ನು ಮುಗಿಸಿದ ಬಳಿಕ ಸ್ವಾತಂತ್ರ್ಯದ ಆಂಧೋಲನ ಇವರನ್ನು ತನ್ನತ್ತ ಸೆಳೆಯಿತು. ಇವರ ವೈಶಿಷ್ಟ್ಯವೆಂದರೆ ಜೈಲಿನಲ್ಲಿ ಇದ್ದುಕೊಂಡು ತಿಮ್ಮಪ್ಪ ನೇಸವಿ ಗುರುಗಳ ಹತ್ತಿರ ೨ ವರ್ಷ ಇಂಗ್ಲೀಷ ಅಭ್ಯಾಸ ಮಾಡಿದ್ದಾರೆ. ಮುಲ್ಕಿ ಪರೀಕ್ಷೆ ಪಾಸಾದ ಬಳಿಕ ಕೆಲವು ದಿವಸ ಕನ್ನಡ ಶಾಲಾ ಮಾಸ್ತರರಾಗಿ ಇವರು ಸೇವೆ ಸಲ್ಲಿಸಿದ್ದಾರೆ. ವಡಗಾಂವ ಶಹಾಪೂರಗಳಲ್ಲಿ ಎರಡು ವರ್ಷ ಕಾರಕೂನರಾಗ ಕೆಲಸ ನಿರ್ವಹಿಸಿದರು. ಗಾಂಧೀಜಿಯವರ ಅಸಹಕಾರ ಆಂದೋಲನದ ಪ್ರಭಾವಕ್ಕೆ ಒಳಗಾಗಿ ಇವರು ಚಳುವಳಿಗೆ ದುಮುಕಿದರು. ಬ್ರಿಟಿಷರ ವಿರುದ್ಧ ತೀವ್ರವಾದ ಹೋರಾಟವನ್ನು ಮಾಡಿದವರಲ್ಲಿ ಅಣ್ಣೊ ಗುರೂಜಿಯವರು ಪ್ರಸಿದ್ದರು.

ಅಣ್ಣೊ ಗುರೂಜಿಯವರು ಬರಿ ಹೋರಾಟಗಾರರು ಮಾತ್ರವಲ್ಲ ತಮ್ಮಂತಹ ಅನೇಕ ಹೋರಾಟಗಾರರಿಗೆ ಮಾರ್ಗದರ್ಶನ ಮಾಡಿದ್ದಾರೆ. ಗಾಂಧೀಜಿಯವರ ಆಶಯದಂತೆ ರಾಷ್ಟ್ರೀಯ ಶಾಲೆಗಳನ್ನು ನಿರ್ಮಿಸುವಲ್ಲಿ ಇವರು ತುಂಬಾ ಪ್ರಯತ್ನ ಮಾಡಿದ್ದಾರೆ. ಪಾಶ್ಚಾಪೂರದಲ್ಲಿ ಅಣ್ಣೊ ಗುರೂಜಿಯವರು ರಾಷ್ಟ್ರೀಯ ಶಾಲೆಯನ್ನು ಪ್ರಾರಂಭಿಸಿದರು. ಆ ಮೂಲಕ ಸ್ವಾತಂತ್ರ್ಯದ ಅರಿವನ್ನು ಅಲ್ಲಿಯ ವಿದ್ಯಾರ್ಥಿಗಳಿಗೆ ತಿಳಿಸಿಕೊಟ್ಟರು. ೧೯೨೪ರ ಇಸ್ವಿಯಲ್ಲಿ ಬೆಳಗಾವಿಯಲ್ಲಿ ಜರುಗಿದ ೩೯ನೆಯ ಕಾಂಗ್ರೆಸ ಅಧೀವೇಶನದಲ್ಲಿ ಇವರು ಸ್ವಯಂ ಸೇವಕರಾಗಿ ಕಾಯಕ ಮಾಡಿದರು. ೧೯೨೫ನೆಯ ಇಸ್ವಿಯಲ್ಲಿ ಗಂಗಾಧರರಾವ ದೇಶಪಾಂಡೆಯವರ ಪ್ರಭಾವಕ್ಕೆ ಒಳಗಾಗಿ ಕುಮರಿ ಆಶ್ರಮದಲ್ಲಿ ಸೇವೆಗಾಗಿ ಬಂದು ನಿಲ್ಲುತ್ತಾರೆ. ಮುಂದೆ ಕುಂದರನಾಡಿನ ಸುತ್ತಮುತ್ತಲು ಸಂಚರಿಸಿ ಖಾದಿ ಗ್ರಾಮೋದ್ಯೋಗ ಹಾಗೂ ಹರಿಜನ ಸೇವಾ ಕಾರ್ಯವನ್ನು ಮಾಡುತ್ತಾರೆ. ೧೯೩೦ನೆಯ ಇಸ್ವಿಯಲ್ಲಿ ಗಾಂಧೀಜಿಯವರು ದಾಂಡಿ ಯಾತ್ರೆಯನ್ನು ಆರಂಭಿಸಿ ಉಪ್ಪಿನ ಸತ್ಯಾಗ್ರಹವನ್ನು ಮಾಡುತ್ತಾರೆ. ಸಾಬರಮತಿ ಆಶ್ರಮದಿಂದ ಸುಮಾರು ೮೦ ಜನ ಸ್ವಯಂ ಸೇವಕರು ದಾಂಡಿ ಯಾತ್ರೆಯಲ್ಲಿ ಭಾಗವಹಿಸುತ್ತಾರೆ. ಯಾತ್ರೆಯು ಎಪ್ರಿಲ್ ೬ನೆಯ ತಾರೀಖಿನಂದು ದಾಂಡಿಗೆ ಬಂದು ತಲುಪಿದಾಗ ಬ್ರಿಟಿಷ ಸರಕಾರವು ಸತ್ಯಾಗ್ರಹಿಗಳನ್ನು ಬಂಧಿಸುತ್ತಾರೆ.

ಅಣ್ಣೊ ಗುರೂಜಿಯವರ ಕುಂದರನಾಡಿನಲ್ಲಿ ತುಂಬ ಸಂಚರಿಸಿ ಅಲ್ಲಲ್ಲಿ ಸಭೆ, ಮೆರವಣಿಗೆಯನ್ನು ಮಾಡುತ್ತಾರೆ. ೧೯೩೨ನೆಯ ಇಸ್ವಿಯಲ್ಲಿ ಬ್ರಿಟೀಷರ ಕಾಯ್ದೆಯನ್ನು ಭಂಗ ಮಾಡಿದ ಕಾರಣಕ್ಕಾಗಿ ಗುರೂಜಿಯವರಿಗೆ ೩೦ ತಿಂಗಳು ಶಿಕ್ಷೆಯಾಗುತ್ತದೆ. ಮುಂದೆ ೧೯೩೪ನೆಯ ಇಸ್ವಿಯಲ್ಲಿ ಅಣ್ಣೊ ಗುರೂಜಿಯವರು ಸತ್ಯಾಗ್ರಹದಲ್ಲಿ ಭಾಗವಹಿಸಿ ವ್ಯಾಖ್ಯಾನ ಮಾಡಿದ್ದರಿಂದ ಇವರಿಗೆ ೮ ತಿಂಗಳು ಶಿಕ್ಷೆಯಾಗುತ್ತದೆ. ಇದಲ್ಲದೆ ಅಸ್ಪೃಶ್ಯತಾ ನಿವಾರಣೆಯ ಕುರಿತು ೧೯೩೬ನೆಯ ಇಸ್ವಿಯಲ್ಲಿ ಇವರು ಕಾರ್ಯ ಮಾಡುತ್ತಿರುವಾಗ ಬ್ರಿಟಿಷ ಸರಕಾರ ಇದನ್ನು ಗಮನಿಸಿ ಮತ್ತೆ ಇವರಿಗೆ ೧ ತಿಂಗಳ ಶಿಕ್ಷೆ ವಿಧಿಸುತ್ತಾರೆ.

೧೯೩೭ನೆಯ ಇಸ್ವಿಯಲ್ಲಿ ಹುದಲಿಯಲ್ಲಿ ಸೇರಿದ ಗಾಂಧಿ ಸೇವಾ ಸಂಘ ಸಮ್ಮೇಳನದಲ್ಲಿ ಇವರು ಅತ್ಯಂತ ಕ್ರಿಯಾಶೀಲರಾಗಿ ಕೆಲಸ ಮಾಡಿದ್ದಾರೆ. ಗಾಂಧೀಜಿಯವರ ಚಲೆಜಾವ ಚಳುವಳಿಯ ಕರೆಯ ಮೇರೆಗೆ ಚಳುವಳಿಯಲ್ಲಿ ಇವರು ಭಾಗವಹಿಸಿ ಅತ್ಯಂತ ತೀವ್ರವಾದ ಹೋರಾಟವನ್ನು ಮಾಡಿದ್ದಾರೆ. ತಾರ ತಂತಿ ಕಡಿಯುವುದು, ಹಳಿ ಕೀಳುವುದು, ಸರಕಾರಿ ಟಪಾಲು ಲೂಟಿ ಮಾಡುವುದು, ಸುಲದಾಳ ಸ್ಟೇಶನ ಸುಡುವುದು ಹೀಗೆ ಹಲವಾರು ಬ್ರಿಟಿಷ ಸರಕಾರದ ವಿರೋಧಿ ಕಾರ್ಯವನ್ನು ಇವರು ಮಾಡಿದ್ದರಿಂದ ಬ್ರಿಟಿಷರಿಗೆ ಅಣ್ಣೂ ಗುರೂಜಿಯವರು ಸಿಂಹ ಸ್ವಪ್ನರಾಗಿದ್ದರು. ಹೇಗಾದರು ಮಾಡಿ ಅಣ್ಣೂ ಗುರೂಜಿಯವರನ್ನು ಹಿಡಿಯಬೇಕೆಂದು ಬ್ರಿಟಿಷ ಸರಕಾರ ಯೋಚಿಸಿ ಇವರನ್ನೆ ಹಿಡಿದು ಕೊಟ್ಟವರಿಗೆ ಆ ಕಾಲದಲ್ಲಿ ೫೦೦೦/– ರೂ.ಗಳ ಬಹುಮಾನವನ್ನು ಘೋಷಿಸಿತ್ತು. ಬದುಕಿನೂದ್ದಕ್ಕೂ ದೇಶ ಪ್ರೇಮವನ್ನೆ ತುಂಬಿಕೊಂಡು ತನ್ನ ಜೀವನವನ್ನು ರಾಷ್ಟ್ರಕ್ಕಾಗಿ ಸಮರ್ಪಿಸಿದ ಅಣ್ಣೂ ಗುರೂಜಿಯವರು ಕುಂದರನಾಡಿನ ಸ್ವಾತಂತ್ರ್ಯದ ಇತಿಹಾಸದಲ್ಲಿ ಕುಂದಣದಂತೆ ಕಂಗೊಳಿಸುತ್ತಾರೆ.

ಪಾಚ್ಛಾಪೂರದಲ್ಲಿ ಮಹಾತ್ಮಾ ಗಾಂಧಿ ಸ್ವರಾಜ್ಯ ಭವನ ವಿಶ್ವಸ್ಥ ಮಂಡಳಿಯ ಸ್ಥಾಪನೆ ಹಾಗೂ ಭವನದ ನಿರ್ಮಾಣ ಅವಿಸ್ಮರಣೀಯ. ಈ ಭಾಗದ ವಿದ್ಯಾರ್ಥಿಗಳಿಗಾಗಿ ಫತೇಖಾನ ದೇಸಾಯಿ ಹೈಸ್ಕೂಲ. ಇವರು ಶಿಕ್ಷಣ ಕ್ಷೇತ್ರಕ್ಕೆ ನೀಡಿದ ಯೋಗದಾನ. ಬೆಳಗಾವಿ ಜಿಲ್ಲೆಯಲ್ಲಿ ಕಾಂಗ್ರೆಸ್ಸಿನ ಸಂಘಟನೆಗೆ ಇವರು ದುಡಿದದ್ದು ಕಾಂಗ್ರೆಸ್ಸಿನ ಇತಿಹಾಸ ಮರೆಯುವಂತಿಲ್ಲ. ಆದರೂ ನಿಷ್ಕಾಮ ಹಾಗೂ ಸ್ಪಷ್ಟ ಧ್ಯೇಯ ಧೋರಣೆಯುಳ್ಳ ಈ ವ್ಯಕ್ತಿಯನ್ನು ಕಾಂಗ್ರೆಸಿನಿಂದ ಹೊರಹಾಕಿದ್ದು ಅಕ್ಷಮ್ಯ ಅಪರಾಧ ಅಷ್ಟೇ ಅಲ್ಲ, ಕಾಂಗ್ರೆಸಿನಲ್ಲಿಯ ಮೌಲ್ಯಗಳು ದಿವಾಳಿಯಾದ ಸಂಕೇತ.

ಬೆಳಗಾವಿ ಕರ್ನಾಟಕದ ಅವಿಭಾಜ್ಯ ಅಂಗ. ಭಾಷಾವಾರು ರಾಜ್ಯ ರಚನೆಯ ಮೊದಲು ಹಾಗೂ ನಂತರ ಬೆಳಗಾವಿಯ ಬಗೆಗಿನ ಮರಾಠಿಗರ ಇತ್ತಂಡವಾದ ಗುಂಡಾಗಿರಿ, ಸತ್ಯಾಗ್ರಹಗಳಿಗೆ ಸರಕಾರದ ಆಯೋಗಗಳಿಗೆ ಮುಂಚೂಣಿಯಲ್ಲಿ ನಿಂತು ಸ್ಪಷ್ಟವಾಗಿ ಉತ್ತರ ನೀಡಿದೆ. ಬೆಳಗಾವಿಯ ಸಮಸ್ಯೆಯ ಬಗ್ಗೆ ಅಮೂಲಾಗ್ರವಾಗಿ ಅರಿತಿದ್ದು ಏಕೈಕ ವ್ಯಕ್ತಿ ಅಣ್ಣೂ ಗುರೂಜಿ. ಮಹಾಜನ ಆಯೋಗದ ಮುಂದೆ ಇವರು ಮಂಡಿಸಿದ ವಾದ ಬೀರಿದ ಪ್ರಭಾವವೇ ಇಂದು ಬೆಳಗಾವಿ ಕರ್ನಾಟಕದಲ್ಲಿ ಉಳಿಯಲು ಸಾಧ್ಯವಾಯಿತು.

ದಿವಂಗತ ಪ್ರಧಾನಿ ಇಂದಿರಾ ಗಾಂಧಿಯವರು ರಾಷ್ಟ್ರದ ಮೇಲೆ ತುರ್ತು ಪರಿಸ್ಥಿತಿ ಸಾರಿದಾಗ ತಮ್ಮ ಶಿಷ್ಯನಾದ ವೆಂಕಣ್ಣಾ ಮಠದನನ್ನು ಪ್ರೇರೇಪಿಸಿ ಆತನನ್ನು ಅಧ್ಯಕ್ಷನನ್ನಾಗಿ ಮಾಡಿ ಪೇಟೆಯಲ್ಲಿ ಈ ಕರಾಳತೆಯನ್ನು ಖಂಡಿಸಿ ಭಾಷಣ ಮಾಡಿ ಶಿಷ್ಯನನ್ನು ತಮ್ಮೊಟ್ಟಿಗೆ ಕರೆದುಕೊಂಡು ತುರ್ತು ಪರಿಸ್ಥಿತಿಯಲ್ಲಿ ಜೈಲುವಾಸ ಅನುಭವಿಸಿದರು. "ಸ್ವಾತಂತ್ರ್ಯ ಸಂಗ್ರಾಮದಿಂದ ತುರ್ತು ಪರಿಸ್ಥಿತಿಯವರೆಗೆ ೭ ಸಲ ಜೈಲುವಾಸ ಅನುಭವಿಸಿದ ಇವರು ೭ ವರ್ಷ ೧ ತಿಂಗಳು ಕಾಲ ತಮ್ಮ ಬದುಕಿನ ದಿನಗಳನ್ನು ಜೈಲಿನಲ್ಲಿ ಕಳೆದರು"[೮].

**ಪುಂಡಲೀಕಜಿ ಕಾತಗಡೆ :**

ಅಪ್ಪಟ ಗಾಂಧೀವಾದಿಯಾದ ಕಾತಗಡೆಯವರು ಬದುಕಿನ ತುಂಬ ಹೋರಾಟವನ್ನೆ ಮೈಗೂಡಿಸಿಕೊಂಡಿದ್ದರು. ಇವರು ಕರ್ನಾಟಕದ ಹಾವೇರಿ ಜಿಲ್ಲೆಯ ಸಾಂಪ್ರದಾಯಿಕ ಶಾಸ್ತ್ರಿ ಮನೆತನದವರು. ಪರಂಪರೆಯಿಂದ ನಡೆದು ಬಂದ ಶಾಸ್ತ್ರೀ ವೃತ್ತಿಯ ನೈಪುಣ್ಯತೆಯು ಸಮಾಜದಲ್ಲಿ ಅವರಿಗೊಂದು ಗೌರವದ ಸ್ಥಾನವನ್ನು ತಂದುಕೊಟ್ಟಿತ್ತು. ಮಿರಜ ಸಂಸ್ಥಾನಿಕರು ಇವರ ಮನೆತನದವರನ್ನು ಗುರುತಿಸಿ ರಾಜಾಶ್ರಯವನ್ನು ನೀಡಿದರು. ಆ ಕಾರಣದಿಂದ ಕಾತಗಡೆ ಮನೆತನವು ಮಿರಜಕ್ಕೆ ಸ್ಥಳಾಂತರವಾಯಿತು.

ಇವರು ಮೂಲತಃ ಮಹಾರಾಷ್ಟ್ರ ಮಿರಜದವರು. ೧೨-೦೭-೧೮೮೫ ರಂದು ಪುಂಡಲೀಕಜಿ ಕಾತಗಡೆಯವರು ಜನಿಸಿದರು. ಇವರ ಮೊದಲನೆ ಹೆಸರು ನಾರಾಯಣ ತಮ್ಮಾಜಿ ಕಾತಗಡೆ ಮಿರಜ ನಗರವು ಸಂಸ್ಥಾನಿಕರ ಆಡಳಿತಕ್ಕೆ ಒಳಪಟ್ಟಿದ್ದರು ರೈಲ್ವೆ ಮುಂತಾದ ಸೌಕರ್ಯಗಳಿಂದಾಗಿ ಕರ್ನಾಟಕದೊಂದಿಗೆ ತನ್ನ ಸಂಪರ್ಕವನ್ನು ಬೆಳೆಸಿಕೊಂಡಿತ್ತು. ಕರ್ನಾಟಕ ಮಹಾರಾಷ್ಟ್ರ ಉಭಯ ರಾಜ್ಯಗಳ ಕೊಡುಕೊಳ್ಳುವಿಕೆಯ ಕೇಂದ್ರವೆನಿಸಿದಂತೆ ಮಿರಜ ಸಂಸ್ಥಾನವು ಬೆಳೆದುಕೊಂಡಿತ್ತು. ಪುಂಡಲೀಕಜಿಯವರ ಬಾಲ್ಯ ಹಾಗೂ ಪ್ರೌಢ ಶಿಕ್ಷಣವು ಮಿರಜದಲ್ಲಿಯೇ ಆಗಿತ್ತು. ವಿದ್ಯಾಭ್ಯಾಸದ ಜೊತೆಗೆ ಪುಂಡಲೀಕಜಿಯವರು ವ್ಯಾಯಾಮ ಕಡೆಗೆ ಹೆಚ್ಚಿನ ಆಸಕ್ತಿಯನ್ನು ಬೆಳೆಸಿಕೊಂಡಿದ್ದರು. ಸಭೆ ಸಮಾರಂಭಗಳನ್ನೆ ಅತ್ಯಂತ ಉತ್ಸಾಹದಿಂದ ಇವರು ನಡೆಸುತ್ತಿದ್ದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಮುಂಚೂಣಿಯಲ್ಲಿದ್ದ ಬಾಲ ಗಂಗಾಧರ ತಿಲಕ ಅವರ ಬಗ್ಗೆ ಕಾತಗಡೆಯವರು ಅಪಾರವಾದ ಪ್ರೇಮ ಮತ್ತು ವಿಶ್ವಾಸವಿತ್ತು. ತಿಲಕರು ಹೋರಾಡಿಸುತ್ತಿದ್ದ ಕೇಸರಿ ಪತ್ರಿಕೆಯನ್ನು ತಪ್ಪದೆ ಇವರು ಓದುತ್ತಿದ್ದರು. ಆ ಪತ್ರಿಕೆಯ ಪ್ರೇರಣೆಯಿಂದ ಮತ್ತು ಪ್ರಭಾವದಿಂದಾಗಿ ಕ್ರಾಂತಿಕಾರಿಗಳ ಸಂಘಟನೆಯನ್ನು ಮಾಡಿದರು. ಇವರು ಚತುರ ಭಾಷಾ ಪಂಡಿತರಾಗಿದ್ದರು. ಕನ್ನಡದಲ್ಲಿ ಇವರಿಗೆ ಅತ್ಯಂತ ಪ್ರಭುತ್ವವಿತ್ತು. ಆಶ್ಚರ್ಯದ ಸಂಗತಿಯೆಂದರೆ ಭಗವದ್ಗೀತೆಯನ್ನು ಇಡಿಯಾಗಿ ಕಂಠಪಾಠ ಮಾಡಿ ದಿನಾಲು ಪಠಿಸುತ್ತಿದ್ದರು. ಶಾರೀರಿಕ ಶಿಕ್ಷಣದಲ್ಲಿ ಆಸಕ್ತಿ ಹೊಂದಿದ ಇವರು ಮಿರಜದಲ್ಲಿ ಅಂಬಾಬಾಯಿ ತಾಲಿಮ ಸಂಸ್ಥೆಯನ್ನು ಸ್ಥಾಪಿಸಿದರು.

ರಾಷ್ಟ್ರೀಯ ಸ್ವಾತಂತ್ರ್ಯದ ಆಂದೋಲನದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳುವ ನಿರ್ಧಾರವನ್ನು ಕೈಕೊಂಡ ಬಳಿಕ ಇವರು ಮಿರಜ ಬಿಟ್ಟು ಬೆಳಗಾವಿಗೆ ಬರುತ್ತಾರೆ. ೧೯೧೪ರಲ್ಲಿ ಗಂಗಾಧರರಾವ ದೇಶಪಾಂಡೆಯವರನ್ನು ಭೆಟ್ಟಿಯಾಗಿ ಅವರ ಮಾರ್ಗದರ್ಶನದಲ್ಲಿ ಕ್ರಾಂತಿಕಾರಿ ಕಾರ್ಯವನ್ನು ಮಾಡುತ್ತಾರೆ. ಗಂಗಾಧರರಾವ ದೇಶಪಾಂಡೆಯವರು ಕಾತಗಡೆಯವರ ಕ್ರಾಂತಿಕಾರಿ ಮನೋಭಾವನೆಯನ್ನು ಅರಿತು ತಿಲಕರೊಂದಿಗೆ ಕಾರ್ಯ ಮಾಡಲು ಕಳಿಸುತ್ತಾರೆ. ಅಲ್ಲಿಂದ ಬಿಹಾರದ ಚಂಪಾರಣ್ಯ ಹೋರಾಟದಲ್ಲಿಯು ಪಾಲ್ಗೊಳ್ಳುವ ಅವಕಾಶ ಕಾತಗಡೆಯವರಿಗೆ ಲಭಿಸುತ್ತದೆ. ಈ ಸಂದರ್ಭದಲ್ಲಿ ಡಾ. ಬಾಬು ರಾಜೇಂದ್ರ ಪ್ರಸಾದರ ಜೊತೆ ಕಾರ್ಯ ಮಾಡಿ ಗಾಂಧೀಜಿಯವರ

ಗಮನವನ್ನು ಸೆಳೆಯುತ್ತಾರೆ. ಮುಂದೆ ಸಾಬರಮತಿ ಆಶ್ರಮದಲ್ಲಿ ಗಾಂಧೀಜಿಯವರ ಅನುಯಾಯಿಯಾಗಿ ಕಾರ್ಯ ಮಾಡುತ್ತಾರೆ.

ಕಾತಗಡೆಯವರ ಕರ್ತವ್ಯ ದಕ್ಷತೆಯನ್ನು ಕಂಡು ಗಂಗಾಧರರಾವ ದೇಶಪಾಂಡೆಯವರು ಕಾತಗಡೆಯವರು ಮತ್ತು ವಡವಿಯವರನ್ನು ಹುದಲಿಗೆ ಕರೆಯಿಸಿಕೊಳ್ಳುತ್ತಾರೆ. ಅಲ್ಲಿ ಕುಮರಿ ಆಶ್ರಮವನ್ನು ಸ್ಥಾಪಿಸಿ ಅದರ ಸಂಪೂರ್ಣ ಜವಾಬ್ದಾರಿಯನ್ನು ಈ ಇಬ್ಬರು ಮುಖಂಡರಿಗೆ ಅವರು ಒಪ್ಪಿಸುತ್ತಾರೆ. ವಡವಿಯವರು ಗಂಗಾಧರರಾವರು ಹಾಕಿಕೊಟ್ಟ ಕಾರ್ಯ ಪದ್ಧತಿಯನ್ನು ಜಾರಿಯಲ್ಲಿ ತಂದು ಕುಮರಿ ಆಶ್ರಮದ ಕೀರ್ತಿಯನ್ನು ಹೆಚ್ಚಿಸುತ್ತಾರೆ. ಕರ್ನಾಟಕದ ಒಂದು ಮೂಲೆಯಲ್ಲಿ ಇದ್ದ ಕುಮರಿ ಆಶ್ರಮದ ಮುಖಂಡರು ಇಡೀ ದೇಶದ ತುಂಬ ಆಶ್ರಮದ ಕೀರ್ತಿಯನ್ನು ಬೆಳಗಿಸುತ್ತಾರೆ. ಆ ಸಂದರ್ಭದಲ್ಲಿ ಕಾಕಾ ಕಾಲೇಲಕರ, ಕಿಶೋರಲಾಲ ಮಶ್ರವಾಲಾ, ದತ್ತೋಪಂತ ಪಟವರ್ಧನ, ಅಚ್ಯುತರಾವ ಪಟವರ್ಧನ, ವಿನೋಬಾ ಭಾವೆ, ರಾಜೇಂದ್ರ ಪ್ರಸಾದ, ಸರ್ದಾರ ವಲ್ಲಭಬಾಯಿ ಪಟೇಲ, ಮಹಾತ್ಮಾ ಗಾಂಧೀಜಿ ಹೀಗೆ ಹಲವು ರಾಷ್ಟ್ರೀಯ ಮುಖಂಡರೊಂದಿಗೆ ಕಾರ್ಯ ಮಾಡುವ ಸುವರ್ಣ ಅವಕಾಶ ಲಭಿಸಿತು. ೧೯೩೨ ರಿಂದ ೧೯೪೩ರವರೆಗೆ ಸುಮಾರು ಹತ್ತು ವರ್ಷಗಳ ಕಾಲ ಹುದಲಿಯ ಪರಿಸರದಲ್ಲಿ ಸ್ವಾತಂತ್ರ್ಯ ಹೋರಾಟದ ಚಳುವಳಿಯನ್ನು ಇವರು ತೀವ್ರಗೊಳಿಸಿದ್ದರು. ಕುಂದರನಾಡಿನ ಸುಲದಾಳ, ಅಕ್ಕತಂಗೇರಹಾಳ, ಪಾಶ್ಚಾಪೂರ ಮುಂತಾದ ಭಾಗಗಳಲ್ಲಿ ಇವರು ಮಾಡಿದ ಚಳುವಳಿಗಳು ಬ್ರಿಟಿಷರನ್ನು ನಿದ್ದೆಗೆಡಿಸಿತ್ತು. ಆದ್ದರಿಂದ ಕುಂದರನಾಡಿನ ಚಳುವಳಿ ಬ್ರಿಟಿಷರಿಗೆ ಡೆಂಜರ ಜೋನ (ಅಪಾಯದ ವಲಯ) ಎಂದೆನಿಸಿತು.

ಇವರ ವೈಶಿಷ್ಟ್ಯವೆಂದರೆ ಚಳುವಳಿ ಇಲ್ಲದ ಸಂದರ್ಭಗಳಲ್ಲಿ ಹಲವಾರು ವಿಧಾಯಕ ಕಾರ್ಯಗಳನ್ನು ಕೈಕೊಳ್ಳುತ್ತಿದ್ದರು. ಶ್ರಮದಾನ ಹರಿಜನರಿಗಾಗಿ ಶಾಲೆ ನಿರ್ಮಾಣ, ವಯಸ್ಕರಿಗಾಗಿ ಶಾಲೆಯನ್ನು ತೆರೆಯುವುದು, ಸುಶಿಕ್ಷಿತ ಕಾರ್ಯಕರ್ತರನ್ನು ಗೌರವ ಶಿಕ್ಷಕರನ್ನು ನೇಮಿಸಿಕೊಳ್ಳುವುದು, ಅಲ್ಲದೆ ಸ್ವಾಮಿ ವಿವೇಕಾನಂದರ ವಾಣಿಯಂತೆ 'A sound mind in A Sound body' ಎಂಬುದನ್ನು ಜಾರಿಯಲ್ಲಿ ತರುತ್ತಿದ್ದರು. ಅದಕ್ಕಾಗಿ ವ್ಯಾಯಾಮ ಶಾಲೆಯನ್ನು ನಿರ್ಮಿಸುತ್ತಿದ್ದರು. ವರದ ಶಿಕ್ಷಣ ಯೋಜನೆ ಮೇರೆಗೆ ಚತ್ರಾಲಯಗಳಲ್ಲಿ ಗಣಪತಿ ಉತ್ಸವ, ಬಸವ ಜಯಂತಿ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ಜನರಲ್ಲಿ ಧಾರ್ಮಿಕ ಮನೋಭಾವವನ್ನು ಮೂಡಿಸುತ್ತಿದ್ದರು. ಗ್ರಾಮಗಳಲ್ಲಿ ರಸ್ತೆ ನಿರ್ಮಿಸುವುದು, ಕೆರೆಗಳನ್ನು ನಿರ್ಮಾಣ ಮಾಡುವುದು, ಜನರಲ್ಲಿ ಶಿಕ್ಷಣದ ಜಾಗೃತಿ ಮೂಡಿಸುವುದು, ಖಾದಿ ಪ್ರಚಾರ ಮಾಡುವುದು ಹೀಗೆ ಹಲವು ಹತ್ತು ವಿದಾಯಕ ಕಾರ್ಯಗಳಲ್ಲಿ ಕಾತಗಡೆಯವರು ತಮ್ಮನ್ನು ತೊಡಗಿಸಿಕೊಂಡವರು. ೧೯೩೨ರ ಆಂದೋಲನದ ನಂತರ ಕುಂದರನಾಡಿನ ಸ್ವಾತಂತ್ರ್ಯ ಯೋಧರು ೧೯೪೧ರಲ್ಲಿ ಹುದಲಿಯಲ್ಲಿ ಜಮನಾಲಾಲ ಖಾದೀ ವಿದ್ಯಾಲಯ ಸ್ಥಾಪಿಸಿದರು. "ಅದರ ವಿವರವಾದ

ಸಂಗತಿಯನ್ನು ಪುಂಡಲೀಕಜೀಯವರು ಬರೆದ ಮರಾಠಿ 'ಸಂಸ್ಮರಣೀಯ ಪರ್ವ' ಎಂಬ ಪುಸ್ತಕದಲ್ಲಿ ಕೊಡಲಾಗಿದೆ"[೯]. ಇವರಿಗೆ ಸಾಹಿತ್ಯದಲ್ಲಿಯು ಆಸಕ್ತಿಯಿತ್ತು. ಹಿಂದಿ ಮರಾಠಿ ಭಾಷೆಯಲ್ಲಿ ಸುಮಾರು ಇಪ್ಪತ್ತಕ್ಕೂ ಹೆಚ್ಚು ಪುಸ್ತಕಗಳನ್ನು ಇವರು ಪ್ರಕಟಿಸಿದ್ದಾರೆ. ಕಾತಗಡೆಯವರು ನುಡಿದಂತೆ ನಡೆಯುವವರು, ಆ ಜನ್ಮ ಬ್ರಹ್ಮಚಾರ್ಯಗಳಾದವರು, ಖಾದಿಯಲ್ಲಿ ಅಪಾರವಾದ ಪ್ರೀತಿಯನ್ನು ಇಟ್ಟವರು, ನಿರಂತರ ಓದು, ಆಧ್ಯಾತ್ಮಿಕ ಚಿಂತನ, ನೆಚ್ಚಿ ಬಂದವರಿಗೆ ಮಾರ್ಗದರ್ಶನ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಪ್ರೇರಣೆ ನೀಡುವುದು ಇವರ ವಿಶೇಷ ಗುಣಗಳು. ಅಪ್ಪಟ ಸ್ವಾತಂತ್ರ್ಯ ಹೋರಾಟಗಾರ ಕಾತಗಡೆಯವರು ೧೯೮೫ ಸಪ್ಟೆಂಬರ್ ೪ ರಂದು ನಿಧನರಾದರು.

**ಗಂಗಪ್ಪ ಯಮಕನಮರಡಿ :**

ಗಂಗಪ್ಪ ಬಸವಂತಪ್ಪ ಯಮಕನಮರಡಿಯವರು ಹುದಲಿಯವರು. ಇವರು ೦೧-೦೪-೧೯೦೭ರಂದು ಹುದಲಿಯಲ್ಲಿ ಜನಿಸಿದರು. ಇವರದು ಸಾಧಾರಣ ಮನೆತನ, ಆರ್ಥಿಕ ಸ್ಥಿತಿ ಸರಿಯಾಗಿರಲಿಲ್ಲ. ಕಲಿಯಲು ಹೆಚ್ಚಿನ ಅನುಕೂಲವಿಲ್ಲದಿದ್ದರೂ, ಆಗಿನ ಮುಲ್ಕೀ ಪರೀಕ್ಷೆಯವರೆಗೆ (ವ್ಹರ್ನ್ಯಾಕ್ಯಲರ ಫಯನೆಲ್) ಓದಿ ಪರೀಕ್ಷೆ ಪಾಸು ಮಾಡಿದ್ದಾರೆ. ೧೯೨೫ ನೆಯ ಇಸ್ವಿಯಲ್ಲಿ ಕುಮರಿ ಆಶ್ರಮ ಸ್ಥಾಪನೆಯಾದಾಗ ಇವರೂ ಅದರಲ್ಲಿ ಸೇರಿಕೊಂಡರು.

ಗಾಂಧೀಜಿಯವರ ದಟ್ಟವಾದ ಪ್ರಭಾವಕ್ಕೆ ಒಳಗಾಗಿ ರಾಮಚಂದ್ರ, ವೆಂ. ವಡವಿಯವರು ಅಸ್ಪೃಶ್ಯತಾ ನಿವಾರಣೆಗಾಗಿ ಹುದಲಿಯಲ್ಲಿ ರಾಷ್ಟ್ರೀಯ ಶಾಲೆಯನ್ನು ಪ್ರಾರಂಭಿಸಿದರು. ಇವರು ಖಾದಿ ಗ್ರಾಮೋದ್ಯೋಗ ಕಾರ್ಯ ನಿರ್ವಹಣೆ ಮಾಡುತ್ತಾ ಖಾದಿ ಬಗ್ಗೆ ಜನರಿಗೆ ತಿಳುವಳಿಕೆ ಹೇಳುತ್ತಿದ್ದರು. ಆ ಕಾರಣಕ್ಕಾಗಿ ಇವರು ಕುಮರಿ ಆಶ್ರಮದಲ್ಲಿ ಇರತೊಡಗಿದರು. ನಂತರ ೧೯೭೫ ರ ಫೆಬ್ರುವರಿ ೨ ರಿಂದ ಗಂಗಪ್ಪನವರು ರಾಷ್ಟ್ರೀಯ ಶಾಲೆ ನಡೆಸತೊಡಗಿದರು. ಎರಡು ವರ್ಷದಲ್ಲಿ ರಾಷ್ಟ್ರೀಯ ನಾಯಕರ ಗಮನ ಸೆಳೆದ ಈ ಶಾಲೆಗೆ ಹಲವು ಪ್ರಮುಖರು ಸಂದರ್ಶನವಿತ್ತರು.

"ಹುದಲಿಯಲ್ಲಿ ಅಸ್ಪೃಶ್ಯತೆಯ ಬಗ್ಗೆ ಜನರಲ್ಲಿ ಕೆಲವು ಮೂಲಭೂತ ನಂಬಿಕೆಗಳಿದ್ದವು. ಅದರ ವಿರುದ್ಧವಾಗಿ ಗಂಗಪ್ಪನವರು ಹೋರಾಟ ಮಾಡಿ ಜನರಲ್ಲಿ ಜಾಗೃತಿಯನ್ನುಂಟು ಮಾಡಲು ಪ್ರಯತ್ನಿಸಿದರು. ಆದರೆ ಕೆಲವು ಮೂಲಭೂತವಾದಿಗಳು ಇವರ ವಿರೋಧವಾಗಿ ಕೆಲಸ ಮಾಡುತ್ತಿದ್ದರು. ಆ ಕಾರಣಕ್ಕಾಗಿ ಹುದಲಿಯಲ್ಲಿ ಚಳುವಳಿ ಆರಂಭವಾಗಿ ಗಂಗಪ್ಪನವರ ಮನೆತನವನ್ನು ಗ್ರಾಮಸ್ಥರು ಬಹಿಷ್ಕರಿಸಿದರು. ಗಂಗಾಧರರಾವ್ ದೇಶಪಾಂಡೆಯವರು ಮಧ್ಯಸ್ಥಿಕೆ ವಹಿಸಿ ಹಿರಿಯರನ್ನು ಒಪ್ಪಿಸಿ ಬಹಿಷ್ಕಾರ ಹಿಂತೆಗೆದುಕೊಳ್ಳಲು ಹಚ್ಚಿದರು. ರಾಷ್ಟ್ರೀಯ ಕಾರ್ಯದಲ್ಲಿ ಮೂರು ಸಲ ಬಹಿಷ್ಕಾರವನ್ನು ಎದುರಿಸಬೇಕಾಯಿತು. ಕುಮರಿ ಆಶ್ರಮದಲ್ಲಿ ನಡೆಯುತ್ತಿದ್ದ ಖಾದೀ ಗ್ರಾಮೋದ್ಯೋಗ ಕಾರ್ಯದಲ್ಲಿಯೂ ಗಂಗಪ್ಪನವರು ತರಬೇತಿ ಹೊಂದಿದರು"[೧೦]. ಡಂಡಿಯಾತ್ರೆಯ ಉಪ್ಪಿನ ಕಾನೂನು

ಭಂಗ ಈ ಪರಿಸರದಲ್ಲಿ ತೀವ್ರ ಪರಿಣಾಮವನ್ನುಂಟು ಮಾಡಿತು. ಈ ಹುದಲಿಯ ತಂಡದಲ್ಲಿ ಯಮಕನಮರಡಿ ಪ್ರಮುಖ ಪಾತ್ರವಹಿಸಿದರು.

"ದಂಡಿಯಾತ್ರೆ ಪ್ರಯಾಣದಿಂದ ಮರಳಿದ ಬಳಿಕ ಹುದಲಿಯಲ್ಲಿ ಸಿಂಧಿ ಗಿಡ ಕಡಿಯುವ ಸತ್ರದಲ್ಲಿ ಗಂಗಪ್ಪನವರು ಭಾಗವಹಿಸಿದರು. ನೂರು ಜನ ಊರವರು ಸತ್ಯಾಗ್ರಹಿ ಪಥಕದವರು ಸೇರಿ ರಣ ಹಲಿಗೆ ಬಾರಿಸುತ್ತ ಕುಂದರನಾಡಿನ ಕೆಳಗಿನ ಹಟ್ಟಿ ಗ್ರಾಮದ ಶಿಂದೀ ಗಿಡ ಕಡಿಯಲು ಹೊರಟಾಗ ಸುಲದಾಳದ ಬಸವಣ್ಣೆಪ್ಪ ಮಲ್ಲಪ್ಪ ಜಕ್ಕಣ್ಣವರ ಮತ್ತು ಅಂಕಲಗಿಯಿಂದ ಸದಾಶಿವ ಗುರಪ್ಪ ಕಾಕತಿ ಮೊದಲಾದ ಹತ್ತು ಜನರು ಅಕ್ಕತಂಗೇರಹಾಳದ ಮೂವತ್ತು ಜನರು ಆ ಗುಂಪಿನಲ್ಲಿದ್ದರು. ಇವರೆಲ್ಲ ಸೇರಿ ಬ್ರಿಟಿಷ ಸರಕಾರದ ವಿರುದ್ಧ ವಿಧ್ವಂಸಕ ಕಾರ್ಯಗಳಲ್ಲಿ ತೊಡಗಿದ್ದರು. ಈ ಸತ್ಯಾಗ್ರಹ ಪಥಕವು ಹೊರಟ ದಿವಸ ಕುಂದರನಾಡಿನಲ್ಲಿಯ ಅಂಕಲಗಿ ಗ್ರಾಮದ ಮಹಮ್ಮದ ಇನಾಕಖಾನ ವಲ್ಲದ ಗೌಸಖಾನ ದೇಸಾಯಿಯವರು ಮೂವತ್ತು ಜನ ಹಿಂಬಾಲಕರ ಜೊತೆಗೆ ಬಂದೂಕು ಮತ್ತು ಬೇರೆ ಬೇರೆ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಸತ್ಯಾಗ್ರಹಿಗಳ ಮೇಲೆ ದಾಳಿ ಮಾಡಲು ಬರುತ್ತಿದ್ದರು. ಈ ಸುದ್ದಿ ತಿಳಿದು ಶಂಭು ಅಪ್ಪಾರಾವ ದೇಶಪಾಂಡೆಯವರು ಅಕ್ಕತಂಗೇರ ಹಾಳದ ಗ್ರಾಮ ದೇವತೆಯ ಜಾತ್ರೆಯ ನಿಮಿತ್ತವಾಗಿ ಸೇರಿದ ಹುದಲಿಯ ಜನರಿಗೆ ತಿಳಿಸಿದಾಗ ಕಲ್ಲು ತೂರಾಟ ನಡೆಯಿತು. ದೇಸಾಯಿ ಮತ್ತು ಸಂಗಡಿಗರು ಓಡಿದರು. ಮದವಾಲ ಕುಂಬಾರ ಮನೆಯ ಆವಿಗೆಯಲ್ಲಿ ದೇಸಾಯಿ ಅವಿತುಕೊಂಡರು. ಅಷ್ಟರಲ್ಲಿ ತಳಗನಟ್ಟಿ ಶಿಂದೀ ಗಿಡ ನಾಶ ಮಾಡಿದ ತಂಡವು ಅಲ್ಲಿಗೆ ಬಂದಿತು. ಕಲ್ಲು ತೂರಾಟ ನಿಲ್ಲಿಸಿ ದೇಸಾಯಿಯವರ ಪ್ರಾಣ ಉಳಿಸಿದ್ದರೂ ಕೂಡ ಆತ ಅವಮಾನಿತನಾಗಿ ಅಕ್ಕತಂಗೇರ ಹಾಳದ ನಿರಪರಾಧಿ ನಾಗರಿಕರ ಮೇಲೆ ಖಟ್ಲೆ ಹಾಕಿಸಿ ಎಲ್ಲರಿಗೂ ಒಂಭತ್ತು ತಿಂಗಳ ಶಿಕ್ಷೆ ನೂರು ರೂಪಾಯಿ ದಂಡ ಹಾಕಿಸಿದರು"[೧೧].

ಸ್ವಾತಂತ್ರ್ಯ ಚಳುವಳಿಯಲ್ಲಿ ಹೋರಾಟಗಾರರಿಗೆ ಅನೇಕ ಜನರು ಬೆಂಬಲ ಕೊಟ್ಟಿದ್ದಾರೆ. ಆದರೆ ದೇಸಾಯಿಯಂತಹ ಕೆಲವರು ಉಪ್ಪು ತಿಂದ ಮನೆಗೆ ಎರಡು ಬಗೆಯುವ ಗುಣ ಸ್ವಭಾವವನ್ನು ಹೊಂದಿದ್ದರು. ಪ್ರಾಣಾಪಾಯದಿಂದ ದೇಸಾಯಿಯನ್ನು ಪಾರು ಮಾಡಿದ ಚಳುವಳಿಗಾರರು ಹಾಗೂ ನಿರಪರಾಧಿ ನಾಗರಿಕರ ಮೇಲೆ ಕಟ್ಲೆ ಹಾಕಿಸಿ ಎಲ್ಲರಿಗೂ ಒಂಭತ್ತು ತಿಂಗಳು ಶಿಕ್ಷೆ ಮತ್ತು ನೂರು ರೂಪಾಯಿ ದಂಡ ವಿಧಿಸಿ ಮೋಜು ನೋಡುವ ದುರ್ಬುದ್ಧಿಯ ಕೆಲವು ಜನರು ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿ ಇದ್ದದ್ದು ಒಂದು ವಿಪರ್ಯಾಸವೇ ಸರಿ.

ತಳಗನಟ್ಟಿಯ ಪ್ರದೇಶದಲ್ಲಿ ಚಳುವಳಿ ಮಾಡಿದ ನಂತರ ಇವರು ಗೋಕಾಕ ತಾಲೂಕಿನ ಮಿಡಕನಟ್ಟಿ ಮತ್ತು ಬೈಲಹೊಂಗಲದ ಹಣ್ಣೀಕೇರಿಯ ಶಿಂದೀ ಬನ ನಾಶ ಮಾಡಿದರು. ಬೆಳಗಾವಿಯ ಸತ್ಯಾಗ್ರಹ ಶಿಬಿರದ ಮುಖ್ಯಸ್ಥರಾದ ಭಾಸ್ಕರ ಕಾಳೆಯವರ ಕರೆಯ ಮೇರೆಗೆ ಹುದಲಿಯ ಇಪ್ಪತ್ತು ಜನರ ಜೊತೆಗೆ ಗಂಗಪ್ಪನವರು ಅಥಣಿ ತಾಲೂಕಿನ ಕೊಕಟನೂರ ಹತ್ತಿರದ ಶಿಂಧಿ ಬನ ಕಡಿಯಲು

ಹೋದರು. ಒಂದು ವಾರ ಪ್ರಭಾತಪೇರಿ, ಸಭೆ, ಉಪ್ಪಿನ ಕಾಯ್ದೆ ಭಂಗ ಮಾಡಿದರು. ಕೊಕಟನೂರ ಶಿಂದಿ ಬನ ಕಡಿಯಲು ಹೋಗುವ ಒಂದು ದಿನ ಮೊದಲು ಗೋಕಾಕ ತಾಲೂಕಿನ ಫೌಜದಾರ ಗುಡಿಯವರು ಅಥಣಿಗೆ ಬಂದು ಸತ್ಯಾಗ್ರಹಿಗಳನ್ನು ಬಂಧಿಸಿದರು. ಅವರಲ್ಲಿ ಗಂಗಪ್ಪ ಬ. ಯಮಕನಮರಡಿ, ಅಲ್ಲಿಸಾಹೇಬ ಹುಸೇನ ಸಾಹೇಬ ವಾರಿಮನಿ, ಅಪ್ಪಾರಾವ ಭೀಮರಾವ ದೇಶಪಾಂಡೆ ಮುಂತಾದವರು ಬಂಧನಕ್ಕೊಳಗಾದರು. ಇವರನ್ನು ಗೋಕಾಕದ ಕಾರಾಗೃಹದಲ್ಲಿಟ್ಟರು. ಹದಿನೈದು ದಿನಗಳ ನಂತರ ಜೈಲಿನಿಂದ ಹೊರಬಂದರು.

೨೯-೦೭-೧೯೩೦ ರಲ್ಲಿ ಬೆಳಗಾವಿ ಕೆಂಟೋನಮೆಂಟದ ಹದ್ದಿಯಲ್ಲಿ ಶಿಂದೀ ಅಂಗಡಿಯ ಮುಂದೆ ಬಾಗಲೂರ ಶ್ರೀನಿವಾಸರ ಜೊತೆಗೆ ಗಂಗಪ್ಪನವರು ಪಿಕೆಟಿಂಗ ಮಾಡಿದರು. ಅದಕ್ಕೆ ೨೦ರೂ ದಂಡ ಅಥವಾ ೨೦ ದಿವಸ ಸಾದಾ ಶಿಕ್ಷೆಯಾಯಿತು. ಹಿಂಡಲಗಿ ಜೈಲಿನಲ್ಲಿ ಶಿಕ್ಷೆ ಅನುಭವಿಸಿ ಹಿಂದಿನ ಖಟ್ಲೆ ಮುದ್ಧತಿಗಾಗಿ ಗೋಕಾಕಕ್ಕೆ ಹಾಜರ ಆದರು. ಅದು ಮತ್ತೆ ಮುದ್ದತು ಬಿತ್ತು.

"ಆ ಹೊತ್ತಿಗೆ ಗೋಕಾಕದಲ್ಲಿ ಕೃಷ್ಣಾಬಾಯಿ ಪಣಜೀಕರರು ಗಣೇಶೋತ್ಸವದ ಭಾಷಣಕ್ಕೆ ಬಂದಿದ್ದರು. ಅವರನ್ನು ಹುದಲಿಗೆ ಕರೆದೊಯ್ಯಬೇಕೆಂದು ವಿಚಾರ ಮಾಡಿ ಗಂಗಪ್ಪ ದತ್ತೋಪಂತ ಅಧ್ಯಾಪಕ ಜಂಬಣ್ಣ ಕೊಲ್ಲಾಪುರೆಯವರು ಹೋದರು. ಕೃಷ್ಣಾಬಾಯಿಯವರು ಘಟಪ್ರಭ ಸ್ಟೇಶನದಲ್ಲಿದ್ದ ಬಂಗ್ಲೆಯಲ್ಲಿದ್ದ ಅವರ ಪತಿ ಮತ್ತು ಮಾವನನ್ನು ಕೇಳಿ ಭಾಷಣಕ್ಕೆ ಬರುವದಾಗಿ ತಿಳಿಸಿದರು. ಅವರು ಒಪ್ಪಿಗೆ ಪಡೆಯಲು ಹೊರಟ ವಾಹನದಲ್ಲಿ ರಾಷ್ಟ್ರೀಯ ವೃತ್ತಿಯ ಜನರು ಇದ್ದುದರಿಂದ ಜಯ ಜಯಕಾರ ಮಾಡುತ್ತ ನಡೆದಿದ್ದರು. ದಾರಿಯಲ್ಲಿ ಸತ್ಯಪ್ಪ ವಡ್ಡರರ ಮನೆ ಮತ್ತು ಶಿಂದೀಬನ ಇದ್ದವು. ಶಿಂಧಿ ಬನದ ರಕ್ಷಣೆಗೆ ೨೦ ಜನ ಪೊಲೀಸರನ್ನು ಸರಕಾರ ಕೊಟ್ಟಿತ್ತು. ಅವರು ಹತ್ತು ಜನ ಪೊಲೀಸರನ್ನು ತಮ್ಮ ನಲವತ್ತು ಜನ ಕೆಲಸಗಾರರನ್ನು ಕರೆದುಕೊಂಡು ಬಂಗ್ಲೆಗೆ ಸತ್ಯಪ್ಪನ ತಮ್ಮ ಕಲ್ಲೋಳೆಪ್ಪ ಬಂದು ಕೈಗೆ ಸಿಕ್ಕವರನ್ನು ಬಡಿಯುವುದು ಮಾಡಿ ಕೃಷ್ಣಾಬಾಯಿಯವರನ್ನು ಬಂಧಿಸುವುದಾಗಿ ಹೇಳಿದರು. ಆದರೆ ಅವರು ಮೆಜಿಸ್ಟ್ರೇಟರ ಸೊಸೆಯೆಂದು ತಿಳಿದು ಬಂಧನಕ್ಕೊಳಗಾಗಲಿಲ್ಲ. ಭಾಷಣಕ್ಕೆ ಕರೆಯಲು ಹೋದವರು ಹೊಡೆತ ತಿಂದರು. ಹಣೆ ಮತ್ತು ಹಲ್ಲಿಗೆ ಪೆಟ್ಟು ಬಿದ್ದ ಗಂಗಪ್ಪನವರು ಮೂರ್ಛೆ ಹೋದರೂ ಬಿಡದೆ ಗಂಗಪ್ಪ, ಗೋವಿಂದ ಶಂಕರ ಮಹಾಜನ್ ಮತ್ತು ಶಂಕರಪ್ಪ ಮಾರ್ತಂಡಪ್ಪ ತೇರದಾಳ ಇವರನ್ನು ಹಿಡಿದುಕೊಂಡು ಶಿಂದೀ ಬನಕ್ಕೆ ಒಯ್ದು ಬೆಳಗಿನವರೆಗೂ ಅಲ್ಲಿ ಇಟ್ಟರು. ಬೆಳಗಾಗುವುದರಲ್ಲಿ ೩ ಶೀಂದೀ ಗಿಡ ಕಡಿದು ಫೌಜದಾರರನ್ನು ಕರೆಯಿಸಿ ಪಂಚನಾಮೆ ಮಾಡಿಸಿ ಖಟ್ಲೆ ಹಾಕಿಸಿದರು. ಬಂಧಿತರನ್ನು ಜೈಲಿನಿಂದ ಜಾಮೀನಿನ ಮೇಲೆ ಬಿಟ್ಟರು. ಖೊಟ್ಟಿ ಫಿರ್ಯಾದಿಯೆಂದು ಪೋಲಿಸರು ಕೇಸು ಹಿಂತೆಗೆದುಕೊಂಡು ಕಲ್ಲೋಳೆಪ್ಪನ ಮೇಲೆ ಹೊಡೆದ ಖಟ್ಲೆ ಹಾಕಿದರು. ಆಗ ಕಲ್ಲೋಳೆಪ್ಪನಿಗೆ ೬ ತಿಂಗಳ ಶಿಕ್ಷೆ ೫೦೦ ರೂಪಾಯಿ ದಂಡ ಉಳಿದವರಿಗೆ ೧ ತಿಂಗಳ ದಂಡಗಳಾದವು"[೨].

ಆಂಗ್ಲ ಸರಕಾರ ಇವರನ್ನು ಹಣ್ಣುಕಾಯಿ ನೀರುಗಾಯಿ ಮಾಡಲು ಯೋಚಿಸಿತು. ಶಿಕ್ಷೆಯಾದ ಮರುದಿನ ಪೊಲೀಸರು ಜಪ್ತಿ ಮಾಡಲು ಇವರ ಮನೆಗಳಿಗೆ ಬಂದರು. ಆಗ ಅವರ ಮನೆಗಳಲ್ಲಿ ಏನೂ ಸಿಗದೆ ಮರಳಿ ಹೋದರು. ವಿರುಪಾಕ್ಷಪ್ಪನವರ ಮನೆಯಲ್ಲಿ ಮಾತ್ರ ೧೦೦೦/- ರೂ ಸಾಮಾನು ಸಿಕ್ಕಿತು. ಅದನ್ನೇ ತೆಗೆದುಕೊಂಡು ಹೋದರು. ನಂತರ ಮೂವರ ಮನೆ-ಅಂಗಡಿಗಳನ್ನು ಲಿಲಾವಿಗೆ ಹಚ್ಚಿದರು. ಊರ ಜನರು ಯಾರೂ ಲಿಲಾವಿನಲ್ಲಿ ಹರಾಜಿಗೆ ಇಟ್ಟ ಮನೆಯನ್ನು ಬೇಡಲಿಲ್ಲ. ಹೀಗಾಗಿ ಅವರಿಗೆ ಅವರ ಮನೆಗಳು ಉಳಿದವು.

೧೯೩೪ರಲ್ಲಿ ಬೆಳಗಾವಿಯಲ್ಲಿ ವೈಯಕ್ತಿಕ ಚಳುವಳಿಯಲ್ಲಿ ಗಂಗಪ್ಪ ಮತ್ತು ಅಕ್ಕತಂಗೇರಹಾಳದ ಬಾಳಪ್ಪ ಹೊಳೆಯಾಚೆ ಇವರು ಪೇಟೆಯಲ್ಲಿ ಝೇಂಡಾ ಸತ್ಯಾಗ್ರಹ ಮಾಡಿದರು. ಆಗ ಅವರಿಗೆ ૩ ತಿಂಗಳ ಶಿಕ್ಷೆ ೫೦ ರೂ ದಂಡ ಅಥವಾ ೧ ತಿಂಗಳ ಶಿಕ್ಷೆಯಾಯಿತು. ಹುದಲಿಯ ತರುಣ ಸಂಘದಲ್ಲಿ ೮೦ ಜನ ತರುಣರು ಸದಸ್ಯರಿದ್ದರು. ಅದರ ಉಪಾಧ್ಯಕ್ಷರಾಗಿ ಕೆಲವು ವರ್ಷ ಕಾರ್ಯ ಮಾಡಿದರು. ೧೭-೦೪-೧೯೩೭ ರಲ್ಲಿ ಗಾಂಧೀ ಸೇವಾ ಸಂಘ ಸಮ್ಮೇಲನ ಹಮ್ಮಿಕೊಂಡಾಗ ಗಂಗಪ್ಪ ಮೊದಲಾದವರು ೧ ತಿಂಗಳು ಮೊದಲೆ ಸಭಾ ಕೋಣೆ, ಮಂಟಪಗಳನ್ನೆಲ್ಲ ನಿರ್ಮಿಸುವಲ್ಲಿ ಶ್ರಮಿಸಿದರು. ಗಾಂಧೀಜಿ ಮತ್ತು ದೇಶದ ಇತರ ನಾಯಕರೆಲ್ಲರೂ ಅಲ್ಲಿ ಒಂದು ವಾರ ಉಳಿದಿದ್ದರು. ಗಾಂಧೀಜಿಯವರು ಇವರ ಹೊಲದಲ್ಲಿಯೇ ಬಾವಿ ತೆಗೆಯಲು ಗುದ್ದಲಿ ಪೂಜೆ ಮಾಡಿದ್ದರು.

೧೯೪೨ ರಲ್ಲಿ ಚಲೇ ಜಾವ್ ಚಳುವಳಿಯಲ್ಲಿ ಹುದಲಿ ಊರವರು ಪ್ರಭಾತಪೇರಿ ಸಭೆ ಮತ್ತು ಸರಕಾರದ ವಿರುದ್ಧ ವಿಧ್ವಂಸಕ ಕಾರ್ಯ ಮಾಡುವ ನಿರ್ಧಾರ ಮಾಡಿ 'ಮಾಡು ಇಲ್ಲವೆ ಮಡಿ' ಎಂಬ ಪಣ ತೊಟ್ಟರು. ಅಗಷ್ಟ ೧೪ ರಂದು ಬೆಳಗ್ಗೆ ಪ್ರಭಾತ ಪೇರಿಯಲ್ಲಿ ૩೦೦ ಜನ ಭಾಗವಹಿಸಿದ್ದರು. ಗಂಗಪ್ಪ ಮೊದಲಾದ ೧೪ ಜನರನ್ನು ಬಂಧಿಸಿದರು. ಅದರಲ್ಲಿ ಗಂಗಪ್ಪ ಮತ್ತು ಕೆಲವರಿಗೆ ೨ ವರ್ಷ ಶಿಕ್ಷೆ ೧೦೦ ದಂಡ ಅಥವಾ ೬ ತಿಂಗಳ ಶಿಕ್ಷೆಯಾಯಿತು. ತಮ್ಮ ಬದುಕನ್ನು ಸ್ವಾತಂತ್ರ್ಯಕ್ಕೆ ಮುಡುಪಿಟ್ಟಿದ್ದ ಇವರು ಜೀವತದ ಕೊನೆಗಾಲದವರಿಗೂ ಖಾದಿಧಾರಿಗಳಾಗಿ ಗಾಂಧಿವಾದಿಯಾಗಿದ್ದರು.

**ಸಂಗಮ್ಮ ಯಮಕನಮರಡಿ :**

"ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಪುರುಷರು ಹೋರಾಟ ಮಾಡಿದಂತೆ ಮಹಿಳೆಯರು ಕೂಡಾ ಪುರುಷರಿಗೆ ಸಮಾನವಾಗಿಯೇ ಹೋರಾಟ ಮಾಡಿದ್ದು ವೈಶಿಷ್ಟಪೂರ್ಣವಾಗಿದೆ. ಸ್ವಾತಂತ್ರ್ಯ ಚಳುವಳಿಯಲ್ಲಿ ದುಡಿಯುವ ತಮ್ಮ ಗಂಡಂದಿರಿಗೆ ಹಲವು ನೆಲೆಗಳಲ್ಲಿ ಅವರ ಕಾರ್ಯಗಳಲ್ಲಿ ಭಾಗಿಯಾಗಿ ಈ ಮಹಿಳೆಯರು ತಮ್ಮ ದೇಶಾಭಿಮಾನವನ್ನು ಮೆರೆದಿದ್ದಾರೆ. ಅಂತಹ ಮಹಿಳೆಯರಲ್ಲಿ ಸಂಗಮ್ಮ ಯಮಕನಮರಡಿಯವರು ಒಬ್ಬರು. ಇವರು ದಿನಾಂಕ ೧೯೧೨ ರಲ್ಲಿ ಹುಟ್ಟಿದರು. ಮಳಗಲಿ ಮನೆತನದಲ್ಲಿ ಇವರ ತಂದೆಯ ಹೆಸರು ಶಿವಪ್ಪ, ತಾಯಿ ನಿಂಗಪ್ಪ ಅವರು ಆರು

ವರ್ಷದ ಮಗುವಾಗಿದ್ದಾಗಲೆ ತಂದೆ ತಾಯಿಗಳನ್ನು ಕಳೆದುಕೊಂಡು ತಬ್ಬಲಿಯಾದರು. ಇವರಿಗೆ ಶೈಕ್ಷಣಿಕ ನೆರವನ್ನು ಮಾಡಿ ಕೊಡುವವರು ದೊರೆಯಲಿಲ್ಲ. ಶಿಕ್ಷಣದ ಕೊರತೆ ಸದಾ ಕೊರೆಯುತ್ತಿತ್ತು. ಇವರಿಗೆ ಹನ್ನೆರಡನೆಯ ವಯಸ್ಸಿನಲ್ಲಿಯೆ ಮದುವೆಯಾಯಿತು. ಗಂಗಪ್ಪ ಯಮಕನಮರಡಿ ಎಂಬ ಸ್ವಾತಂತ್ರ್ಯ ಚಳುವಳಿಗಾರನ ಮಡದಿಯಾಗುವ ಸೌಭಾಗ್ಯ ಇವರಿಗೆ ದೊರಕಿತು. ಗಂಡ ಸ್ವಾತಂತ್ರ್ಯ ಯೋಧರಾದ್ದರಿಂದ ಅವರು ಹಾಗೂ ಅವರ ಸಂಗಡಿಗರ ಪ್ರಭಾವದಿಂದ, ರಾಷ್ಟ್ರ ಸ್ವಾತಂತ್ರ್ಯಕ್ಕಾಗಿ ಇವರೂ ಹೋರಾಡದಲ್ಲಿ ತೊಡಗಿದರು"[೧೩].

೧೯೩೩ ರಲ್ಲಿ ಬೆಳಗಾವಿಯಲ್ಲಿ ಶ್ರೀ ಯಶವಂತರಾವ ದೇಶಪಾಂಡೆಯವರ ಖಡೆಬಝಾರ ಅರಿವೆ ಅಂಗಡಿ ಮುಂದೆ ಪಿಕೆಟಿಂಗ್ ಸತ್ಯಾಗ್ರಹ ಮಾಡುವುದಕ್ಕೆ ಬೆಳಗಾವಿಯ ಕಾಂಗ್ರೆಸ ಕಮೀಟಿಯ ಅನುಮತಿಯನ್ನು ಪಡೆದ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಮಹಿಳೆಯರೂ ಇದ್ದರು. ಅಲ್ಲಿ ಸಂಗಮ್ಮಾ ತಮ್ಮ ಬಗಲಲ್ಲಿಯ ಚಿಕ್ಕ ಮಗುವಿನೊಂದಿಗೆ ಪಿಕೆಟಿಂಗ ಮಾಡಿದರು. ಆಗ ಇವರ ಜೊತೆಗೆ ವಾಮನ್‌ರಾವ ದೇಸಾಯಿಯವರ ಪತ್ನಿ, ಚಂದ್ರಾಬಾಯಿ, ಚನ್ನಪ್ಪ ವಾಲಿಯವರ ಪತ್ನಿ, ಸೌ. ಬಸವಣ್ಣೆವ್ವ ಹಾಗೂ ಕರಿಕಟ್ಟಿಯ ಸಾವಳಗಿಯವರ ಪತ್ನಿ ಗೌರವ್ವ ಈ ನಾಲ್ವರು ಮಹಿಳೆಯರಿದ್ದರು. ಅವರನ್ನು ಬಂಧಿಸಿದ ಆಂಗ್ಲ ಸರಕಾರ ಸಂಗಮ್ಮ ಮತ್ತು ಬಸವಣ್ಣೆಮ್ಮ ಇವರಿಗೆ ಒಂದು ತಿಂಗಳ ಶಿಕ್ಷೆ ವಿಧಿಸಿತು.

ಸಂಗಮ್ಮನವರು ತಮ್ಮ ಪತಿ ಮಾಡಿದ ಪ್ರತಿಯೊಂದು ಸ್ವಾತಂತ್ರ್ಯ ಸಮರದ ಕಾರ್ಯಗಳಲ್ಲಿ ಸಹಕಾರಿಯಾಗಿದ್ದರು. ಅವರ ಸಾಮಾಜಿಕ ಕಾರ್ಯ ರಾಷ್ಟ್ರೀಯ ಕಾರ್ಯಗಳಲ್ಲಿ ಅನುಕೂಲವಾಗಿ ಅವರ ಜೊತೆಗಾರರಾಗಿ ಕಾರ್ಯ ಮಾಡುತ್ತಿದ್ದರು. ಖಾದಿಧಾರಿಗಳಾಗಿದ್ದ ಸಂಗಮ್ಮ ೧೯೮೨ ಎಪ್ರೀಲ್ ಮೂವತ್ತರಂದು ನಿಧನರಾದರು.

### ಸೋಮಲಿಂಗಪ್ಪ ಮಳಗಲಿ :

ಸ್ವಾತಂತ್ರ್ಯ ಚಳುವಳಿ ಕುಂದರನಾಡಿನ ಸುತ್ತಮುತ್ತ ಕಾಳ್ಗಿಚ್ಚಿನಂತೆ ಹಬ್ಬಿತ್ತು. ಬ್ರಿಟಿಷ ಅಧಿಕಾರಿಗಳಿಗೆ ಇದನ್ನು ನಂದಿಸುವುದು ಕಷ್ಟ ಸಾಧ್ಯವಾದ ಕೆಲಸವಾಗಿತ್ತು. ಕುಂದರನಾಡಿನ ಅನೇಕ ತರುಣರು ಈ ಚಳುವಳಿಯಲ್ಲಿ ಧುಮುಕಿದಂತೆ ಸೋಮಲಿಂಗಪ್ಪಾ ಮಳಗಲಿಯವರೂ ಇದರಲ್ಲಿ ಭಾಗಿಯಾಗಿದ್ದರು. ಇವರ ಪೂರ್ಣ ಹೆಸರು ಸೋಮಲಿಂಗಪ್ಪ ಅಪ್ಪಣ್ಣ ಮಳಗಲಿ. ೧೯೨೪ ಅಕ್ಟೋಬರ್ ೯ ರಂದು ಹುದಲಿಯಲ್ಲಿ ಜನಿಸಿದ ಮಳಗಲಿಯವರು ೭ ನೆಯ ಇಯತ್ತೆ ವರೆಗೆ ಓದಿದ್ದರು. ಇವರ ವೃತ್ತಿ ಒಕ್ಕಲುತನ ಕೃಷಿಯ ಜೊತೆಗೆ ಖಾದಿ ಉದ್ದಿಮೆಯಲ್ಲೂ ಇವರು ವಿಧಾಯಕ ಕಾರ್ಯಮಾಡಿದ್ದಾರೆ. ಅಲ್ಲದೆ ನಿಷ್ಠಾವಂತ ಖಾದಿ ಕಾರ್ಯಕರ್ತರಾಗಿ ಸೇವೆ ಸಲ್ಲಿಸಿದ್ದಾರೆ. ೧೯೩೭ರಲ್ಲಿ ಹುದಲಿಗೆ ಮಹಾತ್ಮಾ ಗಾಂಧೀಜಿಯವರು ಬಂದಾಗ ಅವರಿಗೆ ಏಳು ವರ್ಷ ವಯಸ್ಸು. ರಾಮಚಂದ್ರ ವಡವಿ ಹಾಗೂ ಪುಂಡಲೀಕಜಿ ಕಾತಗಡೆ ಪ್ರೇರಣೆಯಿಂದ ಹೋರಾಟಕ್ಕಿಳಿದರು. ಬಾಲ್ಯದಲ್ಲಿ ಗಾಂಧೀಜಿಯವರ ಮಾತುಗಳಿಂದ ಪ್ರೇರಿತರಾಗಿದ್ದರು.

೧೯೪೨ ರ ಗಾಂಧೀ ಜಯಂತಿಯಂದು ಪ್ರಭಾತಪೇರಿಯಲ್ಲಿ ಹೊರಟಾಗ ಬ್ರಿಟಿಷ ಸರಕಾರ ಇವರನ್ನು ಬಂಧಿಸಿ, ಎರಡು ತಿಂಗಳ ಶಿಕ್ಷೆ ವಿಧಿಸಿದ್ದರು. ಆಂಗ್ಲ ಸರಕಾರ ಆವರನ್ನು ಹಿಡಿದುಕೊಟ್ಟವರಿಗೆ ೫೦೦೦ ರೂಪಾಯಿ ಇನಾಮು ಇಟ್ಟದ್ದರು. ಸೋಮಲಿಂಗಪ್ಪನವರು ಭೂಗತರಾದವರಿಗೆ ಮಾಹಿತಿ ನೀಡುವುದರ ಜೊತೆಗೆ ಅವರ ಊಟ ಮತ್ತು ವಸತಿ ವ್ಯವಸ್ಥೆ ಮಾಡುತ್ತಿದ್ದರು. ಈ ಸಂದರ್ಭದಲ್ಲಿ ೫೦೦ ಜನ ಬ್ರಿಟಿಷ್ ಮಿಲಿಟರಿಯವರು ಹುದಲಿಗೆ ಬಂದು ಮುತ್ತಿಗೆ ಹಾಕಿ ೪೦ ಜನರನ್ನು ಬಂಧಿಸಿದರು. ಅವರಲ್ಲಿ ಸೋಮಲಿಂಗಪ್ಪನವರೂ ಒಬ್ಬರಾಗಿದ್ದರು. ಭೂಗತರಾಗಿದ್ದ ರಾಮಚಂದ್ರ ವಡವಿ ಅವರ ಬಗ್ಗೆ ಮಾಹಿತಿಯನ್ನು ನೀಡುವಂತೆ ಬ್ರಿಟಿಷರು ಎಷ್ಟೇ ಚಿತ್ರಹಿಂಸೆಯನ್ನು ಕೊಟ್ಟರೂ ಅದನ್ನೆಲ್ಲಾ ಸಹಿಸಿದರು. ಆದರೆ ವಡವಿ ಮಾಸ್ತರರ ಬಗ್ಗೆ ಸರಕಾರಕ್ಕೆ ಯಾವುದೇ ಮಾಹಿತಿ ನೀಡಲಿಲ್ಲ. ಅವರು ಮೂರು ತಿಂಗಳ ಜೈಲು ಶಿಕ್ಷೆ ಅನುಭವಿಸಬೇಕಾಯಿತು.

**ಭೀಮಪ್ಪ ಯಲಿಗಾರ :**

ಹುದಲಿ ಕುಂದರನಾಡಿನ ಸ್ವಾತಂತ್ರ್ಯ ಚಳುವಳಗಾರರ ಜೇನುಗೂಡಾಗಿತ್ತು. ಇಲ್ಲಿಯ ಅನೇಕ ಜನ ಕುಮರಿ ಆಶ್ರಮದ ಪ್ರಭಾವದಿಂದ ಹೋರಾಟಗಾರರಾಗಿ ರೂಪಗೊಂಡರು. ಅವರಲ್ಲಿ ಭೀಮಪ್ಪ ಯಲಿಗಾರ ಮಂಚೂಣಿಯಲ್ಲಿದ್ದರು.

ಭೀಮಪ್ಪನವರು ೧೯೧೯ ಮಾರ್ಚ ೨೧ ರಂದು ರಲ್ಲಿ ಹುದಲಿಯಲ್ಲಿ ಜನಿಸಿದರು. ತಂದೆ ಶ್ರೀ ಚನ್ನಬಸಪ್ಪ. ತಾಯಿ ನಾಗಮ್ಮ. ಆರ್ಥಿಕ ಪರಿಸ್ಥಿತಿ ತೀರ ಸಾಧಾರಣವಾಗಿದ್ದರಿಂದ ಕೇವಲ ೫ ನೆಯ ಇಯತ್ತೆಯವರೆಗೆ ಓದಿ ಹುದಲಿಯಲ್ಲಿ ಪ್ರಾರಂಭವಾದ ಖಾದಿ ಗ್ರಾಮೋದ್ಯೋಗದಲ್ಲಿ ಬಟ್ಟೆ ನೇಯುವ ಕಾರ್ಯದಲ್ಲಿ ಶಿಕ್ಷಣ ಪಡೆದರು. ಗಂಗಾಧರರಾವ ದೇಶಪಾಂಡೆಯವರು ಕುಮರಿಯ ಆಶ್ರಮದಲ್ಲಿ ರಾಷ್ಟ್ರೀಯ ಶಿಕ್ಷಣ ಖಾದಿ ಗ್ರಾಮೋದ್ಯೋಗ, ಅಸ್ಪೃಶ್ಯತಾ ನಿವಾರಣೆ ಮೊದಲಾದವುಗಳ ಬಗೆಗೆ ಶಿಕ್ಷಣ ಕೊಡುತ್ತಿದ್ದರು. ಶ್ರೀ ಪುಂಡಲೀಕ ಕಾತಗಡೆ, ಶ್ರೀರಾಮಚಂದ್ರ ವಡವಿ, ಶ್ರೀ ಗಂಗಪ್ಪ ಯಮಕನಮರಡಿ ಮೊದಲಾದವರ ಪ್ರಭಾವದಿಂದ ದೇಶ ಸೇವೆ ಮಾಡಬೇಕೆಂಬ ಹಂಬಲದಿಂದ ಸ್ವಾತಂತ್ರ್ಯ ಚಳುವಳಿಗೆ ಧುಮುಕಿದರು. ೧೯೪೨ರಲ್ಲಿ ಹುದಲಿಯಲ್ಲಿ ಜಮನಾಲಾಲ ಖಾದಿ ವಿದ್ಯಾಲಯವನ್ನು ಆರಂಭಿಸಿದರು.

೧೯೪೨ರ ಚಲೇಜಾವ್ ಚಳುವಳಿಯಲ್ಲಿ ಭಾಗವಹಿಸಿ ತಮ್ಮ ಗೆಳೆಯರೊಂದಿಗೆ ತಮ್ಮೂರಿನ ಪೋಸ್ಟ್ ಚೀಲವನ್ನು ಸುಟ್ಟು ಹಾಕಿದರು. ಆಗ ಪೋಲಿಸರು ಇವರನ್ನು ಬಂಧಿಸಿ ಜೈಲಿಗೆ ಹಾಕಿದರು. ಒಂದು ವರ್ಷ ಶಿಕ್ಷೆ ಜೊತೆಗೆ ೧೦೦ ರೂಪಾಯಿ ದಂಡ ವಿಧಿಸಿದರು. ದಂಡ ತೆತ್ತಲಾಗದಿದ್ದರಿಂದ ಮತ್ತೆ ಮೂರು ತಿಂಗಳು ಶಿಕ್ಷೆ ಅನುಭವಿಸಿ, ಬಿಡುಗಡೆ ಹೊಂದಿದರು. ನಂತರ ಬಳ್ಳಾರಿ ಜಿಲ್ಲೆಯ ಕುರಗೋಡದಲ್ಲಿ ರಾಷ್ಟ್ರೀಯ ಶಾಲೆ ಆರಂಭವಾದಾಗ ಅಲ್ಲಿ ನಾಲ್ಕು ತಿಂಗಳು ಶಿಕ್ಷಕರಾಗಿ ಕೆಲಸ ಮಾಡಿದರು. ಅನಂತರ ಧಾರವಾಡ ಜಿಲ್ಲೆಯ ಕರಜಗಿಯಲ್ಲಿ ವರ್ಧಾ ಶಿಕ್ಷಣ ಸಂಸ್ಥೆಯ ವತಿಯಿಂದ

ಸರಕಾರದ ಶಿಕ್ಷಕನಿಗೆ ನೇಯ್ಗೆ ಕಲಿಸುವ ಕೆಲಸವನ್ನು ಒಂದು ವರ್ಷ ಮಾಡಿದರು. ಗೋಕಾಕ ತಾಲ್ಲೂಕಿನ ಕಲ್ಲೊಳ್ಳಿ ಗ್ರಾಮದಲ್ಲಿ ಗ್ರಾಮ ಸೇವಕರಾಗಿ ಐದು ವರ್ಷ ಸೇವೆ ಸಲ್ಲಿಸಿದರು. ಹೀಗೆ ರಾಷ್ಟ್ರೀಯ ಕಾರ್ಯ ಹಾಗೂ ಕಾಯ್ದೆಭಂಗ ಕಾರ್ಯಗಳನ್ನು ಭೀಮಪ್ಪನವರು ಮಾಡುತ್ತಿದ್ದರು. ಇವರೊಂದಿಗೆ ಎಮ್. ಬಿ. ದೇಸಾಯಿ, ಮಲ್ಲಪ್ಪ ರಾಮಪ್ಪ ಹೆಗನಾಯಿಕ ಹಾಗೂ ಬಸವಣ್ಣೆಪ್ಪ ಬಾಳಪ್ಪ ಕೊಂತಿ ಮೊದಲಾದವರು ಭಾಗವಹಿಸಿದ್ದರು.

## ಭೀಮಪ್ಪ ಭೂಶಿ :

ಇವರು ಸ್ವಾತಂತ್ರ್ಯ ಹೋರಾಟಗಾರರೂ ಹೌದು; ಸಮಾಜ ಸೇವಕರೂ ಹೌದು. ರಾಮಚಂದ್ರಜೀ ವಡವಿ ಹಾಗೂ ಪುಂಡಲೀಕಜೀ ಕಾತಗಡೆಯವರ ಪ್ರಭಾವದಿಂದ ಇವರು ೧೯೪೨ ರ ಚಲೇಜಾವ ಚಳುವಳಿಯಲ್ಲಿ ಧುಮುಕಿದರು. ೧೯೪೨ ರ ಚಲೇಜಾವ್ ಚಳುವಳಿಯಲ್ಲಿ ಸಕ್ರೀಯವಾಗಿ ಭಾಗವಹಿಸಿ ಅನೇಕ ಕಾರ್ಯಗಳನ್ನು ಮಾಡಿದರು. ಆ ಸಂದರ್ಭದಲ್ಲಿ ಇವರು ೨೦ ಜನ ತರುಣರೊಂದಿಗೆ ಮೂರು ತಿಂಗಳುಗಳವರೆಗೆ ಭೂಗತರಾಗಿದ್ದರು. ಬ್ರಿಟಿಷ ಅಧಿಕಾರಿಗಳು ಇವರನ್ನು ಪತ್ತೆ ಹಚ್ಚಿ ಬಂಧಿಸಿ ನಂತರ ಇವರನ್ನು ಜೈಲಿನಲ್ಲಿ ಇಟ್ಟರು. ಹಿಂದೆ ಪ್ರಭಾತಪೇರಿ ತೆಗೆದ ಕಾರಣಕ್ಕಾಗಿ ಬಂಧಿಸಿ ಹದಿನೈದು ದಿವಸ ಜೈಲು ಶಿಕ್ಷೆ ಜೊತೆಗೆ ಮೂವತ್ತು ರೂಪಾಯಿಯ ದಂಡವಿಧಿಸಲಾಗಿತ್ತು. ಆಶ್ಚರ್ಯದ ಸಂಗತಿಯೆಂದರೆ ಇವರ ಮನೆಯಲ್ಲಿ ಇವರಿಗೆ ಗೊತ್ತಿಲ್ಲದೆ ದಂಡ ತುಂಬಿದ್ದರು. ಆ ಕಾರಣದಿಂದ ಜೈಲಿನಿಂದ ಇವರು ಹೊರಗೆ ಬಂದಿದ್ದರು. ಆದರೆ ಬ್ರಿಟಿಷ ಸರಕಾರ ಇವರಿಗೆ ಪೋಸ್ಟ ಸುಟ್ಟ ಕೇಸು ಹಾಕಿ ಮತ್ತೆ ಮೂರು ತಿಂಗಳು ಸಾಂಗಲಿ ಜೈಲಿನಲ್ಲಿ ಇಟ್ಟಿತು. ೧೯೪೩ ರಲ್ಲಿ ಬಿಡುಗಡೆ ಹೊಂದಿ ಮನೆಗೆ ಬಂದರು. ೧೯೪೪ ರಲ್ಲಿ ಮಿರಜಿಯ ವ್ಯಾಯಾಮ ಶಾಲೆಯಲ್ಲಿ ಡ್ರಿಲ್, ಲೇಜಿಮ್, ಡಂಬೆಲ್ಸ್, ಲಾಠಿ ಮುಂತಾದವುಗಳ ಟ್ರೈನಿಂಗ್ ಪಡೆದು ಬಂದು ತಮ್ಮ ಊರಲ್ಲೂ ಶಾಲಾ ಮಕ್ಕಳಿಗೆ ಆ ಶಿಕ್ಷಣ ನೀಡಿದರು.

ಭೀಮಪ್ಪ ನಿಂಗಪ್ಪ ಭೂಶಿಯವರ ಜನ್ಮ ಸ್ಥಳ ಹುದಲಿ. ಅಲ್ಲಿಯ ಕೃಷಿ ಕುಟುಂಬದಲ್ಲಿ ೧೯೧೯ ಸಪ್ಟೆಂಬರ್ ೧೦ ರಂದು ಜನಿಸಿದರು. ಕೇವಲ ಎರಡನೆಯ ತರಗತಿಯವರೆಗೆ ಮಾತ್ರ ಓದಿದ ಇವರು ಸಹಜವಾಗಿ ಕೃಷಿ ಕಾರ್ಯದಲ್ಲಿ ತೊಡಗಿದರು. ಆದರೆ ಹುದಲಿಯ ಪರಿಸರ ಇವರನ್ನು ಹೋರಾಟದ ಹಾದಿಗೆ ಎಳೆದು ತಂದಿತು. ಖಾದಿ ಉದ್ಯಮದಲ್ಲಿ ಪರಿಣತಿ ಸಾಧಿಸಿ, ಬಾಗಲಕೋಟ ಜಿಲ್ಲೆಯ ಹುನಗುಂದ ಶಾಖೆಗೆ ಮ್ಯಾನೇಜರ್ ಆಗಿ ಕೆಲಸ ಮಾಡಿದರು.

ಪುಂಡಲಿಕಜೀಯವರು ಸ್ಥಾಪಿಸಿದ ಸಮಗ್ರ ಗ್ರಾಮ ಸೇವಾ ಕೇಂದ್ರದಲ್ಲಿ ಭೀಮಪ್ಪಾ ಭೂಶಿ ನಿಷ್ಠೆಯಿಂದ ದುಡಿದರು. ಕೊನೆಯುಸಿರಿನವರೆಗೂ ಹುದಲಿಯ ಗಾಂಧಿ ಪ್ರತಿಮೆಗೆ ನಿತ್ಯ ಪೂಜೆ ಸಲ್ಲಿಸಿ, ೨೦೧೯ ಫೆಬ್ರುವರಿಯಲ್ಲಿ ನಿಧನರಾದರು.

**ಗೌಡಪ್ಪ ಪಾಟೀಲ :**

ಪುಂಡಲೀಕಜಿ ಕಾತಗಡೆ ಹಾಗೂ ರಾಮಚಂದ್ರ ವಡವೀಯವರ ಪ್ರಭಾವದಿಂದ ಗೌಡಪ್ಪ ಪಾಟೀಲ ಸ್ವಾತಂತ್ರ್ಯ ಚಳುವಳಿಯಲ್ಲಿ ಉತ್ಸಾಹದಿಂದ ಸೇರಿಕೊಂಡರು. ಹುದಲಿಯವರಾದ ಇವರು ೧೯೧೬ ರಲ್ಲಿ ಜನಿಸಿದರು. ಕನ್ನಡ ಏಳನೆಯ ಇಯತ್ತೆಯವರೆಗೆ ಓದಿ, ಕೃಷಿಯಲ್ಲಿ ತೊಡಗಿದ್ದರು. ಗಾಂಧೀಜಿಯವರ ಸರ್ವೋದಯ ಕಾರ್ಯಕರ್ತರಾಗಿ ನಿಷ್ಠೆಯಿಂದ ದುಡಿದರು.

೧೯೩೯ ರಲ್ಲಿ ಬೇಡರ ಛಾತ್ರಾಲಯವನ್ನು ಹುದಲಿಯಲ್ಲಿ ಪುಂಡಲೀಕ ಕಾತಗಡೆಯವರು ಪ್ರಾರಂಭಿಸಿದರು. ಬೇಡರ ಛಾತ್ರಾಲಯದಲ್ಲಿ ಮುಂದಾಳತ್ವವನ್ನು ವಹಿಸಿಕೊಂಡು ಪಾಟೀಲರು ಪ್ರತಿಯೊಂದು ಹಳ್ಳಿಗೆ ಒಬ್ಬರಂತೆ, ಅವರ ಗ್ರಾಮಕ್ಕೆ ೨೫ ಹಳ್ಳಿಯಿಂದ ೨೫ ಹುಡುಗರನ್ನು ಸೇರಿಸಿದರು. ಅವರ ಸರ್ವಾಂಗೀಣ ಉನ್ನತಿಗಾಗಿ ಶ್ರಮಿಸಿದರು. ಯಾವುದೆ ಸೇವಾಕಾರ್ಯ ಮಾಡಿದರೂ ಸ್ವಯಂಸೇವಕ ಎಂದು ಕೆಲಸ ಮಾಡಿದರು.

"ದೇಶವ್ಯಾಪಿ ಹಬ್ಬಿದ ೧೯೪೨ನೆಯ ಇಸ್ವಿಯ ಅಸಹಕಾರ ಚಳುವಳಿಯಲ್ಲಿ ಪಾಲ್ಗೊಂಡಿದ್ದರು. ೧೯೪೧ರಲ್ಲಿ ವೈಯಕ್ತಿಕ ಚಳುವಳಿ ಪ್ರಾರಂಭಿಸಿ ನಾಲ್ಕು ತಿಂಗಳ ಶಿಕ್ಷೆ ಅನುಭವಿಸಿದರು. ಚಲೇಜಾವ ಚಳುವಳಿಯಲ್ಲಿ ಭಾಗವಹಿಸಿದಾಗ ಒಂದೂವರೆ ವರ್ಷ ಶಿಕ್ಷೆ ಹಾಗೂ ನೂರು ರೂಪಾಯಿ ದಂಡ ಅಥವಾ ಆರು ತಿಂಗಳು ಶಿಕ್ಷೆ ಹೀಗೆ ಒಟ್ಟು ಎರಡು ವರ್ಷ ಶಿಕ್ಷೆ ಅನುಭವಿಸಿದ್ದಾರೆ"[೧೪].

**ಬಸವಣ್ಣೆಪ್ಪ ಜಕ್ಕಣ್ಣವರ :**

ಚಲೇಜಾವ್ ಚಳುವಳಿಯಲ್ಲಿ 'ಆಂಗ್ಲರೇ ಭಾರತವನ್ನು ಬಿಟ್ಟು ತೊಲಗಿರಿ' ಎಂದು ಘೋಷಣೆ ಮಾಡುತ್ತ ಹುದಲಿ ಊರಲ್ಲಿ ಪ್ರಭಾತಪೇರಿ ಮಾಡಿದ ಒಬ್ಬ ಧೀರ ನಾಯಕ ಶ್ರೀ ಬಸವಣ್ಣೆಪ್ಪಾ ಜಕ್ಕಣ್ಣವರು. ಇವರ ತಂದೆ ಮಲ್ಲಪ್ಪ. ತಾಯಿ ಗಂಗವ್ವ ಇವರು ೦೬-೧೧-೧೯೧೨ ರಂದು ಹುದಲಿಯಲ್ಲಿ ಜನಿಸಿದರು. ತಂದೆಯು ಚಿಕ್ಕ ವ್ಯಾಪಾರಸ್ಥರಾಗಿದ್ದರು. ಆದಾಯ ಕಡಿಮೆ. ಏಳನೆಯ ವರ್ಗದವರೆಗೆ ಶಿಕ್ಷಣವನ್ನು ಪೂರ್ಣಗೊಳಿಸಿ ತಂದೆಯಂತೆ ವ್ಯಾಪಾರದಲ್ಲಿ ತೊಡಗಿದ್ದರು.

೧೯೩೫ ರಲ್ಲಿ ಶ್ರೀ ಭಾಸ್ಕರ ವಿಷ್ಣುಕಾಳೆಯವರು ಕುಮರಿ ಆಶ್ರಮದ ಪರವಾಗಿ ಸುಲಧಾಳಕ್ಕೆ ಗ್ರಾಮ ಸೇವಕರಾಗಿ ಕಾರ್ಯ ಮಾಡಲು ಬಂದಿದ್ದರು. ಇವರ ಪ್ರೋತ್ಸಾಹದಿಂದ ಬಸವಣ್ಣೆಪ್ಪನವರ ಮನಸ್ಸು ರಾಷ್ಟ್ರೀಯ ಕಾರ್ಯದಲ್ಲಿ ಪ್ರವೃತ್ತವಾಯಿತು. ಇವರು ೧೯೩೦ ರ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದಾಗ ಇವರಿಗೆ ೨೮ ವರ್ಷ ವಯಸ್ಸು. ಹುದಲಿ ಚಳುವಳಿಗಾರರೊಂದಿಗೆ ಶಿಂದಿಗಿಡ ಕತ್ತರಿಸುವ ಸತ್ಯಾಗ್ರಹದಲ್ಲಿ ತೊಡಗಿದರು. ೧೯೩೭ ರಲ್ಲಿ ಹುದಲಿ ಗಾಂಧಿ ಸೇವಾ ಸಂಘದಲ್ಲಿ ಏಳು ದಿವಸ ಕೆಲಸ ಮಾಡಿದ್ದರೂ ಹಿನ್ನೆಲೆಯಲ್ಲಿ ದೇಶಪ್ರೇಮ ಜಾಗೃತವಾಯಿತು.

೧೯೪೧ ರಲ್ಲಿ ವೈಯಕ್ತಿಕ ಸತ್ಯಾಗ್ರಹದಲ್ಲಿ ಭಾಗವಹಿಸಿ ಸುಲಧಾಳದಲ್ಲಿ ಪ್ರಭಾತಪೇರಿ ತೆಗೆದು ಜರ್ಮನಿ ಬ್ರಿಟಿಷ ಯುದ್ಧದಲ್ಲಿ ಬ್ರಿಟಿಷರಿಗೆ ಯಾವ ರೀತಿಯಿಂದಲೂ ಸಹಾಯ ಮಾಡಬಾರದು ಎಂದು ಘೋಷಣೆ ಮಾಡುತ್ತ ಊರ ತುಂಬ ಪ್ರಭಾತಪೇರಿ ಮಾಡಿದರು. ಆಗ ಅವರಿಗೆ ನಾಲ್ಕು ತಿಂಗಳ ಶಿಕ್ಷೆಯಾಯಿತು. ಮುಂದೆ ಬ್ರಿಟಿಷರ ವಿರುದ್ಧ ಚಳುವಳಿಯಲ್ಲಿ ಭಾಗವಹಿಸಿ ಸರಕಾರಕ್ಕೆ ಸಿಂಹ ಸ್ವಪ್ನವಾದರು. ಹುದಲಿ ಭೂಗತ ತಂಡದೊಂದಿಗೆ ಸೇರಿ ಭೂಗತರಾಗಿಯೇ ಹತ್ತು ತಿಂಗಳ ಆಂದೋಲನ ಕಾರ್ಯ ಮಾಡಿದರು. ಆಂದೋಲನದಲ್ಲಿ ದೂರವಾಣಿ ತಾರ ಕಂಬ ಕತ್ತರಿಸುವ ಕಾರ್ಯದಲ್ಲಿ ಸಕ್ರಿಯರಾದರು. ಇವರನ್ನು ಬಂಧಿಸಲು ಮುಂಜಾನೆ ೫ ಘಂಟೆಗೆ ನೂರು ಜನ ಪೋಲಿಸರು ಇವರ ಮನೆಯನ್ನು ಸುತ್ತುವರಿದರು. ಆ ಸಮಯದಲ್ಲಿ ಅವರು ಮನೆಯಲ್ಲಿ ಇರಲಿಲ್ಲ. ಒಂದು ರಾತ್ರಿ ಇವರು ಮನೆಗೆ ಬಂದುದನ್ನು ನೋಡಿದ ಗುಜನಾಳದ ನಿಜಾಮುದ್ದೀನ ಇನಸ್ಪೆಕ್ಟರನಲ್ಲಿಗೆ ಹೋಗಿ ಬಸವಪ್ರಭು ಗೌಡಪ್ಪ ಪಾಟೀಲ, ಬಸವಂತಪ್ಪ ಸಂಗೊಳ್ಳಿ, ಸನದಿ, ಫಕೀರಪ್ಪ ಪಟ್ಟಣಶೆಟ್ಟಿ, ಅಂಕಲಗಿ ಇವರೆಲ್ಲರೂ ಕೂಡಿ ಫಿತೂರಿ ಮಾಡಿ ಬಸವಣ್ಣೆಪ್ಪನನ್ನು ಹಿಡಿಸಿ ಕೊಡುತ್ತಾರೆ. ಈ ಬಂಧನದಲ್ಲಿ ಅವರಿಗೆ ಮೂರು ತಿಂಗಳು ಶಿಕ್ಷೆಯಾಯಿತು. ಬಿಡುಗಡೆಯ ನಂತರವೂ ಇವರು ರಾಷ್ಟ್ರೀಯ ಕಾರ್ಯಕರ್ತರಿಗೆ ಬದುಕನ್ನು ದೇಶಸೇವೆಗೆ ಮುಡುಪಿಟ್ಟರು.

**ಬಸನಗೌಡ ಪಾಟೀಲ :**

ಬಸನಗೌಡಾ ಪಾಟೀಲರು ಶ್ರೀ ರಾಮಚಂದ್ರ ವಡವಿಯವರ ಹಿಂಬಾಲಕರು. ಖಾದೀ ಧಾರಣೆ, ತರುಣ ಸಂಘ, ಪ್ರೌಢ ಶಿಕ್ಷಣ ಮೊದಲಾದ ರಾಷ್ಟ್ರೀಯ ಕಾರ್ಯಕ್ರಮದಲ್ಲಿ ಅವರೊಂದಿಗೆ ಭಾಗವಹಿಸಿದ್ದರು. ಇದಲ್ಲದೇ ರಾಷ್ಟ್ರೀಯ ತಾಲೀಮ ಸಂಸ್ಥೆಗಳಾದ ಮಿರಜ ಹಾಗೂ ಅಮರಾವತಿಗೆ ಹೋಗಿ ತರಬೇತಿ ಪಡೆದು ಬಂದಿದ್ದರು. ತಮ್ಮ ತರಬೇತಿಯು ಗ್ರಾಮೀಣ ಯುವಕರಿಗೆ ಲಾಭವಾಗಲೆಂದು ಮತ್ತು ಸ್ವಾತಂತ್ರ್ಯ ಚಳುವಳಿಕಾರರಿಗೆ ಇದು ಅತ್ಯಂತ ಅವಶ್ಯವು ಆಗಿರುವುದರಿಂದ ಸುಲದಾಳ ಮತ್ತು ಹುದಲಿಯಲ್ಲಿ ಸೇವಾದಳ ಸ್ಥಾಪಿಸಿದರು. ಇದು ಯುವಕರಲ್ಲಿ ರಾಷ್ಟ್ರೀಯ ಪ್ರವೃತ್ತಿಯನ್ನು ಬೆಳೆಸಲು ಅತ್ಯಂತ ಸಹಕಾರಿಯಾಗಿತ್ತು.

ಸ್ವಾತಂತ್ರ್ಯ ಚಳುವಳಿಗೆ ಬದುಕನ್ನೇ ಮೀಸಲಿಟ್ಟ ಬಸನಗೌಡ ಪಾಟೀಲರು ಬಡಸ ಗ್ರಾಮದವರು. ಇವರ ಜನನ ೧೯೧೫. ಇವರ ತಾಯಿ ನೀಲಗಂಗಮ್ಮನವರ ತವರೂರು ಹುದಲಿ. ಬಸನಗೌಡರು ಹುದಲಿ ಪಾಟೀಲರ ಮನೆಯಲ್ಲಿದ್ದು ಮುಲ್ಕೀ ಪರೀಕ್ಷೆಯನ್ನು ಓದಿದ್ದಾರೆ. ಹುದಲಿಯ ಗಂಗಾಧರರಾವ ದೇಶಪಾಂಡೆಯವರ ಪ್ರಭಾವಕ್ಕೊಳಗಾಗಿ ರಾಷ್ಟ್ರೀಯ ಚಳುವಳಿ ಪ್ರವೇಶಿಸಿದರು. ಮಹಾತ್ಮಾ ಗಾಂಧೀಜಿಯವರ ಹಿರಿತನದಲ್ಲಿ ಜರುಗಿದ ಅಖಿಲ ಭಾರತ ಗ್ರಾಮಸೇವಾ ಸಮ್ಮೇಲನದಲ್ಲಿ ಸ್ವಯಂ ಸೇವಕರಾಗಿ ಭಾಗವಹಿಸಿದರು.

ಪೋಲಿಸರ ನಿಷೇಧಾಜ್ಞೆ ಮೀರಿ ೧೯೪೨ ರ ಅಗಷ್ಟ ೧೫ರ ಪ್ರಭಾತಪೇರಿ ಮತ್ತು ಧ್ವಜವಂದನೆಯಲ್ಲಿ ಭಾಗವಹಿಸಿದರು.ಚಳುವಳಿಕಾರರನ್ನು ಬಂಧಿಸಲು ಎರಡು ಸಾವಿರ ಪೋಲೀಸರು

ಬಂದಿದ್ದರೂ ಅವರಿಗೆ ಹೆದರಲಿಲ್ಲ. ಪೋಲಿಸರು ಕೇವಲ ೧೫ ಜನರನ್ನು ಮಾತ್ರ ಬಂಧಿಸಿದರು. ಆಗ ಬಸನಗೌಡ ಮೊದಲಾದ ಪ್ರಮುಖರು ಭೂಗತರಾದರು. ಹುದಲಿಯ ಸುತ್ತಲಿನ ಗುಡ್ಡಗಳಲ್ಲಿದ್ದ ಬೇಡರು ಚಳುವಳಿಗಾರರಿಗೆ ಬೆಂಬಲ ಸೂಚಿಸಿದ್ದರು. ಅಲ್ಲದೇ ಭೂಗತರನ್ನು ರಕ್ಷಿಸಿದರು. ಅದರಿಂದ ಕುಪಿತರಾದ ಇಂಗ್ಲೀಷ್ ಅಧಿಕಾರಿಗಳು ಗ್ರಾಮಸ್ಥರನ್ನು ಹಿಂಸಿಸತೊಡಗಿದರು.

"ಸುಲಧಾಳ ಬೆಳಗಾವ ರೇಲ್ವೆ ಹಳಿಯ ಮೇಲೆ ಮೂರು ಮೈಲು ಉದ್ಧದ ತಂತಿಯನ್ನು ಕಡಿದರು. ಸೂಳೆಭಾವಿ ಸ್ಟೇಶನ್ ಹತ್ತಿರ ಮೂರು ಮೈಲು ತಂತಿ ಕತ್ತರಿಸಿದರು. ಫೀಶ್‌ಪ್ಲೇಟ್ ಬಿಚ್ಚಿ ಮೂರು ಫರ್ಲಾಂಗ ರೈಲು ಹಳಿ ಕಿತ್ತರು. ಇದಲ್ಲದೇ ಪೋಲಿಸರ ಕ್ಯಾಂಪಿಗೆ ಅನುಕೂಲವಾಗಿದ್ದ ಹುದಲಿ ಧರ್ಮಸಾಲೆ, ಸುಲಧಾಳ ಪ್ರಾಥಮಿಕ ಶಾಲೆಗಳನ್ನು ಸುಟ್ಟು ಹಾಕಿದರು. ಹುದಲಿಯ ಸುತ್ತ ಹತ್ತು ಹದಿನೈದು ಹಳ್ಳಿಗಳಲ್ಲಿಯ ಧಪ್ತರ ಸುಟ್ಟರು. ಹುದಲಿ ಟಪಾಲಬಾಕ್ಸ್ ಸುಟ್ಟರಲ್ಲದೇ ತುಮ್ಮರಗುದ್ದಿಯ ರೇಲ್ವೆ ಘೂಲಿಗೆ ಜಖಂ ಮಾಡಿದರು. ಚಳುವಳಿಕಾರರು ಮಾಡಿದ ಕಾರ್ಯಗಳಲ್ಲಿ ಬಸನಗೌಡರು ಭಾಗವಹಿಸಿದ್ದರು. ಬಸನಗೌಡರ ಗುಂಪು ಹಿರೇಬಾಗೇವಾಡಿ ಗುಂಪಿನೊಂದಿಗೆ ಕೂಡಿ ತೋಲಗಿ ಹಪ್ತೆ ಲೂಟಿ ಮಾಡಿದರು. ಬಸನಗೌಡರು ಮತ್ತು ನಾಗಪ್ಪ ಬಸರಕೋಡ ಇವರಿಬ್ಬರೂ ಒಳನುಗ್ಗಿ ಹಪ್ತೆ ಕಾಯುತ್ತಿದ್ದ ಇಬ್ಬರು ಪೊಲೀಸರಿಗೆ ತೆಕ್ಕೆ ಬಿದ್ದರು. ಆಗ ಬಸನಗೌಡರು ತೆಕ್ಕೆಬಿದ್ದ ಪೊಲೀಸನು ತನ್ನ ಕೈಯಲ್ಲಿಯ ಬಂದೂಕಿನಿಂದ ಚಳುವಳಿಯ ಗುಂಪಿನವರಿಗೆ ಗುರಿ ಇಡಲು ತಿರುಗಿಸುತ್ತಾನೆ. ಬಸನಗೌಡರು ಅದನ್ನು ತಪ್ಪಿಸಿ ಬಾಯನೆಟ್‌ನ್ನು ಗೋಡೆ ಕಡೆಗೆ ಹೊರಳಿಸುತ್ತಾರೆ. ಆಗ ಗುಂಡು ಹಾರಿ ಗೋಡೆಗೆ ಬಡಿದು ತಿರುಗಿ ಬಂದು ಬಸನಗೌಡರ ಮುಂಗೈಗೆ ಬಡಿದು ರಕ್ತ ಸುರಿಯ ಹತ್ತಿತು. ಆದರೆ ಬಸನಗೌಡರು ಚಳುವಳಿಯಲ್ಲಿ ಎಷ್ಟು ಮಗ್ನರಾಗಿದ್ದರೆಂದರೆ ಅವರಿಗೆ ಗುಂಡು ಬಡಿದದ್ದು ಗೊತ್ತೇ ಆಗಿರಲಿಲ್ಲ. ಈ ಚಳುವಳಿಕಾರರೆಲ್ಲಾ ಪೊಲೀಸರನ್ನು ಹಿಡಿದು ಕಟ್ಟಿ ಹಾಕಿ ಲೂಟಿ ಕಾರ್ಯ ಯಶಸ್ವಿಯಾಗಿ ನೆರವೇರಿಸಿದ ಬಳಿಕವರಿಗೆ ಕೈಗೆ ರಕ್ತ ಬಂದದ್ದು ಗೊತ್ತಾಯಿತು. ಹೊರಗೆ ಬಂದಾಗ ಅವರ ಸಂಗಾತಿಗಳು ಅವರ ಕೈಗೆ ಮುಂತಾಪು ಹರಿದು ಪಟ್ಟಿ ಕಟ್ಟಿ ನಂತರ ಡಾಕ್ಟರ ಬಳಿಗೆ ಕರೆದೊಯ್ದುರು"[೧೫]. ಇಂಥದೇ ಇನ್ನೊಂದು ಸಂದರ್ಭ ಸೂಳೆಭಾವಿ ರೈಲು ನಿಲ್ದಾಣಕ್ಕೆ ಬೆಂಕಿ ಹಚ್ಚಿದ್ದು. ಅವರು ಆ ರೋಮಾಂಚನಕಾರಿ ಅನುಭವವನ್ನು ಹೀಗೆ ಹೇಳಿಕೊಂಡಿದ್ದಾರೆ. "ಸೂಳೆಭಾವಿ ಸ್ಟೇಶನ್ ಸುಟ್ಟದ್ದು ನಮ್ಮ ಇನ್ನೊಂದು ರೋಮಾಂಚನಕಾರಿ ಸಾಧನೆ. ಅಲ್ಲಿ ಬಂದೂಕುಧಾರಿ ಪೋಲೀಸರ ಕಾವಲು ಇತ್ತು. ೧೫-೨೦ ಮಂದಿ ಕಬ್ಬು ಹೊತ್ತುಕೊಂಡು, ಗಡಿಗೆಯಲ್ಲಿ ಸೀಮೆ ಎಣ್ಣೆ ತುಂಬಿ ಕಬ್ಬಿನ ಗಣಿಕೆಯಿಂದ ಮುಚ್ಚಿ (ಕಬ್ಬಿನ ಹಾಲಿನಂತೆ ಭಾವಿಸಲು: ಆಗ ಎಲ್ಲೆಡೆ ಕಬ್ಬುಗಾಣ ನಡೆಯುತ್ತಿದ್ದ ಕಾಲ) ಪ್ರಯಾಣಿಕರಂತೆ ಸ್ಟೇಶನ್ ತಲುಪಿದೆವು. ಪೊಲೀಸರು ಕಬ್ಬು ಬೇಡಲು, ಅವರಿಗೆ ಕೊಟ್ಟಾಗ ಅವರು ಬಂದೂಕು ಬದಿಗಿಟ್ಟು ಕಬ್ಬು ತಿನ್ನುತ್ತಿದ್ದಾಗ, ಪೊಲೀಸರನ್ನು ತೆಕ್ಕೆಬಡಿದೆವು; ಕೆಲವರು ರಾಯಫಲಗಳನ್ನೆಲ್ಲ ವಶಪಡಿಸಿಕೊಂಡರು. ಪೋಲೀಸರನ್ನು ಗಿಡಕ್ಕೆ ಕಟ್ಟಿಹಾಕಿ, ಮಣ್ಣಿನ ಕೊಡದಲ್ಲಿದ್ದ ಸೀಮೆಯೆಣ್ಣೆಯನ್ನು ಕಟ್ಟಡಕ್ಕೆ ಸಿಂಪಡಿಸಿ ಬೆಂಕಿ ಹಚ್ಚಿದೆವು. ಪೊಲೀಸರ ರಾಯ್‌ಫಲ್, ಕಾಡತೋಸ ಸಹಿತವಾಗಿ (ಹಗಲಲ್ಲೇ ಈ ಕೆಲಸ ಮುಗಿಸಿ) ಪಾರಾದೆವು"[೧೬].

ಇವರನ್ನು ಧಾರವಾಡದಲ್ಲಿ ಬಂಧಿಸಿ ಹಿಂಡಲಗಿ ಮತ್ತು ಕಿಲ್ಲಾ ಜೈಲು ವಾಸದಲ್ಲಿಟ್ಟರು. ಒಂಬತ್ತು ತಿಂಗಳ ಖಟ್ಲೆ ನಡೆದು ಬಿಡುಗಡೆ ಮಾಡಿದರು. ಮತ್ತೆ ಸ್ಥಾನ ಬದ್ಧತೆಯಲ್ಲಿಟ್ಟರು. ಹೀಗೆ ಇವರು ಮಾಡಿದ ಚಳುವಳಿಯಲ್ಲಿ ಮತ್ತು ಸುಳೆಭಾವಿ ಸ್ಟೇಶನ್ ಸುಡುವಲ್ಲಿ ಹಿರೇಬಾಗೇವಾಡಿಯವರು ಇವರಿಗೆ ಸಹಾಯ ಮಾಡಿದ್ದರು.

**ಸಿದ್ದಪ್ಪ ಹೊನಗೇಕರ :**

ಮೇದಾರ ಜನಾಂಗದಲ್ಲಿ ಹುಟ್ಟಿದ ಶ್ರೀ ಸಿದ್ದಪ್ಪ ಫಕೀರಪ್ಪ ಹೊನಗೇಕರ ಒಬ್ಬ ಅಪರೂಪದ ಚಳುವಳಿಕಾರ. ಮಹಾತ್ಮಾ ಗಾಂಧೀಜಿಯವರ ಪ್ರಭಾವ ಮತ್ತು ಅವರ ತಾಯಿಯ ಪ್ರೋತ್ಸಾಹದಿಂದ ಚಳುವಳಿಯಲ್ಲಿ ಧುಮುಕಿದರು. ಇವರು ಬೆಳಗಾವಿ ತಾಲೂಕು ಶಹಾಪೂರನವರು. ೧೯೨೪ ರಲ್ಲಿ ಜನನ. ಇವರ ಉದ್ಯೋಗ ಮೇದಾರ ಕೆಲಸ. ಇವರು ಮ್ಯಾಟ್ರಿಕ್‌ದವರೆಗೆ ಓದಿದ್ದರು.

೧೯೪೨ ನೆಯ ಇಸ್ವಿಯ ಚಲೇಜಾವ ಆಂದೋಲನದಲ್ಲಿ ಪ್ರಭಾತಪೇರಿಯಲ್ಲಿ ಭಾಗವಹಿಸಿದ್ದರು. ಕರಪತ್ರ ಹಂಚುವುದು, ತಾರಕಂಬ ಕಡಿಯುವುದು, ಮುಂತಾದ ಕಾರ್ಯಗಳನ್ನು ಮಾಡಿದರು. ಆ ಕಾರಣಕ್ಕಾಗಿ ದಿನಾಂಕ ೧೭ ಅಗಷ್ಟ ೧೯೪೨ ನೆಯ ದಿವಸ ಇವರನ್ನು ಬಂಧಿಸಲಾಯಿತು. ಒಂದೂವರೆ ವರ್ಷ ಶಿಕ್ಷೆ ೧೦೦ ರೂಪಾಯಿ ದಂಡದ ಬದಲು ೬ ತಿಂಗಳ ಶಿಕ್ಷೆ ಆಯಿತು.

**ಮಾಳಗಿ ಸಹೋದರರು :**

ಹುದಲಿಯ ಭೀಮವ್ವ ಮತ್ತು ಮುದ್ದಪ್ಪ ಮಾಳಗಿ ದಂಪತಿಗಳ ಮಕ್ಕಳು ಚನ್ನಬಸಪ್ಪ ಮತ್ತು ಗಂಗಪ್ಪ. ಚನ್ನಬಸಪ್ಪ ೧೯೧೦ ಜನೇವರಿ ೫ ರಂದು ಜನಿಸಿದರೆ ೧೯೨೨ ರಲ್ಲಿ ಗಂಗಪ್ಪ ಜನಿಸಿದರು. ಇವರದು ಕೃಷಿ ಕಾಯಕದ ಸಾಮಾನ್ಯ ಮನೆತನ. ಚನ್ನಬಸಪ್ಪ ಮುಲ್ಕೀ ಪರೀಕ್ಷೆ ಪಾಸು ಮಾಡಿದ್ದರು. ಆದರೆ ಗಂಗಪ್ಪ ವಯಸ್ಕರ ಶಾಲೆಯಲ್ಲಿ ಓದಿ ಅಕ್ಷರ ಜ್ಞಾನ ಪಡೆದಿದ್ದರು.

ಇವರು ೧೯೨೮ ರಲ್ಲಿ ಖಾದೀ ಗ್ರಾಮೋದ್ಯೋಗದಲ್ಲಿ ತರಬೇತಿಯನ್ನು ಹೊಂದಿದರು. ನಂತರ ಕುಮರಿ ಆಶ್ರಮದಲ್ಲಿ ಗಂಗಾಧರರಾವ ದೇಶಪಾಂಡೆಯವರ ಪ್ರಭಾವದಿಂದ ಆಶ್ರಮಕ್ಕೆ ಸೇರಿಕೊಂಡರು. ಆಗ ಕುಮರಿ ಆಶ್ರಮದಲ್ಲಿ ವಡವಿ ಮಾಸ್ತರ, ಅಣ್ಣೂ ಗುರೂಜಿ, ವಾಮನರಾವ ದೇಸಾಯಿ, ಗಂಗಪ್ಪ ಯಮಕನಮರಡಿ ಮೊದಲಾದ ಸ್ವಾತಂತ್ರ್ಯ ಹೋರಾಟಗಾರರು ಅದೇ ಆಶ್ರಮದಲ್ಲಿ ನೆಲೆಸಿದ್ದರು.

೧೯೨೮ ರಿಂದ ಹುದಲಿಯ ಖಾದಿ ಗ್ರಾಮೋದ್ಯೋಗದಲ್ಲಿ ತರಬೇತಿ ಹೊಂದಿದ ಇವರು ಅನೇಕ ಜನರನ್ನು ತರಬೇತಿಗೊಳಿಸಿದ್ದಾರೆ. ಹುದಲಿ, ಸುಲದಾಳ, ಅಂಕಲಗಿ, ಅಕ್ಕತಂಗೇರಹಾಳ, ಉರಮಿನಹಟ್ಟಿ, ಈರನಹಟ್ಟಿ ಮೊದಲಾದ ಹಳ್ಳಿಯ ಹೆಣ್ಣುಮಕ್ಕಳು ರಾಟಿಯಿಂದ ನೂಲು

ತೆಗೆಯುತ್ತಿದ್ದರು. ಅದನ್ನು ಕುಮರಿ ಆಶ್ರಮಕ್ಕೆ ತರುವ ಕೆಲಸವನ್ನು ಪಾಮನರಾವ ಗಂಗಪ್ಪ ಯಮಕನಮರಡಿ ಹಾಗೂ ಚೆನ್ನಬಸಪ್ಪಾ ಮಾಳಗಿಯವರು ಮಾಡುತ್ತಿದ್ದರು.

ಸ್ವಾತಂತ್ರ್ಯ ಚಳುವಳಿಯ ೧೯೩೦ ರ ಉಪ್ಪಿನ ಸತ್ಯಾಗ್ರಹದಲ್ಲಿ ಹುದಲಿಯ ಪಾತ್ರ ಬಹಳ ದೊಡ್ಡದು. ಉಪ್ಪಿನ ಸತ್ಯಾಗ್ರಹದ ಪ್ರಚಾರಕ್ಕಾಗಿ ಪ್ರಚಾರಕ್ಕಾಗಿ ಹುದಲಿಯ ನೂರಾರು ಜನ ತರುಣರು ಪಾಲ್ಗೊಂಡಿದ್ದರು. ಅವರಲ್ಲಿ ಇಪ್ಪತ್ತೈದು ಜನ ತರುಣರು ಸ್ವಾತಂತ್ರ್ಯದ ಬಗೆಗೆ ಜನರಲ್ಲಿ ಜಾಗ್ರತಿ ಮಾಡಲು ಹಳ್ಳಿ ಹಳ್ಳಿಗೆ ಪ್ರಚಾರ ಕಾರ್ಯಕ್ಕೆ ಹೋಗುತ್ತಿದ್ದರು. ಇವರಲ್ಲಿ ಕೆಲವರು ಬಹಿರಂಗವಾಗಿ ಉಪ್ಪು ತಯಾರಿಸುತ್ತಿದ್ದರೆ, ಇನ್ನು ಕೆಲವರು ಊರೂರಲ್ಲಿ ಪ್ರಭಾತಪೇರಿ ನಡೆಸುತ್ತಿದ್ದರು. ಸೇಂದೀ ಅಂಗಡಿ ಮುಂದೆ ಪಿಕೆಟಿಂಗ್ ಮಾಡುತ್ತಿದ್ದರು. ಹುದಲಿಯವರು ಜೈಲಿಗೆ ಹೋಗಬೇಕೆಂದು ಮನಸ್ಸು ಮಾಡಿದ್ದರೂ ಬಂಧಿಸದ ಕಾರಣ ಮರಳಿ ಅವರೆಲ್ಲರೂ ಊರಿಗೆ ಬಂದರು.

ಹುದಲಿಯಲ್ಲಿ ಹರಿಜನ, ಬೇಡರ ಹುಡುಗರೆಲ್ಲರಿಗೂ ಶಾಲೆ ಕಲಿಯಲು ಒಂದು ಕಟ್ಟಡದಲ್ಲಿ ಶಾಲೆಯನ್ನು ಪ್ರಾರಂಭಿಸಿದರು. ಆ ಶಾಲೆಗೆ ಗಂಗಪ್ಪ ಯಮಕನಮರಡಿ ಮಾಸ್ತರರಾಗಿದ್ದರು. ಅವರು ಚಳುವಳಿಯಲ್ಲಿ ಭಾಗವಹಿಸಿ ಜೈಲಿಗೆ ಹೋದಾಗ ಮಾಳಗಿಯವರನ್ನು ಅಲ್ಲಿ ಶಿಕ್ಷಕರೆಂದು ಗೊತ್ತುಪಡಿಸಲಾಯಿತು. ಮಾಳಗಿಯವರ ಇನ್ನೊಂದು ವಿಶೇಷವೆಂದರೆ ಅವರು ತರುಣ ಸಂಘದ ಅಧ್ಯಕ್ಷರಾಗಿದ್ದಾಗ ಸವರ್ಣೀಯರಿಗೂ ಅವರ್ಣೀಯರಿಗೂ ಸಾಮೂಹಿಕ ಸಂಕ್ರಾಂತಿ ಭೋಜನವನ್ನು ಏರ್ಪಡಿಸಿದ್ದು. ಹುದಲಿ ಊರ ಹತ್ತಿರದ ರಂಗಧೋಳಿ ಹೊಳೆಯಲ್ಲಿ ಇವರೆಲ್ಲಾ ತರುಣರು ಸ್ನಾನ ಮಾಡಿ ಭೋಜನ ಮಾಡಿದರು. ಚೆನ್ನಬಸಪ್ಪ ಮಾಳಗಿಯವರು ತರುಣ ಸಂಘದ ಅಧ್ಯಕ್ಷರಾಗಿದ್ದಾಗ ಸಂಘದ ವತಿಯಿಂದ ಅನೇಕ ವಿಧಾಯಕ ಕಾರ್ಯಗಳನ್ನು ಮಾಡಿದರು. ಶ್ರಮದಾನದಿಂದ ಊರಲ್ಲಿಯ ರಸ್ತೆ ನಿರ್ಮಾಣ ಮಾಡಿದರೆ, ರೈತರು ಚಕ್ಕಡಿಗಳಲ್ಲಿ ಕಲ್ಲು ತಂದು ಹಾಕಿದರು. ಗೌಂಡಿಗಳು ಕಲ್ಲು ಒಡೆದು ಪರಿಸಿಯನ್ನು ಜೋಡಿಸಿದರು. ರಸ್ತೆಗಳನ್ನು ನಿರ್ಮಾಣ ಮಾಡಿ ಜನರ ಪ್ರೀತಿಗೆ ಪಾತ್ರರಾದರು.

ಕುಮರಿ ಆಶ್ರಮದಲ್ಲಿ ಗಾಂಧಿ ಸೇವಾ ಸಂಘದ ಸಮ್ಮೇಳನ ನಡೆದಾಗ ಮಾಳಗಿ ಸಹೋದರರ ತರುಣ ಸಂಘದ ಕಾರ್ಯಕರ್ತರಾಗಿ ನಿಷ್ಠೆಯಿಂದ ದುಡಿದರು. ಬಂಡಿಗಟ್ಟಲೆ ಕಣಕಿ ತಂದು ಗುಡಿಸಲುಗಳನ್ನು ಕಟ್ಟಿದರು. ಪಾಯಿಕಾನೆಗಳನ್ನು ಸಿದ್ದಗೊಳಿಸಿ ಸಮ್ಮೇಳನಕ್ಕೆ ಅನುಕೂಲ ಮಾಡಿಕೊಟ್ಟರು. ಇದಲ್ಲದೇ ಕುಮರಿ ಆಶ್ರಮದಲ್ಲಿ ನಡೆಯುವ ರಾತ್ರಿ ಶಾಲೆಯನ್ನು ಗಂಗಪ್ಪಾ ಯಮಕನಮರಡಿಯವರು ನೋಡಿಕೊಳ್ಳುತ್ತಿದ್ದರು. ಆಗ ಅವರ ಜೊತೆಯಾಗಿ ನಿಂತು ಕೆಲಸ ಮಾಡಿದವರು ಚೆನ್ನಬಸಪ್ಪ ಮಾಳಗಿಯವರು.

"೧೯೪೨ ರ ಚಲೇಜಾವ್ ಚಳುವಳಿಯಲ್ಲಿ ಬ್ರಿಟಿಷ ಸರಕಾರವು ಪ್ರಭಾತಫೇರಿ ನಡೆಸಬಾರದೆಂದು ಊರಲ್ಲಿ ದಂಗುರ ಹೊಡೆಸಿತ್ತು. ಇದಲ್ಲದೇ ಪ್ರಭಾತ ಫೇರಿಯಲ್ಲಿ ಭಾಗವಹಿಸಿದವರಿಗೆ

ಕಠಿಣವಾದ ಶಿಕ್ಷೆಯನ್ನು ವಿಧಿಸಲಾಗುವುದೆಂದು ಸೂಚನೆಯನ್ನು ನೀಡಲಾಗಿತ್ತು. ಆದರೆ ಹುದಲಿಯ ತರುಣ ಸಂಘದವರು ಇದಾವುದನ್ನು ಗಮನಿಸದೆ ಪ್ರಭಾತಫೇರಿಯನ್ನು ಮಾಡಿ ಧ್ವಜ ವಂದನೆಯನ್ನು ಸಲ್ಲಿಸಿದರು. ಈ ಕಾರ್ಯಕ್ರಮದಲ್ಲಿ ಸಾವಿರಾರು ಜನ ಭಾಗವಹಿಸಿದ್ದರಿಂದ ಪೋಲೀಸರಿಗೆ ಯಾರನ್ನು ಬಂಧಿಸಬೇಕೆಂಬುದು ತಿಳಿಯಲಿಲ್ಲ. ಆಗ ಆ ಇಡೀ ಚಳುವಳಿಯಲ್ಲಿ ಮುಂದಾಳುಗಳಾದ ಹದಿನಾಲ್ಕು ಜನರನ್ನು ಮಾತ್ರ ಬಂಧಿಸಿದರು. ಆ ಹದಿನಾಲ್ಕು ಜನರಲ್ಲಿ ಚನ್ನಬಸಪ್ಪ ಮಾಳಗಿಯವರು ಒಬ್ಬರಾಗಿದ್ದರು. ಚೆನ್ನಬಸಪ್ಪ ಮಾಳಗಿಯವರಿಗೆ ಪ್ರಭಾತಫೇರಿ ಮಾಡಿದ್ದಕ್ಕಾಗಿ ಒಂದು ವರ್ಷ ಶಿಕ್ಷೆ ಐವತ್ತು ರೂಪಾಯಿ ದಂಡವನ್ನು ವಿಧಿಸಲಾಗಿತ್ತು"[೧೭]. "ಎಳೆಹರೆಯದಲ್ಲಿಯೇ ಗಾಂಧೀಜಿಯವರ ದರ್ಶನವಾಯಿತು. ಆ ಕಾಲಕ್ಕೆ ೧೯೩೭ ರಲ್ಲಿ ನಡೆದ ಗಾಂಧಿ ಸೇವಾ ಸಮ್ಮೇಲನದಲ್ಲಿ ಸ್ವಯಂ ಸೇವಕರಾಗಿ ಸೇವೆ ಸಲ್ಲಿಸಿದ್ದಾರಲ್ಲದೇ ಸಾಂಸ್ಕೃತಿಕ ಚಟುವಟಿಕೆಯಲ್ಲಿ ಪಾಲ್ಗೊಂಡು ಕಾಂಗ್ರೆಸ್ ಜುಬಲಿ ಬಹುಮಾನ ಪಡೆದರು. ೧೯೩೫ ರಿಂದಲೇ ಖಾದಿ ಧಾರಿಗಳು ಗ್ರಾಮದಿಂದ ಹಿಡಿದು ರಾಷ್ಟ್ರಮಟ್ಟದ ಸೇವಾಕಾರ್ಯದಲ್ಲಿ ಪಾಲ್ಗೊಂಡಿದ್ದಾರೆ. ೧೯೪೨ ನೇ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಸಕ್ರೀಯವಾಗಿ ಭಾಗವಹಿಸಿದ್ದರು"[೧೮].

### ಬಸವಣ್ಣೆಪ್ಪ ಶಿವರಾಯಪ್ಪ ಕರಲಿಂಗನ್ನವರ :

೧೯೨೪ರಲ್ಲಿ ಜನಿಸಿದ ಬಸವಣ್ಣೆಪ್ಪ ಕರಲಿಂಗನ್ನವರ ಸಾಮಾನ್ಯ ಮನೆತನದಲ್ಲಿ ಜನಿಸಿದವರಾದರೂ ಅಸಾಮಾನ್ಯ ಬದುಕನ್ನು ಬದುಕಿದವರು. ಇವರು ೧೯೪೧ರ ವೇಳೆಗೆ ೬ನೆಯ ವರ್ಗವನ್ನು ಪಾಸು ಮಾಡಿ ಗಾಂಧೀಜಿಯವರ ಕರೆಯ ಮೇರೆಗೆ ಸ್ವಾತಂತ್ರ್ಯ ಚಳುವಳಿಗೆ ದುಮುಕುತ್ತಾರೆ. ಅವರೆ ಹೇಳುವಂತೆ ಸತ್ಯಾಗ್ರಹದಲ್ಲಿ ಕೆಲಸ ಮಾಡುವುದರಿಂದ ಬ್ರಿಟಿಷರು ಅವರಿಗೆ ನಿರ್ಬಂಧ ಹಾಕುತ್ತಾರೆ. ಏಕೆಂದರೆ ಅವರು ಇನ್ನು ೧೮ ವರ್ಷ ವಯಸ್ಸಿನ ಒಳಗಿದ್ದ ಕಾರಣ ಅವರನ್ನು ಅರೆಸ್ಟ್ ಮಾಡಲಾಗುವುದಿಲ್ಲ. ಆದರೆ ಚಳುವಳಿಯ ತೀವ್ರ ತುಡಿತವು ಇವರಲ್ಲಿ ಎಷ್ಟಿತ್ತೆಂದರೆ ಚಳುವಳಿಯ ಸಲುವಾಗಿ ಶಾಲೆ ತ್ಯಜಿಸಿ ಸತ್ಯಾಗ್ರಹಿಗಳೊಂದಿಗೆ ಕೈ ಜೋಡಿಸಿ ಇವರು ಕೆಲಸ ಮಾಡುತ್ತಾರೆ.

೧೯೪೨ನೆಯ ಇಸ್ವಿಯಲ್ಲಿ ಬ್ರಿಟಿಷರು ಸ್ವಾತಂತ್ರ್ಯ ಯೋಧರನ್ನೆ ಹಿಡಿದು ಜೈಲಿಗೆ ಹಾಕುವುದಕ್ಕಾಗಿ ಪ್ರಯತ್ನ ಪಟ್ಟು ಗುಜನಾಳದ ಇನಾಮದಾರ ವಾಡಿಯಲ್ಲಿ ಪೋಲಿಸ ಪಾರ್ಟಿಯನ್ನು ಕರೆಯಿಸಿ ಇಡುತ್ತಾರೆ. ಆ ಪೋಲಿಸ ಪಾರ್ಟಿಯಿದ್ದ ಸ್ಥಳದಲ್ಲೆ ಪ್ರಬಾತ ಫೇರಿ ಮಾಡುವ ಪ್ರಯತ್ನವನ್ನು ಕರಲಿಂಗನ್ನವರ ಹಾಗೂ ಇವರ ಸ್ನೇಹಿತರು ಮಾಡುತ್ತಾರೆ. ಕರಲಿಂಗನ್ನವರ ಜೊತೆ ನಿಂಗಪ್ಪ ಬೆಣ್ಣಿ ಹಾಗೂ ಉಳಿದ ಸ್ನೇಹಿತರು ಕೂಡಿಕೊಂಡು ಇನಾಮದಾರ ವಾಡಿಯ ಎದುರಿನಿಂದ ದಾಟಿ ಪ್ರಭಾತ ಫೇರಿ ಮಾಡುವುದನ್ನು ಪೊಲೀಸರು ನೋಡುತ್ತಾರೆ. ಅವರು ಇದು ಯಾವುದೂ ದೊಡ್ಡ ಪಡೆ ಇರಬೇಕೆಂದು ಭಾವಿಸಿ ಹಲವು ಜನ ಪೋಲಿಸರು ಪೋಜದಾರ, ಇನಸ್ಪೆಕ್ಟರರು ಬಂದು ಮುತ್ತಿಗೆ ಹಾಕಿ ಇವರನ್ನು ಮನಸಾರೆ ಬಡಿದು ಹೊಡೆಯುತ್ತಾರೆ. ಬೈಗುಳುಗಳ ಸುರಿಮಳೆಯನ್ನು

ಸುರಿಸುತ್ತಾರೆ. ಇವರೊಂದಿಗೆ ನಿಂಗಪ್ಪ ಬೆಣ್ಣಿ, ಅಡಿವೆಪ್ಪ ಸಿರಲಗಿ, ಜೈನುಲ್ಲಾ ದೇಸಾಯಿ ಹೀಗೆ ನಾಲ್ವರು ಇರುತ್ತಾರೆ. ಇವರೆಲ್ಲರನ್ನು ಕರೆದುಕೊಂಡು ಗೋಕಾಕ ತಾಲೂಕಾ ಮ್ಯಾಜಿಸ್ಟ್ರೇಟ್ ಮುಂದೆ ನಿಲ್ಲಿಸಿ ಇವರ ಮೇಲೆ ಕೇಸ ದಾಖಲಿಸುತ್ತಾರೆ. ಗೋಕಾಕ ಮ್ಯಾಜಿಸ್ಟ್ರೇಟರು ಇವರಿಗೆ ೬ ತಿಂಗಳು ಜೈಲು ಶಿಕ್ಷೆಯನ್ನು ವಿಧಿಸುತ್ತಾರೆ. ಪೊಲೀಸರು ಇವರೆಲ್ಲರನ್ನು ಕರೆದುಕೊಂಡು ಹಿಂಡಲಗಾ ಜೈಲಿನಲ್ಲಿ ಇಡುತ್ತಾರೆ. ಮುಂದೆ ೧೯೪೩ರಲ್ಲಿ ಇವರು ಬಿಡುಗಡೆಯಾಗಿ ಮತ್ತೆ ಸ್ವಾತಂತ್ರ್ಯ ಚಳುವಳಿಯಲ್ಲಿ ದುಮುಕುತ್ತಾರೆ. ಅಲ್ಲದೆ ಪೊಲೀಸರ ಕಣ್ಣು ತಪ್ಪಿಸಿ ಚಳುವಳಿಕಾರರಿಗೆ ಊಟವನ್ನು ಒದಗಿಸುತ್ತಾರೆ. ಮಲ್ಲಾಪೂರ ಹತ್ತಿರವಿದ್ದ ರೈಲ್ವೆ ತಾರನ್ನು ಕತ್ತರಿಸುತ್ತಾರೆ. ವಾಮನ ಬಿದರಿ ಅವರ ಆದೇಶದ ಮೇರೆಗೆ ಅಕ್ಕತಂಗೇರಹಳ್ಳದ ೧೮ ಹುಡುಗರನ್ನು ಬೆಣಚಿನ ಮರಡಿಯ ಇಬ್ಬರನ್ನು ಕೂಡಿಸಿಕೊಂಡು ಅಕ್ಕತಂಗೇರಹಳ್ಳದಿಂದ ಗೋಕಾಕದ ಗುಡ್ಡದ ದಾರಿ ಹಿಡಿದು ಗೂಗಿಕೊಳ್ಳ ಏರಿ ಕೊನೆಗೆ ಗೋಕಾಕದಲ್ಲಿ ಪ್ರಭಾತಫೇರಿ ತೆಗೆಯುತ್ತಾರೆ. ಆಗ ಪೋಲಿಸರು ಇವರನ್ನು ಬಂಧಿಸಿ ಗೋಕಾಕ ಲಾಕಪನಲ್ಲಿ ಇಟ್ಟು ಮರುದಿನ ಹಿಂಡಲಗಾಕ್ಕೆ ಕರೆದು ತರುತ್ತಾರೆ. ಆದರೆ ಇವರು ೧೮ ವರ್ಷ ಒಳಗಿನವರು ಆಗಿರುವುದರಿಂದ ರಿಮ್ಯಾಂಡ ಹೋಮದಲ್ಲಿ ಇಟ್ಟು ಕೇವಲ ೪ ತಿಂಗಳ ಶಿಕ್ಷೆಯನ್ನು ವಿಧಿಸುತ್ತಾರೆ.

**ಅಪ್ಪಣ್ಣ ಹೂಗಾರ :**

ಇವರು ಹುದಲಿಯವರು. ೨೦-೧೦-೧೯೨೦ ರಲ್ಲಿ ಜನನ. ಇವರ ತಂದೆ ನಾಗಪ್ಪ ಹೂಗಾರ. ಅಪ್ಪಣ್ಣ ಮುಲ್ಕಿವರೆಗೆ ಓದಿ ಸರಕಾರಿ ಇಲಾಖೆಯ ಜಿ.ಪಿ.ಸಿ. ಪರೀಕ್ಷೆ ಪಾಸು ಮಾಡಿಕೊಂಡಿದ್ದರು. ವಡವಿಯವರ ಪ್ರಭಾವದಿಂದ ೧೯೪೨ರ ಚಳುವಳಿಯಲ್ಲಿ ಭಾಗವಹಿಸಿದರು. ಹುದಲಿಯ ಪ್ರಭಾತಫೇರಿಯಲ್ಲಿ ಭಾಗವಹಿಸಿದ್ದರಿಂದ ಒಂದು ತಿಂಗಳ ಶಿಕ್ಷ ಅನುಭವಿಸಿದರು. ನಂತರ ನಾಲ್ಕು ತಿಂಗಳು ಭೂಗತ ಕೆಲಸ ಮಾಡಿದ್ದರು.

ಬಾಲ್ಯದಿಂದಲೂ ಖಾದೀ ಪ್ರೇಮಿಗಳಾಗಿದ್ದರು. ಆಗಲೇ ಅವರಲ್ಲಿ ದೇಶಪ್ರೇಮ ಮೊಳಕೆಯೊಡೆದಿತ್ತು. ಗಾಂಧೀಜಿಯವರ ಪ್ರೇರಣೆಯಿಂದ ಸ್ವಾತಂತ್ರ್ಯ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ನಿರ್ಧರಿಸಿದರು. ತಮ್ಮ ಬದುಕಿನುದ್ದಕ್ಕೂ ಖಾದಿ ಉದ್ಯೋಗದಲ್ಲಿ ತಮ್ಮನ್ನು ತೊಡಿಗಿಸಿಕೊಂಡರು ಜನರಿಗೆ ದೇಶೀ ವಸ್ತುಗಳ ಬಳಕೆ ಮತ್ತು ಖಾದಿಯ ಮಹತ್ವವನ್ನು ತಿಳಿಸಿಕೊಟ್ಟರು. ಪತ್ರಿ ಹಂಚುವುದು ಮನೆತನದ ಕಾಯಕವಾಗಿತ್ತು. ಅದನ್ನು ಮಾಡುವುದರ ಜೊತೆಗೆ ಚಳುವಳಿಯ ಕಾರ್ಯಗಳನ್ನು ಮಾಡುತ್ತಿದ್ದರು. ಬೆಳಗಾವಿಯಲ್ಲಿ ಚಳುವಳಿ ಕುರಿತು ಹೊರಡುತ್ತಿದ್ದ ಕರಪತ್ರಗಳನ್ನು ತಮ್ಮ ಪತ್ರಿ ಜೋಳಿಗೆಯಲ್ಲಿ ಗುಪ್ತವಾಗಿ ಇಟ್ಟುಕೊಂಡು ಮನೆ-ಮನೆಗೆ ಹಂಚುತ್ತಿದ್ದರು. ಜನರು ಕುತೂಹಲದಿಂದ ಅಪ್ಪಣ್ಣಾ ಬರುವ ದಾರಿಯನ್ನೇ ಕಾಯುತ್ತಿದ್ದರು.

**ಸೌ. ಪದ್ಮಾವತಿ ಊರ್ಫ ಚಂದ್ರಾಬಾಯಿ ದೇಸಾಯಿ :**

ಸ್ವಾತಂತ್ರ್ಯ ಚಳುವಳಿಯಲ್ಲಿ ಸ್ತ್ರೀಯರು ಪುರುಷರು ಹೋರಾಟ ಮಾಡಿದ್ದು ಸಾಮಾನ್ಯವಾಗಿ ಕಂಡು ಬರುತ್ತದೆ. ಆದರೆ ದಂಪತಿಗಳೂ ಕೂಡಾ ಈ ಚಳುವಳಿಯಲ್ಲಿ ಧುಮುಕಿದ್ದು

ಒಂದು ವಿಶೇಷವೆಂದೇ ಹೇಳಬೇಕು. ಸ್ವಾತಂತ್ರ್ಯ ಹೋರಾಟಗಾರರಾದ ವಾಮನರಾವ ಬಿದರಿಯವರ ಜೊತೆಗೆ ಪದ್ಮಾವತಿಯವರು ಮದುವೆಯಾದರು. ಆ ಮೇಲೆ ಕುಮರಿ ಆಶ್ರಮಕ್ಕೆ ಸೇರಿ ರಾಷ್ಟ್ರೀಯ ಕಾರ್ಯಚಟುವಟಿಕೆಗಳನ್ನು ಮಾಡತೊಡಗಿದರು. ಕೊಳವಿ, ಡುಮರಟ್ಟಿ, ಈರನಟ್ಟಿ, ಅಕ್ಕತಂಗೇರಹಾಳ ಊರುಗಳಲ್ಲಿ ವಾಸ್ತವ ಮಾಡಿ ಕುಮರಿ ಆಶ್ರಮದ ಮುಖಾಂತರ ಹರಿಜನ ಕಾರ್ಯ, ಖಾದಿ ಗ್ರಾಮೋದ್ಯೋಗ ಮೊದಲಾದ ವಿಧಾಯಕ ಕಾರ್ಯಗಳನ್ನು ಪತಿಯೊಂದಿಗೆ ಪದ್ಮಾವತಿಯವರೂ ಕೂಡ ಮಾಡುತ್ತಿದ್ದರು. "೧೯೨೫ ರಲ್ಲಿ ವಾಮನರಾಯರ ಮದುವೆ ವಿಜಾಪುರ ತಾಲೂಕು ಕಾಖಂಡಕಿ ಗ್ರಾಮದ ಗೋವಿಂದ ಪಂತ ಲಾಟಕರ ಅವರ ಮಗಳು ಚಂದ್ರಾಬಾಯಿ (ಅತ್ತೆಯ ಮನೆ ಹೆಸರು ಪದ್ಮಾವತಿಬಾಯಿ) ಅವರೊಂದಿಗೆ ಜರುಗಿತು. ವಿವಾಹದಲ್ಲಿ ವಾಮನರಾಯರದ್ದು ಒಂದೇ ಕರಾರು. ವರದಕ್ಷಿಣೆ ಬೇಡ, ಅದ್ದೂರಿ ಮದುವೆ ಬೇಡ, ಮದುವೆಯ ಪೀತಾಂಬರದ ಬದಲು ಮದುಮಗಳು ಖಾದಿ ಸೀರೆ ಸೇರಿದಂತೆ ಜೀವನ ಪರ್ಯಂತ ಖಾದಿ ಧರಿಸಬೇಕು"[೧೯].

"೧೯೩೦ ನೆಯ ಇಸ್ವಿ ಉಪ್ಪಿನ ಸತ್ಯಾಗ್ರಹದಲ್ಲಿ ಇವರು ಭಾಗವಹಿಸಿದರು. ಪರದೇಶಿ ವಸ್ತುಗಳನ್ನು ಮಾರಾಟ ಮಾಡುವ ಅಂಗಡಿಯ ಮುಂದೆ ನಿಂತು ಚಳುವಳಿ ಮಾಡಿದರು. ಅಕ್ಕತಂಗೇರಹಾಳದ ಸೌ. ನಿಂಗವ್ವ ಹುಚ್ಚಪ್ಪ ಹೊಳೆಯಾಚಿ ಮತ್ತು ಸೌ. ನಿಂಗವ್ವ ಅಣ್ಣ ಬಸಪ್ಪ ಮರಲಿಂಗಣ್ಣವರ ಇವರನ್ನು ತನ್ನ ಜೊತೆಗೆ ಕರೆದುಕೊಂಡು ಗೋಕಾಕಕ್ಕೆ ಹೋಗಿ ಅಲ್ಲಿಯೂ ಪರದೇಶಿ ಬಟ್ಟೆಯ ಅಂಗಡಿಗಳ ಮುಂದೆ ಪಿಕೆಟಿಂಗ ಮಾಡಿದರು. ಆಗ ಸರಕಾರದವರು ಇವರನ್ನು ಕೈದು ಮಾಡಿ ೧ ತಿಂಗಳ ಶಿಕ್ಷೆ ೩೦೦ ರೂಪಾಯಿ ದಂಡ ವಿಧಿಸಿದರು. ಚಂದ್ರಾಬಾಯಿ ದೇಸಾಯಿಯವರು ಜೈಲಿಗೆ ಹೊದ ಸಂದರ್ಭವು ಕೂಡಾ ಆಶ್ಚರ್ಯಕರವಾಗಿದೆ. ಇವರು ತಮ್ಮ ಬಗಲಲ್ಲಿದ್ದ ಮೊದಲನೆಯ ಮಗು ಲೀಲಾ ಅವರೊಂದಿಗೆ ಜೈಲು ಸೇರುತ್ತಾರೆ"[೨೦].

೧೯೩೩ ರಲ್ಲಿ ಬೆಳಗಾವಿಯಲ್ಲಿ ಯಶವಂತರಾವ ದೇಶಪಾಂಡೆಯವರ ಪರದೇಶಿ ಅರವಿ ಅಂಗಡಿಯ ಮುಂದೆ ಇವರು ಸೌ. ಸಂಗವ್ವ ಗ. ಯಮಕನಮರಡಿ ಹುದಲಿ, ಸೌ. ಬಸವಣ್ಣೆವ್ವ ಚನ್ನಪ್ಪ ವಾಲಿ ಸಂಪಗಾಂವಿ, ಕು. ಗೌರವ್ವ ನಾವಲಗಿ ಕರಿಕಟ್ಟಿ ಮತ್ತು ನಿಂಗಪ್ಪ ದೇಗಿನಹಾಳ ಮುಂತಾದ ಸ್ವಯಂ ಸೇವಕರೊಂದಿಗೆ ಇವರು ಪಿಕೆಟಿಂಗ್ ಮಾಡುತ್ತಿದ್ದರು. ಆಗ ಇವರೆಲ್ಲರಿಗೂ ೭ ತಿಂಗಳ ಶಿಕ್ಷೆಯಾಯಿತು. ಇವರಂತೆ ಅವರ ಪತಿ ವಾಮನರಾವ್ ದೇಸಾಯಿ ಅವರೂ ಕೂಡಾ ಸ್ವಾತಂತ್ರ್ಯದ ಚಳುವಳಿಯಲ್ಲಿ ಹೋರಾಟ ಮಾಡುತ್ತಿದ್ದರು. ೧೯೪೫ ರಲ್ಲಿ ವಾಮನರಾವ್ ದೇಸಾಯಿ ಅವರು ಜಮಖಂಡಿಯಲ್ಲಿ ನಿಮೋನಿಯಾ ಬೇನೆಯಿಂದ ಬಳಲುತ್ತಿದ್ದರು. ಮುಂದೆ ಕೆಲವೇ ತಿಂಗಳುಗಳಲ್ಲಿ ಅವರು ಸ್ವರ್ಗವಾಸಿಯಾದರು. ಆಗ ಪತಿಯ ಮರಣದ ನಂತರವೂ ಪದ್ಮಾವತಿಯವರು ಇಬ್ಬರು ಮಕ್ಕಳನ್ನು ಕಟ್ಟಿಕೊಂಡು ಧೈರ್ಯದಿಂದ ಜೀವನ ಸಾಗಿಸಿದರು.

**ರಾಮಪ್ಪ ಬಸಪ್ಪ ಬನದವರ :**

ರಾಮಪ್ಪ ಬಸಪ್ಪ ಬನದವರ ಇವರು ಸಾಮಾನ್ಯ ರೈತ ಕುಟುಂಬದಲ್ಲಿ ಜನಿಸಿದವರಾದರೂ ಅಪ್ಪಟ ಗಾಂಧಿವಾದಿಗಳು. ಇವರ ತಂದೆ ಬಸಪ್ಪ. ತಾಯಿ ಬಸವ್ವ, ಇವರ ಹುಟ್ಟೂರು ಹುದಲಿ ಗ್ರಾಮ. ಇವರ ಇಡೀ ಮನೆತನವೇ ಸ್ವಾತಂತ್ರ್ಯ ಹೋರಾಟಗಾರರ ಮನೆತನವೆಂದು ಪ್ರಸಿದ್ಧಿಯನ್ನು ಪಡೆದಿತ್ತು.

೧೯೩೦ ರಲ್ಲಿ ಪ್ರಾರಂಭಗೊಂಡ ಸ್ವಾತಂತ್ರ್ಯ ಚಲುವಳಿಯಲ್ಲಿ ಬೆಳಗಾವಿಯಿಂದ ಐದು ಸತ್ಯಾಗ್ರಹ ಗುಂಪುಗಳು ಹೊರಟಿದ್ದವು. ಐದು ಗುಂಪುಗಳಲ್ಲಿ ರಾಮಪ್ಪ ಬನದವರ ಅವರ ಅಣ್ಣನಾದ ಬಸವಂತಪ್ಪ ಬನದವರ ಅವರ ಗುಂಪು ಒಂದಾಗಿತ್ತು. ಈ ಗುಂಪಿನಲ್ಲಿಯೇ ರಾಮಪ್ಪ ಬನದವರ ಸತ್ಯಾಗ್ರಹ ಗುಂಪಿನೊಂದಿಗೆ ಸೇರಿಕೊಂಡು ಬೆಳಗಾವಿ, ಬೈಲಹೊಂಗಲ, ಗೋಕಾಕಗಳಲ್ಲಿ ಚಳುವಳಿ ಮಾಡಿದರು. ಇದಲ್ಲದೇ ಉಪ್ಪಿನ ಕಾಯ್ದೆ ಭಂಗದ ಪ್ರಚಾರ ಮಾಡಿ ಹಲವಾರು ಊರುಗಳಲ್ಲಿ ತಿರುಗಾಡಿ, ಬನ ಕಡಿಯುವ ಕಾರ್ಯ ಮಾಡಿದ್ದರಿಂದ ಅವರಿಗೆ ನಾಲ್ಕು ತಿಂಗಳ ಶಿಕ್ಷೆಯಾಗಿತ್ತು. ಈ ಶಿಕ್ಷೆಯನ್ನು ಪರಿಗಣಿಸದೇ ಇವರು ರಾಷ್ಟ್ರೀಯ ಚಳುವಳಿಯ ಕಾರ್ಯಗಳಲ್ಲಿ ವಿಧಾಯಕ ಕಾರ್ಯಗಳನ್ನು ಮಾಡುತ್ತ ಬಂದಿದ್ದಾರೆ.

ಗಾಂಧೀಜಿಯವರ ಕರೆಯ ಮೇರೆಗೆ ೧೯೪೨ ರ 'ಚಲೇಜಾವ ಆಂದೋಲನ' ದಲ್ಲಿ ಇವರು ಭಾಗವಹಿಸಿದರು. ಹುದಲಿ ಗುಂಪಿನವರಲ್ಲಿ ಇವರು ಸೇರಿ ರಾಮಚಂದ್ರ ವಡವಿಯವರ ಗುಂಪಿನೊಂದಿಗೆ ಕಾರ್ಯ ಮಾಡಹತ್ತಿದ್ದರು. ಅವರು ಮಾಡಿದ ಕಾರ್ಯ ತುಮ್ಮರಗುದ್ದಿ ಸೀಮೆಯಲ್ಲಿ ಕರೀಕಟ್ಟಿ ಗ್ರಾಮಗಳಲ್ಲಿ ತಾರ ಕಡಿಯುವುದು, ಅಲ್ಲದೆ ಸೂಳೆಭಾವಿ ಸ್ಟೇಶನ್ ಸುಡುವುದಕ್ಕೆ ಹೋದಾಗ ಮಿಲಿಟರಿಯವರು ಬಂದದ್ದರಿಂದ ತಾರ ಕಡಿಯುವ ಕಾರ್ಯ ಅಸಾಧ್ಯವಾಯಿತು. ಬ್ರಿಟಿಷರು ಅವರನ್ನು ಹಿಡಿದರು. ಬೆಳಗಾವಿಗೆ ಒಯ್ದು ಕಿಲ್ಲೆ ಜೈಲಿನಲ್ಲಿಟ್ಟರು. ಆಗ ಇವರಗೆ ೨ ತಿಂಗಳ ಶಿಕ್ಷೆ ೩೦ ರೂಪಾಯಿ ದಂಡ ಮತ್ತು ಅದರ ಬದಲು ಒಂದು ತಿಂಗಳ ಶಿಕ್ಷೆ ಒಟ್ಟು ೩ ತಿಂಗಳ ಶಿಕ್ಷೆ ಆಗುತ್ತದೆ.

ರಾಮಪ್ಪ ಬನದವರ ಅವರನ್ನು ಶಹಪೂರ ಕಚೇರಿಯಲ್ಲಿ ೩ ತಿಂಗಳು ೧೨ ದಿನಗಳ ತನಕ ಇಟ್ಟು, ಅಲ್ಲಿಂದ ಸಾಂಗಲಿ ಕಚೇರಿಗೆ ಒಯ್ಯುತ್ತಾರೆ. ಬ್ರಿಟಿಷರು ಇಂತಹ ಹೋರಾಟಗಾರರನ್ನು ಅಂಡರ್ ಟ್ರಾಯಲದಲ್ಲಿ ಇಡುತ್ತಿದ್ದರು. ಹಾಗೆಯೇ ಬನದವರನ್ನು ೮ ತಿಂಗಳು ಅಂಡರ್ ಟ್ರೆಯ್‌ದಲ್ಲಿಟ್ಟು ಇವರ ಮೇಲೆ ಖಟ್ಲೆ ನಡೆಸಿದರು. ಕೊನೆಗೆ ಇವರ ಬಿಡುಗಡೆ ಆಯಿತು.

**ನಾಗಪ್ಪ ಭೀಮಪ್ಪ ಉಪರಿ :**

ನಾಗಪ್ಪ ಭೀಮಪ್ಪ ಉಪರಿ ಇವರು ಕ್ರಿ. ಶ. ೧೯೩೭ ನೆಯ ಇಸ್ವಿಯಲ್ಲಿ ಜರುಗಿದ ಗಾಂಧಿ ಸೇವಾ ಸಂಘ ಸಮ್ಮೇಳನದಲ್ಲಿ ಸ್ವಯಂಸೇವಕರಾಗಿ ಕಾರ್ಯ ಮಾಡಿದರು. ಇವರು ೧೯೨೭ ರಲ್ಲಿ

ಹುದಲಿಯಲ್ಲಿ ಜನಿಸಿದರು. ಇವರ ತಂದೆ ಭೀಮಪ್ಪ. ಗಂಗಾಧರರಾವ ದೇಶಪಾಂಡೆಯವರ ಕುಮರಿ ಆಶ್ರಮದಲ್ಲಿ ಖಾದಿ ಗ್ರಾಮೋದ್ಯೋಗ ಕಾರ್ಯಕ್ಕಾಗಿ ಹುದಲಿಯಿಂದ ೧೫ ಜನ ನೇಕಾರರನ್ನು ಕರೆಯಿಸಿದರು. ಅಲ್ಲಿ ಖಾದಿ ನೇಯಲು ಹಚ್ಚಿದರು. ಆ ಹೊತ್ತಿಗೆ ತಂದೆ ಭೀಮಪ್ಪ ಉದ್ದಪ್ಪ ಉಪರಿ ಇವರು ಕುಮರಿಗೆ ಹೋಗಿ ಖಾದಿ ನೇಯುವ, ನೂಲುವ ಕೆಲಸ ಮಾಡುತ್ತಿದ್ದರು.

ನಾಗಪ್ಪ ಖಾದಿ ನೇಯ್ಗೆಯ ಪ್ರದರ್ಶನ ಮಾಡುತ್ತಿದ್ದರು. ೧೯೪೨ ನೆಯ ಇಸ್ವಿ ಚಲೇಜಾವ ಆಂದೋಲನದಲ್ಲಿ ಭಾಗವಹಿಸಿ, ಚಿಕ್ಕಬಾಗೇವಾಡಿ ಪಾಟೀಲರ ಬಂದೂಕು ಕಸಿದುಕೊಂಡದ್ದಕ್ಕೆ ೩ ತಿಂಗಳ ಶಿಕ್ಷೆಯಾಯಿತು. ಸೂಳೆಬಾವಿ ಸ್ಟೇಶನ ಸುಟ್ಟವರಲ್ಲಿ ಇವರೂ ಒಬ್ಬರಾಗಿದ್ದರು. ಕೋರ್ಟಿನಲ್ಲಿ ೯ ತಿಂಗಳು ನ್ಯಾಯ ನಡೆದು ಜ್ಯೂರಿಯವರು ನಿರ್ದೋಷಿ ಎಂದು ಹೇಳಿದ್ದರಿಂದ ಎಲ್ಲ ಆರೋಪಿಗಳ ಬಿಡುಗಡೆಯಾಯಿತು.

**ರಾಮಪ್ಪ ಫಕೀರಪ್ಪ ಸೊಂಟಕ್ಕಿ :**

ಗಾಂಧಿವಾದಿಯಾಗಿದ್ದ ರಾಮಪ್ಪ ಫಕೀರಪ್ಪ ಸೊಂಟಕ್ಕಿ ನೇಗಿನಹಾಳ ಗ್ರಾಮದವರು. ೦೧-೦೩-೧೯೦೬ರಲ್ಲಿ ಜನನ. ಇವರ ತಂದೆ ಫಕೀರಪ್ಪ. ತಾಯಿ ಗಂಗವ್ವ. ಚಿಕ್ಕಂದಿನಲ್ಲಿ ತಂದೆ ತೀರಿಕೊಂಡಿದ್ದರಿಂದ ಚಿಕ್ಕಮ್ಮನ ಊರಾದ ಹುದಲಿಗೆ ಬಂದು ಅಲ್ಲೇ ನೆಲೆಯೂರಿದ್ದರು. ಮನೆತನದ ಉದ್ಯೋಗವಾದ ನೇಕಾರಿಕೆಯನ್ನು ಕಲಿತು ಅದನ್ನೇ ಅನುಸರಿಸಿದರು.

ಕುಮರಿ ಆಶ್ರಮದ ಸ್ಥಾಪನೆಯಾದ ಮೇಲೆ ಹುದಲಿಯಲ್ಲಿಯ ಎಂಟು ಹತ್ತು ಮನೆಯ ನೇಕಾರರು ಆಶ್ರಮಕ್ಕೆ ಹೋದರು. ಅವರಲ್ಲಿ ಇವರೂ ಸೇರಿದ್ದರು. ಆಶ್ರಮದ ಕಾರ್ಯಕರ್ತರ ಸಹವಾಸದಿಂದ ರಾಷ್ಟ್ರೀಯ ವೃತ್ತಿಯನ್ನು ಹೊಂದಿದ ರಾಮಪ್ಪನವರು ಗಾಂಧಿ ಸೇವಾ ಸಂಘ ಸಮ್ಮೇಲನದ ಪ್ರದರ್ಶನದಲ್ಲಿ ಭಾಗವಹಿಸಿದರು. ಮುಂದೆ ಮದ್ರಾಸ, ಬೆಳಗಾವಿ ಹಾಗೂ ಬೆಂಗಳೂರುಗಳ ಪ್ರದರ್ಶನಗಳಲ್ಲಿಯೂ ಭಾಗಿಗಳಾಗಿದ್ದರು. ಮಾವನವರಾದ ಭೀಮಪ್ಪ ಬಾಳಪ್ಪ ಉಪರೆ ಇವರ ಮಾರ್ಗದರ್ಶನದಲ್ಲಿ ಅನೇಕ ಪ್ರದರ್ಶನಗಳಲ್ಲಿ ಪಾರಿತೋಷಕಗಳನ್ನು ಪಡೆದಿದ್ದಾರೆ.

ಕ್ರಿ. ಶ. ೧೯೪೨ ರ ಚಳುವಳಿಯಲ್ಲಿ ರಾಷ್ಟ್ರೀಯ ಕಾರ್ಯಕರ್ತರ ಜೊತೆಗೆ ಚಲೇಜಾವ ಆಂದೋಲನದಲ್ಲಿ ಭಾಗವಹಿಸಿದರು. ಪ್ರಭಾತ ಫೇರಿ ತೆಗೆಯುವುದು, ತಾರ ಕಂಬ ಕಡಿಯುವುದು, ಸರಕಾರಿ ದಫ್ತರ ಸುಡುವದು ಮೊದಲಾದ ಕೆಲಸಗಳನ್ನು ಮಾಡಿದರು. ೧೦-೦೨-೧೯೪೩ ರ ಬುಧವಾರ ೩ ಘಂಟೆಗೆ ಸೂಳೆಭಾವಿ ಸ್ಟೇಶನ್ ಸುಡುವ ಕಾರ್ಯದಲ್ಲಿ ಇವರೂ ಭಾಗವಹಿಸಿದ್ದರು. ಆ ಚಟುವಟಿಕೆಯಲ್ಲಿದ್ದ ೩೫ ಜನರ ಮೇಲೆ ಖಟ್ಲೆ ಹಾಕಿದಾಗ ಇವರು ಭೂಗತರಾದರು. ಇವರ ಸುಳಿವು ತಿಳಿಸಲು ಪೋಲಿಸರು ಇವರ ಮನೆಗೆ ಹೋಗಿ ತಾಯಿ ಮತ್ತು ಹೆಂಡತಿ ಇವರಿಬ್ಬರನ್ನು ಪೀಡಿಸುವ ಸುದ್ದಿ ತಿಳಿದಾಗ ಅವರು ಸ್ವತಃ ಹೋಗಿ ಬೆಳಗಾವಿ ರೈಲ್ವೆ ಪೊಲೀಸರಿಗೆ ಶರಣಾದರು. ಈ ಖಟ್ಲೆಯಲ್ಲಿ ೧೨ ತಿಂಗಳು ೧೯ ದಿನ ಜೈಲುವಾಸ ಅನುಭವಿಸಿದರು.

**ಬಸಪ್ಪ ಶಿವಪ್ಪ ಸೋನಪ್ಪನವರ :**

೧೯೨೦ರಲ್ಲಿ ಹಿರೇಬಾಗೇವಾಡಿಯಲ್ಲಿ ಜನಿಸಿದ ಇವರು ಅದೇ ಊರಲ್ಲಿ ೫ನೆಯ ಇಯತ್ತವರೆಗೆ ಶಿಕ್ಷಣ ಪಡೆದಿದ್ದರು. ಚಳುವಳಿಕಾರರಾದ ರಾಚಪ್ಪ ಜಮಖಂಡಿ, ನಾಗಪ್ಪ ಬಸರಕೋಡ, ಚನಬಸಪ್ಪ ಗಾಣಗಿ ಇವರ ಪ್ರೋತ್ಸಾಹದಿಂದ ಹೋರಾಟದ ಕಣಕ್ಕಿಳಿದರು. ಚಳುವಳಿಯಲ್ಲಿ ತಾರ ಕಡಿಯುವುದು, ಶೆರೆ ಹಾಗೂ ಶಿಂಧಿ ಅಂಗಡಿಗಳಿಗೆ ಬೆಂಕಿ ಹಚ್ಚುವುದು ಮುಂತಾದ ವಿಧ್ವಂಸಕ ಕೆಲಸಗಳಲ್ಲಿ ಭಾಗವಹಿಸಿದರು. ೩೧-೦೭-೧೯೪೩ ರಂದು ಕನ್ನಡ ಗಂಡು ಮಕ್ಕಳ ಶಾಲೆಗೆ ಬೆಂಕಿ ಹಚ್ಚಿದರು. ಆ ಸಂದರ್ಭದಲ್ಲಿ ಬಸಪ್ಪನವರ ಜೊತೆಗೆ ಅದೇ ಊರಿನ ಅಪ್ಪಣ್ಣ ಬಸವಣ್ಣೆಪ್ಪ ತೋಟಗಿ, ಫಕೀರಪ್ಪ ಬಾಳಪ್ಪ ಉಪ್ಪಾರ, ಈರಪ್ಪ ನಾಗಪ್ಪ ರೊಟ್ಟಿ, ವಿರೂಪಾಕ್ಷಪ್ಪ ವೀರಪ್ಪ ಓಂಕಾರಿಯವರು ಇದ್ದರು. ಆ ಕಾರಣಕ್ಕಾಗಿ ಇವರೆಲ್ಲರನ್ನು ಸರಕಾರ ಬಂದಿಸಿತು.

**ಫಕೀರಪ್ಪ ಬಸಲಿಂಗಪ್ಪ ಬನದವರ :**

ಫಕೀರಪ್ಪ. ಬಸಲಿಂಗಪ್ಪ ಬನದವರ ಇವರು ಹುದಲಿಯವರು. ಒಕ್ಕುಲುತನ ಇವರ ಕಾಯಕವಾಗಿತ್ತು. ಇವರು ಗಂಗಾಧರರಾವ ದೇಶಪಾಂಡೆಯವರ ಪ್ರಭಾವದಿಂದ ಚಳುವಳಿಯಲ್ಲಿ ಧುಮುಕಿದರು. ಸಣ್ಣ ವಯಸ್ಸಿನಲ್ಲಿ ಭೂಗತರಾಗಿ ಅನೇಕ ವಿಧ್ವಂಸಕ ಕಾರ್ಯಗಳನ್ನು ಮಾಡಿದ್ದಾರೆ. ಮುಂದೆ ೧೯೪೨ ರ ಚಳುವಳಿಯಲ್ಲಿ ಭಾಗವಹಿಸಿ ಪೋಲಿಸರಿಂದ ಬಂಧಿತರಾದರು. ಇದಲ್ಲದೇ ಸೆರೆಮನೆಗೂ ಅವರು ಹೋಗಬೇಕಾಯಿತು. ತಾವು ಭಾಗವಹಿಸಿದ ೧೯೪೨ರ ಚಳುವಳಿಯನ್ನು ಸೇರಿದ ನೆನಪಿನಿಂದ ರೋಮಾಂಚನಗೊಳ್ಳುತ್ತಿದ್ದರು. ಈ ಚಳುವಳಿಯ ನೇತೃತ್ವವನ್ನು ಶ್ರೀ ವಡವಿಯವರು ವಹಿಸಿಕೊಂಡಿದ್ದರು. ಅವರ ಹಿರಿಯ ಅಣ್ಣ ಬಸಪ್ಪ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದರು. ಮನೆಯ ಜವಾಬ್ದಾರಿ ಅವರ ಮೇಲಿದ್ದರಿಂದ ಅವರು ಜೈಲಿಗೆ ಹೋಗಲಿಲ್ಲ.

೧೯೪೨ ರ ಸ್ವಾತಂತ್ರ್ಯ ಚಳುವಳಿಯಲ್ಲಿ ಫಕೀರಪ್ಪನವರು ಭಾಗವಹಿಸಿದಾಗ ಅವರ ವಯಸ್ಸು ಸುಮಾರು ೨೦ ಅಥವಾ ೨೧. ಬ್ರಿಟಿಷ ಅಧಿಕಾರಿಗಳು ಇವರ ಮೇಲೆ ಕಣ್ಣಾವಲಿಟ್ಟಿದ್ದರು. ದಿನಾಂಕ ೧೪-೦೮-೧೯೪೨ ನೆಯ ದಿವಸ ಅಪೂರ್ವ ಪ್ರಭಾತಫೇರಿ ತೆಗೆದ ಕಾರಣ ೧೪ ಜನರನ್ನು ಬಂಧಿಸಿ ಅವರನ್ನು ಸೆರೆಮನೆಗೆ ತಳ್ಳಿದರು. ಅದೇ ದಿವಸ ಆ ೧೪ ಜನರಲ್ಲಿ ಒಬ್ಬರಾದ ರಾಮಚಂದ್ರ ವಡವಿಯವರ ಮೇಲೆ ಅರೆಷ್ಟ್ ವಾರೆಂಟ ಹೊರಡಿಸಿದರು. ಆದರೆ ವಡವಿಯವರು ಅವರಿಗೆ ಸಿಗದೇ ಭೂಗತರಾಗಿ ಕೆಲವು ತರುಣರನ್ನು ಕಟ್ಟಿಕೊಂಡು ವಿಧ್ವಂಸಕ ಕೃತ್ಯಗಳನ್ನು ಮಾಡಹತ್ತಿದರು. "ವಡವಿಯವರ ಆದೇಶದ ಮೂಲಕ ಶ್ರೀ ದಾದಾ ಕಾಳೆಯವರ ನೇತ್ರತ್ವದಲ್ಲಿ ಪ್ರಭಾತ ಪೇರಿ ತೆಗೆದರು. ಅದರಲ್ಲಿ ಶ್ರೀ ದಾದಾ ಕಾಳೆಯವರನ್ನು ಬಂಧಿಸಿದರು. ಆವಾಗ ಫಕೀರಪ್ಪನವರು ಮತ್ತು ಅವರ ಸಂಗಡಿಗರು ಪೋಲಿಸರಿಂದ ತಪ್ಪಿಸಿಕೊಂಡು ಭೂಗತರಾಗಿ ವಡವಿಯವರನ್ನು ಕೂಡಿಕೊಂಡು ಒಂದು ಗುಂಪನ್ನು ಮಾಡಿಕೊಂಡರು. ಅವರೆಲ್ಲರು ಸೇರಿ ರೇಲ್ವೆ, ತಾರು, ಧರ್ಮ ಶಾಲೆಗಳನ್ನು ಸುಟ್ಟರು. ಏಕೆಂದರೆ ಅವೆಲ್ಲವು ಸರಕಾರಕ್ಕೆ ಸಂಬಂಧಪಟ್ಟಿದ್ದವು.

ಅವನ್ನು ಸುಡುವವರಿಂದ ಸರಕಾರಕ್ಕೆ ಬಹಳ ನಷ್ಟವಾಗುತ್ತಿತ್ತು. ಫಕೀರಪ್ಪನವರು ಭೂಗತ ಅವಧಿಯಲ್ಲಿ ಅಂದರೆ ೧೨-೦೯-೧೯೪೨ ರಿಂದ ೦೩-೦೪-೧೯೪೩ ರಲ್ಲಿ ಸೂಳೆಭಾವಿ ಸ್ಟೇಶನ್ ಸುಟ್ಟರು. ಅದರಲ್ಲಿ ಶ್ರೀ ಬಸವನಗೌಡ್ರು, ರುದ್ರಗೌಡ ಪಾಟೀಲ. ಸಾ ಬಡಸ ಇವರ ನೇತ್ರತ್ವದಲ್ಲಿ ಸುಟ್ಟರು. ಫಕೀರಪ್ಪನವರ ಮೇಲೆ ವಾರಂಟ ಇದ್ದುದರಿಂದ ೦೩-೦೪-೧೯೪೩ ರಂದು ಅವರನ್ನು ಬಂಧಿಸಲಾಯಿತು. ಈ ಬಂಧಿತ ವ್ಯಕ್ತಿಗಳ ಮೇಲೆ ३ ಕೇಸುಗಳನ್ನು ಹಾಕಿದ್ದರು"[೨೨].

ಪ್ರಭಾತಫೇರಿ ತೆಗೆದದ್ದು, ಸೂಳೆಭಾಂವಿ ರೇಲ್ವೆ ಸ್ಟೇಶನ್ ಸುಟ್ಟಿದ್ದು ಮೊದಲನೆಯದಲ್ಲಿ ಫಕೀರಪ್ಪನವರಿಗೆ ೨ ತಿಂಗಳು ಕಠಿಣ ಶಿಕ್ಷೆ ವಿಧಿಸಲಾಯಿತು. ೨೦ ರೂಪಾಯಿ ದಂಡ ಕೊಡದ್ದರಿಂದ; ೧ ತಿಂಗಳು ಕಠಿಣ ಶಿಕ್ಷೆ ಅನುಭವಿಸಿದರು. ಒಟ್ಟು ಮೂರು ತಿಂಗಳು ಕಠಿಣ ಶಿಕ್ಷೆ ವಿಧಿಸಲಾಯಿತು. ಇದೇ ವೇಳೆಯಲ್ಲಿ ಸೂಳೆಭಾವಿ ಸ್ಟೇಶನ್ ಕೇಸ ನಡದೇ ಇತ್ತು. ಆದರೆ ಅದರಲ್ಲಿ ಇವರನ್ನು ನಿರ್ದೋಷಿಯೆಂದು ಬಿಡುಗಡೆ ಮಾಡಿದರು. ರಾಷ್ಟ್ರೀಯ ಚಳುವಳಿಯಲ್ಲಿದ್ದ ಫಕೀರಪ್ಪನವರು ೧೨-೦೯-೧೯೪೨ ರಿಂದ ೦೩-೦೪-೧೯೪೩ ರವರೆಗೆ ಭೂಗತರಾಗಿದ್ದರು. (೬ ತಿಂಗಳು ೨೧ ದಿನಗಳು) ೦೩-೦೪-೧೯೪೩ ರಿಂದ ೧೦-೦೪-೧೯೪೪ ರವರೆಗೆ ಕಿಲ್ಲಾ ಸಬ್ ಜೈಲಿನಲ್ಲಿ ಡೆಟಿನ್ಯೂ ಅಂತ ೧೧ ತಿಂಗಳು ೨೪ ದಿನ ಇಟ್ಟಿದ್ದರು.

**ರಾಮಪ್ಪ ಗವಣ್ಣವರ :**

ರಾಮಪ್ಪ ಮಲ್ಲಪ್ಪ ಗವಣ್ಣವರ ಇವರದು ಗೌಡಕಿ ಮನೆತನ. ಇವರು ೦೪-೦೨-೧೯೨೬ ರಂದು ಹುದಲಿಯಲ್ಲಿ ಜನಿಸಿದರು. ಆ ಊರ ಗೌಡಕಿಯನ್ನು ಇವರೇ ಮಾಡುತ್ತಿದ್ದರು. ಇವರ ತಾಯಿ ರುದ್ರವ್ವನವರು ವತನದಾರ ಮನೆತನದ ಮಗಳಾಗಿದ್ದರೂ ಸಾಧಾರಣ ಮನೆತನದವರಂತೆ ಇದ್ದಳು. ರಾಮಪ್ಪನವರು ಅಷ್ಟೇನು ವಿದ್ಯಾವಂತರಾಗಿರಲಿಲ್ಲ. ತಮ್ಮ ಸಹೋದರ ಕೆಂಚನಗೌಡನನ್ನು ಕಲಿಯಲೆಂದು ಶಾಲೆಗೆ ಕಳಿಸಿದ್ದರು. ಕೆಂಚನಗೌಡರು ಮುಲ್ಕೀ ಪರೀಕ್ಷೆ ಪಾಸಾಗಿ ಕುಮರೀ ಆಶ್ರಮದ ಪ್ರಭಾವಕ್ಕೊಳಗಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದರು. ಆಶ್ರಮದ ಖಾದಿ ಗ್ರಾಮೋದ್ಯೋಗದ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರಲ್ಲದೇ, ರಾಷ್ಟ್ರೀಯ ಕಾರ್ಯಕರ್ತರಾದರು. ಇವರು ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರಿಂದ ೧೯೪೦ ರಲ್ಲಿ ೬ ತಿಂಗಳು ಜೈಲು ವಾಸವಾಯಿತು.

ರಾಮಪ್ಪನವರು ಚಲೇಜಾವ ಚಳುವಳಿಯಲ್ಲಿ ಭಾಗವಹಿಸಿದ್ದರು. ಇವರು ಪ್ರಭಾತಫೇರಿ ಮಾಡುವುದು, ಹಳಿ ಕೀಳುವುದು, ತಾರು ಮತ್ತು ತಾರಕಂಬ ಕಡಿಯುವುದು ಮುಂತಾದ ಹಲವಾರು ಬ್ರಿಟಿಷ ಸರಕಾರದ ವಿರೋಧವಾಗಿ ಕಾರ್ಯ ಮಾಡುತ್ತಿದ್ದರು. ಹುದಲಿಯ ತಂಡದೊಡನೆ ಅವರು ಸೇರಿ ಇಂತಹ ಚಟುವಟಿಕೆಗಳನ್ನು ಮಾಡಿದ್ದಾರೆ. ಸುಳೇಭಾವಿ ಸ್ಟೇಶನ್ ಸುಡುವಾಗಲೂ ಭಾಗವಹಿಸಿದ್ದರು. ೧ ವರ್ಷ ಜೈಲು ವಾಸವಾಗಿ ಬಿಡುಗಡೆಯಾದರು. ಸುಳೇಭಾವಿ ಸ್ಟೇಶನ್ ಸುಟ್ಟ ೩೫ ಆರೋಪಿತರಲ್ಲಿ ರಾಮಪ್ಪ ೧೩ ನೇ ಆರೋಪಿಯಾಗಿದ್ದರು. ಈ ಖಟ್ಲೆಯಲ್ಲಿ ನ್ಯಾಯಾಲಯ

ಇವರಿಗೆ ನಿರ್ದೋಷಿಗಳೆಂದು ಒಮ್ಮತದಿಂದ ನಿರ್ಣಯ ಕೊಟ್ಟಿದ್ದರಿಂದ ಇವರಿಗೆ ಶಿಕ್ಷೆಯಾಗಲಿಲ್ಲ. ಇವರು ಅಖಿಲ ಭಾರತ ಚರಕಾ ಸಂಘ ಹುಬ್ಬಳ್ಳಿಯ ಶಾಖಾ ಕೇಂದ್ರದಲ್ಲಿ ಕಾರ್ಯಕರ್ತರಾಗಿದ್ದಾಗಲೇ ನಿಧನರಾದರು.

**ಬಸವಣ್ಣಪ್ಪ ಕೊಂತಿ :**

ಬಸವಣ್ಣಪ್ಪ ಕೊಂತಿ ಇವರು ಗಂಗಾಧರರಾವ ದೇಶಪಾಂಡೆ ಅವರ ಅನುಯಾಯಿಗಳು. ೧೯೪೧ರಲ್ಲಿ ಶಿಕ್ಷಣ ಮುಗಿಸಿ ಕುಂದರನಾಡಿನ ಧರನಟ್ಟಿ ಶಾಲೆಯಲ್ಲಿ ಶಿಕ್ಷಕರಾಗಿ ಸೇರಿದರು. ಆಗ ಪಗಾರ ೧೫-೦೦ ರೂ. ಅಲ್ಲಿ ಒಳ್ಳೆಯ ಶಿಕ್ಷಕರೆಂದು ಕೆಲಸ ಮಾಡುವಾಗ ೧೯೪೨ ರಲ್ಲಿ ಚಲೇಜಾವ ಚಳುವಳಿಯೂ ಪ್ರಾರಂಭವಾಯಿತು. ಮಹಾತ್ಮಾ ಗಾಂಧಿಜಿಯವರ ಆದೇಶದಂತೆ ಶಿಕ್ಷಕ ಕೆಲಸವನ್ನು ಬಿಟ್ಟು ಚಲೇಜಾವ ಚಳುವಳಿಯಲ್ಲಿ ಭಾಗವಹಿಸಿ ಭೂಗತರಾದರು. ಟಪಾಲು ಒಡೆದ ಅಪರಾಧಕ್ಕೆ ಬಸವಣ್ಣೆಪ್ಪನವರ ಸಲುವಾಗಿ ಅವರ ತಂದೆಯವರನ್ನು ಬಂಧಿಸಿದರು. ಈ ಸುದ್ದಿ ಭೂಗತರಾದ ಬಸವಣ್ಣೆಪ್ಪನವರಿಗೆ ತಿಳಿಯಿತು. ಬಸವಣ್ಣೆಪ್ಪನವರು ತಮ್ಮ ಸ್ವತಃ ಬಂದು ಪೋಲೀಸರ ಮುಂದೆ ಹಾಜರಾಗಿ ತಮ್ಮ ತಂದೆಯವರನ್ನು ಬಂಧನದಿಂದ ಬಿಡಿಸಿದರು. ನಂತರ ಬಸವಣ್ಣಪ್ಪ ಅವರನ್ನು ಬಂಧಿಸಿ ಊರ ಸಮೀಪದ ಗುಜನಾಳ ಗ್ರಾಮಕ್ಕೆ ಕರೆದುಕೊಂಡು ಹೋದರು. ಅದೇ ರಾತ್ರಿ ನಿಜಾಮುದ್ದೀನ ಎಂಬ ಪೊಲೀಸ ಇನ್ಸಪೆಕ್ಟರ್‌ರಿಗೂ ಬಸವಣ್ಣಪ್ಪನವರಿಗೂ ಹೊಡೆದಾಟವಾಯಿತು. ಈ ಹೊಡೆದಾಟದಲ್ಲಿ ಬಸವಣ್ಣೆಪ್ಪನವರು ಪೊಲೀಸ ಅಧಿಕಾರಿಯಾದ ನಿಜಾಮುದ್ದೀನನನ್ನು ಸಿಟ್ಟಿಗೆದ್ದು ಹೊಡೆದರು. ನಿಜಾಮುದ್ಧೀನನು ತನ್ನ ಅಧಿಕಾರಿ ದರ್ಪದಿಂದ ಅತ್ಯಂತ ಕ್ರೂರವಾಗಿ ಬಸವಣ್ಣಪ್ಪನವರನ್ನು ಮೂರ್ಛೆ ಹೋಗುವಂತೆ ಹೊಡೆದು ಬಂಧಿಸಿ ಕರೆದೊಯ್ದರು. ಮುಂದೆ ಬಸವಣ್ಣಪ್ಪನವರು ೧೯೪೩ ರಲ್ಲಿ ಬಿಡುಗಡೆಯಾದರು ಮತ್ತೆ ಅವರು ಶಿಕ್ಷಕರಾಗಿ ತಮ್ಮ ಕೆಲಸವನ್ನು ಮುಂದುವರೆಸಿದರು.

**ವಾಸುದೇವ ನಾಗಪ್ಪ ಕದಮ :**

ವಾಸುದೇವ ನಾಗಪ್ಪ ಕದಮ ಇವರು ಹುದಲಿಯವರು. ಇವರು ೧೮-೦೪-೧೯೨೨ ರಲ್ಲಿ ಜನಿಸಿದರು. ತಂದೆ ನಾಗಪ್ಪ ತಾಯಿ ನಾಗವ್ವ, ಒಕ್ಕಲುತನದ ಸಾಧಾರಣ ಮನೆತನದವರು. ಮುಲ್ಕಿ ಪರೀಕ್ಷೆ ಪೂರ್ಣಗೊಳಿಸಿದರು. ಶಿಕ್ಷಣ ಮುಗಿದ ಬಳಿಕ ಕುಮರಿ ಆಶ್ರಮದ ಕಾರ್ಯಕರ್ತರ ಸಹವಾಸ ಆರಂಭವಾಯಿತು. ಹುದಲಿಯಲ್ಲಿ ಆರಂಭವಾದ ತರುಣ ಸಂಘದ ಸದಸ್ಯರಾಗಿದ್ದರು. ಶ್ರೀ ಪುಂಡಲಿಕಜೀ ಕಾತಗಡೆಯವರ ಸಲಹೆಯ ಮೇರೆಗೆ ಕಾರವಾರ ಜಿಲ್ಲೆಯ ಹೊನ್ನಾವರಕ್ಕೆ ಹೋಗುತ್ತಾರೆ. ಅಲ್ಲಿರುವ ಗ್ರಾಮೋದ್ಯೋಗ ಶಾಲೆಯಲ್ಲಿ ಕೈ ಕೆಲಸದ ಉದ್ಯೋಗ ಕಲಿಯುತ್ತಾರೆ. ಅಲ್ಲಿ ಆರು ತಿಂಗಳು ಶಿಕ್ಷಣ ಪಡೆಯುತ್ತಾರೆ. ಮುಂದೆ ಅಖಿಲ ಭಾರತ ಚರಕಾ ಸಂಘ ಕರ್ನಾಟಕ ಶಾಖೆ ಹಳೇ ಹುಬ್ಬಳ್ಳಿ ಮತ್ತು ಗೋಪನಕೊಪ್ಪದಲ್ಲಿ ನೂಲು ನೇಯ್ಗೆಯ ಶಿಕ್ಷಣ ಪಡೆಯುತ್ತಾರೆ. ಅಲ್ಲದೆ ಆ ಪರೀಕ್ಷೆಯಲ್ಲಿ ಉತ್ತೀರ್ಣರಾಗುತ್ತಾರೆ. ನಂತರ ೧೯೩೯ ನೆಯ ಇಸ್ವಿಯಲ್ಲಿ ಕನ್ನಡ ಪ್ರಾಥಮಿಕ ಶಾಲೆಯಲ್ಲಿ ನೇಯ್ಗೆಯ ಶಿಕ್ಷಕನಾಗಿ ಕೆಲಸ ಮಾಡಲು ತೊಡಗಿದರು.

ದಿನಾಂಕ ೧೪-೦೮-೧೯೪೨ ರಲ್ಲಿ ಹುದಲಿಯಲ್ಲಿ ಪ್ರಭಾತಫೇರಿ ಹೊರಟಿತ್ತು. ಆ ಪ್ರಭಾತಫೇರಿಯಲ್ಲಿ ಸೇವಾದಳದ ಇತರ ಕಾರ್ಯಕರ್ತರೊಡನೆ ಪ್ರಮುಖ ಪಾತ್ರವಹಿಸಿದ್ದರು. ಆಗ ಪೊಲೀಸರು ೧೪ ಜನ ಸತ್ಯಾಗ್ರಹಿಗಳನ್ನು ಕೈದು ಮಾಡಿದರು. ಇವರಿಗೆ ೧ ವರ್ಷ ಶಿಕ್ಷೆ ೧೦೦/- ರೂಪಾಯಿ ದಂಡ ವಿಧಿಸಲಾಯಿತು. ದಂಡವನ್ನು ಪಾವತಿ ಮಾಡದಿದ್ದರೆ ಅದರ ಬದಲು ೬ ತಿಂಗಳ ಶಿಕ್ಷೆ ವಿಧಿಸಲಾಗುತ್ತಿತ್ತು. ಹೀಗೆ ಒಟ್ಟು ೨ ವರ್ಷ ಶಿಕ್ಷೆಯಾಯಿತು. ಚಳುವಳಿಗಾರರೆಲ್ಲರನ್ನು ಬೆಳಗಾವಿಯ ಹಿಂಡಲಗಾ ಜೈಲಿಗೆ ಒಯ್ಯುತ್ತಾರೆ. ಅಲ್ಲಿಂದ ಮುಂದೆ ಎರಡು ತಿಂಗಳ ತರುವಾಯ ಯರವಡಾ ಜೈಲಿಗೆ ಕಳಿಸುತ್ತಾರೆ. ವಾಸುದೇವ ಕದಮ ಅವರು ಪೂರ್ಣ ಶಿಕ್ಷೆ ಅನುಭವಿಸಿ ಬರುತ್ತಾರೆ. ಅದಾದ ಬಳಿಕ ಇವರು ತಮ್ಮನ್ನು ಸಂಪೂರ್ಣ ರಾಷ್ಟ್ರೀಯ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುತ್ತಾರೆ.

**ನಾರಾಯಣ ಬಂಡೋ ದೇಶಪಾಂಡೆ :**

ನಾರಾಯಣ ಬಂಡೋ ದೇಶಪಾಂಡೆ ಹುದಲಿ ಊರಿನ ದೇಶಪಾಂಡೆ ಮನೆತನದವರು. ತಂದೆ ಬಂಡೋಪಂತ. ತಾಯಿ ಪಾರ್ವತಿ ಬಾಯಿಯವರು. ೧೯೨೫ ರಲ್ಲಿ ಜನಿಸಿದ ಇವರು ೧೯೩೯ ನೆಯ ಇಸ್ವಿಯಲ್ಲಿ ವ್ಹರ್ನಾಕ್ಯೂಲರ ಫಾಯಿನಲ್ (ಮುಲ್ಕಿ ಪರೀಕ್ಷೆ) ಪರೀಕ್ಷೆ ಮುಗಿಸಿದ್ದರು. ಆಗ ಹುದಲಿಯಲ್ಲಿ ರಾಷ್ಟ್ರೀಯ ಚಳುವಳಿ ತೀವ್ರ ಸ್ವರೂಪ ಪಡೆದಿತ್ತು. ಆಗ ದೇಶಪಾಂಡೆ ಅವರು ಶಿಕ್ಷಣಕ್ಕೆ ಶರಣು ಹೊಡೆದರು. ದೇಶದ ಸ್ವಾತಂತ್ರ್ಯದ ಸಲುವಾಗಿ ಹೋರಾಟ ಮಾಡುವ ಕಾರ್ಯಕರ್ತರ ಸಹವಾಸದಿಂದ ಅತ್ತ ಕಡೆಗೆ ತಾವು ತೊಡಗಲು ಪ್ರವೃತ್ತರಾದರು. ಇವರು ಬಾಲ್ಯದಿಂದಲೇ ರಾಷ್ಟೀಯ ಸೇವಾದಳದ ಶಿಕ್ಷಣ ಪಡೆದಿದ್ದರು. ಮುಂದೆ ರಾತ್ರಿ ಶಾಲೆ, ಪ್ರೌಢ ಶಿಕ್ಷಣ ಶಾಲೆಗಳಲ್ಲಿ ಒಂದೆರಡು ವರ್ಷ ಕಾರ್ಯ ಮಾಡಿದ್ದಾರೆ. ೧೯೪೧ ನೆಯ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲು ದೇಶಪಾಂಡೆಯವರಿಗೆ ಚಿಕ್ಕವರಿದ್ದ ಕಾರಣ ಪರವಾನಿಗೆ ದೊರೆಯಲಿಲ್ಲ. ಆಗ ಇವರು ಹುದಲಿ ಊರ ತರುಣ ಸಂಘದ ಸದಸ್ಯರಾಗಿ ಕೆಲಸ ಮಾಡಿದರು. ಖಾದಿ ಗ್ರಾಮೋದ್ಯೋಗದ ಕಾರ್ಯದ ಅಭ್ಯಾಸ ಮಾಡಿದರು.

ಹುದಲಿ ಊರವರು ೧೪-೦೮-೧೯೪೨ ರಂದು ಹೊರಡಿಸಿದ ಪ್ರಭಾತಫೇರಿಯಲ್ಲಿ ತಂದೆ ಬಂಡೋಪಂತ ಮತ್ತು ಮಗ ನಾರಾಯಣ ಇವರಿಬ್ಬರೂ ಭಾಗವಹಿಸಿ ಕಾಯ್ದೆಭಂಗ ಮಾಡಿದರು. ಅಂದು ಬಂಧಿತರಾದ ೧೪ ಜನ ಸತ್ಯಾಗ್ರಹಿಗಳಲ್ಲಿ ಇವರಿಬ್ಬರು ಸೇರಿದ್ದರು. ಅವರಲ್ಲಿ ವಯಸ್ಸಾದ ಇವರ ತಂದೆ ಬಂಡೋಪಂತ ಮೊದಲಾದ ನಾಲ್ಕು ಜನರನ್ನು ಬಿಡುಗಡೆ ಮಾಡಿದರು. ಉಳಿದವರೆಲ್ಲರಿಗೂ ಶಿಕ್ಷೆ ದಂಡ ವಿಧಿಸಿ ಹಿಂಡಲಗಿ ಜೇಲಿಗೆ ಕಳಿಸಿದರು. ಎರಡು ತಿಂಗಳ ನಂತರ ಇವರನ್ನು ಯರವಡಾ ಜೇಲಿಗೆ ಕಳಿಸಿದರು. ಆಗ ನಾರಾಯಣ ಚಿಕ್ಕ ಹುಡುಗನೆಂದು ತಿಳಿದು ಯರವಡಾ ಜೇಲಿನಿಂದ ೧೧-೦೧-೧೯೪೩ ಕ್ಕೆ ಬಿಡುಗಡೆ ಮಾಡಿದರು. ಹೋರಾಟ ಮನೋಭಾವದ ಈ ವ್ಯಕ್ತಿ ಸುಮ್ಮನೆ ಕೂಡಲಿಲ್ಲ. ಆ ಮೇಲೆ ೧೧-೦೩-೧೯೪೩ ನೆಯ ದಿವಸ

ಬೆಳಗಾವಿಯಲ್ಲಿ ಪುನಃ ಸತ್ಯಾಗ್ರಹ ಮಾಡಿದ್ದಕ್ಕಾಗಿ ೬ ತಿಂಗಳ ಶಿಕ್ಷೆ ವಿಧಿಸಲಾಯಿತು. ಆಗ ಹಿಂಡಲಗಿ ಹಾಗೂ ವಿಜಾಪೂರ ಜೈಲಿನಲ್ಲಿ ಶಿಕ್ಷೆ ಅನುಭವಿಸಿ ಬಂದರು.

## ಮಲ್ಲಪ್ಪ ರಾಮಪ್ಪ ಹೆಗನಾಯ್ಕ :

ಮಲ್ಲಪ್ಪ ಹೆಗನಾಯ್ಕ ಇವರು ಹುದಲಿ ಊರಿನ ಹೆಗನಾಯ್ಕ ಮನೆತನದವರು. ಇವರು ೧೮-೦೧-೧೯೧೮ ರಂದು ಜನಿಸಿದರು. ತಂದೆ ರಾಮಪ್ಪ, ತಾಯಿ ನಿಂಗವ್ವ ರಾಷ್ಟ್ರೀಯ ಶಾಲೆಯಲ್ಲಿ ೫ ನೆಯ ಇಯತ್ತೆಯವರೆಗೆ ಇವರು ಶಿಕ್ಷಣ ಪಡೆದರು. ಇವರು ಚಿಕ್ಕವರಿದ್ದಾಗಿನಿಂದಲೂ ಹುದಲಿ ರಾಷ್ಟ್ರೀಯ ಕಾರ್ಯಚಟುವಟಿಕೆಗಳಲ್ಲಿ ಭಾಗವಹಿಸುತ್ತ ಬಂದರು. ರಾಷ್ಟೀಯ ಶಾಲೆಯಲ್ಲಿ ಓದಿದ್ದರಿಂದ ಇವರಲ್ಲಿ ಅಪಾರವಾದ ದೇಶಾಭಿಮಾನ ಬೆಳೆದಿತ್ತು.

೧೯೨೩ ನೆಯ ಇಸ್ವಿಯಲ್ಲಿ ಹರಿಜನ ಶಾಲೆಯು (ರಾಷ್ಟ್ರೀಯ ಶಾಲೆಯು) ಪ್ರಾರಂಭವಾಯಿತು. ಆದರೆ ಭಾರತೀಯ ಹೋರಾಟಗಾರರು ಕಾಯ್ದೆ ಭಂಗ ಆಂದೋಲನವನ್ನು ಮಾಡಿದರು. ಅದರ ಪರಿಣಾಮವಾಗಿ ೧೯೩೧ ನೆಯ ಇಸ್ವಿಗೆ ರಾಷ್ಟ್ರೀಯ ಶಾಲೆಗಳು ನಿಂತು ಹೋದವು. ಆಗ ಹೆಗನಾಯ್ಕ ಅವರು ಸರಕಾರಿ ಶಾಲೆಗೆ ಹೋಗಲಿಲ್ಲ. ಇದಕ್ಕೆ ಮುಖ್ಯವಾದ ಕಾರಣವೆಂದರೆ ಬ್ರಿಟಿಷ ಸರಕಾರ ನಡೆಸುತ್ತಿರುವ ಸರಕಾರಿ ಶಾಲೆಯಲ್ಲಿ ಶಿಕ್ಷಣ ಪಡೆಯುವುದಕ್ಕಿಂತ ಮನೆತನದ ಉದ್ಯೋಗ ಮಾಡುವುದೇ ಶ್ರೇಷ್ಠವೆಂದು ಬಗೆದರು. ಆ ಕಾರಣಕ್ಕಾಗಿ ತಮ್ಮ ಮನೆತನದ ಉದ್ಯೋಗದೊಂದಿಗೆ ರಾಷ್ಟ್ರೀಯ, ಸಾಮಾಜಿಕ ಕಾರ್ಯಗಳಲ್ಲಿ ಭಾಗವಹಿಸುತ್ತಲಿದ್ದರು. ೧೯೩೭ ರ ಗಾಂಧಿ ಸೇವಾ ಸಂಘದ ಸಮ್ಮೇಲನಕ್ಕೆ ಮಹಾತ್ಮಾ ಗಾಂಧೀಜಿಯವರು ಹುದಲಿಗೆ ಬಂದಾಗ ಇವರು ಸ್ವಯಂ ಸೇವಕರಾಗಿ ಕಾರ್ಯ ಮಾಡಿದರು.

೧೯೪೨ ರ ಚಲೇಜಾವ ಆಂದೋಲನದಲ್ಲಿ ಭಾಗವಹಿಸುವ ಹುಮ್ಮಸ್ಸು ಇವರಿಗಿತ್ತು. ತನ್ನ ಗೆಳೆಯರಾದ ಮೋಹನ ಬ. ದೇಸಾಯಿ ಲೋಕದರ್ಶನ ವರ್ತಮಾನಪತ್ರ ಬೆಳಗಾವಿ ಮಾಲೀಕರು ಮತ್ತು ಭೀಮಪ್ಪ ಚನಬಸಪ್ಪ ಯಲಿಗಾರ, ಬಸವಣ್ಣಿ ಬಾಳಪ್ಪ ಕೊಂತಿ, ಈ ಮೂವರೊಂದಿಗೆ ಹುದಲಿಗೆ ಬರುತ್ತಾರೆ. ದಿನಾಂಕ ೨೯-೦೩-೧೯೩೮ ರಂದು ಆಂದೋಲನ ಪ್ರಾರಂಭಿಸುತ್ತಾರೆ. ಅಂದು ಊರ ಪೋಸ್ಟದ ಪೋಸ್ಟಮನ್ನನ ಚೀಲವನ್ನು ಕಸಿದುಕೊಂಡು ಕಾಯ್ದೆ ಭಂಗ ಮಾಡಿದರು. ಆಗ ಸರಕಾರದವರು ಈ ಮೂವರನ್ನು ಕೈದು ಮಾಡಿ ಕೋರ್ಟಗೆ ಕಳುಹಿಸಿದರು. ನ್ಯಾಯಾಧೀಶರು ಇವರಿಗೆ ೧ ವರ್ಷ ಶಿಕ್ಷೆ ೫೦ ರೂಪಾಯಿ ದಂಡ ವಿಧಿಸುತ್ತಾರೆ. ದಂಡವನ್ನು ಭರಿಸಲಾಗದಿದ್ದರೆ, ಅದರ ಬದಲು ಮೂರು ತಿಂಗಳು ಹೆಚ್ಚು ಶಿಕ್ಷೆ ವಿಧಿಸುವ ನೇಮವಿತ್ತು. ಇವರನ್ನು ಹಿಂಡಲಗಿ ಜೈಲಿಗೆ ಕಳುಹಿಸಿದರು. ಮುಂದೆ ವಿಜಾಪೂರ ಜೈಲಿಗೆ ಕಳುಹಿಸಿದರು. ಅಲ್ಲಿ ಪೂರ್ಣ ಶಿಕ್ಷೆ ಅನುಭವಿಸಿ ಬಂದರು.

**ಅಲ್ಲಿಸಾಹೇಬ ಹುಸೇನಸಾಬ ವಾರಿಮನಿ :**

ಇವರು ಹುದಲಿಯವರು. ತಂದೆ ಹುಸೇನಸಾಬ. ತಾಯಿ ಮಾಸಾಬಿ. ಇವರು ಕ್ರಿ.ಶ. ೦೭-೦೭-೧೯೦೬ ರಲ್ಲಿ ಜನಿಸಿದರು. ಇವರ ಮನೆತನದ ಉದ್ಯೋಗ ಒಕ್ಕಲುತನ. ಕನ್ನಡ ಮುಲ್ಕೀ ಪರೀಕ್ಷೆ. (ವ್ಹರ್ನಾಕ್ಯುಲರ ಫಾಯನಲ್) ಪಾಸಾಗಿದ್ದರು. ಇವರು ಚಿಕ್ಕಂದಿನಲ್ಲಿರುವಾಗಲೇ ತಂದೆಯವರನ್ನು ಕಳೆದುಕೊಂಡರು. ಕುಮರಿ ಆಶ್ರಮದ ಕಾರ್ಯಕರ್ತರಾದ ಗಂಗಾಧರ ದೇಶಪಾಂಡೆ, ಗಂಗಪ್ಪ ಯಮಕನಮರಡಿಯವರ ಜೊತೆಗೆ ಹುದಲಿಯ ಸಾಮಾಜಿಕ ಕಾರ್ಯಗಳಲ್ಲಿ, ರಾಷ್ಟ್ರೀಯ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದರು.

ಇವರು ೧೯೩೦ ರಲ್ಲಿ ಮಹಾತ್ಮಾ ಗಾಂಧೀಜಿಯವರ ಕರೆಗೆ ಓಗೊಟ್ಟು ವಾರೀಮನಿಯವರು ಚಳುವಳಿಗೆ ಧುಮುಕಿದರು. ದಂಡಿಯಾತ್ರೆಯ ಉಪ್ಪಿನ ಕಾಯ್ದೆ ಭಂಗದ ಸಂದರ್ಭದಲ್ಲಿ ಮಹಾತ್ಮಾ ಗಾಂಧೀಜಿಯವರನ್ನು, ಗಂಗಾಧರರಾವ ದೇಶಪಾಂಡೆಯವರನ್ನು ಬಂಧಿಸಲಾಯಿತು. ಇದರ ವಿರುದ್ಧ ಪ್ರತಿಭಟನೆ ಮಾಡುವ ಸಲುವಾಗಿ ಸ್ವಾತಂತ್ರ್ಯ ಹೋರಾಟಗಾರರು ಬೆಳಗಾವಿಯಲ್ಲಿ ಪ್ರತಿಭಟಿಸಿದರು. "ಬೆಳಗಾವಿಯಿಂದ ಹೊರಟ ಈ ಸತ್ಯಾಗ್ರಹ ಗುಂಪಿಗೆ ಅಲ್ಲಿಸಾಹೇಬರು ಮುಖಂಡರಾಗಿದ್ದರು. ಈ ಗುಂಪು ಮೂರು ತಾಲ್ಲೂಕುಗಳಲ್ಲಿ ತಿರುಗಾಡಿ ಪ್ರಚಾರ ಮಾಡಿ ತಿರುಗಿ ಹುದಲಿಗೆ ಬಂದಿತು. ಮುಂದೆ ಶಿಂದೀ ಗಿಡ ಕಡಿಯುವ ಕಾರ್ಯಕ್ರಮ ಆರಂಭವಾಯಿತು. ಆಗ ಹುದಲಿಯ ಗುಂಪು ತಳಗಿನಹಟ್ಟಿಯ ಶಿಂಧೀ ಗಿಡ ಕಡಿಯಲು ಹೊರಟರು. ಅದರಲ್ಲಿ ಇವರು ಭಾಗವಹಿಸಿದರು. ಅದರಂತೆ ಮಿಡಕನಟ್ಟಿ, ಹಣ್ಣಿಕೇರಿ, ಶಿಂಧೀ ಬನ ಕಡಿಯಲು ಹೋಗಿದ್ದರು. ಇದರಿಂದ ತಳಗಿನಹಟ್ಟಿಯ ಚಟುವಟಿಕೆಯಲ್ಲಿ ಮೂರು ತಿಂಗಳ ಶಿಕ್ಷೆ ೫೦ ರೂಪಾಯಿ ದಂಡ ಅದರ ಬದಲು ೧ ತಿಂಗಳ ಶಿಕ್ಷೆಯಾಯಿತು. ಮುಂದೆ ಇವರ ರಾಷ್ಟ್ರೀಯ ಕಾರ್ಯಗಳನ್ನು ಮಾಡುತ್ತಲೇ ಇದ್ದರು"[೨].

೧೯೩೨ ನೆಯ ಇಸ್ವಿಯ ಕಾಯ್ದೆ ಭಂಗ ಆಂದೋಲನದಲ್ಲಿ ಭಾಗವಹಿಸಿದವರಿಗೆ ವ್ಹಾಯಿಸರಾಯ ಲಾರ್ಡ ವಿಲ್ಲಿಂಗ್ಟನ್ನ ಸಾಹೇಬರು ಕಠಿಣವಾದ ಶಿಕ್ಷೆಯನ್ನು ವಹಿಸುತ್ತಿದ್ದರು. ಆ ಸಂದರ್ಭದಲ್ಲಿ ವಾರೀಮನಿಯವರು ಕಾಯಿದೆ ಭಂಗ ಆಂದೋಲನದಲ್ಲಿ ಭಾಗವಹಿಸಿ ಹುದಲಿಯ ಊರ ಪೇಟೆಯಲ್ಲಿ ದಿನಾಂಕ ೧೪-೦೧-೧೯೩೨ ರಂದು ಸಭೆ ಮಾಡಿ ಭಾಷಣ ಮಾಡಿದರು. ಉಪ್ಪಿನ ಕಾಯ್ದೆ ಭಂಗ ಮಾಡಿದ್ದಕ್ಕಾಗಿ ೧ ವರ್ಷ ಶಿಕ್ಷೆ ೨೫೦ ರೂ ದಂಡವನ್ನು ವಾರೀಮನಿಯವರಿಗೆ ವಿಧಿಸುತ್ತಾರೆ. ದಂಡ ಕೊಡದಿದ್ದರೆ ೩ ತಿಂಗಳ ಶಿಕ್ಷೆ ವಿಧಿಸಲಾಗುತ್ತಿತ್ತು. ಇದಾದ ಮರುದಿವಸವೇ ಹುದಲಿಯ ಅವರ ಮನೆ ಜಪ್ತಿ ಮಾಡಿದರು. ಮನೆಯಲ್ಲಿ ಏನೂ ಸಿಗಲಿಲ್ಲ. ಆ ಮೇಲೆ ಮನೆಯನ್ನು ಲಿಲಾವಿಗೆ ತೆಗೆದರು. ಊರಲ್ಲಿ ಯಾರೂ ಬೇಡಲಿಲ್ಲೆಂದು ಮನೆ ಹಾಗೆ ಉಳಿಯಿತು.

ಅವರನ್ನು ವಯಸ್ಸಿನಲ್ಲಿ ಚಿಕ್ಕವರೆಂದು ಜೈಲಿನಲ್ಲಿ ಚಿಕ್ಕ ಹುಡುಗರ ಜೊತೆಗೆ ಬೇರೆ ಇಡುತ್ತಿದ್ದರು. ಅವರನ್ನು ಯರವಡಾ ಜೈಲಿಗೆ ಕಳಿಸಿ ಚಿಕ್ಕ ಹುಡುಗರ ಬರಾಕದಲ್ಲಿಟ್ಟಿದ್ದರು. ಅಲ್ಲಿ ಗದುಗಿನ

ಹುದ್ದಾರ ಅನ್ನುವ ಒಬ್ಬ ಚಿಕ್ಕ ಹುಡುಗನಿದ್ದನು. ಆತನನ್ನು ಏನೋ ತಪ್ಪು ಮಾಡಿದನೆಂದು ಜೈಲ ಅಧಿಕಾರಿಗಳು ಬಡಿದು ಕತ್ತಲೆ ಕೋಣೆಗೆ ಹಾಕಿದರು. ಆತನ ತಪ್ಪಿಲ್ಲ, ಅಧಿಕಾರಿಗಳ ತಪ್ಪಿದೆ ಎಂದು ಹೇಳಿ ವಾರೀಮನಿಯವರು ಉಪವಾಸ ಸತ್ಯಾಗ್ರಹವನ್ನು ಆರಂಭಿಸಿದರು. ಮೂರು ದಿವಸಗಳವರೆಗೆ ಅನ್ನ ನೀರಿಲ್ಲದೆ ಉಪವಾಸ ಮಾಡಿದರು. ಆಗ ಯರವಡಾ ಜೈಲಿನ ಸುಪರಿಟೆಂಡೆಂಟ ಭಂಡಾರಿಯವರಿಗೆ ಇವರು ಕರ್ನಾಟಕದ ಕುಮರಿ ಆಶ್ರಮದ ಕಾರ್ಯಕರ್ತನೆಂದು ಗೊತ್ತಾಯಿತು. ಅವರು ಗಾಬರಿಯಾಗಿ ಮಹಾತ್ಮಾ ಗಾಂಧೀಜಿಯವರ ಕಡೆಗೆ ಹೋಗಿ ಈ ಎಲ್ಲ ಸಂಗತಿಯನ್ನು ತಿಳಿಸಿದರು. ಆಗ ಮಹಾತ್ಮಾ ಗಾಂಧೀಜಿಯವರು ಇವರನ್ನು ಕರೆಯಿಸಿ ಎಲ್ಲ ಸಂಗತಿಯನ್ನು ತಿಳಿದುಕೊಂಡು ಕತ್ತಲೆ ಕೋಣೆಯಲ್ಲಿದ್ದ ಹುದ್ದಾರ ಹುಡುಗನನ್ನು ಬಿಡಿಸಿದರಲ್ಲದೇ ಇವರ ಉಪವಾಸವನ್ನೂ ಅಂತ್ಯಗೊಳಿಸಿದರು. ಗಾಂಧೀಜಿ ಇವರ ಮೈಮೇಲೆ ಕೈಯಾಡಿಸಿ 'ಅಚ್ಛೆ ತರಹಸೇ ಕಾಮಕರೋ' ಎಂದು ಆಶೀರ್ವದಿಸಿದರು.

ಭೂಗತರಾಗಿದ್ದ ರಾಮಚಂದ್ರ ವಡವಿಯವರ ಕುರಿತು ವಿವರ ನೀಡುವಂತೆ ಪೊಲೀಸರು ಹೊಡೆದು, ಬಡಿದು, ಕೆಡವಿ, ತುಳಿದು, ಚಿತ್ರಹಿಂಸೆ ಕೊಟ್ಟರೂ ಇವರು ಬಾಯಿಬಿಡಲಿಲ್ಲ. ಆ ಹೊಡೆತದಿಂದ ಪ್ರಾಣ ಹೋಗುವ ಸಮಯ ಒದಗಿತ್ತು. ಒಂದು ಗುಟುಕು ನೀರು ಕುಡಿದಿದ್ದರೆ ಪ್ರಾಣಕ್ಕೆ ಅಪಾಯವಾಗುತ್ತಿತ್ತಂತೆ. ಅವರಲ್ಲಿ ಚನ್ನಪ್ಪ ಫೌಜದಾರರು ಇವರ ಗೆಳೆಯರು ನೀರು ಕುಡಿಯಬೇಡಿರಿ ಎಂದು ಮೇಲಿಂದ ಮೇಲೆ ಬಂದು ಹೇಳುತ್ತಿದ್ದರಂತೆ.

ಮುಂದೆ ಸೂಳೆಭಾವಿ ಸ್ಟೇಶನ್ ಸುಟ್ಟ ಕಾರಣಕ್ಕಾಗಿ ಇವರ ಮೇಲೆ ಖಟ್ಲೆ ಹಾಕಿ ಜೈಲಿಗೆ ಕಳುಹಿಸಿದರು. ಆ ಖಟ್ಲೆಯಲ್ಲಿ ಕೆಲವು ದಿವಸ ಅಂಡರ ಟ್ರಾಯಲ್ ಇಟ್ಟು ಖಟ್ಲೆಯು ೯ ತಿಂಗಳು ನಡೆದು ನಿರ್ದೋಷಿಯೆಂದು ಇವರ ಬಿಡುಗಡೆಯಾಯಿತು. ಆ ಚಟುವಟಿಕೆಯ ೩೫ ಆರೋಪಿಗಳಲ್ಲಿ ಇವರೊಬ್ಬರಾಗಿದ್ದರು. ಮುಂದೆ ಶಿಕ್ಷಕ ವೃತ್ತಿಯಿಂದ ನಿವೃತ್ತರಾಗಿ ಸ್ಕೂಲ ಬೋರ್ಡ ಮೇಂಬರರಾಗಿ ಕಾರ್ಯ ಮಾಡಿದರು. ದಿನಾಂಕ ೦೭-೦೮-೧೯೮೩ ರಂದು ಇವರು ನಿಧನರಾದರು.

**ಬಸಪ್ಪ ಗೌಡಪ್ಪ ಭದ್ರಕಾಳಿ :**

ಬಸಪ್ಪ ಗೌಡಪ್ಪ ಭದ್ರಕಾಳಿ ಇವರು ಹುದಲಿ ಊರಿನ ಶ್ರೀಮಂತ ಮನೆತನದವರು. ಅತಂತ್ಯ ಸ್ವಾಭಿಮಾನದಿಂದ ಬಾಳಿದ ಇವರು ಯಾರಿಗೂ ತಲೆಬಾಗದವರು. ಬ್ರಿಟಿಷ ಅಧಿಕಾರಿ ಶಾಹಿಯನ್ನು ಪ್ರತಿಭಟಿಸಿ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದರು. ಇವರು ಮೂಲತಃ ತೊರಗಲ್‌ದವರು. ನಂತರ ತೊರಗಲ್ಲನ್ನು ಬಿಟ್ಟು ಬೈಲಹೊಂಗಲ ತಾಲೂಕದ ಸುತಗಟ್ಟಿ ಗ್ರಾಮಕ್ಕೆ ಬಂದು ಅಲ್ಲಿಯ ಪಾಟೀಲಕಿಯನ್ನು ಸಂಪಾದಿಸಿ ಗೌಡರಾದರು. ಮುಂದೆ ಇವರ ಬಂಧುಗಳಾದ ಬಸನಗೌಡ ಮತ್ತು ಕಲ್ಲನಗೌಡ ಎಂಬ ಅಣ್ಣ-ತಮ್ಮಂದಿರು ಹುದಲಿ ಗ್ರಾಮಕ್ಕೆ ಬಂದು ಅಲ್ಲಿಯೂ ಪಾಟೀಲಕಿಯನ್ನು ಸಂಪಾದಿಸಿದರು. ಬಸಪ್ಪಾ ಭದ್ರಕಾಳಿಯವರ ತಂದೆ ಕರಿಗೌಡಪ್ಪ, ತಾಯಿ ತಾಯವ್ವ, ಇವರು ೦೯-೦೧-೧೯೧೩ ರಂದು ಜನಿಸಿದರು. ಊರಗೌಡಕಿ ಮನೆತನದವರಾಗಿದ್ದ

ಇವರ ಉದ್ಯೋಗ ಒಕ್ಕಲುತನವಾಗಿತ್ತು. ಕನ್ನಡ ಮುಲ್ಕೀ ಪರೀಕ್ಷೆಯವರೆಗೆ ಶಿಕ್ಷಣವನ್ನು ಪಡೆದರು. ಹೆಚ್ಚಿಗೆ ಕಲಿಯಲು ಸಾಧ್ಯವಾಗದ್ದರಿಂದ ಹೊಲಿಗೆಯ ಉದ್ಯೋಗ ಆರಂಭಿಸಿದರು.

ಗಂಗಾಧರರಾವ ದೇಶಪಾಂಡೆಯವರು ಕುಮರಿ ಆಶ್ರಮ ಸ್ಥಾಪಿಸಿದ ಬಳಿಕ ಅಲ್ಲಿಯ ಉತ್ಸಾಹಿ ಕಾರ್ಯಕರ್ತರಾದ ಪುಂಡಲೀಕಜಿ ಕಾತಗಡೆ, ರಾಮಚಂದ್ರ ವಡವಿ, ಗಂಗಾಧರ ಯಮಕನಮರಡಿ ಇವರೆಲ್ಲರ ಪ್ರೇರಣೆಯಿಂದ ಸಾರ್ವಜನಿಕ ಹಾಗೂ ರಾಷ್ಟ್ರೀಯ ಕಾರ್ಯಗಳಲ್ಲಿ ಪಾದಾರ್ಪಣೆ ಮಾಡಿದರು. ಹುದಲಿಯ ತರುಣ ಸಂಘದ ಸದಸ್ಯರಾಗಿ ಭದ್ರಕಾಳಿಯವರು ಕಾರ್ಯ ಮಾಡಿದರು. ಖೇರ ಹುದಲಿಯಲ್ಲಿ ಆರಂಭವಾದ ರಾತ್ರಿ ಶಾಲೆ, ಪ್ರೌಢಶಿಕ್ಷಣ ಶಾಲೆಗಳಲ್ಲಿ ಬಸಪ್ಪನವರು ಅಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡಹತ್ತಿದರು.

ಹುದಲಿಯಲ್ಲಿ ೧೪-೦೮-೧೯೪೨ ರಂದು ಮುಂಜಾನೆ ೧೦ ಘಂಟೆಗೆ ನಡೆದ ಪ್ರಭಾತಪೇರಿಯಲ್ಲಿ ೫೦೦ ಜನರಿದ್ದರು. ಈ ಐನೂರು ಜನರಲ್ಲಿ ಭದ್ರಕಾಳಿಯವರು ಪ್ರಮುಖರಾಗಿದ್ದರು. ಆಗ ಬ್ರಿಟಿಷ ಸರಕಾರವು ಬಂಧಿಸಿದ ೧೪ ಜನ ಹೋರಾಟಗಾರರಲ್ಲಿ ಇವರಿದ್ದರು. ೨೨-೦೮-೧೯೪೨ ರಂದು ನಾಲ್ಕು ಜನರಿಗೆ ೨ ವರ್ಷ ಶಿಕ್ಷೆಯಾಯಿತು. ಇನ್ನುಳಿದ ನಾಲ್ಕು ಜನರಿಗೆ ೧ ವರ್ಷ ೪ ತಿಂಗಳ ಶಿಕ್ಷೆಯಾಯಿತು. ಇಬ್ಬರಿಗೆ ೯ ತಿಂಗಳ ಶಿಕ್ಷೆಯಾಯಿತು. ಹದಿನಾಲ್ಕು ಜನರಲ್ಲಿ ಉಳಿದ ನಾಲ್ವರನ್ನು ವಯೋವೃದ್ಧರೆಂದು ಬಿಟ್ಟರು. ಭದ್ರಕಾಳಿ ಶಿಕ್ಷೆಗೆ ಗುರಿಯಾದರು. ದಿನಾಂಕ ೧೫-೧೦-೧೯೪೨ ರಂದು ಯರವಡಾ ಜೈಲಿಗೆ ಕಳುಹಿಸಿದರು. ದಿನಾಂಕ ೨೮-೦೮-೧೯೪೪ ರಂದು ಬಿಡುಗಡೆಯಾಗಿ ಶಿಕ್ಷೆಯನ್ನು ಮುಗಿಸಿ ಹೊರಬಂದರು.

ಭದ್ರಕಾಳಿಯವರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದಂತೆ ಊರಿನ ಸಾರ್ವಜನಿಕ ಕಾರ್ಯಗಳಲ್ಲಿಯೂ ಭಾಗವಹಿಸುತ್ತಿದ್ದರು. ಅತ್ಯಂತ ಪ್ರಗತಿಪರ ವಿಚಾರಧಾರೆಯನ್ನು ಹೊಂದಿದ ಇವರು ಹುದಲಿಯ ಯುವಕನೊಬ್ಬನಿಗೆ ದಿನಾಂಕ ೦೨-೦೩-೧೯೪೪ ರಂದು ಅಂತರ್ಜಾತಿಯ ಕನ್ಯೆಯನ್ನು ಮದುವೆ ಮಾಡಿದರು. ಅದರಿಂದ ಕುಪಿತಗೊಂಡ ಊರ ಹಿರಿಯರೆಲ್ಲರೂ ಕೂಡಿ ತರುಣ ಸಂಘದ ಕಾರ್ಯಕರ್ತರ ಮೇಲೆ ಬಹಿಷ್ಕಾರ ಹಾಕಿದರು. ಅದರಲ್ಲಿ ಪ್ರಮುಖರಾದ ಗಂಗಾಧರ ಯಮಕನಮರಡಿ, ಗೌಡಪ್ಪ ಚನ್ನಪ್ಪ ಪಾಟೀಲ, ತಿಪ್ಪಣ್ಣ ಯಲ್ಲಪ್ಪ ಬೆಟಗೇರಿ ಇವರ ಮೇಲೆ ಬಹಿಷ್ಕಾರ ಹಾಕಿದರು. ಬಸಪ್ಪನವರ ಇಬ್ಬರು ಸಹೋದರರಿಗೆ ತರುಣ ಸಂಘದವರೆಂದು ಮದುವೆ ಸಮಾರಂಭಗಳಲ್ಲಿ ಊಟಕ್ಕೆ ಹಾಕುವುದನ್ನು ಬಹಿಷ್ಕರಿಸಿದರು. ಸ್ವತಃ ಇವರ ಲಗ್ನದಲ್ಲಿ ಕೂಡಾ ಇವರಿಗೂ ಬಹಿಷ್ಕಾರದ ಝಳ ತಟ್ಟಿತು. ಮುಂದೆ ಊರ ಹಿರಿಯರು ತಮ್ಮಿಂದ ತಾವೇ ಬಹಿಷ್ಕಾರವನ್ನು ಹಿಂತೆಗೆದುಕೊಂಡರು. ಇವರು ದಿನಾಂಕ ೧೫-೦೩-೧೯೪೫ ರಲ್ಲಿ ವಿಷಮ ಜ್ವರದಿಂದ ನಿಧನರಾದರು.

**ಅನಂತರಾವ ಅಮೃತರಾವ ದೇಶಪಾಂಡೆ :**

ಶ್ರೀ ಅನಂತರಾವ್ ದೇಶಪಾಂಡೆ ಅವರ ತಂದೆ ಶ್ರೀ ಅಮೃತರಾವ ಮತ್ತು ತಾಯಿ ಶಾರದಾಬಾಯಿ ದೇಶಪಾಂಡೆ. ಈ ದಂಪತಿಗಳ ಉದರದಿಂದ ೧೯೧೫ ರಲ್ಲಿ ಇವರು ಜನಿಸಿದರು. ಇವರದು ಹುದಲಿಯ ದೇಶಪಾಂಡೆ ಮನೆತನ. ಅನಂತರಾವ್ ಅವರು ತಮ್ಮ ೨೫ನೇ ವಯಸ್ಸಿನಲ್ಲಿ ರಾಜಕೀಯದಲ್ಲಿ ಕಾಲಿರಿಸಿದರು. ೧೯೨೫ನೆಯ ಇಸ್ವಿಯಲ್ಲಿ ಸ್ಥಾಪಿತವಾದ ಕುಮರಿ ಆಶ್ರಮದ ರಾಷ್ಟ್ರೀಯ ಕಾರ್ಯಕರ್ತರ ಸಂಪರ್ಕ ಇವರಿಗೆ ಒದಗಿತು. ಗಂಗಾಧರರಾವ ದೇಶಪಾಂಡೆಯವರ ಪ್ರಭಾವವೂ ಇವರ್ ಮೇಲೆ ಬೀಳದೇ ಇರಲಿಲ್ಲ. ಇವರು ಗಂಗಾಧರರಾವ ದೇಶಪಾಂಡೆಯವರ ಆದೇಶದ ಮೇರೆಗೆ ಬೆಳಗಾಂವಿ ಜಿಲ್ಲೆಯ ಕಾಂಗ್ರೆಸ ಕಮಿಟಿಯ ಕಾರ್ಯದರ್ಶಿಗಳಾದ ದತ್ತೋಪಂತ, ಅಧ್ಯಾಪಕ ಮತ್ತು ಹುದಲಿ ಗ್ರಾಮದ ಹಿರಿಯ ಸ್ವಾತಂತ್ರ್ಯಯೋಧರಾದ ಗಂಗಪ್ಪ ಬಸವಂತಪ್ಪ ಯಮಕನಮರಡಿಯವರೊಂದಿಗೆ ಬೆಳಗಾವಿ ಜಿಲ್ಲೆಯ ಡಿಕ್ಟೇಟರರಾಗಿ ಇವರು ಕೆಲಸ ಮಾಡಿದರು. ದಿನಾಂಕ ೨೬-೦೩-೧೯೩೧ ರಂದು ಗೋಕಾಕ ತಾಲೂಕ ಅಂಕಲಗಿಯ ಶ್ರೀ ಅಡವಿ ಸಿದ್ದೇಶ್ವರ ಮಠದಲ್ಲಿ ಸಭೆ ಕರೆಯಲಾಗಿತ್ತು. ಆ ಸಭೆಯಲ್ಲಿ ಉಪ್ಪಿನ ಕಾಯಿದೆಭಂಗ ಮಾಡಿದರು. ಅದರಿಂದ ಅವರಿಗೆ ೬ ತಿಂಗಳ ಶಿಕ್ಷೆಯಾಯಿತು.

ತದನಂತರ ಬೆಳಗಾವಿ ಜಿಲ್ಲೆಯ ಡಿಕ್ಟೇಟರರೆಂದು ಜನೇವರಿ ೨೬-೦೧-೧೯೩೩ ರಂದು ಶ್ರೀ ಕಲ್ಲನಗೌಡ ಎಸ್. ಪಾಟೀಲ ವಕೀಲರು ಬೆಳಗಾವಿ ಇವರೊಂದಿಗೆ ಸಭೆ ಮಾಡಿ ಕಾಯಿದೆಭಂಗ ಮಾಡಿದರು. ಇದರಿಂದ ೬ ತಿಂಗಳ ಶಿಕ್ಷೆ ೨೫೧ ರೂಪಾಯಿ ದಂಡ ವಿಧಿಸಲಾಗಿತ್ತು ದಂಡದ ಬದಲು ಒಂದು ತಿಂಗಳ ಶಿಕ್ಷೆಯಾಯಿತು. ಹಿಂಡಲಗಿ ಜೈಲಿನಲ್ಲಿ ಒಟ್ಟು ೭ ತಿಂಗಳ ಪೂರ್ಣ ಶಿಕ್ಷೆ ಅನುಭವಿಸಿ ಬಂದರು. ೧೯೩೬ ನೆಯ ಇಸ್ವಿಯಲ್ಲಿ ಜರುಗಿದ ಚುನಾವಣೆ ಕಾರ್ಯದಲ್ಲಿ ಆಸಕ್ತಿವಹಿಸಿ ಕಾರ್ಯ ಮಾಡಿದ್ದಾರೆ. ಇದಲ್ಲದೆ ೧೯೩೬ ನೆಯ ಇಸ್ವಿಯಲ್ಲಿ ಹುದಲಿ ಊರಿನ ತರುಣರ ಸಂಘ ಸದಸ್ಯರಾಗಿ ಅವರ ಜೊತೆಗೆ ಸಾಮಾಜಿಕ, ರಾಜಕೀಯ ಕಾರ್ಯಗಳನ್ನು ಮಾಡುತ್ತ ಬಂದರು.

"೧೯೩೭ ನೆಯ ಇಸ್ವಿ ಹುದಲಿ ಊರಲ್ಲಿ ಜರುಗಿದ ಗಾಂಧಿ ಸೇವಾ ಸಂಘದ ಸಮ್ಮೇಲನದ ಹೊತ್ತಿಗೆ ತರುಣ ಸಂಘದ ಕಾರ್ಯಕರ್ತರೊಡನೆ ತಿಂಗಳುಗಳವರೆಗೆ ದುಡಿದಿದ್ದಾರೆ. ಗಾಂಧೀಜಿಯವರ ಭಾರತದ ಅವರ ಎಲ್ಲ ಅನುಯಾಯಿಗಳು ಹಾಗೂ ಎಲ್ಲ ಮುಖಂಡರ ಸೇವೆಯನ್ನು ಮಾಡಿದ್ದಾರೆ. ಗಾಂಧಿ ಸೇವಾ ಸಂಗದ ಏಳು ದಿನಗಳ ಕಾರ್ಯಕ್ರಮದ ಉದ್ದಕ್ಕೂ ಬಿಟ್ಟೂ ಬಿಡದೇ ಸ್ವಯಂ ಸೇವಕರಾಗಿ ಕಾರ್ಯ ಮಾಡಿದ್ದಾರೆ. ಇಂತಹ ರಾಷ್ಟ್ರ ಪ್ರೇಮಿಗಳಾದ ನಂತರವು ದೇಶಪಾಂಡೆ ಅವರು ೨೯-೦೭-೧೯೭೮ ರಂದು ನಿಧನರಾದರು"[೨೩].

**ವಸಂತ ಗೋಪಾಲರಾವ್ ದೇಶಪಾಂಡೆ ಊರ್ಫ ಕೃಷ್ಣಾಜಿ ದತ್ತೋಪಂತ ಮುತಾಲಿಕ ದೇಸಾಯಿ :**

ದಿನಾಂಕ ೧೨-೦೯-೧೯೨೩ ರಲ್ಲಿ ಹುದಲಿಯಲ್ಲಿ ಇವರು ಜನಿಸಿದ್ದಾರೆ. ಕೃಷ್ಣಾಜಿಯವರು

ಮುಲ್ಕಿ ಪರೀಕ್ಷೆಯವರೆಗೆ ಓದಿದ್ದಾರೆ. ಇವರು ಗಂಗಾಧರರಾವ ದೇಸಪಾಂಡೆಯವರ ಪ್ರಭಾವದಿಂದ ೧೯೪೨ ರ ಚಳುವಳಿಯಲ್ಲಿ ಧುಮುಕುತ್ತಾರೆ.

೧೯೩೬ ರಲ್ಲಿ ಗಾಂಧೀಜಿಯವರು ಹುದಲಿಗೆ ಬಂದಾಗ ಕೃಷ್ಣಾಜಿ ೫ನೆಯ ಇಯತ್ತೆಯಲ್ಲಿ ಓದುವ ವಿದ್ಯಾರ್ಥಿ. ಇಷ್ಟು ಚಿಕ್ಕ ವಯಸ್ಸಿನವರಾಗಿದ್ದರೂ ಸ್ವಯಂ ಸೇವಕನಾಗಿ ಇವರು ಕೆಲಸ ಮಾಡಿದ್ದಾರೆ. ಸ್ವಾತಂತ್ರ್ಯ ಬಿಸಿ ತಗಲಿಸಿಕೊಂಡ ವಸಂತರಾವ ದೇಶಪಾಂಡೆಯವರು ಮುಂದೆ ೭ನೆಯ ಇಯತ್ತೆ ಮುಗಿದ ಕೂಡಲೇ ಚಲೇಜಾವ್ ಚಳುವಳಿಯಲ್ಲಿ ಭಾಗವಹಿಸಿದ್ದರು. ಆಗಲೇ ಕುಮರಿ ಆಶ್ರಮದಲ್ಲಿ ರಾಷ್ಟ್ರೀಯ ಕಾರ್ಯಚಟುವಟಿಕೆಗಳು ನಡೆದಿದ್ದವು. ಪ್ರಭಾತಪೇರಿಯಲ್ಲಿ ಭಾಗವಹಿಸುತ್ತಿದ್ದ ಇವರನ್ನು ಬಂಧಿಸಿದ್ದರು. ಆಗ ಇವರಿಗೆ ೧ ವರ್ಷ ೬ ತಿಂಗಳು ಶಿಕ್ಷೆ ೩೦೦ ರೂ ದಂಡವನ್ನು ವಿಧಿಸಲಾಯಿತು. ದಂಡದ ಹಣ ತುಂಬದಿದ್ದರೆ, ಅದರ ಬದಲು ೬ ತಿಂಗಳ ಶಿಕ್ಷೆ ವಿಧಿಸುತ್ತಿದ್ದರು. ಹಿಂಡಲಗಿ ಜೈಲಿನಲ್ಲಿ ೨ ತಿಂಗಳು ಶಿಕ್ಷೆಯನ್ನು ಅನುಭವಿಸಿದರು. ಒಟ್ಟು ಇವರಿಗೆ ೨ ವರ್ಷ ಶಿಕ್ಷೆ ವಿಧಿಸಿದರು. ನಂತರ ಯರವಡಾ ಜೈಲಿಗೆ ಕಳುಹಿಸಿದರು. ಅಲ್ಲಿ ಚಿಕ್ಕವರಾದ ಇವರನ್ನು ಹಿರಿಯರಾದ ಗಂಗಪ್ಪ ಯಮಕನಮರಡಿಯವರು ನೋಡಿಕೊಂಡರು.

ಇವರಲ್ಲಿ ಗಂಗಪ್ಪ. ಬ. ಯಮಕನಮರಡಿ, ಗೌಡಪ್ಪ ಚ. ಭದ್ರಕಾಳಿ, ವಾ. ನಾ. ಕದಮ, ಚನಬಸಪ್ಪ ಮಾಳಗಿ, ತಿಪ್ಪಣ್ಣ ಬೆಟಗೇರಿ, ಬಸಪ್ಪ ಗೌಡಪ್ಪ ಭದ್ರಕಾಳಿ, ಯಲ್ಲಪ್ಪ ಕರೆಪ್ಪ ಹೆಗನಾಯ್ಕ, ಅಪ್ಪಣ್ಣ ಮರಲಿಂಗಣ್ಣವರ, ಬಂಡೋಪಂತ ಅ. ದೇಶಪಾಂಡೆ, ನಾರಾಯಣ ಬ. ದೇಶಪಾಂಡೆ, ಬಸವಣ್ಣೆಪ್ಪಾ ಕೊಂತಿ, ಮಾನಪ್ಪಾ ವಾರಿಮನಿ, ವಸಂತ ಗೋಪಾಲರಾವ್ ದೇಶಪಾಂಡೆ, ಶಿವರಾಯಿ ಥೈಕಾರ ಇವರಲ್ಲಿ ೧೦ ಜನರಿಗೆ ಶಿಕ್ಷೆಗಳಾಗಿ ಉಳಿದ ನಾಲ್ಕು ಜನರು ವೃದ್ಧರೆಂದು ಬಿಡುಗಡೆ ಮಾಡಿದರು. ೨ ವರ್ಷ ಶಿಕ್ಷೆ ಪೂರ್ಣ ಭೋಗಿಸಿ ಬಿಡುಗಡೆಯಾಗಿ ಬಂದರು.

**ಲಕ್ಷ್ಮಣ ತುಕ್ಕಾರ :**

ಲಕ್ಷ್ಮಣ ಭರಮಪ್ಪಾ ತುಕ್ಕಾರ ಇವರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದು ಒಂದು ವಿಶೇಷವೇ ಸರಿ. ಯಾಕೆಂದರೆ ಹುದಲಿಗೆ ಬಂದದ್ದು ಮುಸಲ್ಮಾನರ ಹೆದರಿಕೆಯಿಂದಾಗಿ. ಇದಕ್ಕೆ ಇವರ ಅಡ್ಡ ಹೆಸರೇ ಸಾಕ್ಷಿ. ಲಕ್ಷ್ಮಣ ಭರಮಪ್ಪ ತುಕ್ಕಾರ ಇವರು ಮಹಾರಾಷ್ಟ್ರದ ಕರಾಡದವರು. ಮುಸಲ್ಮಾನರಿಗೆ ಹೆದರಿ ಬಂದುದಕ್ಕೆ ಟುಕ್ಕರು (ಅಂಜುಬುರಕ) ಎಂದು ಹೆಸರು ಬಂದಿದೆ. ಇದೇ ಮುಂದೆ ಬಳಕೆಯಲ್ಲಿ ತುಕ್ಕಾರ ಎಂದಾಗಿ ರೂಢಿಯಲ್ಲಿ ಬಂದಿತೆಂದು ಹೇಳುವರು.

೧೯೧೪ ರಲ್ಲಿ ಜನಿಸಿದ ಲಕ್ಷ್ಮಣರ ತಂದೆ ಹೆಸರು ಭರಮಪ್ಪಾ ಮತ್ತು ತಾಯಿಯ ಹೆಸರು ಮಲ್ಲವ್ವ, ಕನ್ನಡ ಮುಲ್ಕೀ ಪರೀಕ್ಷೆಯವರೆಗೆ ಪಡೆದಿದ್ದರು. ೧೯೩೨ ನೆಯ ಇಸ್ವಿಯ ಕಾಯ್ದೆಭಂಗ ಚಳುವಳಿಯಲ್ಲಿ ಇವರು ಭಾಗವಹಿಸಿದ್ದರು. ಶಿಂಧೀ ಗಿಡ ಕಡಿಯುವುದು ಮತ್ತು ಶಿಂಧೀ ಮಾರಾಟವನ್ನು

ನಿಷೇಧಗೊಳಿಸುವುದು ಚಳುವಳಿಕಾರರ ಮುಖ್ಯ ಉದ್ದೇಶವಾಗಿತ್ತು. ಮುದಲಿಂಪಲ್ಲಿಯ ಶಿಂಧೀ ಗುತ್ತಿಗೆಗಾರನು ತನ್ನ ಕುದುರೆಯ ಮೇಲೆ ಶಿಂಧೀ ಕಪಾಲಿಯನ್ನು ತುಂಬಿಕೊಂಡು ಸಾಗುತ್ತಿದ್ದನು. ಆಗ ಲಕ್ಷ್ಮಣ ತುಕ್ಕಾರ ಮತ್ತು ಮೋದಿನಿಮಾಮಸಾಬ್ ಅರಳಿಕಟ್ಟ ಈ ಇಬ್ಬರೂ ಬಾಲಕರು ಶಿಂಧೀ ಕಪಾಲಿಯನ್ನು ಹರಿದು ಕೆಡವಿ ಹಾಕಿದರು. ಬ್ರಿಟಿಷ ಸರಕಾರವು ಇವರಿಬ್ಬರನ್ನು ಕೈದು ಮಾಡಿದರು. ಕಪಾಲಿ ಕೊಯ್ದಿದ್ದಕ್ಕಾಗಿ ಇವರ ಮೇಲೆ ಕಟ್ಲೆ ಹಾಕಲಾಯಿತು. ಆದರೆ ಇವರಿಬ್ಬರೂ ಬಾಲಕರಿದ್ದ ಕಾರಣಕ್ಕಾಗಿ ಇವರಿಗೆ ಹನ್ನೆರಡು ಘಟಿಕೆ ಶಿಕ್ಷೆಯನ್ನು ವಿಧಿಸಲಾಯಿತು. ಅಲ್ಲದೇ ಹಿಂಡಲಿಗೆ ಜೈಲಿಗೆ ಸಾಗಿಸಲಾಯಿತು. ಚಳುವಳಿಕಾರರಲ್ಲಿ ಒಕ್ಕಟ್ಟು ಎಷ್ಟು ಇತ್ತೆಂದರೆ ಇವರಿಗೆ ಶಿಕ್ಷೆ ಕೊಟ್ಟ ದಿವಸ ಜೈಲಿನಲ್ಲಿ ಎರಡು ಸಾವಿರ ಕೈದಿಗಳು ಉಪವಾಸ ಮಾಡಿದರಂತೆ. ಇದಲ್ಲದೇ ಹದಿನೈದು ದಿನಗಳವರೆಗೆ ಈ ಬಾಲಕರಿಗೆ ಔಷಧೋಪಚಾರವನ್ನು ಮಾಡಬೇಕಾದ ಪ್ರಸಂಗ ಒದಗಿ ಬರುತ್ತದೆ. ತುಕ್ಕಾರ ಅವರ ಇಡೀ ಮನೆತನವು ಚಲೇಜಾವ್ ಚಳುವಳಿಯಲ್ಲಿ ಭಾಗವಹಿಸಿತ್ತು. ಇವರ ತಮ್ಮ ನಿಂಗಪ್ಪಾ ಯಲ್ಲಪ್ಪ ತುಕ್ಕಾರ ಇವರೂ ಚಳುವಳಿಯಲ್ಲಿ ಭಾಗವಹಿಸಿ ಶಿಕ್ಷೆಯನ್ನು ಅನುಭವಿಸಿದ್ದಾರೆ. ಆ ಸಂದರ್ಭದಲ್ಲಿ ಲಕ್ಷಣ ತುಕ್ಕಾರ ಇವರು ಮನೆಯಲ್ಲಿಯೇ ಉಳಿದುಕೊಂಡು ಭೂಗತರಿಗೆ ಊಟ ಮತ್ತು ಇತರ ಆರ್ಥಿಕ ಸಹಾಯವನ್ನು ಮಾಡುತ್ತಿದ್ದರು. ಹೀಗೆ ಚಳುವಳಿಯಲ್ಲಿ ತುಕ್ಕಾರ ಅವರು ಸಕ್ರೀಯರಾಗಿದ್ದರು.

**ಸದಾಶಿವಪ್ಪ ಕುಡೊಳ್ಳಿ :**

ಸದಾಶಿವಪ್ಪ ಕುಡೊಳ್ಳಿಯವರು ಕರಗುಪ್ಪಿಯಲ್ಲಿ ೧೯೧೫ ಅಕ್ಟೋಬರ್ ೨೩ ರಂದು ಜನಿಸಿದರು. ಇವರ ತಂದೆಯ ಹೆಸರು ಸಿದ್ದಪ್ಪ. ಇವರು ೭ನೆಯ ಇಯತ್ತಿನವರೆಗೆ ಶಿಕ್ಷಣವನ್ನು ಪಡೆದಿದ್ದು ಕಾಯ್ದೆಭಂಗ ಚಳುವಳಿಯಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದರು. ೧೯೩೨ರ ಉಪ್ಪಿನ ಸತ್ಯಾಗ್ರಹದಲ್ಲಿ ಇವರು ಭಾಗವಹಿಸಿದ್ದರು. ಜಂಗಲ ಸತ್ಯಾಗ್ರಹ, ಶಿಂಧೀ ಸೇರೆ ಅಂಗಡಿಯ ಮುಂದೆ ಪಿಕೆಟಿಂಗ ಮಾಡುವುದು ಮುಂತಾದ ಕಾರ್ಯಗಳಿಗಾಗಿ ಬ್ರಿಟಿಷ ಸರಕಾರ ಇವರನ್ನು ಬಂಧಿಸಿತ್ತು. ಗೋಕಾಕ ತಾಲೂಕಿನ ಜೈಲಿನಲ್ಲಿ ಕೆಲವು ದಿವಸ ಇವರನ್ನು ಇಟ್ಟು ಮುಂದೆ ಹುಕ್ಕೇರಿ ಜೈಲಿಗೆ ಸ್ಥಳಾಂತರಿಸಲಾಯಿತು. ಆದರೆ ಆ ಜೈಲಾಧಿಕಾರಿಯು ಚಿಕ್ಕವಯಸ್ಸಿನ ಇವರಿಗೆ 'ಮನೆಗೆ ಹೋಗು' ಎಂದು ಹೇಳಿದರು ಕೂಡಾ ಇವರು ಕೇಳದೆ ಜೈಲಿನಲ್ಲಿ ಇದ್ದು ಜೈಲು ಶಿಕ್ಷೆ ಅನುಭವಿಸಿದರು. ಸರಕಾರ ಕುಡೊಳ್ಳಿಯವರ ಮನೆಯನ್ನು ಜಪ್ತಿ ಮಾಡಿತ್ತು.

**ಹುಚ್ಚಪ್ಪ ಹೊಳೆಯಾಚೆ :**

ಹುಚ್ಚಪ್ಪ ಹೊಳೆಯಾಚೆ ಅಕ್ಕತಂಗೇರ ಹಾಳದವರು. ಸುಮಾರು ೮೦ ವರ್ಷ ಬದುಕಿದ ಈ ಹೋರಾಟಗಾರ ಕೇವಲ ಪ್ರಾಥಮಿಕ ಶಾಲೆಯನ್ನು ಮಾತ್ರ ಮುಗಿಸಿದ್ದು ಗಾಂಧೀಜಿಯವರ ಸ್ವಾತಂತ್ರ್ಯ ಚಳುವಳಿಯ ಪ್ರೇರಣೆಯಿಂದ ಆಂದೋಲನದಲ್ಲಿ ಭಾಗವಹಿಸಿದ್ದರು. ಹೊಳೆಯಾಚೆಯವರ ವಿದ್ವಂಸಕ ಕೃತ್ಯಕ್ಕೆ ಬ್ರಿಟಿಷ ಸರಕಾರವು ೧೯೩೦ರಲ್ಲಿ ೧ ವರ್ಷ, ೧೯೩೧ ರಲ್ಲಿ ೬ ತಿಂಗಳು,

೧೯೪೨ ರಲ್ಲಿ ೨ ವರ್ಷ ಜೈಲು ಶಿಕ್ಷೆಯನ್ನು ವಿಧಿಸಿತ್ತು. ೧೯೪೨ರ ಆಗಸ್ಟ್ ೯ ರಂದು ಗೋಕಾಕ ತಾಲೂಕಿನ ಕಾಂಗ್ರೆಸ ಸಮೀತಿಯ ಕಾರ್ಯದರ್ಶಿಯಾಗಿ ಕೆಲಸ ಮಾಡಿದ್ದಾರೆ. ಚಳುವಳಿಯ ಸ್ವರೂಪದ ಬಗ್ಗೆ ಕಾಂಗ್ರೆಸ ಕಾರ್ಯಕರ್ತರಿಗೆ ವಿವರವನ್ನು ತಿಳಿಸಿಕೊಡುತ್ತಿದ್ದರು. ಕೆಲವು ಕಾಲ ಭೂಗತರಾಗುತ್ತಾರೆ.

**ಶ್ರೀಶೈಲಪ್ಪ ಕಾಗತಿಕರ :**

ಶ್ರೀಶೈಲಪ್ಪ ಕಾಗತಿಕರವರು ಅಂಕಲಗಿಯವರು. ೧೯೨೪ ಡಿಸೆಂಬರ್ ೨೪ ರಂದು ಜನಿಸಿದ ಇವರು ಚಳುವಳಿಗಾರರ ಪ್ರೇರಣೆಯಿಂದ ಸ್ವಾತಂತ್ರ್ಯ ಆಂದೋಲನದಲ್ಲಿ ಭಾಗವಹಿಸಿದರು. ತಮ್ಮೊಂದಿಗೆ ಹಲವು ಜನ ತರುಣರನ್ನು ಚಳುವಳಿಗೆ ಪ್ರೇರೆಪಿಸಿದರು. ೧೯೩೨ರಲ್ಲಿ ನಡೆದ ಉಪ್ಪಿನ ಸತ್ಯಾಗ್ರಹದಲ್ಲಿ ಇವರನ್ನು ಬಂಧಿಸಿ ವಿಜಾಪುರದ ಜೈಲಿನಲ್ಲಿ ಇಡುತ್ತಾರೆ. ಇವರು ಹಲವಾರು ಯೋಜನೆಗಳನ್ನು ರೂಪಿಸಿ ನೂರಾರು ತರುಣರು ಚಳುವಳಿಯಲ್ಲಿ ಭಾಗವಹಿಸುವಂತೆ ನೋಡಿಕೊಂಡಿದ್ದಾರೆ. ಬಂಡೆಪ್ಪ, ಶಾಂತಪ್ಪ ಹರದಿ ನಿಂಗಪ್ಪ, ಕರಲಿಂಗನ್ನವರ, ಅಣ್ಣೂ ಗುರೂಜಿ, ತಮ್ಮ ಬಸಪ್ಪ ಹೊಳೆಯಾಚೆ, ಹುಚ್ಚಪ್ಪ ಹೊಳೆಯಾಚೆ ಮುಂತಾದವರು ಇವರ ಜೊತೆಗೆ ಸೇರಿಕೊಂಡು ಕೆಲಸ ಮಾಡಿದ್ದಾರೆ.

**ಗುರುದೇವಪ್ಪ ಚಿನ್ನನ್ನವರ :**

ಗುರುದೇವಪ್ಪ ಚಿನ್ನನ್ನವರ ಅವರು ನಂದಗಡದವರು. ೧೯೦೮ರಲ್ಲಿ ಜನಿಸಿದ ಗುರುದೇವಪ್ಪನವರ ತಂದೆ ಗುರುಪಾದಪ್ಪ, ತಾಯಿ ಗಂಗವ್ವ, ಇವರು ಪ್ರಾಥಮಿಕ ೬ನೆಯ ಇಯತ್ತೆವರೆಗೆ ತಮ್ಮ ಸ್ವಗ್ರಾಮದಲ್ಲಿ ವಿದ್ಯಾಭ್ಯಾಸವನ್ನು ಪೂರೈಸಿದ್ದಾರೆ. ಬಸಪ್ಪ ಅರಗಾವಿಯವರ ಪ್ರೇರಣೆಯಿಂದ ರಾಷ್ಟ್ರೀಯ ಚಳುವಳಿಯಲ್ಲಿ ಧುಮುಕುತ್ತಾರೆ. ೧೯೩೦ರಲ್ಲಿ ಅಂಕಲಗಿಗೆ ಬರುತ್ತಾರೆ. ಅಲ್ಲದೆ ಶ್ರೀಶೈಲಪ್ಪ ಕಾಕತಿಕರವರ ಪ್ರಭಾವಕ್ಕೆ ಒಳಗಾಗಿ ಕಾಯ್ದೆಭಂಗ ಚಳುವಳಿಯಲ್ಲಿ ಭಾಗವಹಿಸುತ್ತಾರೆ. ೧೯೩೨ರಲ್ಲಿ ಬುಲೆಟನ ಹಂಚುತ್ತಿದ್ದ ಕಾರಣಕ್ಕಾಗಿ ಇವರನ್ನು ಬಂಧಿಸಲಾಗುತ್ತದೆ. ಗೋಕಾಕದಲ್ಲಿ ಏಳುವರೆ ತಿಂಗಳು ಇವರನ್ನು ಜೈಲಿನಲ್ಲಿ ಇಡುತ್ತಾರೆ.

**ಗಂಗಪ್ಪ ಹೂಗಾರ :**

೦೨-೦೧-೧೯೦೧ರಲ್ಲಿ ಜನಿಸಿದ ಗಂಗಪ್ಪ ಬಾಳಪ್ಪ ಹೂಗಾರರ ಹುಟ್ಟೂರು ಹಲಕರ್ಣಿ. ಪಾಶ್ಚಾಪೂರದಲ್ಲಿ ೭ನೆಯ ಇಯತ್ತಿನವರೆಗೆ ಶಿಕ್ಷಣ ಪಡೆದ ಇವರು ಚಲೆಜಾವ ಚಳುವಳಿಯಲ್ಲಿ ಸಕ್ರೀಯವಾಗಿ ಭಾಗವಹಿಸಿದ್ದರು. ಬ್ರಿಟಿಷ ಸರಕಾರವು ಇವರಿಗೆ ೧ ವರ್ಷ ೩ ತಿಂಗಳು ಶಿಕ್ಷೆಯನ್ನು ವಿಧಿಸಿ ಹಿಂಡಲಗಾ ಜೈಲಿನಲ್ಲಿ ಮತ್ತು ರತ್ನಾಗಿರಿ ಜೈಲಿನಲ್ಲಿ ಇಟ್ಟಿತ್ತು. ಭೂಗತ ಕಾರ್ಯರಾದ ಕಾಂಗ್ರೆಸ ಕಾರ್ಯಕರ್ತರಿಗೆ ಇವರು ಊಟ ಮುಂತಾದ ಅವಶ್ಯಕ ವಸ್ತುಗಳನ್ನು ದಕ್ಷತೆಯಿಂದ ಪೂರೈಸುತ್ತಿದ್ದರು. ಅಣ್ಣೂ ಗುರೂಜಿಯವರ ಪ್ರೇರಣೆಯಿಂದ ಚಳುವಳಿಯಲ್ಲಿ ಧುಮುಕಿದ ಇವರು ಬ್ರಿಟಿಷರು ಕೊಡುತ್ತಿದ್ದ ಶಿಕ್ಷೆಗೆ ಹೆದರುತ್ತಿರಲಿಲ್ಲ. ಇವರ ಜೊತೆಗೆ ಚಳುವಳಿಯಲ್ಲಿ ಭಾಗವಹಿಸದವರೆಂದರೆ

ಮಹಾಂತಪ್ಪ ಉದೇಶಿ, ಬಾಳಪ್ಪ ಅರಬಾಂವಿ, ಅಡಿವೆಪ್ಪ ಮಳ್ಳಪ್ಪಗೋಳ, ಸಿದ್ರಾಮಯ್ಯ ವಸ್ತ್ರದ ಮುಂತಾದವರು. ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ ಈ ಅಪರೂಪದ ವ್ಯಕ್ತಿ ೦೬-೦೬-೧೯೭೫ ರಂದು ವಿಧಿವಶರಾದರು.

## ಮಲ್ಲಪ್ಪ ಕಮತಗಿ :

ಸುಲದಾಳ ಗ್ರಾಮದ ಮಲ್ಲಪ್ಪ ಕಮತಗಿ ೧೭-೦೫-೧೯೧೩ ರಲ್ಲಿ ಜನಿಸಿದರು. ೧೯೨೮ ರಲ್ಲಿ ಮುಲ್ಕಿ ಪರೀಕ್ಷೆ ಪಾಸಾಗಿ ಚಳುವಳಿಯಲ್ಲಿ ಧುಮುಕುತ್ತಾರೆ. ಹುದಲಿಯ ಕುಮರಿ ಆಶ್ರಮದಲ್ಲಿ ಕಾರ್ಯಕರ್ತರಾದ ಡಾ. ಬಾಸ್ಕರ ವಿಷ್ಣು ಕಾಳೆ ಅವರ ಪ್ರಭಾವದಿಂದ ಚಳುವಳಿಗಾರರ ಗುಂಪಿಗೆ ಇವರು ಸೇರುತ್ತಾರೆ. ಕುಮರಿ ಆಶ್ರಮದಲ್ಲಿ ಜರುಗುತ್ತಿದ್ದ ಚಟುವಟಿಕೆಗಳು ಇವರ ಮೇಲೆ ಗಾಢವಾದ ಪ್ರಭಾವವನ್ನು ಬೀರುತ್ತವೆ. ಕುಮರಿ ಆಶ್ರಮದ ಸಂಸ್ಥಾಪಕರಾದ ಗಂಗಾಧರರಾವ ದೇಶಪಾಂಡೆ, ವಾಮನ ಬಾಳಾಜಿ ಬಿದರಿ, ಹುಚ್ಚಪ್ಪ ಹೊಳೆಯಾಚೆ, ಅಣ್ಣಾ ಬಸಪ್ಪ, ಮರಲಿಂಗನ್ನವರ, ಬಾಳಪ್ಪ ಹೊಳೆಯಾಚೆ, ಕಲ್ಲಪ್ಪ ಕುರುಬರ ಇವರೆಲ್ಲ ಸೇರಿಕೊಂಡು ಒಂದು ತಂಡವನ್ನು ಕಟ್ಟಿದ್ದರು. ಈ ಗುಂಪಿನಲ್ಲಿ ಮಲ್ಲಪ್ಪನವರು ಕಾರ್ಯಕರ್ತರಾಗಿ ಕೆಲಸ ಮಾಡುತ್ತಿದ್ದರು. ೧೯೩೨ರ ಜರುಗಿದ ಉಪ್ಪಿನ ಸತ್ಯಾಗ್ರಹದಲ್ಲಿ ಇವರು ಭಾಗವಹಿಸಿದ್ದರು. ೧೯೪೧ರ ಸತ್ಯಾಗ್ರಹದಲ್ಲಿ ಬ್ರಿಟಿಷ ಸರಕಾರ ಇವರಿಗೆ ೪ ತಿಂಗಳು ಶಿಕ್ಷೆಯನ್ನು ವಿಧಿಸುತ್ತದೆ.

## ಮಲ್ಲಪ್ಪ ಹಟ್ಟಿಗೌಡರ :

ಮಲ್ಲಪ್ಪ ಹಟ್ಟಿಗೌಡರ ಗೋಕಾಕದಲ್ಲಿ ಎಸ್.ಎಸ್.ಎಲ್.ಸಿ.ಯನ್ನು ಮುಗಿಸಿ ೨ ವರ್ಷ ಬೆಳಗಾವಿಯಲ್ಲಿ ಟ್ರೆನರ ಆಗಿ ಅಲ್ಲಿಯ ಕನ್ನಡ ಜ್ಞಾನ ಕೋರ್ಸನ್ನು ಮುಗಿಸಿದ್ದರು. ಇವರು ಅಣ್ಣಾ ಬಸಪ್ಪ ಮರಲಿಂಗನ್ನವರ ಅವರ ಪ್ರಭಾವಕ್ಕೆ ಒಳಗಾಗಿ ಚಳುವಳಿಯಲ್ಲಿ ಧುಮುಕಿದರು. ಈರನಟ್ಟಿ ಖಾಸಗಿ ಶಾಲೆಯಲ್ಲಿ ಶಿಕ್ಷಕರಾಗಿ ಸೇವೆ ಮಾಡುತ್ತಾ ೧೯೪೨ರ ಚಳುವಳಿಯಲ್ಲಿ ಭೂಗತರಾಗಿ ಕಾರ್ಯ ಮಾಡುತ್ತಿದ್ದವರಿಗೆ ಇವರು ನೇರವಾಗಿದ್ದರು. ಅಕ್ಕತಂಗೇರಹಾಳದಲ್ಲಿ ಬಸಪ್ಪ ಮರಲಿಂಗನ್ನವರನ್ನು ಬಂಧಿಸಿದ್ದಕ್ಕಾಗಿ ಇವರು ಪ್ರತಿಭಟಿಸುತ್ತಾರೆ. ಅಲ್ಲದೆ ಅದಕ್ಕೆ ಪ್ರತಿಕಾರವಾಗಿ ಪ್ರಭಾತಫೇರಿಯನ್ನು ತೆಗೆಯುತ್ತಾರೆ. ಇದರಿಂದ ಬ್ರಿಟಿಷ ಅಧಿಕಾರಿಗಳು ಗುಜನಾಳದಲ್ಲಿ ಮಲ್ಲಪ್ಪ ಹಟ್ಟಿಗೌಡರನ್ನು ಬಂಧಿಸುತ್ತಾರೆ. ಗೋಕಾಕದಲ್ಲಿ ೬ ತಿಂಗಳ ಶಿಕ್ಷೆಯನ್ನು ವಿಧಿಸಿ ಸೆರೆಮನೆಗೆ ಅಟ್ಟುತ್ತಾರೆ. ಮುಂದೆ ಹಿಂಡಲಗಾ ಜೈಲಿಗೆ ಸ್ಥಳಾಂತರಿಸಿ ಕಠಿಣ ಶಿಕ್ಷೆಯನ್ನು ಕೊಡುತ್ತಾರೆ.

## ಬಾಳಪ್ಪ ಮೆಳವಂಕಿ :

ಬಾಳಪ್ಪ ಮೆಳವಂಕಿಯವರು ಕೊಳವಿಯವರು. ಇವರು ಮುಲ್ಕೀ ಶಿಕ್ಷಣವನ್ನು ಪಡೆದು ವಾಮನರಾವ ದೇಸಾಯಿ ಬಿದರಿಯವರ ಪ್ರೇರಣೆಯಿಂದ ಚಳುವಳಿಯಲ್ಲಿ ಧುಮುಕುತ್ತಾರೆ. ಮೆಳವಂಕಿಯವರು ಬೆಣಚಿನಮರಡಿ ಗ್ರಾಮದಲ್ಲಿ ವಯಕ್ತಿಕ ಸತ್ಯಾಗ್ರಹದಲ್ಲಿ ಅತ್ಯಂತ ಪ್ರಮುಖ

ಪಾತ್ರವನ್ನು ವಹಿಸಿದ್ದಾರೆ. ತಾರ ಕತ್ತರಿಸುವುದು, ಟಪಾಲ ಚೀಲ ಅಪಹರಣ ಮಾಡುವುದು, ಸುಡುವುದು, ದಪ್ತರ ಸುಡುವುದು, ಸರಕಾರಿ ಬಂಗ್ಲೆ ಸುಡುವುದು ಮುಂತಾದ ಚಳುವಳಿಯನ್ನು ನಡೆಸಿದ್ದರಿಂದ ಬ್ರಿಟಿಷ ಸರಕಾರ ಇವರಿಗೆ ೧೯೪೧ ರಲ್ಲಿ ಹಾಗೂ ೧೯೪೩ ರಲ್ಲಿ ೨ ಸಲ ಶಿಕ್ಷೆಯನ್ನು ವಿಧಿಸಿತು. ೮ ತಿಂಗಳ ಕಾಲ ಇವರು ಜೈಲಿನಲ್ಲಿ ಇದ್ದು ಶಿಕ್ಷೆಯನ್ನು ಅನುಭವಿಸಿದ್ದಾರೆ. ಆಂದೋಲನದ ವಿಧ್ವಂಸಕ ಕಾರ್ಯಗಳಲ್ಲಿ ಇವರೊಂದಿಗೆ ಭಾಗವಹಿಸಿದವರು ಬಾಳಪ್ಪ ಅಂಗಡಿ, ಬಸಪ್ಪ ಕಳ್ಳಗುದ್ದಿ, ಬಾಳಪ್ಪ ಪಾಟೀಲ, ಬಾಳಪ್ಪ ಹೂರಹೊಳಿ, ಬಾಳಪ್ಪ ಮಿಡಕಣ್ಣು, ಬಾಳಪ್ಪ ಪತ್ತಾರ, ಯಮನಪ್ಪ ಅರಬಾಂವಿ, ವಿರಭದ್ರಪ್ಪ ಅಂಗಡಿ ಮುಂತಾದವರು ಉಗ್ರ ಹೋರಾಟವನ್ನು ಮಾಡಿದ್ದಾರೆ.

## ನಿಂಗಪ್ಪ ಬೆಣ್ಣೆ :

ನಿಂಗಪ್ಪ ಬೆಣ್ಣೆಯವರು ೧೯೨೬ ಜುಲೈ ೧೨ ರಂದು ಜನಿಸಿದರು. ಇವರದು ಸಾಮಾನ್ಯ ರೈತ ಕುಟುಂಬ. ಬಾಲ್ಯದಿಂದಲೇ ಇವರಲ್ಲಿ ಸಂಘಟನಾ ಶಕ್ತಿ ಬೆಳೆದುಕೊಂಡು ಬಂದಿತ್ತು. ಕನ್ನಡ ಪ್ರಾಥಮಿಕ ಶಾಲೆಗೆ ಹೋಗುವಾಗಲೇ ಇತರ ವಿದ್ಯಾರ್ಥಿಗಳೊಂದಿಗೆ ಕೂಡಿಕೊಂಡು ಆಟ-ಪಾಠಗಳಲ್ಲಿ ತೊಡಗುತ್ತಿದ್ದರು. ಲಾಠಿ, ಮಲಕಂಬ, ಲೆಜಿಮ, ಪುಲ ಮುಂತಾದ ಆಟಗಳಲ್ಲಿ ಇವರು ಮುಂಚೂಣಿಯಲ್ಲಿ ಇದ್ದರು. ದೇಶದ ಸ್ವಾತಂತ್ರ್ಯ ಚಳುವಳಿಯ ಗಾಳಿ ಇವರಿಗೆ ತಟ್ಟಿದಾಕ್ಷಣ ಇವರು ಕೂಡಾ ವೈಯಕ್ತಿಕ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳುತ್ತಾರೆ. ವಯಸ್ಸಿನಿಂದ ಅತ್ಯಂತ ಚಿಕ್ಕವರಾದ ಕಾರಣ ಕಾಂಗ್ರೆಸ ವರಿಷ್ಠರು ಚಳುವಳಿಯಲ್ಲಿ ಭಾಗವಹಿಸಲು ಇವರಿಗೆ ಅಪ್ಪಣೆ ಕೊಡುವುದಿಲ್ಲ. ೧೯೪೨ರಲ್ಲಿ ಮಹಾತ್ಮಾ ಗಾಂಧೀಜಿಯವರ ಚಲೇಜಾವ ಚಳುವಳಿಯ ಕರೆಯನ್ನು ಕೇಳಿ ಇವರು ಸ್ವಾತಂತ್ರ್ಯ ಆಂದೋಲನದಲ್ಲಿ ಧುಮುಕುತ್ತಾರೆ. ಚಳುವಳಿಯಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸುವ ಸುಯೋಗ ಆಗ ಲಭಿಸುತ್ತದೆ. ಈ ಸುಸಂದರ್ಭವನ್ನು ಸದುಪಯೋಗ ಮಾಡಿಕೊಳ್ಳಬೇಕೆಂದು ಶಾಲಾ ವಿದ್ಯಾರ್ಥಿಗಳನ್ನು ಕಲೆ ಹಾಕಿ ತಾವೇ ಮುಂದಾಳತ್ವವನ್ನು ವಹಿಸಿ ಚಳುವಳಿ ಮಾಡಿಸುತ್ತಾರೆ. ಸುಮಾರು ೨೦ ವಿದ್ಯಾರ್ಥಿಗಳನ್ನು ಕಲೆ ಹಾಕಿ ಗುಜನಾಳ ಹಾಗೂ ಅಕ್ಕತಂಗೇರಹಾಳದಲ್ಲಿ ಚಳುವಳಿಯನ್ನು ಮಾಡುತ್ತಾರೆ. ಈ ಚಳುವಳಿಕಾರರನ್ನು ಹಿಡಿಯಲು ದೊಡ್ಡ ಪ್ರಮಾಣದಲ್ಲಿ ಪೊಲೀಸ ಪಡೆ ಹೊರಡುತ್ತದೆ. ಆದರೆ ಈ ಹೋರಾಟಗಾರರು ಪೋಲಿಸರ ಎದುರಿನಲ್ಲಿಯೇ ಇಂಗ್ಲೀಷ ಸರಕಾರದ ವಿರುದ್ಧ ಘೋಷಣೆಯನ್ನು ಹಾಕಿ ಜೈ ಜೈಕಾರ ಮಾಡುತ್ತಾರೆ. ಅಲ್ಲಿದ್ದ ಪೋಲೀಸರು ಗಾಬರಿಯಾಗಿ ಬಂದು ಈ ಚಳುವಳಿಕಾರರು ಯಾರು ಎಂದು ನೋಡುತ್ತಾರೆ. ಇವರೆಲ್ಲಾ ಚಿಕ್ಕ ಹುಡುಗರು ಸರಕಾರದ ವಿರುದ್ಧ ಘೋಷಣೆ ಕೂಗುತ್ತಾರೆ. ಇವರನ್ನು ಹೀಗೆ ಬಿಡಬಾರದೆಂದು ಅವಾಚ್ಯ ಶಬ್ದಗಳಿಂದ ಬೈಯುತ್ತಾರಲ್ಲದೆ ಚೆನ್ನಾಗಿ ಹೊಡೆಯುತ್ತಾರೆ. ಹಿಡಿದುಕೊಂಡ ಹೋದ ಧ್ವಜವನ್ನು ಕಸಿದುಕೊಂಡು ನೂಕುತ್ತಾರೆ. ಇವರಲ್ಲಿ ನಿಂಗಪ್ಪ ಬೆಣ್ಣೆ, ಬಸವಣ್ಣಿ ಕರಲಿಂಗನ್ನವರ, ಅಡಿವೆಪ್ಪ ನಿರಲಗಿ, ಜೈನೂಲ್ಲಾ ದೇಸಾಯಿ ಈ ನಾಲ್ವರು ದೊಡ್ಡವರಿದ್ದರು. ಇವರನ್ನು ಗೋಕಾಕಕ್ಕೆ ಕರೆದುಕೊಂಡು ಹೋಗಿ ಲಾಕಪನಲ್ಲಿ ಇಡುತ್ತಾರೆ. ಮರುದಿನ ಗೋಕಾಕ ಮ್ಯಾಜಿಸ್ಟ್ರೇಟ್ ಮುಂದೆ

ಹಾಜರುಪಡಿಸಿ ಇವರ ಮೇಲೆ ಖಟ್ಲೆ ಹಾಕುತ್ತಾರೆ. ಆ ಲಾಕಪನಲ್ಲಿ ೪ ದಿನ ಇಟ್ಟು ಚಿತ್ರಹಿಂಸೆಯನ್ನು ಕೊಡುತ್ತಾರೆ. ಲಾಕಪನಲ್ಲಿ ಇರುವುದೆಂದರೆ ನರಕದಲ್ಲಿ ಇರುವುದೆ ಸರಿ. ಸಿಂಗಪ್ಪ ಜೆಣ್ಣೆಯವರು ಲಾಕಪನಲ್ಲಿ ಇದ್ದಾಗ ತಾವು ಅನುಭವಿಸಿದ ಸಂಗತಿಯನ್ನು ಹೀಗೆ ಬಿಚ್ಚಿಡುತ್ತಾರೆ. '8x12 ಫೂಟ ಅಗಲಿನ ಕೋಣೆಯಲ್ಲಿ ೮ ಜನ ಕೈದಿಗಳನ್ನು ಇಡಲಾಗಿತ್ತು. ಮಲಮೂತ್ರ ಮಾಡಲು ಕೂಡಾ ಒಂದು ಮಣ್ಣಿನ ಪಾತ್ರೆ. ಎಲ್ಲವು ಅದರಲ್ಲಿ ಆಗಬೇಕು, ಚಿಕ್ಕಾಡು ತಗಣಿ ಗುಂಗಾಡು ಮುಂತಾದವುಗಳ ಬಾಧೆ. ಅಲ್ಲಿ ೪ ದಿನ ಇರುವುದು ನರಕ ಸದೃಶ್ಯವಾಗಿತ್ತು'. ಇವರನ್ನು ಮುಂದೆ ೬ ತಿಂಗಳು ಶಿಕ್ಷೆವಿಧಿಸಿ ಹಿಂಡಲಗಾ ಜೈಲಿನಲ್ಲಿ ತಂದಿಡಲಾಗಿತ್ತು. ಅಲ್ಲಿಂದ ಬಿಡುಗಡೆಯಾದ ನಂತರ ಇವರಿಗೆ ಸುಮ್ಮನೆ ಕೂಡುವುದು ಆಗುವುದಿಲ್ಲ. ಗುಪ್ತವಾಗಿದ್ದ ಸತ್ಯಾಗ್ರಹಿಗಳಿಗೆ ನೆರವಾಗಲು ಪೋಲಿಸರ ಕಣ್ಣು ತಪ್ಪಿಸಿ ಹೋಗುತ್ತಿದ್ದರು. ಅವರಿಗೆ ಊಟಕೊಟ್ಟು ಅವರ ಸಲಹೆ ಸೂಚನೆಗಳನ್ನು ಕೇಳಿಕೊಂಡು ಸತ್ಯಾಗ್ರಹಗಳು ಹೇಳಿದಂತೆ ಕೆಲಸ ಮಾಡುತ್ತಿದ್ದರು. ರೈಲ್ವೆ ಹಳಿ ಕತ್ತರಿಸಲು ಅವರ ಜೊತೆ ಇವರು ಹೋಗುತ್ತಿದ್ದರು. ಪ್ರಭಾತಫೇರಿ ತೆಗೆಯುವುದು, ಹಿರಿಯರ ಮಾರ್ಗದರ್ಶನದಲ್ಲಿ ಜೈ ಘೋಷಣೆ ಹಾಕುವುದು ಇತ್ಯಾದಿ ಕಾರ್ಯಗಳನ್ನು ಮಾಡುವುದು. ಈ ೧೮ ಜನ ಹುಡುಗರು ಸೇರಿಕೊಂಡು ಗುಡ್ಡದ ದಾರಿ ಹಿಡಿದು ಗೂಗಿಕೊಳ್ಳ ಏರಿ ಇಳಿದು ೧೮ ಮೈಲುದಾರಿ ನಡೆದು ಗೋಕಾಕಕ್ಕೆ ಹೋಗಿ ಪೋಜದಾರ ಕಛೇರಿ ಎದುರಿಗೆ ಜೈ ಘೋಷಣೆ ಮಾಡುತ್ತಿದ್ದರು. ಪ್ರಭಾತಫೇರಿ ತೆಗೆದ ಕಾರಣ ಇವರನ್ನು ಅರೆಸ್ಟ ಮಾಡಿ ಬೆಳಗಾವಿ ರಿಮ್ಯಾಂಡ ಹೋಮದಲ್ಲಿ ೪ ತಿಂಗಳು ಇಡಲಾಯಿತು. ನಂತರ ಹುಕ್ಕೇರಿ ಗೋಕಾಕಕ್ಕೆ ಎಡತಾಕಿಸಿ ಕೊನೆಗೆ ಒಂದು ದಿನ ಶಿಕ್ಷೆ ವಿಧಿಸಿ ಬಿಟ್ಟರು.

**ಬಾಳಗೌಡ ಪಾಟೀಲ :**

ಬಾಳಗೌಡ ಮಲಗೌಡ ಪಾಟೀಲ ಇವರು ವಾಮನರಾವ ಬಿದರಿಯವರ ಸಂಪರ್ಕದಿಂದ ಕಾಂಗ್ರೆಸ್ ಕಾರ್ಯಕರ್ತರಾಗುತ್ತಾರೆ. ಗಾಂಧೀಜಿಯವರ ಕರೆಯ ಮೇರೆಗೆ ಚಳುವಳಿಯಲ್ಲಿ ಧುಮುಕಿ ೧೯೪೧ರಲ್ಲಿ ವೈಯಕ್ತಿಕ ಸತ್ಯಾಗ್ರಹ ಮಾಡಿ ಸೇರೆಮನೆಗೆ ಹೋದರು. ಸರಕಾರವು ಇವರಿಗೆ ೪ ತಿಂಗಳ ಶಿಕ್ಷೆಯನ್ನು ವಿಧಿಸುತ್ತದೆ. ೧೯೪೨ರಲ್ಲಿ ಸುಲದಾಳ ರೈಲ್ವೆ ನಿಲ್ದಾಣದಲ್ಲಿ ಹರತಾಳ ಮಾಡಿ ರೈಲ್ವೆ ಕಂಬಗಳನ್ನು ಕೀಳುತ್ತಾರೆ. ಚಿಕ್ಕನಂದಿ ಬಂಗ್ಲೆಗೆ ಬೆಂಕಿ ಹಚ್ಚುತ್ತಾರೆ. ಗೋಕಾಕ ಬಂಗ್ಲೆಯನ್ನು ಸುಟ್ಟು ಬೂದಿ ಮಾಡುತ್ತಾರೆ. ಮೂಡಲಗಿಯಲ್ಲಿ ಟಪಾಲ ಒಡೆಯುವುದು, ಮಾಲದಿನ್ನಿ, ಕೊಳವಿ ಗ್ರಾಮದಲ್ಲಿ ದಪ್ತರ ಸುಡುವುದು, ಗೊಡಗೇರಿ ಸೇತಾಪೂರ ಗ್ರಾಮಗಳಲ್ಲಿ ಶಿಂಧಿ ಕಪಾಲಿ ನಾಶ ಮಾಡಿದ ಕಾರಣಕ್ಕಾಗಿ ಬ್ರಿಟಿಷರು ಇವರಿಗೆ ೪ ತಿಂಗಳು ಜೈಲು ಶಿಕ್ಷೆ ವಿಧಿಸಿ ಸೆರೆಮನೆಗೆ ಅಟ್ಟುತ್ತಾರೆ.

**ಈರಯ್ಯ ರಾಚಯ್ಯ ಮಠಪತಿ :**

ಈರಯ್ಯ ರಾಚಯ್ಯ ಮಠಪತಿಯವರು ಅಕ್ಕತಂಗೇರಹಾಳ ಗ್ರಾಮದವರು. ೧೯೨೨ ರಲ್ಲಿ ಜನಿಸಿದ ಇವರು ರೈತಾಪಿ ಕುಟುಂಬದವರು. ಇವರು ಕನ್ನಡ ೬ನೆಯ ವರ್ಗದವರೆಗೆ ಓದಿದವರು. ಗಾಂಧೀಜಿಯವರ ಹುದಲಿ ಭೆಟ್ಟಿಯ ಸಂದರ್ಭದಲ್ಲಿ ಅಂದರೆ ೧೯೩೭ರಲ್ಲಿ ಗಾಂಧೀಜಿಯವರನ್ನು ನೋಡಲು ಇವರು ಹುದಲಿಗೆ ಹೋಗುತ್ತಾರೆ. ಆಗ ಈವರಿಗೆ ೧೭ ವರ್ಷಪ್ರಾಯ

ಗಾಂಧೀಜಿಯವರೊಂದಿಗೆ ಹುದಲಿಗೆ ಬಂದ ಅನೇಕ ರಾಷ್ಟ್ರೀಯ ನಾಯಕರನ್ನು ಕಂಡ ಬಳಿಕ ಇವರಿಗೂ ರಾಷ್ಟ್ರ ಸೇವೆ ಮಾಡಬೇಕೆಂಬ ಮನಸ್ಸು ಉಂಟಾಗುತ್ತದೆ. ಇದಕ್ಕೆ ಗುರುಗಳಾದ ವಾಮನರಾವ ಬಿದರಿ ಅವರ ಪ್ರೋತ್ಸಾಹವು ದೊರೆಯುತ್ತದೆ. ಮಠಪತಿಯವರು ಬಿದರಿಯವರೊಂದಿಗೆ ಹಳ್ಳಿ ಹಳ್ಳಿಗಳಿಗೆ ಹೋಗಿ ಖಾದಿ ಪ್ರಚಾರ ಮಾಡುತ್ತಾರೆ.

ಗಾಂಧೀಜಿಯವರ ತತ್ವಕ್ಕೆ ಬದ್ದರಾದ ಮಠಪತಿಯವರು ಜನರಲ್ಲಿ ದೇಶ ಪ್ರೇಮವನ್ನು ಮೂಡಿಸುವಂತಹ ಗೀಗಿ ಪದಗಳನ್ನು ಬರೆದು ಗೀಗಿ ಮೇಳವನ್ನು ಕಟ್ಟಿ ಆ ಮೂಲಕ ಪ್ರಚಾರ ಮಾಡುತ್ತಿದ್ದರು. ವಾರಕ್ಕೊಮ್ಮೆ ಗ್ರಾಮ ನೈರ್ಮಲ್ಯ ಕಾರ್ಯದಲ್ಲಿ ತೊಡಗುತ್ತಿದ್ದರು. ಬ್ರಿಟಿಷರಿಗೆ ಯಾರಾದರೂ ಸಹಾಯ ಮಾಡಿದರೆ ಹಾಗೆ ಸಹಾಯ ಮಾಡಬಾರದೆಂದು ಹೇಳುತ್ತಿದ್ದರಲ್ಲದೆ ಸಹಾಯ ಮಾಡಿದವರ ವಿರುದ್ಧ ವಯಕ್ತಿಕ ಸತ್ಯಾಗ್ರಹವನ್ನು ಮಾಡುತ್ತಿದ್ದರು. ಬ್ರಿಟಿಷರು ಇವರ ಕ್ರಾಂತಿಕಾರಿ ಮನೋಭಾವನೆಯನ್ನು ಕಂಡು ೧೧-೦೩-೧೯೪೧ ರಂದು ಇವರನ್ನು ಬಂಧಿಸಿ ನಾಲ್ಕು ತಿಂಗಳ ಜೈಲು ಶಿಕ್ಷೆಯನ್ನು ವಿಧಿಸುತ್ತಾರೆ.

ಈ ಚಳುವಳಿಕಾರರ ಮುಖ್ಯ ಸ್ವಭಾವವೆಂದರೆ ಹೋರಾಟದಲ್ಲಿ ಮುಂದೆ ಇಟ್ಟ ಅಡಿಯನ್ನು ಎಂದು ಹಿಂತೆಗೆದಿಲ್ಲ. ಬ್ರಿಟಿಷ ಸರಕಾರ ಮತ್ತೆ ಇವರ ಚಳುವಳಿ ಮಾಡುತ್ತಾರೆ ಎಂಬ ಸುದ್ದಿ ತಿಳಿದ ಬಳಿಕ ಮತ್ತೊಂದು ಬಾರಿ ಇವರನ್ನು ಬಂಧಿಸಲು ಪ್ರಯತ್ನಿಸಿತು. ಆದರೆ ಅದು ಕೈಗೂಡಲಿಲ್ಲ.

೧೯೪೨ರ ಚಳುವಳಿಯಲ್ಲಿ ಪೊಲೀಸರು ವಾರಂಟ ಹೋರಡಿಸಿದ ಕಾರಣಕ್ಕಾಗಿ ಮಠಪತಿಯವರು ಭೂಗತರಾಗುವರು. ಮಾರ್ಗದರ್ಶಕರ ಸೂಚನೆಯಂತೆ ಅಂಕಲಗಿ ಶಿಂಧೀ ಅಂಗಡಿಯನ್ನು ಸುಡುತ್ತಾರೆ, ಅದಾದ ಬಳಿಕ ನಖಂದಿ ಆಯ್. ಬಿ. ಬಂಗ್ಲೆಗೆ ಬೆಂಕಿ ಹಚ್ಚುತ್ತಾರೆ, ಬಾಳೋಬಾಳ ಬಂಗ್ಲೆಯನ್ನು ಅಗ್ನಿಗೆ ಆಹುತಿ ಕೊಡುತ್ತಾರೆ. ಹುಲಕುಂದಕ್ಕೆ ಬರುವ ಶಿಂಧೀ ಕಪಾಲವನ್ನೆ ಕಡಿದು ನಾಶ ಮಾಡುತ್ತಾರೆ. ನೇಸರಗಿಗೆ ಗಾಡಿ ಮೇಲೆ ಬಂದು ೨ ಪೀಕ ಶಿಂಧಿ ನಾಶ ಮಾಡುತ್ತಾರೆ. ಸುಲದಾಳ ರೈಲ್ವೆ ಸ್ಟೇಶನನ್ನು ಸುಟ್ಟು ಬಿಡುತ್ತಾರೆ. ಮೇಲ್ಮಟ್ಟಿ ರೈಲ್ವೆ ಗೇಟನ್ನು ಸುಡುವುದರ ಜೊತೆಗೆ ೨೩ ದಿನಕ್ಕೊಮ್ಮೆ ತಾರ ಕತ್ತರಿಸುತ್ತಿದ್ದರು. ಕುಡಚಿ ಸ್ಟೇಶನದಿಂದ ಜಮಖಂಡಿ ರಸ್ತೆಯ ತಾರ ಕಂಬ ಸಹಿತ ಕಿತ್ತು ಸುಲೇಬಾವಿ ಟಪಾಲ ಲೂಟಿ ಮಾಡುತ್ತಾರೆ. ಇದಲ್ಲದೆ ಮದವಾಲ, ಖಾನಾಪೂರ, ನಂದಗಾಂವ ಕುಲಕರ್ಣಿಯವರ ದಪ್ತರಗಳನ್ನು ಸುಟ್ಟು ಹಾಕುತ್ತಾರೆ.

ಬೆಳಗಾವಿಯ ಜೈದೇವ ಕುಲಕರ್ಣಿಯವರ ಕಡೆಗೆ ಮಠಪತಿಯವರು ಒಂದು ಕೆಲಸದ ನಿಮಿತ್ಯ ಹೋಗುತ್ತಾರೆ. ಆಗ ಕುಲಕರ್ಣಿಯವರು ವೆಂಗುಲಕದ ಟಪಾಲ ಲೂಟಿ ಮಾಡುವುದು

ಇದೆ ಬರುವೆಯಾ ಎಂದು ಕೇಳುತ್ತಾರೆ. ಆಗ ಇವರು ಯಾವ ದಿನವೆಂದು ತಿಳಿಸಿದರೆ ಸಾಕು ಖಂಡಿತವಾಗಿ ಆ ದಿನ ಬರುತ್ತೇನೆ ಎಂದು ಹೇಳುತ್ತಾರೆ. ಅಪ್ಪಣ್ಣ ಹೊಳೆಯಾಚೆ ಅವರ ಜೊತೆ ಟಪಾಲ ಮೋಟಾರ ಬೆನ್ನ ಹತ್ತಿ ಬೆಳಗಾಪಿಯಿಂದ ೨೫ ಮೈಲು ದೂರು ಹೋಗುತ್ತಾರೆ. ಅದು ಬೆಳಗಿನ ಜಾವ ಇವರ ಕೈಯಲ್ಲಿ ಕೊಡಲಿ ಇತ್ತು. ಸರಿಯಾದ ಹೊತ್ತಿಗೆ ಮೋಟಾರ ಬರುತ್ತದೆ. ಅಪ್ಪಣ್ಣ ಹೊಳೆಯಾಚೆಯವರು ಮೋಟಾರಕ್ಕೆ ಕೈ ಮಾಡಿದರು. ಮೋಟಾರ ನಿಲ್ಲುವುದಿಲ್ಲ. ಮಠಪತಿಯವರು ಒಂದು ಕಂಟಿಯ ಮರೆಯಲ್ಲಿದ್ದು, ಮೋಟಾರ ಟಾಯರಿಗೆ ಕೊಡಲಿಯಿಂದ ಜೋರಾಗಿ ಏಟು ಹಾಕುತ್ತಾರೆ. ಟಾಯರು ತುಂಡು ತುಂಡಾಗಿ ಮೋಟಾರ ಅಲ್ಲಯೆ ನಿಲ್ಲುತ್ತದೆ. ಆಗ ಮಠಪತಿಯವರು ಹೊಳೆಯಾಚೆಯವರು ಗಾಡಿಯನ್ನು ಏರಿ ಟಪಾಲನ್ನು ತೆಗೆದುಕೊಂಡು ಜಂಗಲಿನಲ್ಲಿ ಸುಟ್ಟು ಹಾಕುತ್ತಾರೆ. ಈ ಕಾರಣಕ್ಕಾಗಿ ಇವರನ್ನು ಮೊದಗಾ ಗ್ರಾಮದಲ್ಲಿ ಪೋಲಿಸರು ಹಿಡಿದು ೨ ತಿಂಗಳು ಜೈಲು ಶಿಕ್ಷೆ ವಿಧಿಸುತ್ತಾರೆ. ಅಲ್ಲದೆ ೫೦ ರೂಪಾಯಿ ದಂಡ ವಿಧಿಸುತ್ತಾರೆ. ೧೯೪೨ರಲ್ಲಿ ಇವರು ಶಿಕ್ಷೆ ಮುಗಿಸಿ ಬಂದ ನಂತರ ಬ್ರಿಟಿಷ ಸರಕಾರ ಮತ್ತೆ ಇವರನ್ನು ಬಂಧನ ಮಾಡಿ ಕೆಲವು ದಿನಗಳಾದ ನಂತರ ಬಿಡುಗಡೆ ಮಾಡುತ್ತಾರೆ.

## ಗೌಡಪ್ಪ ಕರಲಿಂಗನ್ನವರ :

ಗೌಡಪ್ಪ ಕರಲಿಂಗನ್ನವರ ಇವರು ಗೋಕಾಕ ತಾಲೂಕಿನ ಅಕ್ಕತಂಗೇರಹಾಳದವರು. ಕನ್ನಡ ಆನೆಯ ಇಯತ್ತಿನವರೆಗೆ ಮಾತ್ರ ಓದಿದವರು. ಇವರು ನಿಂಗಪ್ಪ ಕರಲಿಂಗನ್ನವರ, ಬಾಳಪ್ಪ ಹೊಳೆಯಾಚೆ, ವಾಮನರಾವ ಬಿದರಿ ಇವರ ಪ್ರಭಾವದಿಂದ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕುತ್ತಾರೆ. ೧೯೪೨ರ ಚಲೇಜಾವ ಚಳುವಳಿಯಲ್ಲಿ ಇವರು ಭಾಗವಹಿಸಿ ಹುಕ್ಕೇರಿ ಕಛೇರಿಗೆ ಮುತ್ತಿಗೆಯನ್ನು ಹಾಕುತ್ತಾರೆ. ಇವರ ಜೊತೆಗಿದ್ದ ಹೋರಾಟಗಾರರನ್ನು ಬ್ರಿಟಿಷರು ಬಂಧಿಸುತ್ತಾರೆ. ಆದರೆ ವಯಸ್ಸಿನಲ್ಲಿ ಇವರು ಚಿಕ್ಕವರಿದ್ದ ಕಾರಣ ಇವರನ್ನು ಬಂಧಿಸದೆ ರಿಮ್ಯಾಂಡ ಹೋಮಿಗೆ ಕಳಿಸುತ್ತಾರೆ. ಉಳಿದವರೆಲ್ಲಗೂ ೭ ತಿಂಗಳು ಶಿಕ್ಷೆ ವಿಧಿಸಲಾಗುತ್ತದೆ. ಗೌಡಪ್ಪನವರನ್ನು ೧ ವರ್ಷದವರೆಗೆ ರಿಮ್ಯಾಂಡ ಹೋಮಿನಲ್ಲಿ ಇಟ್ಟುಕೊಂಡು ಬಿಡುಗಡೆ ಮಾಡುತ್ತಾರೆ. ಆದರೆ ಗೌಡಪ್ಪ ಬಿಡುಗಡೆಯಾಗಿ ಬಂದ ಮೇಲೆ ನಿರಂತರ ಹೋರಾಟದಲ್ಲಿ ಮುಂದುವರೆಯುತ್ತಾರೆ. ಈ ಕಾರಣದಿಂದ ೧೯೪೩ರಲ್ಲಿ ಮತ್ತೆ ಇವರನ್ನು ಬಂಧಿಸಿ ಬೆಳಗಾವಿ ಹಿಂಡಲಗಾ ಜೈಲಿನಲ್ಲಿ ೨೬-೦೩-೧೯೪೪ರವರೆಗೆ ಡಿಟೆನ್ಯೂ ಅಂತಾ ಇಡುತ್ತಾರೆ.

## ಕುಂದರನಾಡಿನ ಸ್ವಾತಂತ್ರ್ಯ ಹೋರಾಟದ ಅನನ್ಯತೆ :

ಮೊದಲ ಹಂತದಲ್ಲಿ ಟಿಳಕರಿಂದ ಎರಡನೆಯ ಹಂತದಲ್ಲಿ ಮಹಾತ್ಮಾ ಗಾಂಧೀಜಿಯವರಿಂದ ಪ್ರಭಾವಗೊಂಡಿರುವ ಕುಂದರನಾಡಿನ ಸ್ವಾತಂತ್ರ್ಯಾಂದೋಲನಕ್ಕೆ ತನ್ನದೇ ಆದ ಅನನ್ಯತೆಯಿದೆ. ಸಹಕಾರ ಚಳುವಳಿ, ರಾಷ್ಟ್ರೀಯ ಶಾಲೆಗಳು, ಖಾದಿ ಗ್ರಾಮೋದ್ಯೋಗ ಸಂಘಗಳು, ಲಿಂಗಾಯತ ಶಿಕ್ಷಣ ಸಂಸ್ಥೆ, ಮಠಾಧೀಶರು ನೇರವಾಗಿ ಚಳುವಳಿಯಲ್ಲಿ ಭಾಗಿಯಾಗಿದ್ದು ವಿಶೇಷ. ಹುಲಕುಂದ

ಪರಂಪರೆಯ ಲಾವಣಿ, ರಾಷ್ಟ್ರೀಯ ವಿವಾಹ, ಅಂತರ್ ಜಾತಿಯ ಮದುವೆ ಮುಂತಾದವು ಪ್ರಮುಖ ಅನನ್ಯತೆಗಳು.

ಸ್ವಾತಂತ್ರ್ಯ ಆಂದೋಲನದ ಜೊತೆಗೆ ಕುಂದರನಾಡಿನಲ್ಲಿ ಸಹಕಾರಿ ಚಳುವಳಿಯು ರೂಪುಗೊಂಡಿತು. ಸಂಕೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ, ಹುಕ್ಕೇರಿಯ ವಿದ್ಯುತ್ ಸಹಕಾರಿ ಸಂಘ, ಘಟಪ್ರಭಾದಲ್ಲಿರುವ ಸಹಕಾರಿ ಆಸ್ಪತ್ರೆ, ಖಾದಿ ಮತ್ತು ಗ್ರಾಮೋದ್ಯೋಗ ಮುಂತಾದವು ಮಹತ್ತರವಾಗಿವೆ. ಮಹಾರಾಷ್ಟ್ರದಲ್ಲಿ ಸಹಕಾರಿ ಚಳುವಳಿಯು ತುಂಬ ಯಶಸ್ವಿಯಾಗಿದೆ. ಅದರ ಪ್ರಭಾವ ಕರ್ನಾಟಕದಲ್ಲಿಯೂ ಆಯಿತು. ಕುಂದರನಾಡಿನಲ್ಲಿ ಇದನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಸರಕಾರದ ನೆರವಿಲ್ಲದೆ, ಏಕವ್ಯಕ್ತಿಯ ನೆಲೆಯಲ್ಲಿಯೂ ಅಲ್ಲದೆ ಪರಸ್ಪರ ಸಹಕಾರದ ನೆರವಿನಿಂದ ಸ್ಥಾಪಿತವಾದ ಈ ಸಂಘ–ಸಂಸ್ಥೆಗಳಿಗೆ ಸಾಮಾಜಿಕ ಜವಾಬ್ದಾರಿ ಇರುತ್ತದೆ. ಹಾಗೆ ಸಾಮೂಹಿಕ ಹೊಣೆಗಾರಿಕೆಯೂ ಇದರ ಮೇಲಿರುತ್ತದೆ.

**ರಾಷ್ಟ್ರೀಯ ಶಾಲೆಗಳು :**

ಕುಂದರನಾಡಿನಲ್ಲಿ ಸ್ವಾತಂತ್ರ್ಯ ಆಂದೋಲನದ ಕಾಲದಲ್ಲಿಯೇ ರಾಷ್ಟ್ರೀಯ ಶಾಲೆಗಳು ತಲೆಯೆತ್ತಿದ್ದವು. ಶಿಕ್ಷಣಕ್ಕೆ ಆದ್ಯತೆ ಲಭಿಸಿತು. ಬೆಟಗೇರಿ ಕೃಷ್ಣಶರ್ಮ, ಯಮಕನಮರಡಿಯಂಥವರು ರಾಷ್ಟ್ರೀಯ ಶಾಲೆಗಳ ಶಿಕ್ಷಕರಾಗಿ ಮಾಡಿದ ಕಾರ್ಯ ಪ್ರಶಂಸನೀಯವಾಗಿದೆ. ಈ ಶಾಲೆಗಳು ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ರೂಪಿಸಲು ನೆರವಾದವು.

**ಭಾರತ ಸೇವಾದಳ :**

ಕುಂದರನಾಡಿನ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿಯೇ ಭಾರತ ಸೇವಾದಳ ಪ್ರಾರಂಭವಾಯಿತು. ೧೯೨೪ರಲ್ಲಿ ಮಹಾತ್ಮಾ ಗಾಂಧೀಜಿಯವರು ಅಧ್ಯಕ್ಷತೆಯಲ್ಲಿ ಜರುಗಿದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನವನ್ನು ತುಂಬ ಯಶಸ್ವಿಯಾಗಿ ಸಂಘಟಿಸಿದ್ದು, ನಾ. ಸು. ಹರ್ಡೇಕರ 'ಭಾರತ ಸೇವಾದಳ'ದ ಸಂಸ್ಥಾಪಕರು. ಭಾರತೀಯ ಸೇವಾದಳದ ಮೂಲಕವಾಗಿ ಯುವಕರಲ್ಲಿ ರಾಷ್ಟ್ರಪ್ರೇಮ ಬಿತ್ತಿದ್ದು, ಸ್ವಾತಂತ್ರ್ಯದ ಕಿಡಿ ಹೊತ್ತಿಸಿದ್ದು, ಯುವಕರಿಗೆ ಹೋರಾಟದ ತರಬೇತಿ ನೀಡಿದ್ದು, ಸಂಘಟನೆಯನ್ನು ಶಕ್ತಿಯುತಗೊಳಿಸಿದ್ದು 'ಭಾರತ ಸೇವಾದಳ'ದ ಯೋಗದಾನವಾಗಿದೆ.

**ಘಟಪ್ರಭಾದ ಆರೋಗ್ಯ ಧಾಮ :**

ಶಿಕ್ಷಣ, ಶಿಸ್ತು, ಸಂಘಟನೆಯ ಜೊತೆಗೆ ಆರೋಗ್ಯವು ಬಹಳ ಮುಖ್ಯ. ಸದೃಢವಾದ ವ್ಯಕ್ತಿಗಳು ದೇಶ ಕಟ್ಟಬಲ್ಲರು. ಸಣ್ಣ–ಪುಟ್ಟ ಕಾಯಿಲೆಗಳಲ್ಲದೆ ಭೀಕರ ಕಾಯಿಲೆಗೆ ತುತ್ತಾದವರಿಗೆ ತುರ್ತು ಚಿಕಿತ್ಸೆ ಲಭಿಸಬೇಕು. ಮಾರಣಾಂತಿಕ ರೋಗಗಳಿಗೆ ಪರಿಣಾಮಕಾರಿ ಚಿಕಿತ್ಸೆ ಲಭಿಸಬೇಕೆಂಬ ಸದುದ್ದೇಶದಿಂದಾಗಿ 'ಘಟಪ್ರಭಾ'ದಲ್ಲಿ 'ಆರೋಗ್ಯಧಾಮ'ದ ಸ್ಥಾಪನೆಯಾಯಿತು. ಸ್ವಾತಂತ್ರ್ಯ

ಚಳುವಳಿಯೊಂದು ಆರೋಗ್ಯ ಧಾಮವೊಂದನ್ನು ಹುಟ್ಟು ಹಾಕಿರುವ ನಿದರ್ಶನಗಳು ಬೇರಡೆಯಿಲ್ಲ. ಇದು ಕುಂದರನಾಡಿನ ಸ್ವಾತಂತ್ರ್ಯ ಹೋರಾಟದ ಅನನ್ಯತೆಯೆನಿಸುತ್ತದೆ. ಇಂದು ಈ ಆರೋಗ್ಯಧಾಮ ಪ್ರತಿನಿತ್ಯ ನೂರಾರು ರೋಗಿಗಳಿಗೆ ಚಿಕಿತ್ಸೆ ನೀಡುತ್ತ ದೇಶದ ಗಮನ ಸೆಳೆದಿದೆ.

**ಮಠಗಳ ಸೇವೆ :**

ಸ್ವಾತಂತ್ರ್ಯಾಂದೋಲನ ಸಂದರ್ಭದಲ್ಲಿ ಕುಂದರನಾಡಿನ ಮಠಗಳು ಸಲ್ಲಿಸಿದ ಸೇವೆ ಅನುಪಮವಾಗಿದೆ. ಕರ್ನಾಟಕವು ಏಕಕಾಲಕ್ಕೆ ಭಾರತ ಸ್ವಾತಂತ್ರ್ಯ ಆಂದೋಲನ ಹಾಗೂ ಮತ್ತೊಂದೆಡೆ ಕರ್ನಾಟಕ ಏಕೀಕರಣ ಚಳುವಳಿ ನಡೆಸುವ ತುರ್ತು ಅವಶ್ಯಕತೆಯಿತ್ತು. ಕುಂದರನಾಡಿನ ಮಠಗಳು ಈ ಎರಡೂ ಜವಾಬ್ದಾರಿಗಳನ್ನು ಯಶಸ್ವಿಯಾಗಿ ನಿಭಾಯಿಸಿವೆ. ಬೆಳವಾಗಿ ಶಿವಬಸವನಗರ ನಾಗನೂರ ರುದ್ರಾಕ್ಷಿಮಠವು ಸ್ವಾತಂತ್ರ್ಯಾಂದೋಲನಕ್ಕೆ ಪ್ರೇರಕವಾಗಿ ನಿಂತುಕೊಂಡಿತ್ತು. ಸ್ವಾತಂತ್ರ್ಯ ಹೋರಾಟಗಾರರಿಗೆ ಬೆಂಬಲವಾಗಿ ಭೂಗತರಿಗೆ ರಕ್ಷಣಾ ಕೇಂದ್ರವಾಗಿತ್ತು. ನಾಗನೂರ ಮಠದ ಜೊತೆಗೆ ಕುಂದರನಾಡಿನ ಇನ್ನಿತರ ಮಠಗಳು ಈ ಕೈಕಾರ್ಯದಲ್ಲಿ ಸಕ್ರೀಯವಾಗಿ ತೊಡಗಿಸಿಕೊಂಡಿದ್ದವು.

**ಹುಲಕುಂದ ಪರಂಪರೆಯ ಲಾವಣಿ :**

ಕರ್ನಾಟಕದಲ್ಲಿ ಪ್ರಮುಖವಾಗಿ ತೇರದಾಳ, ಹಲಸಂಗಿ, ಬೀಬೀ ಇಂಗಳಗಿ, ದೇಗಾಯಿ ಮತ್ತು ಸಾವಳಗಿ ಹಾಗೂ ಹುಲಕುಂದ ಐದು ಪ್ರಮುಖ ಪರಂಪರೆಯ ಲಾವಣಿಗಳಿವೆ. ಮೊದಲಿನ ನಾಲ್ಕು ಪರಂಪರೆಯ ಲಾವಣಿಗಳಲ್ಲಿ ಹರದೇಶಿ ಮತ್ತು ನಾಗೇಶಿ ಪಂಥಗಳಿವೆ. ಪುರುಷನ್ನೇ ಶ್ರೇಷ್ಠವೆಂದು ಹರದೇಶಿ ಪ್ರತಿಪಾದಿಸಿದರೆ ಶಕ್ತಿ ಅಥವಾ ಸ್ತ್ರೀಯೆ ಸರ್ವಶ್ರೇಷ್ಠವೆಂದು ನಾಗೇಶಿಯವರು ಪ್ರತಿಪಾದಿಸುತ್ತಾರೆ. ಇದರ ಜೊತೆಗೆ ಪೌರಾಣಿಕ ಮತ್ತು ಚಾರಿತ್ರಿಕ ವಸ್ತುವನ್ನುಳ್ಳ ಲಾವಣಿಗಳು ರಚನೆಗೊಂಡಿವೆ. ಈ ನಾಲ್ಕು ಪರಂಪರೆಗಿಂತ ವಿಭಿನ್ನವಾದದ್ದು ಹುಲಕುಂದ ಪರಂಪರೆಯ ಲಾವಣಿಗಳು. ಈ ಪರಂಪರೆಯ ಲಾವಣಿಕಾರರು ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರೀಯವಾಗಿ ತೊಡಗಿಸಿಕೊಂಡಿದ್ದು, ಒಂದು ಕಾರಣವಾದರೆ, ಕೆಲವರು ಜೈಲುಪಾಲಾಗಿ, ತುರಂಗವಾಸ ಅನುಭವಿಸಿದ್ದರು. ಹುಲಕುಂದ ಭೀಮಕವಿ ಬೆಳಗಾವಿ ಹಿಂಡಲಗಾ ಜೈಲಿನಲ್ಲಿಯೇ ಲಾವಣಿ ಮೇಳ ಕಟ್ಟಿದ್ದು ಸೋಜಿಗದ ಸಂಗತಿ. ಮಹಾತ್ಮಾ ಗಾಂಧೀಜಿಯವರ ಪ್ರಭಾವದಿಂದಾಗಿ, ಖಾದಿ, ಖಾದಿಧಾರಣೆ, ಖಾದಿಯ ಮಹಿಮೆ ತಿಳಿಸುವ ಲಾವಣಿಗಳು ಹೇರಳವಾಗಿ ಬಂದಿವೆ. ಗಾಂಧಿ, ನೆಹರೂ, ಸುಭಾಷಚಂದ್ರ ಬೋಸ್ ಮುಂತಾದ ಹಲವಾರು ದೇಶಭಕ್ತರ ಕುರಿತಾಗಿ ಲಾವಣಿಗಳು ಮೂಡಿಬಂದಿವೆ. ಚಲೇಜಾವ್ ಚಳುವಳಿ, ಮಾಡು ಇಲ್ಲವೇ ಮಡಿ ಕುರಿತಾಗಿಯೂ ಅಪಾರ ಪ್ರಮಾಣದ ಲಾವಣಿಗಳು ರಚನೆಗೊಂಡಿವೆ. ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಸಂಗೊಳ್ಳಿ ರಾಯಯಣ್ಣ, ಸಿಂಧೂರ ಲಕ್ಷ್ಮಣರ ಕುರಿತಾದ ಲಾವಣಿಗಳು ವಿಫುಲವಾಗಿ ಬಂದಿವೆ. ಕಿತ್ತೂರು ಸಂಸ್ಥಾನದ ಕುರಿತಾಗಿಯೂ ಅಪಾರ ಪ್ರಮಾಣದ ಲಾವಣಿಗಳು ಮೂಡಿ ಬಂದಿವೆ. ಹಲಕುಂದದ ಲಾವಣಿ ಪರಂಪರೆಯ ಅಧ್ಯಯನವೆಂದರೆ ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದ ಚಾರಿತ್ರಿಕ ಸೋಪಾನಗಳ ಅಧ್ಯಯನವೆಂದೇ ಅರ್ಥ.

## ರಾಷ್ಟ್ರೀಯ ವಿವಾಹ (ಧ್ವಜದ ಆಶ್ರಯದಲ್ಲಿ ವಿವಾಹ) :

ಅಂತರ್ಜಾತಿ ವಿವಾಹಗಳ ಸಂಯೋಜನೆಯೇ ರಾಷ್ಟ್ರೀಯ ವಿವಾಹದ ಮೂಲ ಉದ್ದೇಶವಾಗಿತ್ತು. ಇದು ಜಾತಿ ವ್ಯವಸ್ಥೆಯ ನಿರ್ಮೂಲನೆಯ ಮೂಲ ಅಸ್ತ್ರವಾಗಿತುತ. ಹುದಲಿಯು ಗಾಂಧೀಜಿಯವರ ಎಲ್ಲ ಧ್ಯೇಯ ಧೋರಣೆಗಳನ್ನು ಸಾಧಿಸಲು ಕಟಬದ್ಧವಾದಂತೆ ರಾಷ್ಟ್ರೀಯ ವಿವಾಹಗಳನ್ನು ನೆರವೇರಿಸುವಲ್ಲಿಯೂ ಹಿಂದೆ ಬೀಳಲಿಲ್ಲ. ಇದಕ್ಕೆ ಸಾಕ್ಷಿ ಎನ್ನುವಂತೆ ಅಲ್ಲಿಸಾಹೇಬ ಹುಸೇನಸಾಹೇಬ ವಾರಿಮನಿ ಅವರರು ೧೯೩೫ ರಲ್ಲಿ ರಾಷ್ಟ್ರೀಯ ವಿವಾಹವಾದರು. ಇವರು ಮುಸಲ್ಮಾನ ಸಂಸ್ಕೃತಿಯವರಾಗಿದ್ದರಿಂದ ಇವರಿಗೆ ಘೋಷಾ ಪದ್ಧತಿಯು ಜಾರಿಯಲ್ಲಿತ್ತು. ರಾಷ್ಟ್ರೀಯ ವಿವಾಹದಲ್ಲಿ ಘೋಷಾ ಪದ್ಧತಿಗೆ ಅವಕಾಶವಿರಲಿಲ್ಲ. ಆಗ ವಾರಿಮನಿಯವರು ಈ ಘೋಷಾ ಪದ್ಧತಿಯನ್ನು ಬಿಟ್ಟು ವಿವಾಹವಾಗಲು ತಯಾರಾಗುವ ಕನ್ಯೆ ಸಿಗುವವರೆಗೆ ಮದುವೆಯನ್ನು ಮಾಡಿಕೊಳ್ಳುವುದಿಲ್ಲವೆಂದು ತೀರ್ಮಾನಿಸುತ್ತಾರೆ. ಆ ಕಾಲದಲ್ಲಿ ಇಂತಹ ತಿಳುವಳಿಕೆಯನ್ನು ಹೊಂದಿದ ಕನ್ಯೆ ದೊರೆಯುವುದು ಸಾಮಾನ್ಯ ಮಾತಾಗಿರಲಿಲ್ಲ. ಆದರೆ ವಾರಿಮನಿಯವರು ಅದನ್ನು ಸಾಧಿಸಿಯೇ ಬಿಟ್ಟರು. ೧೯೨೫ ರಿಂದಲೂ ಇವರು ರಾಷ್ಟ್ರೀಯ ಸಾಮೂಹಿಕ ಕಾರ್ಯಗಳಲ್ಲಿ ತೊಡಗಿದವರಾಗಿದ್ದರು. ವಾರಿಮನಿಯವರು ೧೯೩೫ ರಲ್ಲಿ ರಾಷ್ಟ್ರೀಯ ವಿವಾಹವನ್ನು ಮಾಡಿಕೊಂಡಿದ್ದು ರಾಷ್ಟ್ರಧ್ವಜದ ಕೆಳಗೆ. ಈ ವಿವಾಹದ ಸಂದರ್ಭದಲ್ಲಿ ಗಂಗಾಧರರಾವ್ ದೇಶಪಾಂಡೆಯವರು ಹಾಜರಿದ್ದು ನಮ್ಮ ದೇಶದ ಮುಸಲ್ಮಾನರಲ್ಲಿ ಇದು ಮೊದಲ ರಾಷ್ಟ್ರೀಯ ವಿವಾಹವೆಂದು ಹೇಳಿದರು. ಆಶ್ಚರ್ಯದ ಸಂಗತಿಯೆಂದರೆ ಊರಿನ ಸಾಮಾನ್ಯ ಜನರು ಈ ವಧುವರರನ್ನು ಮತ್ತು ಕಾರ್ಯಕರ್ತರನ್ನು ಕೀಳಾಗಿ ಕಾಣುತ್ತಿದ್ದರಲ್ಲದೆ ಅವರಿಗೆ ಯಾವುದೇ ರೀತಿಯ ಸಹಕಾರವನ್ನು ನೀಡುತ್ತಿರಲಿಲ್ಲ. ಇದಕ್ಕೆ ಇನ್ನೊಂದು ಉದಾಹರಣೆಯೆಂದರೆ ೦೧-೦೩-೧೯೪೪ ರಲ್ಲಿ ನಡೆದ ಹುದಲಿಯ ಕೆಂಚನಗೌಡನ ಮದುವೆ. ಕೆಂಚನಗೌಡಾ ಮಲ್ಲನಗೌಡಾ ಪಾಟೀಲ ಸಾ॥ ಹುದಲಿ ಇವರು ಕೀಳು ಜಾತಿಯವಳೆಂದು ಪರಿಗಣಿಸಲ್ಪಟ್ಟ ಕನ್ಯೆಯನ್ನು ವಿವಾಹವಾಗುತ್ತಾರೆ. ಈ ವಿವಾಹವು ಸೊಗಲದಲ್ಲಿ ರಾಷ್ಟ್ರೀಯ ವಿವಾಹ ಪದ್ಧತಿಯಂತೆ ನೆರವೇರುತ್ತದೆ. ಇದನ್ನು ಕಂಡ ಜನರು ಮೂರು ತಿಂಗಳವರೆಗೆ ಈ ಹಿರಿಯ ಕಾರ್ಯಕರ್ತರನ್ನು ಕೂಡಾ ಬಹಿಷ್ಕರಿಸುತ್ತಾರೆ.

## ಗಾಂಧಿ ಗ್ರಾಮಗಳ ರಚನೆ :

ಮಹಾತ್ಮಾ ಗಾಂಧೀಜಿಯವರ ರಾಮರಾಜ್ಯದ ಕನಸಿನ ಮೂಲ ಘಟಕಗಳನ್ನಾಗಿ ನಮ್ಮ ಹಳ್ಳಿಗಳನ್ನು ಪರಿವರ್ತಿಸುವ ಉದ್ದೇಶದಿಂದ ಸ್ವಾತಂತ್ರ್ಯ ಹೋರಾಟಗಾರರು ಗಾಂಧಿ ಗ್ರಾಮಗಳ ರಚನೆಗೆ ಹೆಚ್ಚಿನ ಆದ್ಯತೆ ನೀಡಿದರು. ಕುಂದರನಾಡಿನ ಸ್ವಾತಂತ್ರ್ಯವೀರರು ಹುದಲಿಯನ್ನು ಗಾಂಧಿ ಗ್ರಾಮವಾಗಿ ರೂಪಿಸಿ ಯಶಸ್ವಿಯಾದರು.

ಆ ಕಾಲದಲ್ಲಿ ಹಳ್ಳಿಗಳಲ್ಲಿ ಜಾತಿಯತೆಯ ಭೂತ ತಾಂಡವಾಡುತ್ತಿತ್ತು. ಜಾತ್ಯಾತೀತ ಧೋರಣೆ ಬೆಳೆಸಿ ಸರ್ವೋದಯದ ಆಶಯವನ್ನು ಸಾಕಾರಗೊಳಿಸುವುದು ಸುಲಭವಾಗಿರಲಿಲ್ಲ.

ರಾಷ್ಟ್ರೀಯ ಶಾಲೆಗಳಲ್ಲಿ ಕೆಳವರ್ಗದವರಿಗೆ ಪ್ರವೇಶ ನೀಡಿದಾಗ, ಸಾಮೂಹಿಕ ಭೋಜನ ಮಾಡಿದಾಗ ಮೊದಲಾದ ಸಂದರ್ಭಗಳಲ್ಲಿ ಮೇಲ್ವರ್ಗದವರ ಬಹಿಷ್ಕಾರ ಎದುರಿಸಬೇಕಾದ ಸಂದರ್ಭಗಳು ಸಹಜ. ಗಂಗಪ್ಪ ಯಮಕನಮರಡಿಯವರು ಮೂರು ಸಲ ಬಹಿಷ್ಕಾರಕ್ಕೊಳಗಾಗಬೇಕಾಯಿತು.

ಹುದಲಿ ಇಂದು ಕೇವಲ ಅಂದು ೧೦,೦೦೦ ಜನಸಂಖ್ಯೆಯನ್ನು ಹೊಂದಿರುವ ಕೇವಲ ೪೦೦೦ ಜನಸಂಖ್ಯೆಯ ಒಂದು ಸಣ್ಣ ಗ್ರಾಮವಾಗಿದ್ದರೂ ಅಲ್ಲಿ ನೂರಕ್ಕೂ ಹೆಚ್ಚು ಹೋರಾಟಗಾರರಿದ್ದರು. ಬಹುಶಃ ಪ್ರತಿಯೊಂದು ಮನೆಗೂ ಒಬ್ಬ ಹೋರಾಟಗಾರನನ್ನು ಹುದಲಿ ರೂಪಿಸಿತು. ಇಂಥ ಮತ್ತೊಂದು ಹಳ್ಳಿ ಬೆಳಗಾವಿ ಜಿಲ್ಲೆಯಲ್ಲಿ ಇಲ್ಲವೆಂದೇ ಹೇಳಬೇಕಾಗುತ್ತದೆ. ಅದು ತನ್ನ ಸುತ್ತಣ ಎಲ್ಲ ಹಳ್ಳಿಗಳನ್ನು ಹೋರಾಟದತ್ತ ಸೆಳೆಯಿತು. ಈಗಲೂ ಅದು ಗಾಂಧಿಗ್ರಾಮವೆಂದೇ ಗುರುತಿಸಿಕೊಳ್ಳುತ್ತದೆ. ಗಾಂಧಿ ಪ್ರತಿಮೆ ಮತ್ತು ಗಾಂಧಿ ಬಾವಿ ಇನ್ನೂ ಇಲ್ಲಿ ಜೀವಂತವಾಗಿವೆ. ಭೀಮಣ್ಣ ನಿಂಗಪ್ಪ ಭೂಶಿ ಮೊನ್ನೆ ಮೊನ್ನೆಯವರೆಗೂ ಗಾಂಧಿ ಪ್ರತಿಮೆಗೆ ದಿನನಿತ್ಯ ಪೂಜೆ ಸಲ್ಲಿಸುತ್ತಿದ್ದರು. ೨೦೧೯ ಫೆಬ್ರುವರಿಯಲ್ಲಿ ನಿಧನರಾದ ಭೂಶಿಯವರು ಎಂಟು ತಿಂಗಳ ಮೊದಲು ಮಾನಸಿಕ ನಿಮಿತ್ಯ ಕಳೆದುಕೊಂಡರು. ಆದರೆ ಬೆಳಿಗ್ಗೆ ಎದ್ದು ಕೂಡಲೇ ಗಾಂಧಿ ಪ್ರತಿಮೆಯತ್ತ ಧಾವಿಸಿ, ಪೂಜೆ ಮಾಡುತ್ತ ನಿಂತು ಬಿಡುತ್ತಿದ್ದರು. ಕೊನೆಯುಸಿರು ಎಳೆಯುವ ಘಳಿಗೆಯಲ್ಲಿಯೂ ಗಾಂಧೀಜಿಯ ಭಾವಚಿತ್ರವನ್ನು ಕಂಡು ಕಣ್ಣು ಮುಚ್ಚಿದ್ದು ಹುದಲಿಯ ಗಾಂಧಿ ನಿಷ್ಠೆಗೆ ಸಾಕ್ಷಿಯಾಗಿದೆ.

ಹೀಗೆ ಕುಂದರನಾಡಿನ ಸ್ವಾತಂತ್ರ್ಯ ಹೋರಾಟವು ವಿಭಿನ್ನ ಮತ್ತು ವಿಶಿಷ್ಟವಾಗಿರುವುದೇ ಕುಂದರನಾಡಿನ ಅನನ್ಯತೆಯಾಗಿದೆ.

**ಕೊನೆ ಟಿಪ್ಪಣಿಗಳು :**

೧. ಅಣ್ಣೂ ಗುರೂಜಿ (ಬಾ. ಯ. ದೇಶಪಾಂಡೆ) : ಕರ್ನಾಟಕದ ಸಿಂಹ ದಿ. ಗಂಗಾಧರರಾವ ದೇಶಪಾಂಡೆ (ಲೇ) : ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು : ಸಂ. ಸೂರ್ಯನಾಥ ಕಾಮತ : ಪ್ರಥಮ ಸಂಪುಟ, ಪು.ಸಂ–೧೦೦೧

೨. ಅದೇ : ಪು.ಸಂ–೧೦೦೪

೩. ಆರ್. ಎಚ್. ಕುಲಕರ್ಣಿ : ಫ್ರೀಡಂ ಮೂವ್ಮೆಂಟ್ ಇನ್ ಬೆಳಗಮ್ ಡಿಸ್ಟ್ರಿಕ್ಟ : ಪು.ಸಂ–೧೯

೪. ಶ್ರೀನಿವಾಸ ಕುಲಕರ್ಣಿ : ಅಪ್ರತೀಮ ಸ್ವಾತಂತ್ರ್ಯಯೋಧ ಗಂಗಾಧರರಾವ ದೇಶಪಾಂಡೆ : ಪು.ಸಂ–೬೩–೬೪

೫. ಆರ್. ಎಚ್. ಕುಲಕರ್ಣಿ : ಫ್ರೀಡಂ ಮೂವ್ಮೆಂಟ್ ಇನ್ ಬೆಳಗಮ್ ಡಿಸ್ಟ್ರಿಕ್ಟ : ಪು.ಸಂ–೭೯

೬. ಅಚ್ಯುತ ವಡವಿ ಹಾಗೂ ಎಸ್. ಎಲ್. ಶಾಸ್ತ್ರಿ : ಅಪ್ಪಟ ಗಾಂಧೀವಾದಿ : ಶ್ರೀ ರಾಮಚಂದ್ರ ವಡವಿ : ಪು.ಸಂ–೧೨೬–೧೨೭

೭. ಆರ್. ಎಚ್. ಕುಲಕರ್ಣಿ : ಫ್ರೀಡಂ ಮೂವ್ಮೆಂಟ್ ಇನ್ ಬೆಳಗಮ್ ಡಿಸ್ಟ್ರೀಕ್ಟ : ಪು.ಸಂ-೮೦
೮. ಅಶೋಕ ಚಂದರಗಿ : ಸ್ವಾತಂತ್ರ್ಯ ಸೇನಾನಿ ಅಣ್ಣು ಗುರೂಜಿ ಜನ್ಮಶತಮಾನೋತ್ಸವ ಸವಿ ನೆನಪು : ಪು.ಸಂ-೫-೬
೯. ರಾಮಚಂದ್ರ ವಡವಿ : ಭೋಡೋ ಭಾರತ ಪರ್ವ : ಪು.ಸಂ-೭೪
೧೦. ಸರೋಜನಿ ಚವಲಾರ : ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು : ಪು.ಸಂ-೧-೨
೧೧. ಅದೇ : ಪು.ಸಂ-೩
೧೨. ಅದೇ : ಪು.ಸಂ-೪
೧೩. ಅದೇ : ಪು.ಸಂ-೮
೧೪. ಅದೇ : ಪು.ಸಂ-೧೪
೧೫. ಅದೇ : ಪು.ಸಂ-೧೫
೧೬. ಬಸನಗೌಡ ರುದ್ರಗೌಡ ಪಾಟೀಲ (ಲೇ) : ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು : (ಸಂ) ಸೂರ್ಯನಾಥ ಕಾಮತ : ಪು.ಸಂ-೧೧೪೧
೧೭. ಸರೋಜನಿ ಚವಲಾರ : ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು : ಪು.ಸಂ-೩೭-೩೮
೧೮. ಗಂಗಪ್ಪ ಮುದ್ದಪ್ಪ ಮಾಳಗಿ : ಖಾದಿ ಕಿರಣ (ಸ್ಮರಣ ಸಂಚಿಕೆ) : ಪು.ಸಂ-೩೩
೧೯. ಮನೋಜ ಪಾಟೀಲ, ಬಿದರಿ ವಾಮನರಾವ ದಂಪತಿಗಳು (ಲೇ), : ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಶತಮಾನೋತ್ಸವ (ಸ್ಮರಣ ಸಂಚಿಕೆ) : ಪು.ಸಂ-೬೦-೬೧
೨೦. ಸರೋಜನಿ ಚವಲಾರ : ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು : ಪು.ಸಂ-೪೨
೨೧. ಅದೇ : ಪು.ಸಂ-೩೧-೩೨
೨೨. ಅದೇ : ಪು.ಸಂ-೫೩
೨೩. ಅದೇ : ಪು.ಸಂ-೬೧-೬೨

# ಅಧ್ಯಾಯ - ೬
# ಸಮಾರೋಪ

ಸ್ವಾತಂತ್ರ್ಯ ಚಳುವಳಿ ಮತ್ತು ಕುಂದರನಾಡು ಈ ಮಹಾಪ್ರಬಂಧವು ಕುಂದರನಾಡಿನ ಸ್ವಾತಂತ್ರ್ಯ ಹೋರಾಟದ ಅನನ್ಯತೆಯನ್ನು ವಿಶ್ಲೇಷಿಸುತ್ತದೆ. ಭಾರತದ ಸ್ವಾತಂತ್ರ್ಯ ಚರಿತ್ರೆಯ ಪುಟಗಳಲ್ಲಿ ಗಾಂಧೀ ಒಂದು ಹಿರಿದಾದ ಆಲದ ಮರದಂತೆ ನಮಗೆ ಗೋಚರಿಸಿದರೆ ಅದರ ಸಾವಿರಾರು ರೆಂಬೆಗಳಂತೆ ಸ್ವಾತಂತ್ರ್ಯ ಹೋರಾಟಗಾರರನ್ನು ನಾವು ಕಾಣುತ್ತೇವೆ. 'ಬ್ರಿಟಿಷರೇ ಭಾರವನ್ನು ಬಿಟ್ಟು ತೊಲಗಿರಿ' ಎಂಬ ಗಾಂಧೀಜಿಯವರ ಮಾತು ಬರೀ ಮಾತಾಗಿರಲಿಲ್ಲ, ಅಖಂಡ ಭಾರತದ ಲಕ್ಷಾವಧೀ ಸ್ವಾತಂತ್ರ್ಯ ಹೋರಾಟಗಾರರ ಮಂತ್ರವಾಗಿತ್ತು. ದೇಶದ ಬೇರೆ ಬೇರೆ ಪ್ರಾಂತಗಳಲ್ಲಿ ಬ್ರಿಟಿಷ ಸತ್ತೆಯ ವಿರುದ್ಧ ಆಂದೋಲನಗಳು ನಡೆದು ಹೋದವು. ಟಿಳಕರ ಪ್ರೇರಣೆಯಿಂದ ಮಹಾರಾಷ್ಟ್ರ ಮತ್ತು ಕರ್ನಾಟಕ ಒಂದರ್ಥದಲ್ಲಿ ಇಡೀ ದೇಶವೇ ಬ್ರಿಟಿಷರ ವಿರುದ್ಧ ಹೋರಾಡಲು ಅಣಿಯಾಗಿತ್ತು. 'ಸ್ವರಾಜ್ಯವೇ ನನ್ನ ಜನ್ಮ ಸಿದ್ಧ ಹಕ್ಕು' ಎಂದು ಟಿಳಕರು ಸಾರಿ ಜನತೆಯಲ್ಲಿ ಸ್ವಾತಂತ್ರ್ಯದ ಅರಿವನ್ನು ಮೂಡಿಸಿದರು. ಹೀಗೆ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ ದೇಶದ ಅನೇಕ ರಾಜ್ಯಗಳಲ್ಲಿ ಕರ್ನಾಟಕಕ್ಕೆ ಒಂದು ವಿಶೇಷ ಮಾನ್ಯತೆಯಿದೆ. ಅದರಲ್ಲಿಯೂ ಇಂದು ಮುಂಬೈ ಕರ್ನಾಟಕ ಒಂದು ಭಾಗವಾಗಿರುವ ಬೆಳಗಾವಿ ಜಿಲ್ಲೆಯ ಕುಂದರನಾಡಿನ ಸ್ವಾತಂತ್ರ್ಯ ಹೋರಾಟ ತನ್ನ ವಿಶಿಷ್ಟತೆಯಿಂದ ಗಮನ ಸೆಳೆದಿದೆ.

ಕರ್ನಾಟಕದ ಬೆಳಗಾವಿ ಜಿಲ್ಲೆಯ ಕುಂದರನಾಡಿನಲ್ಲಿ ಜರುಗಿದ ಸ್ವಾತಂತ್ರ್ಯ ಚಳುವಳಿಯು ಕನ್ನಡಿಗರ ರಾಷ್ಟ್ರಭಿಮಾನಕ್ಕೆ ಸಾಕ್ಷಿಯಾಗಿದೆ. ನಿಸರ್ಗದತ್ತವಾದ ರಮಣೀಯತೆ ಹಾಗೂ ಗಿರಿ-ಕಂದರಗಳು ಈ ಚಳುವಳಿಗಾರರಿಗೆ ಹೇಳಿ ಮಾಡಿಸಿದ ಸ್ಥಳವಾಗಿತ್ತು. ಈ ಪ್ರದೇಶದ ಚಳುವಳಿಗಾರರು ಹುದಲಿ, ಸುಳದಾಳ, ಸುಳೆಭಾವಿ, ಗ್ರಾಮಗಳ ಸುತ್ತಮುತ್ತ ಬ್ರಿಟಿಷ ಸರಕಾರದ ವಿರುದ್ಧ ಹೋರಾಟ ಮಾಡಿ ಇಲ್ಲಿ ಭೂಗತರಾಗುತ್ತಿದ್ದರು. ಹಗಲಿನಲ್ಲಿ ಅಡಗಿಕೊಂಡು ರಾತ್ರಿಯೆಲ್ಲಾ ಪೋಸ್ಟ್ ಲೂಟಿ, ರೈಲು ನಿಲ್ದಾಣಗಳಿಗೆ ಬೆಂಕಿ ಹಚ್ಚುವುದು, ಟೆಲಿಫೋನ್ ತಂತಿ ಕೀಳುವುದು ಮುಂತಾದ ಕಾರ್ಯಗಳನ್ನು ಮಾಡಿ ಬ್ರಿಟಿಷ ಸರಕಾರಕ್ಕೆ ಚಳ್ಳೆ ಹಣ್ಣು ತಿನ್ನಿಸುತ್ತಿದ್ದರು.

೧೮೫೭ರ ಸಿಪಾಯಿ ದಂಗೆಯಿಂದ ಭಾರತೀಯರಲ್ಲಿ ರಾಷ್ಟ್ರೀಯತೆ ಮನೋಭಾವನೆ ಮೂಡಿತು. ಅದಕ್ಕಿಂತಲೂ ಮೊದಲು ೧೮೦೬ರ 'ಎಲ್ಲೂರಿನ ಸಿಪಾಯಿ ದಂಗೆ' ಸಹ ಪ್ರಚಾರವಾಗಿತ್ತು. ಆದರೆ ಪ್ರಚಾರ ಪಡೆಯಲ್ಲಿಲ್ಲ. ಬಂಗಾಳದ ೧೮೫೭ರ ಸಿಪಾಯಿ ದಂಗೆ ರಾಷ್ಟ್ರಾದ್ಯಂತ ಪ್ರಚಾರ ಪಡೆಯಿತು. ಆದರೆ ಬ್ರಿಟಿಷರು ಎಲ್ಲ ಬಂಡಾಯಗಳನ್ನು ಅಡಗಿಸಿದರು. ಭಾರತವನ್ನು ಸಂಪೂರ್ಣ ತಮ್ಮ ಅಧಿಪತ್ಯಕ್ಕೆ ಒಳಪಡಿಸಿಕೊಂಡರು. ಈಸ್ಟ್ ಇಂಡಿಯಾ ಕಂಪನಿಯ ಆಳ್ವಿಕೆಯನ್ನು ಕೊನೆಗೊಳಿಸಿದರು. ತಮ್ಮ ದೇಶದ ಪಾರ್ಲಿಮೆಂಟರಿ ಒಡೆತನವನ್ನು ಸ್ಥಾಪಿಸಿಕೊಂಡರು. ಮಹಾರಾಣಿಯ ನೇರ ಆಳ್ವಿಕೆಯನ್ನು ಆರಂಭಿಸಿದರು. ಇದೇ ಭಾರತೀಯರಲ್ಲಿ ರಾಷ್ಟ್ರೀಯತೆಯ ಹೊಸ ಮಜಲುಗಳನ್ನು ಸೃಷ್ಟಿಸಿತು. ಬ್ರಿಟಿಷರು ಭಾರತೀಯ ರಾಜರನ್ನು ತಮ್ಮ ಅಡಿಗಳಲ್ಲಿ ಉಳಿಸಿಕೊಂಡರು.

೧೮೮೫ರಲ್ಲಿ 'ರಾಷ್ಟ್ರೀಯ ಕಾಂಗ್ರೆಸ್' ಸ್ಥಾಪನೆಗೊಂಡಿತು. ಆಗ ರಾಷ್ಟ್ರೀಯ ಚಳುವಳಿಯು ಸ್ಪಷ್ಟಸ್ವರೂಪವನ್ನು ಪಡೆಯಿತು. ರಾಷ್ಟ್ರೀಯ ಕಾಂಗ್ರೆಸಿಗೆ ಅಭೂತ ಪೂರ್ವ ಬೆಂಬಲ ಕನ್ನಡಿಗರಿಂದ ವ್ಯಕ್ತವಾಯಿತು. ಮುಂಬಯಿಯಲ್ಲಿ ೧೮೮೫ರಲ್ಲಿ 'ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥಾಪನಾ ಸಮ್ಮೇಳನ' ನಡೆಯಿತು. ಇಲ್ಲಿಯ ಜನರೂ ಅದರಲ್ಲಿ ಭಾಗವಹಿಸಿದ್ದರು. ಬೆಳಗಾವಿ, ಬಳ್ಳಾರಿ, ಧಾರವಾಡ, ಕಾರವಾರ, ಮೈಸೂರ ಈ ಪ್ರದೇಶದಲ್ಲಿ ಸ್ವಾತಂತ್ರ್ಯ ಹೋರಾಟಗಳು ಕಾಣಿಸಿಕೊಂಡವು. ರಾಷ್ಟ್ರೀಯತೆಯ ಭಾವನೆ ಜನರಲ್ಲಿ ವ್ಯಕ್ತವಾಗತೊಡಗಿತು. ಯಾವಾಗ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮೋಹನದಾಸ ಕರಮಚಂದ ಗಾಂಧೀಜಿಯವರು ಧುಮುಕಿದರೋ, ಆಗ ಅದು ಹೊಸ ತಿರುವನ್ನು ಪಡೆದುಕೊಂಡಿತು. ೧೯೧೫ ರಿಂದ ೧೯೪೭ರ ವರೆಗಿನ ಸ್ವಾತಂತ್ರ್ಯ ಹೋರಾಟದ ಕಾಲಾವಧಿಯನ್ನು 'ಗಾಂಧೀಯುಗ'ವೆಂದು ಗುರುತಿಸಲಾಗುತ್ತದೆ.

ಡಿಸೆಂಬರ್ ೧೮೮೫ರಲ್ಲಿ ೭೭ ಜನ ರಾಜಕೀಯ ಕಾರ್ಯಕರ್ತರಿಂದ 'ರಾಷ್ಟ್ರೀಯ ಕಾಂಗ್ರೆಸ್' ಪ್ರಾರಂಭವಾಯಿತು. ಇದರ ಮುಖ್ಯ ಉದ್ದೇಶ ರಾಷ್ಟ್ರೀಯ ಚಳುವಳಿಯ ನೇತೃತ್ವವನ್ನು ವಹಿಸಿಕೊಳ್ಳುವುದು. ಈ ಸ್ವತಂತ್ರ ಸಂಗ್ರಾಮಕ್ಕೆ ಜನತೆ ತಮ್ಮ ತನು, ಮನ ಧನವನ್ನೆಲ್ಲ ಮುಡಿಪಾಗಿಟ್ಟರು. ಬಾಲಗಂಗಾಧರ ಟಿಳಕರ ಕಾಲಾವಧಿಯಲ್ಲಿ ದೇಶಾದ್ಯಂತ ಒಂದು ಸಂಚಲನವನ್ನು ಸೃಷ್ಟಿಯಾಯಿತು. ಕರ್ನಾಟಕದಲ್ಲಿ ೧೮೭೪ರಲ್ಲಿ ಕಿತ್ತೂರಿನ ವೀರರಾಣಿ ಚನ್ನಮ್ಮ ಬ್ರಿಟಿಷರ ವಿರುದ್ಧ ಹೋರಾಡಿ ಗೆದ್ದ ಪ್ರಥಮ ಮಹಿಳೆ ಎನಿಸಿದ್ದಳು. ಚನ್ನಮ್ಮನ ಭಂಟ ಸಂಗೊಳ್ಳಿ ರಾಯಣ್ಣ ಬ್ರಿಟಿಷರ ವಿರುದ್ಧ ತನ್ನ ಶೌರ್ಯ ಸಾಹಸ ಪ್ರದರ್ಶಿಸಿ ಗಲ್ಲಿಗೇರಿಸಲ್ಪಟ್ಟು ಹುತಾತ್ಮನಾಗಿದ್ದನು. ನರಗುಂದದ ಬಾಬಾಸಾಹೇಬರನ್ನು ಬ್ರಿಟಿಷರು ಹಿಡಿದು ತಂದು ಬೆಳಗಾವಿಯಲ್ಲಿ ೧೮೫೮ ಜೂನ ೧೨ರಂದು ಗಲ್ಲಿಗೇರಿಸಿದ್ದರು. ಈ ಐತಿಹಾಸಿಕ ಘಟನೆಗಳು ಜನತೆಯ ಮೇಲೆ ಅಪಾರ ಪರಿಣಾಮ ಬೀರಿದ್ದವು. ಕಾಂಗ್ರೆಸ್ ಸ್ಥಾಪನೆಯ ನಂತರ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿಯ ಪ್ರಭಾವ ತೀವ್ರವಾಯಿತು. ಲೋಕಮಾನ್ಯ ಟಿಳಕರು ಕಲ್ಕತ್ತ ಅಧಿವೇಶನದಲ್ಲಿ 'ಹೊಸ ಪಕ್ಷಗಳು, ತತ್ವಗಳು' ಎಂಬ ವಿಷಯದ ಕುರಿತು ಭಾಷಣ ಮಾಡಿದರು. ಬೆಳಗಾವಿ ಜಿಲ್ಲೆಯವರಾದ ಗಂಗಾಧರರಾವ ದೇಶಪಾಂಡೆಯವರ ಮೇಲೆ ಇದು ಪ್ರಭಾವ ಬೀರಿತ್ತು. ಅಂದಿನಿಂದ ಅವರು ಟಿಳಕರ ಶಿಷ್ಯರಾದರು.

೧೯೧೬ರಲ್ಲಿ ಟಿಳಕರು ಕರ್ನಾಟಕಕ್ಕೆ ಕಾಲಿಟ್ಟರು. ಬೆಳಗಾವಿಯಲ್ಲಿ ಸೇರಿದ ಮುಂಬೆ ಪ್ರಾಂತೀಯ ರಾಜಕೀಯ ಪರಿಷತ್ತಿನಲ್ಲಿ 'ಸ್ವರಾಜ್ಯ ಸಂಘ'ವನ್ನು (ಹೋಮ ರೂಲ್ ಲೀಗ್) ಸ್ಥಾಪಿಸಲಾಯಿತು. ಇದಕ್ಕೆ ಟಿಳಕ್, ಗಾಂಧೀಜಿ, ದಾದಾಸಾಹೇಬ ನವರೋಜಿಯವರು ಬಂದಿದ್ದರು. ಇದರ ಶಾಖೆಗಳನ್ನು ನಿಪ್ಪಾಣಿ, ಚಿಕ್ಕೋಡಿ, ಸಂಕೇಶ್ವರಗಳಲ್ಲಿ ಸ್ಥಾಪಿಸಲಾಯಿತು. ಟಿಳಕರು ಬೆಳಗಾವಿಗೆ ೩ ಸಾರಿ ಬಂದು ಅಥಣಿ, ಬೈಲಹೊಂಗಲ, ಗೋರ್ಲಹೊಸೂರಗಳಲ್ಲಿ ಸಭೆ, ಸಮ್ಮೇಳನಗಳನ್ನು ನಡೆಸಿದರು.

ಬಾಲಗಂಗಾಧರ ಟಿಳಕರ ನಂತರ ಕಾಂಗ್ರೆಸ್ ಮತ್ತು ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿಯಲ್ಲಿ ಬಂದು ನಿಂತವರೆಂದರೆ ಮಹಾತ್ಮಾ ಗಾಂಧೀಜಿಯವರು. ಪ್ರಪಂಚದ ಯಾವುದೇ ಭಾಗದಲ್ಲಿ ಕಂಡಿರದ, ಕೇಳಿರದ ಹೊಸ ಮಹಾಮಂತ್ರವೊಂದನ್ನು ಗಾಂಧೀಜಿ ಈ ಹೋರಾಟದಲ್ಲಿ ಬಳಸಿದರು. ಅದುವೇ ಅಸಹಕಾರ. ಅದರಲ್ಲಿ ಮದ್ದು-ಗುಂಡು, ತುಫಾಕಿಗಳಿರಲಿಲ್ಲ. ಬದಲಾಗಿ ಸತ್ಯ, ಅಹಿಂಸೆ, ತ್ಯಾಗ, ಬಲಿದಾನಗಳಿದ್ದವು.

ಪ್ರಪಂಚದ ಇತಿಹಾಸದಲ್ಲಿ ಭಾರತದ ಸ್ವಾತಂತ್ರ್ಯ ಹೋರಾಟ ಅಪ್ರತಿಮ ಮತ್ತು ಅದ್ವಿತೀಯ. ಮೊಟ್ಟಮೊದಲ ಬಾರಿಗೆ ಮಹಾತ್ಮಾ ಗಾಂಧೀಜಿಯವರು ತಮ್ಮ ಬತ್ತಳಿಕೆಯಿಂದ ಹೊಸ ಬಾಣವೊಂದನ್ನು ಪ್ರಯೋಗಿಸಿದರು. ಅದುವೇ ಸತ್ಯಾಗ್ರಹ.

ಬ್ರಿಟಿಷರು ಐದು ವಿಭಾಗಗಳಲ್ಲಿ ಭಾರತದ ಆಡಳಿತವನ್ನು ವರ್ಗೀಕರಿಸಿದ್ದರು. ಅದರಲ್ಲಿ ಬ್ರಿಟಿಷರ ನೇರ ಆಳ್ವಿಕೆಯ ಹೊಂದಿದ ಮುಂಬಯಿ ಪ್ರಾಂತ್ಯದಲ್ಲಿ ಬೆಳಗಾವಿಯೂ ಸೇರಿತ್ತು. ಮುಂಬಯಿ ಪ್ರಾಂತ್ಯವು ಬೆಳಗಾವಿ, ಬಿಜಾಪೂರ, ಧಾರವಾಡ, ಉತ್ತರ ಕನ್ನಡ ಜಿಲ್ಲೆಗಳನ್ನು ಒಳಗೊಂಡಿತ್ತು.

ಕುಂದರನಾಡಿನಲ್ಲಿನ ಸ್ವಾತಂತ್ರ್ಯ ಯೋಧರ ಮಾಹಿತಿಗಳನ್ನು ಕಲೆ ಹಾಕುವುದು, ಅವರನ್ನು ಗುರುತಿಸುವುದು, ಅಲ್ಲಿ ನಡೆದಿರುವ ಒಟ್ಟು ಘಟನೆಗಳನ್ನು ಕ್ರೋಢೀಕರಿಸುವುದು, ಸ್ವಾತಂತ್ರ್ಯ ಚಳುವಳಿಯ ಕಾರಣಗಳನ್ನು ಹುಡುಕುವುದು ಮತ್ತು ಅದರ ಸ್ವರೂಪ, ಪರಿಣಾಮಗಳನ್ನು ವಿಶ್ಲೇಷಿಸುವ ಪ್ರಮುಖ ಉದ್ದೇಶಗಳನ್ನು ಈ ಅಧ್ಯಯನ ಪೂರೈಸಿದೆ. ಕುಮರಿ ಆಶ್ರಮದ ಕುರಿತು ವಿವರಗಳನ್ನು ಶೋಧಿಸಿ ಕ್ರಮಬದ್ಧವಾಗಿ ಅಧ್ಯಯನ ಮಾಡಿರುವುದು ವಿಶೇಷತೆಯಾಗಿದೆ.

ಕಾಕಿನಾಡದಲ್ಲಿ ೨೩ನೇ ಕಾಂಗ್ರೆಸ್ ಅಧಿವೇಶನವು ಮೌಲಾನಾ ಮಹ್ಮದ ಅಲಿ ಅವರ ಅಧ್ಯಕ್ಷತೆಯಲ್ಲಿ ಜರುಗಿತು. ಈ ಅಧಿವೇಶನದಲ್ಲಿ ೨೪ನೇ ಕಾಂಗ್ರೆಸ್ ಅಧಿವೇಶನವು ಕರ್ನಾಟಕದಲ್ಲಿಯೇ ಆಗಬೇಕೆಂದು ಘೋಷಿಸಲಾಯಿತು. ಕರ್ನಾಟಕ ಅಧಿವೇಶನಕ್ಕೆ ಪೂರ್ವಭಾವಿಯಾಗಿ ಹುಬ್ಬಳ್ಳಿಯಲ್ಲಿ ಪ್ರಾಂತೀಯ ಸಭೆ ಕರೆಯಲಾಯಿತು. ವಿಜಯಪೂರ, ಧಾರವಾಡ, ಮಂಗಳೂರ ಹಾಗೂ ಬೆಳಗಾವಿಯ

ಹೆಸರುಗಳು ಸಭೆಯಲ್ಲಿ ಪ್ರಸ್ತಾಪಗೊಂಡವು. ಆಗ ಹುದಲಿಯ ಗಂಗಾಧರರಾವ ದೇಶಪಾಂಡೆಯವರು ಎದ್ದು ನಿಂತು ಈಗಾಗಲೇ ವಾಣಿಜ್ಯೋದ್ಯಮಿಗಳಿಂದ ಅಧಿವೇಶನಕ್ಕಾಗಿ ಮೂವತ್ತು ಸಾವಿರ (೩೦,೦೦೦-) ರೂ.ಗಳ ಲಿಖಿತ ವಾಗ್ದಾನವನ್ನು ಪಡೆದುಕೊಂಡಿದ್ದು, ಇನ್ನುಳಿದ ಎಲ್ಲ ವ್ಯವಸ್ಥೆಗೆ ಕಾರ್ಯಕರ್ತರು ಸದಾ ಸಿದ್ಧರಾಗಿದ್ದು, ಅಧಿವೇಶನವು ಬೆಳಗಾವಿಯಲ್ಲಿ ಆಗಬೇಕೆಂದು ಇಚ್ಛಿಸಿದಾಗ, ಎಲ್ಲರೂ ಸರ್ವಾನುಮತದಿಂದ ಒಪ್ಪಿಗೆ ನೀಡಿದರು.

ಬೆಳಗಾವಿ ಅಧಿವೇಶನಕ್ಕಿಂತ ಮೊದಲು ದೆಹಲಿಯಲ್ಲಿ 'ಐಕ್ಯತಾ ಸಮ್ಮೇಳನ' ನಡೆಸಿ ಕಾಂಗ್ರೆಸಿನಲ್ಲಿಯ ಭಿನ್ನಮತವನ್ನು ನಿವರಿಸಲು ನೇಕಾರರು ಪ್ರಯತ್ನಿಸಿದರು. ಗಂಗಾಧರರಾಯರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಪಕ್ಷದ ಭಿನ್ನಮತವು ಗಾಂಧೀಜಿಯವರನ್ನು ಹೊರತುಪಡಿಸಿ ಯಾರಿಗೂ ಬಗೆ ಹರಿಸಲಾರದಷ್ಟು ಬಿಗಡಾಯಿಸಿತ್ತು. ನಂತರ ಅಹಮದಾಬಾದನಲ್ಲಿ 'ಅಖಿಲ ಭಾರತ ಚರಕಾ ಸಂಘ'ದ ಸಭೆಯಾದಾಗ ಅಲ್ಲಿ ಗಂಗಾಧರರಾವ ದೇಶಪಾಂಡೆಯವರು ಗಾಂಧೀಜಿಯವರನ್ನು ಬೆಳಗಾವಿ ಅಧಿವೇಶನಕ್ಕೆ ಅಧ್ಯಕ್ಷರಾಗಬೇಕೆಂದು ಕೇಳಿಕೊಂಡರು. ಇತರ ಪ್ರಾಂತೀಯ ಕಾಂಗ್ರೆಸಿಗರೂ ಗಾಂಧೀಜಿಯವರು ಅಧ್ಯಕ್ಷರಾಗಬೇಕೆಂದು ನಿರ್ಣಯಿಸಿದರು. ಆದರೆ ಗಾಂಧೀಜಿಯವರು ತಿರಸ್ಕರಿಸಿದರು. ಮುಂಬಯಿ ಸರ್ವಪಕ್ಷೀಯ ಸಮ್ಮೇಳನದಲ್ಲಿ ಗಾಂಧೀಜಿಯವರೇ ಅಧ್ಯಕ್ಷರಾಗಬೇಕೆಂದು ಸೂಚಿಸಿದಾಗ ಗಾಂಧೀಜಿಯವರು ಒಪ್ಪಿಕೊಂಡರು. ಗಾಂಧೀಜಿಯವರು ಜೀವನದಲ್ಲಿ ಒಮ್ಮೆ ಮಾತ್ರ ಅಧ್ಯಕ್ಷರಾದದ್ದು ಅದು ಬೆಳಗಾವಿಯಲ್ಲಿ. ೧೯೨೪ರ ಡಿಸೆಂಬರ ೨೬, ೨೭, ೨೮ ರಂದು ಬೆಳಗಾವಿಯಲ್ಲಿ ಕಾಂಗ್ರೆಸ್ ಅಧಿವೇಶನವು ಜರುಗಿತು. ಇದು ಕುಂದರನಾಡಿನ ಸ್ವಾತಂತ್ರ್ಯ ಚಳುವಳಿಗೆ ಹೊಸತೊಂದು ದಿಕ್ಕನ್ನು ತೋರಿಸಿತು. ಸ್ವಾತಂತ್ರ್ಯ ಚಳುವಳಿಗೆ ಈ ಅಧಿವೇಶನವು ಭದ್ರಬುನಾದಿಯ ಅಡಿಪಾಯ ಹಾಕಿಕೊಟ್ಟಿತು. ಇದು ಕಿತ್ತೂರಿನ ರಾಣಿ ಚನ್ನಮ್ಮ ಬ್ರಿಟಿಷರ ವಿರುದ್ಧ ಯುದ್ಧ ಗೆದ್ದ ೧೦೦ನೇ ವರ್ಷವಾಗಿತ್ತು. ಅದರ ವಿಜಯೋತ್ಸವದಂತೆ ಇದು ಕಂಡು ಬಂದಿತು.

ಬೆಳಗಾವಿ ಜಿಲ್ಲೆಯಲ್ಲಿ ಈ ಅಧಿವೇಶನಕ್ಕಿಂತ ಮೊದಲೇ ಚಳುವಳಿಯು ಕ್ರೀಯಾಶೀಲವಾಗಿತ್ತು. ಯಾವಾಗ ಹುದಲಿಯ ಗಂಗಾಧರರಾವ ದೇಶಪಾಂಡೆಯವರು ಅಖಿಲ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದ ಸಿದ್ಧತೆಯನ್ನು ಬೆಳಗಾವಿಯಲ್ಲಿ ಪ್ರಾರಂಭಿಸಿದರೋ ಆಗ ರಾಷ್ಟ್ರದ ನಕ್ಷೆಯಲ್ಲಿ ಬೆಳಗಾವಿಯನ್ನು ಗುರುತಿಸುವಂತಾಯಿತು. ಒಂದು ವೇಳೆ ಈ ಅಧಿವೇಶನವು ಬೆಳಗಾವಿಯಲ್ಲಿ ಜರುಗದೆ ಇದ್ದಿದ್ದರೆ, ಕುಂದರನಾಡಿನ ಚಳುವಳಿಯ ವೇದಿಕೆ ಸಿದ್ಧವಾಗುವುದು ಕಠಿಣವಾಗುತ್ತಿತ್ತು. ಇದರಲ್ಲಿ ವಲ್ಲಭಭಾಯಿ ಪಟೇಲ, ಬಾಬು ರಾಜೇಂದ್ರ ಪ್ರಸಾದ, ರಾಜಗೋಪಾಲಚಾರ್ಯ, ಸರೋಜಿನ ನಾಯ್ಡು, ಜವಾಹರಲಾಲ ನೆಹರು, ಮೌಲಾನಾ ಶೌಕತ ಅಲಿ, ಮೋತಿಲಾಲ ನೆಹರು, ಚಿತ್ತರಂಜನ ದಾಸ, ಲಾಲಾ ಲಜಪತಿರಾಯ ಮುಂತಾದ ಅಸಂಖ್ಯಾತ ರಾಷ್ಟ್ರೀಯ ನಾಯಕರು ಪಾಲ್ಗೊಂಡಿದ್ದರು. ಈ ಎಲ್ಲ ನಾಯಕರನ್ನು ಕುಂದರನಾಡಿನ ಜನ ಬಹಳ ಹತ್ತಿರದಿಂದ ನೋಡಿದರು.

ಕುಂದರನಾಡಿನ ಗ್ರಾಮವಾದ ಹುದಲಿಯು ಗಂಗಾಧರರಾವ ದೇಶಪಾಂಡೆಯವರ ಜನ್ಮಭೂಮಿ ಮತ್ತು ಕರ್ಮಭೂಮಿ. ಹೀಗಾಗಿ ಬೆಳಗಾವಿ ಜಿಲ್ಲೆಯಲ್ಲಿ ಹೋರಾಟದ ಕೇಂದ್ರ ಸ್ಥಾನವಾಗಿ ಮಾರ್ಪಟ್ಟಿತ್ತು. ಹುದಲಿ ಗ್ರಾಮ ಮತ್ತು ಕುಂದರನಾಡಿನಲ್ಲಿ ಜರುಗಿದ ಪ್ರಮುಖ ಘಟನೆಗಳು ಇಂತಿವೆ.

೧. ಹುದಲಿ ಮತ್ತು ಪಾಶ್ಚಾಪೂರಗಳಲ್ಲಿ ಖಾದಿ ಉತ್ಪಾದನಾ ಕೇಂದ್ರ ಸ್ಥಾಪನೆ.

೨. ಹುದಲಿಯಲ್ಲಿ ಖಾದಿ ಉತ್ಪಾದನೆಯ (ಟ್ರೇನಿಂಗ) ಕಾರ್ಯಾಗಾರವನ್ನು ಪ್ರಾರಂಭಿಸಲಾಯಿತು.

೩. ಹುದಲಿ ಪಾಶ್ಚಾಪೂರ ಮತ್ತು ಅಕ್ಕತಂಗೇರಹಾಳ ಗ್ರಾಮಗಳಲ್ಲಿ ರಾಷ್ಟ್ರೀಯ ಶಾಲೆಗಳನ್ನು ಪ್ರಾರಂಭಿಸಲಾಯಿತು.

೪. ಹುದಲಿಯಲ್ಲಿ ಗಂಗಾಧರರಾವ ದೇಶಪಾಂಡೆಯವರು ತಮ್ಮ ತೋಟದಲ್ಲಿ ಕುಮರಿ ಆಶ್ರಮವನ್ನು ಸ್ಥಾಪಿಸಿದರು. ಇದು ರಾಷ್ಟ್ರದ ಆರು ಆಶ್ರಮಗಳಲ್ಲಿ ಒಂದಾಗಿತ್ತು.

೫. ೧೯೩೭ರ ಎಪ್ರಿಲ್ ತಿಂಗಳಲ್ಲಿ ಹುದಲಿಯಲ್ಲಿ 'ಅಖಿಲ ಭಾರತ ಗಾಂಧೀ ಸೇವಾ ಸಂಘ'ದ ಸಮ್ಮೇಳನವನ್ನು ನಡೆಸಿದರು. ಇದರಲ್ಲಿ ಹಲವಾರು ರಾಷ್ಟ್ರೀಯ ನಾಯಕರು ಪಾಲ್ಗೊಂಡಿದ್ದರು. ಗಾಂಧೀಜಿಯವರು ಹುದಲಿಯಲ್ಲಿ ಏಳು ದಿನ ಇದ್ದರು.

೬. ರಾಷ್ಟ್ರೀಯ ವಿವಾಹ (ಧ್ವಜದ ಆಶ್ರಯ) ಅಡಿಯಲ್ಲಿ ಈ ಪದ್ಧತಿಯನ್ನು ಮೊದಲ ಬಾರಿಗೆ ಪ್ರಾರಂಭಿಸಿದರು.

ಗಂಗಾಧರರಾವ್ ದೇಶಪಾಂಡೆಯವರು ಹುದಲಿ ಸಮೀಪವಿರುವ ತಮ್ಮ ಮಾಲ್ಕಿ ಹನ್ನೆರಡು ಎಕರೆ ಜಮೀನನ್ನು ಸ್ವಾತಂತ್ರ್ಯ ಚಟುವಟಿಕೆಗಾಗಿ ದಾನ ಕೊಟ್ಟರಲ್ಲದೇ ಕುಮರಿ ಆಶ್ರಮವನ್ನು ನಿರ್ಮಿಸಿ ಗ್ರಾಮೋದ್ಯೋಗ ಮತ್ತು ರಾಷ್ಟ್ರೀಯ ಶಾಲೆಗಳನ್ನು ಅಲ್ಲಿ ಪ್ರಾರಂಭಿಸಿ ಈ ಭಾಗದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸ್ಫೂರ್ತಿಯಾದರು.

'ಖಾದಿಯೇ ಸ್ವರ್ಗದ ಹಾದಿ' ಎಂದು ಗಾಂಧೀಜಿ ಸಾರಿದರು. ಚರಕಾ ಗಾಂಧೀಜಿಗೆ ಬರೀ ಒಂದು ಖಾದಿ ಉದ್ಧಿಮೆಯ ಸಲಕರಣೆಯಾಗಿರಲಿಲ್ಲ. ಅದು ಬ್ರಿಟಿಷರಿಂದ ಸ್ವಾತಂತ್ರ್ಯವನ್ನು ಪಡೆಯುವ ಒಂದು ಪ್ರಭಲವಾದ ಅಸ್ತ್ರವಾಗಿತ್ತು. 'ಚರಕಾ ಚಲಾಕೆ ಚಲಾಕೆ ಹಮ್ ಸ್ವರಾಜ್ಯ ಲೇಂಗೆ' ಎಂದು ಗಾಂಧೀಜಿ ಹೇಳುತ್ತಿದ್ದರು. ಇವರ ಹೇಳಿಕೆಯನ್ನು ಸ್ವಾತಂತ್ರ್ಯ ಹೋರಾಟಗಾರರೆಲ್ಲರೂ ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದರು. ಕುಂದರನಾಡಿನ ಸುತ್ತಮುತ್ತ ಚಳುವಳಿಗಾರರು ಗ್ರಾಮೋದ್ಯೋಗ ಮತ್ತು ಖಾದಿ ಉದ್ಧಿಮೆ ಬಗ್ಗೆ ಜನರಲ್ಲಿ ತಿಳುವಳಿಕೆಯನ್ನು ಉಂಟು ಮಾಡಿದರು. ಹುದಲಿಯಲ್ಲಿ ಗಾಂಧೀ ಸೇವಾ ಆಶ್ರಯದಲ್ಲಿ ಖಾದಿ ಕೇಂದ್ರವನ್ನು ತೆರೆದು ನೂರಾರು ಗ್ರಾಮೀಣ ಬಡ ಮಹಿಳೆಯರಿಗೆ ಸ್ವಾವಲಂಬನದ ಜೀವನವನ್ನು ನಡೆಸಲು ನೆರವಾದರು.

ಕುಂದರನಾಡಿನ ಸ್ವಾತಂತ್ರ್ಯ ಹೋರಾಟಗಾರರು ತಮ್ಮ ಮನೆಮಾರುಗಳನ್ನು ತೊರೆದು ಗಾಂಧೀಜಿಯ ಕರೆಯ ಮೇರೆಗೆ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದರು. ಅವರಿಗೆ ಹಗಲು

ರಾತ್ರಿ ಬರೀ ಭಾರತದ ಸ್ವಾತಂತ್ರ್ಯದ ಕನಸು. ಬದುಕಿನ ಅಮೂಲ್ಯ ಕ್ಷಣಗಳನ್ನು ದೇಶದ ಸ್ವಾತಂತ್ರ್ಯಕ್ಕಾಗಿ ಮೀಸಲಿಟ್ಟರು. ಬ್ರಿಟಿಷ ಸರಕಾರವನ್ನು ಮಣಿಸಲು ಹಲವಾರು ವಿಧ್ವಂಸಕ ಕೃತ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಬ್ರಿಟಿಷರು ವಿಧಿಸುವ ಕಠಿಣ ಶಿಕ್ಷೆಗಳನ್ನು ಅನುಭವಿಸಿದರು. ಪೊಲೀಸರ ಲಾಠಿ ಹೊಡೆತದ ನೋವನ್ನು ನುಂಗಿ ಸಹಿಸಿಕೊಂಡರು. ಅವರ ಗೋಳಿಬಾರಿನಿಂದ ಅನೇಕ ಜನ ಪ್ರಾಣ ತೆತ್ತು ಹುತಾತ್ಮರಾದರು. ಇದಲ್ಲದೆ ಕುಂದರನಾಡಿನಲ್ಲಿ ಮಹಿಳೆಯರು ಕೂಡಾ ಪುರುಷರಂತೆ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದ್ದಾರೆ.

ಈ ಚಳುವಳಿಯ ಇನ್ನೊಂದು ವಿಶೇಷವೆಂದರೆ ಇದು ಉದ್ಯೋಗಯುಕ್ತ ಕ್ರಾಂತಿ. ಕುಂದರನಾಡಿನ ಸ್ವಾತಂತ್ರ್ಯ ಹೋರಾಟಗಾರರು ನಿರುದ್ಯೋಗಿಗಳಲ್ಲ. ಇವರು ರಾಷ್ಟ್ರೀಯ ಶಾಲೆಗಳಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ ತರಬೇತಿಯನ್ನು ಪಡೆದುಕೊಂಡು ಚಳುವಳಿಯಲ್ಲಿ ಧುಮುಕಿದವರು. ಚರಕಾದಿಂದ ನೂಲನ್ನು ತೆಗೆದು ಕೈಮಗ್ಗಗಳ ಮೂಲಕ ಬಟ್ಟೆಯನ್ನು ನೇಯ್ದು ಅದರ ಮಾರಾಟದಿಂದ ಬಂದ ಹಣವನ್ನು ತಮ್ಮ ಚಳುವಳಿಗೆ ಬಳಸಿಕೊಳ್ಳುತ್ತಿದ್ದರು. ಹುದಲಿಯಲ್ಲಿ ಗಂಗಾಧರರಾವ್ ದೇಶಪಾಂಡೆ ಅವರ ಹಿರಿತನದಲ್ಲಿ ಗಾಂಧಿ ಸೇವಾ ಆಶ್ರಮವನ್ನು ಸ್ಥಾಪನೆ ಮಾಡಿದಲ್ಲದೇ ಅಲ್ಲಿ ಖಾದಿ ಉದ್ಯಮದ ತರಬೇತಿಯನ್ನು ನೀಡಲಾಗುತ್ತಿತ್ತು. ರಾಮಚಂದ್ರ ವಡವಿಯವರು ಹುದಲಿ ಗ್ರಾಮದಲ್ಲಿ ಪ್ರಾರಂಭಗೊಂಡ ಖಾದಿ ವಿದ್ಯಾಲಯದ ಶಿಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಜನರಲ್ಲಿ ಖಾದಿ ಅರಿವು ಮೂಡಿಸಿದರು. ಖಾದಿ ತೊಟ್ಟವರು, ಗಾಂಧಿ ಟೋಪಿಯನ್ನು ಧರಿಸಿಕೊಂಡವರು ಗಾಂಧೀಜಿಯವರ ಅನುಯಾಯಿಗಳು ಆಗಿದ್ದರೆಂದು ಜನ ಪರಿಗಣಿಸುತ್ತಿತ್ತು.

ಹೀಗೆ ಕುಂದರನಾಡಿನ ಜನರು ಸ್ವಾತಂತ್ರ್ಯಕ್ಕಾಗಿ ಟೊಂಕ ಕಟ್ಟಿ ಹೋರಾಟ ಮಾಡಿದ್ದನ್ನು ಪ್ರಬಂಧದ ಉದ್ದಕ್ಕೂ ವಿವರಿಸಲಾಗಿದೆ. ಗಂಗಾಧರರಾವ್ ದೇಶಪಾಂಡೆ, ರಾಮಚಂದ್ರ ವಡವಿ, ಪುಂಡಲೀಕಜಿ ಕಾತಗಡೆ, ವೆಂಕಟೇಶ ಯಾಳಗಿ, ಬಾಳಾಜಿ ದೇಶಪಾಂಡೆ, ಗಂಗಪ್ಪಾ ಯಮಕನಮರಡಿ, ಸಂಗಮ್ಮಾ ಯಮಕನಮರಡಿ, ಸೋಮಲಿಂಗಪ್ಪಾ ಮಳಗಲಿ, ಭೀಮಣ್ಣಾ ಭೂಸಿ, ಗೌಡಪ್ಪಾ ಪಾಟೀಲ, ಬಸವಣ್ಣೆಪ್ಪಾ ಜಕ್ಕಣ್ಣವರ, ಅಪ್ಪಣ್ಣಾ ಹೂಗಾರ ಹೀಗೆ ನೂರಾರು ಜನರು ಇಲ್ಲಿಯ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿ, ಚಳುವಳಿಯೇ ತಮ್ಮ ಜೀವನದ ಧ್ಯೇಯವೆಂದು ಹೋರಾಟ ಮಾಡಿದ್ದಾರೆ. ಹೀಗೆ ಹೋರಾಟ ಮಾಡಿದ್ದಾರೆ. ಹೀಗೆ ಹೋರಾಟ ಮಾಡಿದ ಎಲ್ಲ ಮಹನೀಯರ ಹೆಸರುಗಳನ್ನು ಅನುಬಂಧದಲ್ಲಿ ಕೊಡಲಾಗಿದೆ.

ಕೆಲವು ಚಳುವಳಿಕಾರರು ಚಳುವಳಿ ಮಾಡುವುದರ ಜೊತೆಗೆ ತಮ್ಮ ಅನುಭವಗಳನ್ನು ಲೇಖನ ಮತ್ತು ಗ್ರಂಥಗಳ ಮೂಲಕ ಬರೆದು ಪ್ರಕಟಿಸಿದ್ದಾರೆ. ವಿಶೇಷವಾಗಿ ಗಂಗಾಧರರಾವ್ ದೇಶಪಾಂಡೆ, ಪುಂಡಲಿಕಜೀ ಕಾತಗಡೆ, ರಾಮಚಂದ್ರ ವಡವಿ, ಅಣ್ಣೂ ಗುರೂಜಿ ಮುಂತಾದವರು ಕೃತಿಗಳನ್ನು ರಚಿಸಿದ್ದಾರೆ.

ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿ ಪ್ರಾಣವನ್ನು ಮಾತೃ ಭೂಮಿಗೆ ಸಮರ್ಪಿಸಿದ ನೂರಾರು ಹುತಾತ್ಮರು ಹೇಳ ಹೆಸರಿಲ್ಲದಂತೆ ಮರೆಯಾಗಿ ಹೋಗಿದ್ದಾರೆ. ಸ್ವಾತಂತ್ರ್ಯದ ಉಸಿರನ್ನೇ ಉಸಿರಾಡಿಸಿದ ಈ ಮಹನೀಯರನ್ನು ಅಧ್ಯಯನ ಮಾಡುವುದು ಇಂದಿನ ಅಗತ್ಯವೂ ಹೌದು.

ಕುಂದರನಾಡಿನ ಸ್ವಾತಂತ್ರ್ಯ ಚಳುವಳಿ ದೇಶದ ಇತರೆಡೆಯ ಚಳುವಳಿಗಿಂತ ಅನೇಕ ಅಂಶಗಳಲ್ಲಿ ಭಿನ್ನವಾಗಿದ್ದು ಅದರ ಅನನ್ಯತೆಯನ್ನು ೫ನೆಯ ಅಧ್ಯಾಯದಲ್ಲಿ ದಾಖಲಿಸಲಾಗಿದೆ.

**ಹೊಸ ಅಧ್ಯಯನ ಸಾಧ್ಯತೆಗಳು :**

ದೇಶ ಸ್ವಾತಂತ್ರ್ಯದ ೭ ದಶಕಗಳು ಕಳೆದರೂ ಹುದಲಿ ಹಾಗೂ ಅದರ ಸುತ್ತಮುತ್ತಲಿನ ಕುಂದರನಾಡಿನ ಅನೇಕ ಹಳ್ಳಿಗಳಲ್ಲಿ ಇಂದಿಗೂ ದೇಶ ಭಕ್ತಿಯ ಸೆಲೆ ಬತ್ತಿಲ್ಲ. ಹುದಲಿಯ ಖಾದಿ ಗ್ರಾಮೋದ್ಯೋಗ ಕೇಂದ್ರ ಈಗಲೂ ಕಾರ್ಯ ನಿರ್ವಹಿಸುತ್ತಿದೆ. ಸಹಕಾರ ತತ್ವದಡಿಯಲ್ಲಿ ಘಟಪ್ರಭಾದ ಆರೋಗ್ಯಧಾಮ, ಹುಕ್ಕೇರಿ ತಾಲೂಕಾ ವಿದ್ಯುತ್ ಸಹಕಾರಿ ಸಂಘ, ಸಂಕೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ, ಸಂಕೇಶ್ವರ ಸಹಕಾರಿ ಮುದ್ರಣಾಲಯ, ಖಾದಿ ಮತ್ತು ಗ್ರಾಮೋದ್ಯೋಗ ಉತ್ಪಾದಕ ಸಂಘ, ಹುದಲಿ ಬೆಳಗಾವಿ ಜಿಲ್ಲಾ ಸ್ವಾತಂತ್ರ್ಯ ಯೋಧರ ಶೈಕ್ಷಣಿಕ ಸಂಘ, ಬೆಳಗಾವಿ ಜಿಲ್ಲೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವುದಕ್ಕೆ ಕುಂದರನಾಡಿನ ಸ್ವಾತಂತ್ರ್ಯ ಹೋರಾಟದ ಪ್ರೇರಣೆಯಾಗಿದೆ. ಈ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದ ಕುರಿತು ಅಧ್ಯಯನ ಮಾಡುವ ಅಗತ್ಯವಿದೆ. ಈಗಿನ ಬಹಳಷ್ಟು ಕೃತಿಗಳು ಹೋರಾಟಗಾರರನ್ನು ಕೇಂದ್ರಿಕೃತಗೊಳಿಸಿ ರಚಿತಗೊಂಡಿದ್ದು ಹೋರಾಟವನ್ನೇ ಮುಖ್ಯವಾಗಿಟ್ಟುಕೊಂಡು ಅಧ್ಯಯನ ಮಾಡಬೇಕಿದೆ. ಹುದಲಿ ಕುರಿತು ವಿಶೇಷ ಅಧ್ಯಯನದ ಅಗತ್ಯವಿದೆ. ಜಿಲ್ಲೆಯ ಸೃಜನ ಸಾಹಿತ್ಯ ಹಾಗೂ ಸ್ವಾತಂತ್ರ್ಯವೀರ ಕೃತಿಗಳನ್ನು ಆಕರವಾಗಿಟ್ಟುಕೊಂಡು ಮತ್ತೊಂದು ನಿಟ್ಟಿನ ಅಧ್ಯಯನ ಮಾಡಬಹುದಾಗಿದೆ.

**ಫಲಿತಗಳು :**

೧) ಸ್ವಾತಂತ್ರ್ಯ ಆಂದೋಲನ ದೇಶದಾದ್ಯಂತ ವ್ಯಾಪಿಸಿಕೊಂಡಿದ್ದರು ಕುಂದರನಾಡಿನ ಹೋರಾಟದ ಚರಿತ್ರೆ ವಿಭಿನ್ನ ಹಾಗೂ ವಿಶಿಷ್ಟವಾಗಿರುವುದನ್ನು ಈ ಮಹಾಪ್ರಬಂಧದಲ್ಲಿ ಗುರುತಿಸಲಾಗಿದೆ.

೨) ಕುಂದರನಾಡಿನ ಮುಕ್ಕಾಲು ಭಾಗ ಜನ ಸಮುದಾಹವೇ ಸ್ವಾತಂತ್ರ್ಯ ಆಂದೋಲನದಲ್ಲಿ ತೊಡಗಿಸಿಕೊಂಡಿರುವುದು ವಿಶೇಷ. ಇವರಲ್ಲಿ ರೈತರು, ಕೂಲಿಕಾರ್ಮಿಕರು, ಸಾಂಪ್ರದಾಯಿಕ ಕೃಷಿ ಸಂಬಂಧಿತ ಕುಶಲ ಕಾರ್ಮಿಕರು, ಬೇಡರು, ಪಶುಪಾಲಕರು ಹೀಗೆ ಅನೇಕರು ಪ್ರತ್ಯಕ್ಷವಾಗಿ ಹೋರಾಟದಲ್ಲಿ ತೊಡಗಿದ್ದರು.

೩) ಈ ಪರಿಸರದ ಹೋರಾಟಗಾರರು ತಮ್ಮ ಪ್ರಾಮಾನಿಕತೆ, ತ್ಯಾಗ ಮತ್ತು ಪರಿಶ್ರಮಗಳಿಂದ ಮಹಾತ್ಮಾ ಗಾಂಧೀಜಿಯವರಿಗೆ ತುಂಬಾ ನಿಕಟವಾಗಿದ್ದರು. ಗಂಗಾಧರರಾವ ದೇಶಪಾಂಡೆ,

ಅಣ್ಣೂ ಗುರೂಜಿ (ಬಾ. ಯಾ. ದೇಶಪಾಂಡೆ), ಚನ್ನಬಸಪ್ಪ ವಾಲಿ, ಪಡಕಿ ಮೊದಲಾದವರು ಜಿಲ್ಲೆಯ ಆಂದೋಲನದ ಪ್ರಮುಖ ಸೇನಾನಿಗಳಾಗಿದ್ದರು.

೪) ಬೆಳಗಾವಿಯಲ್ಲಿ ಜರುಗಿದ ೧೯೨೪ ರ ಕಾಂಗ್ರೆಸ್ ಅಧಿವೇಶನಕ್ಕೆ ಕಾರ್ಯಕರ್ತರು ಹಾಗೂ ಅದರ ಸಂಯೋಜಕರು ಕುಂದರನಾಡಿನ ಸ್ವಾತಂತ್ರ್ಯ ಹೋರಾಟಗಾರರೆಂಬುದು ಗಮನಾರ್ಹವಾದುದು. ಈ ಅಧಿವೇಶನದ ಸಂಯೋಜನೆಯ ನಾಯಕತ್ವ ವಹಿಸಿದ ಗಂಗಾಧರರಾವ ದೇಶಪಾಂಡೆ ಹುದಲಿಯವರು.

೫) ಹುದಲಿ ಇಂದಿಗೂ ಗಾಂಧಿ ಗ್ರಾಮವೆಂದು ಈ ಪರಿಸರದಲ್ಲಿ ಪ್ರಸಿದ್ಧಿ ಪಡೆದಿದೆ. ಈಗಲೂ ಇಲ್ಲಿ ಗಾಂಧೀಜಿಯವರ ದಟ್ಟ ಪ್ರಭಾವ ಕಾಣುತ್ತದೆ. ಖಾದಿ ಕೇಂದ್ರವಾಗಿರುವ ಹುದಲಿಯಲ್ಲಿ ಕುಮರಿ ಆಶ್ರಮವಿದ್ದು ಅದು ದೇಶದಲ್ಲಿಯ ೭ ಆಶ್ರಮಗಳಲ್ಲಿ ಒಂದಾಗಿದೆ.

೬) ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದಲ್ಲಿ ಕುಂದರನಾಡು ವಹಿಸಿದ ಪಾತ್ರ ಚರಿತ್ರೆಯಲ್ಲಿಯ ಅಪೂರ್ವ ದಾಖಲೆ. ಜಿಲ್ಲೆಯ ಒಟ್ಟು ಹೋರಾಟಗಾರರಲ್ಲಿ ಮುಕ್ಕಾಲು ಪಾಲು ಜನರು ಕುಂದರನಾಡಿನವರು. ಅದರಲ್ಲಿಯ ೧೦೦ ಕ್ಕೂ ಹೆಚ್ಚು ಹೋರಾಟಗಾರರು ಹುದಲಿಯವರು. ಇಂದು ಬೆಳಗಾವಿ ತಾಲೂಕಿನಲ್ಲಿರುವ ಹುದಲಿ ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದ ಕೇಂದ್ರವಾಗಿತ್ತು. ಅಲ್ಲಿ ಮನೆಗೊಬ್ಬ ಸ್ವಾತಂತ್ರ್ಯ ಯೋಧರು ಸಿಗುತ್ತಾರೆ.

೭) ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗಂಗಪ್ಪ ಮುದ್ದಪ್ಪ ಮಾಳಗಿ ಹೇಳಿದ ಈ ಮಾತು. ಹುದಲಿಯ ದೇಶಪ್ರೇಮಕ್ಕೆ ಸಾಕ್ಷಿಯಾಗುತ್ತದೆ. ೧೯೭೫ ರಲ್ಲಿ ಅಂದಿನ ಪ್ರಧಾನಿ ಇಂದಿರಾ ಗಾಂಧಿಯವರು ಸ್ವಾತಂತ್ರ್ಯ ಹೋರಾಟಗಾರರನ್ನು ಗೌರವಿಸಿ ತಾಮ್ರಪಟ ನೀಡಿದ ಸಂದರ್ಭದಲ್ಲಿ ಬೆಳಗಾವಿ ಜಿಲ್ಲೆಯ ಅರ್ಧದಷ್ಟು ಹೋರಾಟಗಾರರು ಹುದಲಿಯವರಾಗಿದ್ದರು.

೮) ೧೯೨೪ ಡಿಸೆಂಬರ್ ೨೪, ೨೫, ೨೬ ರಂದು ಬೆಳಗಾವಿಯಲ್ಲಿ ಮಹಾತ್ಮಾ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಜರುಗಿದ ಐತಿಹಾಸಿಕ ಕಾಂಗ್ರೆಸ್ ಅಧಿವೇಶನವನ್ನು ಸಂಘಟಿಸಿದವರು ಕುಂದರನಾಡಿನವರು. ಹುದಲಿಯ ಗಂಗಾಧರರಾವ ದೇಶಪಾಂಡೆ ಈ ಅಧಿವೇಶನ ಸಂಘಟನೆಯ ಮಂಚೂಣಿ ನಾಯಕರಾಗಿದ್ದರು. ಗಾಂಧೀಜಿಯವರು ಪ್ರಭಾವ ಕುಂದರನಾಡಿನ ತುಂಬಾ ಪೂಜಿಸಿ ತಳವರ್ಗದವರಿಂದ ಮೊದಲುಗೊಂಡು ಮೇಲ್ವರ್ಗದವ ಎಲ್ಲ ಸಮುದಾಯವರು ಚಳುವಳಿಗೆ ಬೆಂಬಲಿಸಿದವರು.

೯) ಕಾಂಗ್ರೆಸಿನಲ್ಲಿದ್ದ ಇಬ್ಬಣಗಳ ವಿವಾದವನ್ನು ಪರಿಹರಿಸುವುದರಲ್ಲಿ ಹುದಲಿ ಪ್ರಮುಖ ಪಾತ್ರವನ್ನು ವಹಿಸಿತು. ಗಂಗಾಧರ ದೇಶಪಾಂಡೆಯವರು ಟಿಳಕರ ಅನುಯಾಯಿಗಳಾಗಿದ್ದರು. ಪೈಸಾ ಫಂಡ, ಕೂಡಿಸಿ ಪುಣೆ ಹತ್ತಿರ ತಳೆಗಾಂವದಲ್ಲಿ ಆರಂಭಿಸಿದ ಸ್ವದೇಶಿ ಗಾಜಿನ ಕಾರ್ಖಾನೆ ನಿರ್ಮಾಣಕ್ಕೆ ಕುಂದರನಾಡು ಉದಾರ ನೆರವು ನೀಡಿದ್ದು ಸ್ಮರಣೀಯ. ಟಿಳಕರ ಯುಗವನ್ನು ಜಿಲ್ಲೆಯಲ್ಲಿ ಗಾಂಧಿಯುಗವಾಗಿ ಪರಿವರ್ತಿಸಿದವರು ಗಂಗಾಧರರಾವ ದೇಶಪಾಂಡೆಯವರು.

೧೦) ಕುಮರಿ ಆಶ್ರಮದ ಸ್ಥಾಪನೆ ಕುಂದರನಾಡಿನ ಸ್ವಾತಂತ್ರ್ಯ ಹೋರಾಟದ ಮತ್ತೊಂದು ವೈಶಿಷ್ಟ್ಯವಾಗಿದೆ. ದೇಶದ ೭ ಆಶ್ರಮಗಳಲ್ಲಿ ಕುಮರಿ ಆಶ್ರಮವು ಒಂದು. ಈ ಆಶ್ರಮ ಉಂಟು ಮಾಡಿದ ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ಬದಲಾವಣೆಗಳು ಒಂದು ಪಿಎಚ್.ಡಿ. ಅಧ್ಯಯನಕ್ಕೆ ವಿಷಯವಾಗುತ್ತದೆ. ಜಮನಾಲಾಲ ಖಾದಿ ವಿಶ್ವವಿದ್ಯಾಲಯದ ಸ್ಥಾಪನೆ ಮೂಲಕ ಸಾವಿರಾರು ಕುಟುಂಬಗಳ ಆರ್ಥಿಕ ಸ್ವಾವಲಂಬನೆ ಯುಗ ಆರಂಭವಾಯಿತು. ಇದನ್ನು ಆರಂಭಿಸಿದ ಪುಂಡಲಿಕಜೀ ಕಾತಗಡೆ ಮೂಲತಃ ಮಿರಜವರಾಗಿದ್ದರು. ಹುದಲಿಯಲ್ಲಿಯ ನಿಂತು ಹುದಲಿಯವರೆ ಆದರು.

೧೧) ರಾಷ್ಟ್ರೀಯ ಶಾಲೆಗಳ ಆರಂಭ : ಹೋರಾಟಗಾರರು ಆರಂಭಿಸಿದ ರಾಷ್ಟ್ರೀಯ ಶಾಲೆಗಳು ಕುಂದರನಾಡಿನ ಶೈಕ್ಷಣಿಕ ಕ್ಷೇತ್ರದ ಹೊಸ ನಕ್ಷೆಯನ್ನು ರೂಪಿಸಿದವು.

೧೨) ಕುಂದರನಾಡು ಗುಡ್ಡ-ಗಾಡುಗಳ ಪ್ರದೇಶವಾಗಿರುವುದರಿಂದ ಅಲ್ಲಿ ಹೆಚ್ಚು ಬೇಡರು ವಾಸಿಸುತ್ತಾರೆ. ಕಳ್ಳತನ, ಬಟ್ಟಿ ಸಾರಾಯಿ, ಕಾಡು ಕಡಿದು ಇದ್ದಿಲು ತಯಾರಿಸುವ ಮೊದಲಾದ ಅನೀತಿ ಮಾರ್ಗಗಳಿಂದ ಬದುಕುತ್ತಿದ್ದ. ಅವರಿಗೆ ಬದುಕಿನ ಹೊಸ ಮಾರ್ಗವನ್ನು ಶೋಧಿಸಿ ಸಮಾಜದ ಮುಖ್ಯವಾಹಿನಿಗೆ ಕರೆತಂದ ಶ್ರೇಯಸ್ಸು ಕುಂದರನಾಡಿನ ಹೋರಾಟಗಾರರಿಗೆ ಸಲ್ಲುತ್ತದೆ.

೧೩) ಇಂದಿಗೂ ಹುದಲಿ ಖಾದಿ ಗ್ರಾಮೋದ್ಯೋಗ ಅತ್ಯಂತ ಪ್ರಮುಖವಾದ ಕೇಂದ್ರವಾಗಿದೆ. ಜೊತೆಗೆ ಜಿಲ್ಲೆಯಲ್ಲಿ ಗಾಂಧಿ ಗ್ರಾಮವೆಂದು ಹೆಸರು ಪಡೆದಿದೆ. ೧೯೩೭ರಲ್ಲಿ ಗಾಂಧಿ ಸೇವಾ ಸಮ್ಮೇಳನ ನಡೆದಾಗ ಗಾಂಧೀಜಿ ಇಲ್ಲಿ ೭ ದಿನ ತಂಗಿದ್ದರು. ದೇಶದ ಅಂದಿನ ಪ್ರಮುಖ ನಾಯಕರೆಲ್ಲರು ಹುದಲಿಗೆ ಬಂದಿದ್ದರು. ಹುದಲಿಯ ದೇಶಪ್ರೇಮ ದೇಶಕ್ಕೆ ಮಾದರಿಯಾಗಿದೆ. ಭೀಮಪ್ಪ ನಿಂಗಪ್ಪ ಭೂಶಿ ಎಂಬ ಸ್ವಾತಂತ್ರ್ಯಯೋಧರು ಇದೇ ವರ್ಷ ಪೆಬ್ರುವರಿಯಲ್ಲಿ ನಿಧನರಾದರು. ಅವರು ದಿನನಿತ್ಯ ಅಲ್ಲಿಯ ಗಾಂಧೀಜಿ ಪ್ರತಿಮೆಗೆ ತಪ್ಪದೆ ಪೂಜಿಸುತ್ತಿದ್ದರು. ಕೊನೆಯ ದಿನಗಳಲ್ಲಿ ಮಾನಸಿಕ ಸ್ಥಿತಿ ಕಳೆದುಕೊಂಡಾಗಲು ಗಾಂಧೀಜಿಯವರ ಪೂಜೆಯನ್ನು ನಿಲ್ಲಸದಿರುವುದನ್ನು ಕಂಡು ಗ್ರಾಮಸ್ಥರಿಗೆ ಆಶ್ಚರ್ಯವಾಯಿತು. ಗಾಂಧೀಜಿಯವರ ಭಾವಚಿತ್ರವನ್ನು ನೋಡುತ್ತಲೆ ಕೊನೆಯುಸಿರೆಳೆದರು. ಇದು ಕುಂದರನಾಡಿನ ಸ್ವಾತಂತ್ರ್ಯ ಹೋರಾಟದ ಅನನ್ಯ ಚಿತ್ರವೆಂದು ಹೇಳಬಹುದು.

೧೪) ಕುಂದರನಾಡಿನ ಸ್ವಾತಂತ್ರ್ಯ ಹೋರಾಟ ಟಪಾಲ ಲೂಟಿ, ತೆರಿಗೆ ಹಣ ದೊಚುವುದು, ರೈಲ್ವೆ ನಿಲ್ದಾಣಕ್ಕೆ ಬೆಂಕಿ ಹಚ್ಚುವುದು, ರೈಲ್ವೆ ಕಂಬಿ ಕಿಳುವುದು, ಸಿಂದಿ ಮರಗಳನ್ನು ಕಡಿಯುವುದು, ಮಧ್ಯ ದಂಗಡಿಗಳನ್ನು ಧ್ವಂಸಗೊಳಿಸುವುದು. ಮೊದಲಾದ ಆಂಗ್ಲ ಆಡಳಿತ ಯಂತ್ರವನ್ನು ನಿಷ್ಕೀಯಗೊಳಿಸುವ ವಿಧ್ವಂಸಕ ಕೃತ್ಯಗಳಿಗೆ ಮಾತ್ರ ಸೀಮಿತವಾಗಿರಲಿಲ್ಲ. ಖಾದಿಧಾರಗೆ ಖಾದಿ ಗ್ರಾಮೋದ್ಯೋಗ ರಾಷ್ಟ್ರೀಯ ಶಿಕ್ಷಣ, ಜಾತ್ಯಾತೀತ ಧೋರಣೆಗಳ ಅನುಷ್ಠಾನ, ಧರ್ಮ ಸಾಮರಸ್ಯ, ಅಂತರಜಾತಿ ವಿವಾಹ, ಸಾಮೂಹಿಕ ಭೋಜನ ಮುಂತಾದ ಗಾಂಧಿ ಧೋರಣೆಗಳ ಅನುಷ್ಠಾನದಿಂದ ದೇಶದ ಗಮನ ಸೆಳೆಯಿತು.

೧೫) ರಾಷ್ಟ್ರೀಯ ವಿವಾಹ ಅಲಿಸಾಹೇಬ ಹುಸೇನಸಾಬ :

ಹುದಲಿಯ ಕುಮರಿ ಆಶ್ರಮದಲ್ಲಿ ದೇಶದ ಮೊದಲನೆಯ ರಾಷ್ಟ್ರೀಯ ವಿವಾಹ ಜರುಗಿತು. ಹುದಲಿಯ ಅಲಿಸಾಹೇಬ ಹುಸೇನಸಾಬ ವಾರಿಮನಿ ರಾಷ್ಟ್ರ ಧ್ವಜದ ಕೆಳಗೆ ರಾಷ್ಟ್ರೀಯತೆಯ ಹಸೆಮನೆಯ ಮೇಲೆ ಸತ್ಯಾಗ್ರಹದ ದೀಕ್ಷೆ ಸ್ವೀಕರಿಸುವ ಮೂಲಕ ತಮ್ಮ ಬಾಳ ಸಂಗಾತಿಯ ಮದುವೆಯಾಗುತ್ತಾರೆ. ಆ ವಿವಾಹಕ್ಕೆ ಇಸ್ಲಾಂ ಧರ್ಮದ ಬುರ್ಖಾ ಪದ್ಧತಿ ಇರಲಿಲ್ಲ. ಅವರು ತಮ್ಮೊಂದಿಗೆ ಚಳುವಳಿಗೆ ಧುಮುಕುವ ಮನಸ್ಥಿತಿಯ ಕನ್ಯೆ ಸಿಗುವವರೆಗೂ ಮದುವೆಯಾಗಬಾರದೆಂದು ಪ್ರತಿಜ್ಞೆ ಮಾಡಿದ್ದರು.

ಸ್ವಾತಂತ್ರ್ಯ ನಂತರದ ವಿವಿಧ ಕಾಲಘಟ್ಟಗಳಲ್ಲಿ ಈ ಪ್ರದೇಶವು ಅನನ್ಯತೆಗಳನ್ನು ದರ್ಶಿಸುತ್ತಲೇ ಬಂದಿದೆ. ಅದು ಮತ್ತೊಂದು ಮಹತ್ವದ ಅಧ್ಯಯನಕ್ಕೆ ವಸ್ತುವಾಗಬಲ್ಲದು. ಈ ಕುರಿತು ಅಧ್ಯಯನ ಕೈಕೊಳ್ಳುವವರಿಗೆ ವಿಪುಲ ಆಕರಗಳು ಸಿಗುತ್ತವೆ.

## ಅನುಬಂಧ - ೧ : ಸತ್ಯಾಗ್ರಹಿಗಳು

**ಕುಂದರನಾಡಿನ ೧೯೪೨ ರ ಚಲೇಜಾವ್ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ ಸತ್ಯಾಗ್ರಹಿಗಳು :**

೧) ಶ್ರೀ ಗಂಗಪ್ಪ ಬಸವಂತಪ್ಪ ಯಮಕನಮರಡಿ

೨) ಶ್ರೀ ಗಟಿಗೆಪ್ಪ ಊರ್ಫ ಮೋಹನ ಬಸವಂತಪ್ಪ ಯಮಕನಮರಡಿ

೩) ಸೌ. ಸಂಗವ್ವ ಗಂಗಪ್ಪ ಯಮಕನಮರಡಿ

೪) ಶ್ರೀ ವಿರುಪಾಕ್ಷಪ್ಪ ದೊಡ್ಡಪ್ಪ ಬೆಲ್ಲದ

೫) ಶ್ರೀ ತಿಪ್ಪಣ್ಣ ಯಲ್ಲಪ್ಪ ಬೆಟಗೇರಿ

೬) ಶ್ರೀ ಗೌಡಪ್ಪ ಚನ್ನಪ್ಪ ಪಾಟೀಲ (ಭದ್ರಕಾಳಿ)

೭) ಶ್ರೀ ಬಸಪ್ಪ ಕರಿಗೌಡಪ್ಪ ಭದ್ರಕಾಳಿ

೮) ಶ್ರೀ ಬಸವಂತಪ್ಪ ಬಸಣ್ಣ ಬನದವರ

೯) ಶ್ರೀ ರಾಮಪ್ಪ ಬಸಣ್ಣ ಬನದವರ

೧೦) ಶ್ರೀ ಫಕೀರಪ್ಪ ಬಸಲಿಂಗಪ್ಪ ಬನದವರ

೧೧) ಶ್ರೀ ಕೆಂಚನಗೌಡ ಮಲಗೌಡ ಪಾಟೀಲ

೧೨) ಶ್ರೀ ರಾಮನಗೌಡ ಮಲಗೌಡ ಪಾಟೀಲ

೧೩) ಶ್ರೀ ಚನ್ನಬಸಪ್ಪ ಮುದ್ದಪ್ಪ ಮಾಳಗಿ

೧೪) ಶ್ರೀ ರಾಮನಗೌಡ ರುದ್ರಗೌಡ ಪಾಟೀಲ (ಬಡಸ)

೧೫) ಶ್ರೀ ಬಸನಗೌಡ ರುದ್ರಗೌಡ ಪಾಟೀಲ (ಬಡಸ)

೧೬) ಶ್ರೀ ಭೀಮಪ್ಪ ಚನ್ನಬಸಪ್ಪ ಯಲಿಗಾರ

೧೭) ಶ್ರೀ ಬಸವಣ್ಣೆಪ್ಪ ಬಾಳಪ್ಪ ಕೊಂತಿ

೧೮) ಶ್ರೀ ಬಾಳಪ್ಪ ಲಕ್ಷಪ್ಪ ಮಾಳಗಿ

೧೯) ಶ್ರೀ ಭೀಮಪ್ಪ ಗಂಗಪ್ಪ ಭೂಶಿ

೨೦) ಶ್ರೀ ಸೋಮಲಿಂಗ ಅಪ್ಪಣ್ಣ ಮಳಗಲಿ

೨೧) ಶ್ರೀ ಮಲ್ಲಪ್ಪ ಬಾಳಪ್ಪ ಮಾಳಗಿ

೨೨) ಶ್ರೀ ಬಸಪ್ಪ ಭೀಮಪ್ಪ ಹಳ್ಳೂರಿ

೨೩) ಶ್ರೀ ಸಂಗಪ್ಪ ತಿಪ್ಪಣ್ಣ ಮಳಗಲಿ

೨೪) ಶ್ರೀ ಚನ್ನಗೌಡ ಬಸನಗೌಡ ಪಾಟೀಲ

೨೫) ಶ್ರೀ ಬಿಳಿಗೌಡ ನಿಂಗಪ್ಪ ಭದ್ರಕಾಳಿ

೨೬) ಶ್ರೀ ಗಂಗಪ್ಪ ಬಿಳಿಗೌಡ ಭದ್ರಕಾಳಿ

೨೭) ಶ್ರೀ ನಿಂಗಪ್ಪ ಬಸವಂತಪ್ಪ ಭದ್ರಕಾಳಿ

೨೮) ಶ್ರೀ ಬಸಪ್ಪ ನಿಂಗಪ್ಪ ಭದ್ರಕಾಳಿ
೨೯) ಶ್ರೀ ಗಂಗಪ್ಪ ಮಲ್ಲಪ್ಪ ಮಾಳಗಿ
೩೦) ಶ್ರೀ ಗಂಗಪ್ಪ ಬಸಣ್ಣ ಮೋದಿಗಿ
೩೧) ಶ್ರೀ ಬಸವಣ್ಣ ರಾಮಗೌಡ ಮೋದಿಗಿ
೩೨) ಶ್ರೀ ಈರಯ್ಯಾ ಚರಂತಿಮಠ
೩೩) ಶ್ರೀ ಬಸವಣ್ಣೆಪ್ಪ ಕೆಂಪಣ್ಣ ಬೆಟಗೇರಿ
೩೪) ಶ್ರೀ ಬಸಪ್ಪ ನಿಂಗಪ್ಪ ಹಿರತೆಗ್ಗಿನವರ
೩೫) ಶ್ರೀ ಗುರುಸಿದ್ದಪ್ಪ ಬಾಳಪ್ಪ ಕಠಾಡಿ
೩೬) ಶ್ರೀ ಬಸಪ್ಪ ಹೊನ್ನಪ್ಪ ಗಂಡಬಾಳಿ
೩೭) ಶ್ರೀ ಮಲ್ಲಪ್ಪ ಬಸಪ್ಪ ಮಾಳಿಗಿ
೩೮) ಶ್ರೀ ಬಾಳಪ್ಪ ನಿಂಗಪ್ಪ ಹಿರತೆಗ್ಗಿನವರ
೩೯) ಶ್ರೀ ಗಂಗಪ್ಪ ಗೌಡಪ್ಪ ಭದ್ರಕಾಳಿ
೪೦) ಶ್ರೀ ಸಿದ್ದಲಿಂಗಪ್ಪ ತರಬರು ಊರ್ಫ ಸಿದ್ಧಗೌಡ ತರಬರು (ಗುತ್ತಿ)
೪೧) ಶ್ರೀ ನಾಗಯ್ಯಾ ರಾಚಯ್ಯ ಹಿರೇಮಠ
೪೨) ಶ್ರೀ ಸೋಮಲಿಂಗ ಫಕೀರಪ್ಪ ನಾವಲಗಿ
೪೩) ಶ್ರೀ ಅಪ್ಪಣ್ಣಾ ಸಾತಪ್ಪ ಹೂಗಾರ
೪೪) ಶ್ರೀ ಮಲ್ಲಪ್ಪ ನಿಂಗಪ್ಪ ಗುಂಡ್ಲೂರ
೪೫) ಶ್ರೀ ಬಸವಣ್ಣೆಪ್ಪ ಮಲ್ಲಪ್ಪ ಜಕ್ಕಣ್ಣವರ ಸುಲಧಾಳ
೪೬) ಶ್ರೀ ಅಣ್ಣಾಬಸಪ್ಪ ಫಕೀರಪ್ಪ ಮರಲಿಂಗಣ್ಣವರ ಅಕ್ಕತಂಗೇರಹಾಳ
೪೭) ಶ್ರೀ ಬಸಲಿಂಗಪ್ಪ ಊರ್ಫ ಅಪ್ಪಣ್ಣ ಬಸವಣ್ಣೆಪ್ಪ ಮರಲಿಂಗಣ್ಣವರ ಅಕ್ಕತಂಗೇರಹಾಳ
೪೮) ಶ್ರೀ ಹುಚ್ಚಪ್ಪ ಬಾಳಪ್ಪ ಹೊಳೆಯಾಚಿ ಅಕ್ಕತಂಗೇರಹಾಳ
೪೯) ಶ್ರೀ ವಿರುಪಾಕ್ಷಪ್ಪ ಬಸವಂತಪ್ಪ ಬಡಕಲ್ಲ (ಮುಂಗರವಾಡಿ)
೫೦) ಶ್ರೀ ಬಾಳಪ್ಪ ಬಸವಂತಪ್ಪ ಕರಲಿಂಗಣ್ಣವರ ಅಕ್ಕತಂಗೇರಹಾಳ
೫೧) ಶ್ರೀ ಬಾಳಪ್ಪ ಅಪ್ಪಯ್ಯ ಹೊಳೆಯಾಚಿ ಅಕ್ಕತಂಗೇರಹಾಳ
೫೨) ಶ್ರೀ ಗಂಗಾಧರ ಸಂಗಪ್ಪ ಮಳಗಲಿ
೫೩) ಶ್ರೀ ಕಾಡಪ್ಪ ಮಲ್ಲಪ್ಪ ತೋಟಿಗಿ
೫೪) ಶ್ರೀ ಮಾರುತಿ ಲಕ್ಕಪ್ಪ ಮಾಳಗಿ
೫೫) ಶ್ರೀ ನೀಲಕಂಠ ಜಯರಾಮ ಪತ್ತಾರ
೫೬) ಶ್ರೀ ಸಿದ್ಧಲಿಂಗಪ್ಪ ಯಲ್ಲಪ್ಪ ತುಕ್ಕಾರ
೫೭) ಶ್ರೀ ಸಿದ್ಧಲಿಂಗಪ್ಪ ಸಿ. ಖಣಗಣಿ

## ಅನುಬಂಧ - ೩ : ಛಾಯಾ ಚಿತ್ರಗಳ ವಿವರ

೦೧) ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರು
೦೨) ಲೋಕಮಾನ್ಯ ಬಾಲಗಂಗಾಧರ ಟಿಳಕ
೦೩) ಕರ್ನಾಟಕ ಸಿಂಹ - ಗಂಗಾಧರರಾವ ದೇಶಪಾಂಡೆ
೦೪) ಸ್ವಾತಂತ್ರ್ಯ ವೀರ - ರಾಮಚಂದ್ರ ವಡವಿ
೦೫) ಅಣ್ಣೂ ಗುರೂಜಿ - ಬಿ. ವಾಯ್. ದೇಶಪಾಂಡೆ
೦೬) ವಾಮನರಾವ ಬಿದರಿ
೦೭) ಕರ್ಮಯೋಗಿ ಪುಂಡಲೀಕಜಿ ಕಾತಗಡೆ
೦೮) ರಾಮಚಂದ್ರ ವಡವಿ, ಗಂಗಾಧರರಾವ ದೇಶಪಾಂಡೆ ಮತ್ತು ಪುಂಡಲೀಕಜಿ ಕಾತಗಡೆಯವರು
೦೯) ಗಾಂಧಿ ಸೇವಾ ಸಂಘದ ವಾರ್ಷಿಕ ಸಮ್ಮೇಲನದ ಅಂಗವಾಗಿ ಹುದಲಿಯಲ್ಲಿ ಶ್ರಮದಾನ ವರ್ಷ : ೧೯೩೭
೧೦) ಗಾಂಧಿ ಸೇವಾ ಸಂಘದ ವಾರ್ಷಿಕ ಅಧಿವೇಶನ ಸಮಯದಲ್ಲಿ ಹುದಲಿಯಲ್ಲಿ ಶ್ರಮದಾನ ವರ್ಷ : ೧೯೩೭
೧೧) ಬಾಬು ರಾಜೇಂದ್ರ ಪ್ರಸಾದರು ನಾಲ್ಕು ಕದರಿನ ಅಂಬರ ಚರಖಾದ ಮೇಲೆ ನೂಲುತ್ತಿರುವುದು
೧೨) ಕದರಿನ ಅಂಬರ ಚರಖಾ ಸ್ಪಿಂಡಲ್‌ದೊಂದಿಗೆ ನೂಲುವ ಮಹಿಳೆ - ಕಾಶವ್ವ ಹರಿಜನ
೧೩) ಅಧ್ಯಕ್ಷ ಪದವಿ ಸ್ವೀಕರಿಸಿದ ನಂತರ ಕಾಂಗ್ರೆಸ ಅಧಿವೇಶನದಲ್ಲಿ ಗಾಂಧೀಜಿಯವರು ಸದಸ್ಯರನ್ನು ಸಂಭೋದಿಸುವಾಗ : ೧೯೨೪ ಬೆಳಗಾವಿ.
೧೪) ಗಾಂಧೀಜಿ ಬಹಿರಂಗ ಸಭೆಯನ್ನುದ್ದೇಶಿಸಿ ಮಾತನಾಡುವಾಗ : ಬೆಳಗಾವಿ ೧೯೨೪
೧೫) ಸ್ವಾತಂತ್ರ್ಯ ಯೋಧ ಗೋವಿಂದರಾವ ಯಾಳಗಿ : ೧೯೮೫ರ ಟಿಳಕರ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು. (ಬೆಳಗಾವಿ)
೧೬) ಪ್ರಥಮ ರಾಷ್ಟ್ರಪತಿ ಡಾ॥ ರಾಜೇಂದ್ರ ಪ್ರಸಾದರೊಂದಿಗೆ ಗಂಗಾಧರರಾವ ದೇಶಪಾಂಡೆ
೧೭) ಗಂಗಾಧರರಾವ ದೇಶಪಾಂಡೆ (ಕುದುರೆಯ ಮೇಲೆ) ಮತ್ತು ಪುಂಡಲೀಕಜಿ ಕಾತಗಡೆ (ನಿಂತಿರುವರು) ಕಾಂಗ್ರೆಸ ಅಧಿವೇಶನದ ಸ್ಥಳ ನಿರೀಕ್ಷಣೆಯಲ್ಲಿ (ಬೆಳಗಾವಿ, ೧೯೨೪)
೧೮) ತಾತ್ಕಾಲಿಕ ರೈಲ್ವೆ ನಿಲ್ದಾಣ, ವಿಜಯನಗರ (ಟಿಳಕವಾಡಿ, ಬೆಳಗಾವಿ, ೧೯೨೪)
೧೯) ಗಾಂಧೀಜಿ ವಿಜಯನಗರ ಸ್ಟೇಶನ್‌ನಿಂದ ಅಧಿವೇಶನದಲ್ಲಿ ಭಾಗವಹಿಸಲು ಬರುವಾಗ (ಬೆಳಗಾವಿ, ೧೯೨೪)
೨೦) ಮದನಮೋಹನ ಮಾಲವಿಯವರೊಂದಿಗೆ ಗಾಂಧೀಜಿ (ಬೆಳಗಾವಿ-೧೯೨೪)
೨೧) ಕರ್ನಾಟಕದ ಹಳೆಯ ರಾಟಿ, ನೂಲುತ್ತಿರುವವರು ಗಂಗಾಧರರಾಯರ ತಾಯಿ ರಾಧಾಬಾಯಿಯವರು
೨೨) ಗುಜರಾತದ ಹಳೆಯ ರಾಟಿಯ ಮೇಲೆ ಸಾಬರಮತಿ ಆಶ್ರಮದಲ್ಲಿ ಗಾಂಧೀಜಿ ನೂಲುತ್ತಿರುವುದು

೨೩) ಗಾಂಧಿ ಸೇವಾ ಸಂಘದ ವಾರ್ಷಿಕ ಸಮ್ಮೇಲನದ ಅಂಗವಾಗಿ ಹುದಲಿಯಲ್ಲಿ ಶ್ರಮದಾನ (೧೯೩೭)

೨೪) ಗಾಂಧಿ ಸೇವಾ ಸಂಘದ ವಾರ್ಷಿಕ ಅಧಿವೇಶನದ ಸಮಯದಲ್ಲಿ – ಹುದಲಿಯಲ್ಲಿ ಶ್ರಮದಾನ (೧೯೩೭)

೨೫) ಗಾಂಧಿ ಸೇವಾ ಸಂಘದ ವಾರ್ಷಿಕ ಅಧಿವೇಶನ ಸಮಯದಲ್ಲಿ ಸುರಿದ ಭಾರೀ ಮಳೆಯಲ್ಲಿ ನೆನೆಯುತ್ತಿರುವ ಗಾಂಧೀಜಿ, ಹುದಲಿಯಿಂದ ಕುಮರಿ ಆಶ್ರಮಕ್ಕೆ ಹೋಗುತ್ತಿದ್ದಾರೆ. ೧೯೩೭ (ಕೊಡೆ ಹಿಡಿದವರು ದತ್ತೋಪಂತ ಅಧ್ಯಾಪಕ)

೨೬) ಗಾಂಧಿ ಸೇವಾ ಸಂಘದ ವಾರ್ಷಿಕ ಅಧಿವೇಶನದ ಕಾಲದಲ್ಲಿ ಉತ್ತಮ ಚರ್ಮಶಿಲ್ಪಿ ಹರಿಜನ ಕರಿಯಪ್ಪನೊಂದಿಗೆ ಗಾಂಧೀಜಿ ಚರ್ಮಶಿಲ್ಪದ ಬಗ್ಗೆ ಮಾತನಾಡುತ್ತಿದ್ದಾರೆ – ೧೯೩೭

೨೭) ಬೆಳಗಾವಿಯಲ್ಲಿ ಲೋಕಮಾನ್ಯ ಟಿಳಕರೊಂದಿಗೆ ಗಂಗಾಧರರಾವ ದೇಶಪಾಂಡೆಯವರು

೨೮) ಶ್ರೀ ಚುನಿಲಾಲ ಬಾಪನಾ (ಗೋಕಾಕ)

೨೯) ಶ್ರೀ ಗಂಗಣ್ಣ ಮುದ್ದಪ್ಪಾ ಮಾಳಗಿ

೩೦) ಶ್ರೀ ಭೀಮಪ್ಪಾ ನಿಂಗಪ್ಪ ಭೂಶಿ

೩೧) ಶ್ರೀ ಸೋಮಲಿಂಗ ಅಪ್ಪಣ್ಣ ಮಳಗಲಿ

೩೨) ೧೯೩೭ರಲ್ಲಿ ಗಾಂಧಿ ಸೇವಾ ಅಧಿವೇಶನದ ಸ್ಮರಣಾರ್ಥದಲ್ಲಿ ತೋಡಿದ ಬಾವಿ (ಹುದಲಿ)

೩೩) ಶ್ರೀ ನಿ. ಯ. ತುಕ್ಕಾರ

೩೪) ಶ್ರೀ ವಾ. ನಾ. ಕದಮ

೩೫) ಶ್ರೀ ಬ. ಸಿ. ಯಮಕನಮರ್ಡಿ

೩೬) ಶ್ರೀ ಅ. ಸಾ. ಹೂಗಾರ

೩೭) ಶ್ರೀ ಚ. ಬ. ಭದ್ರಕಾಳಿ

೩೮) ಶ್ರೀ ನಾ. ಬ. ದೇಶಪಾಂಡೆ

# ಅನುಬಂಧ – ೪ : ಗ್ರಂಥಋಣ

ಅ. ಕನ್ನಡ ಗ್ರಂಥಗಳು :


* ಅಕ್ಕಿ ಚಂದ್ರಶೇಖರ ಮತ್ತು ಮಹಾಲಿಂಗ ಮಂಗಿ : **ಗೋಕಾಕ ಸಿರಿ ಸಂಪದ :** ಸಂಸ್ಮರಣ ಸಂಚಿಕೆ : ಗೋಕಾಕ. ೨೦೦೬
* ಅಚ್ಯುತ ವಡವಿ ಹಾಗೂ ಶಾಸ್ತ್ರಿ ಎಲ್.ಎಸ್. : **ಅಪ್ಪಟ ಗಾಂಧೀವಾದಿ ಶ್ರೀ ರಾಮಚಂದ್ರ ವಡವಿ (ವಡವಿ ಮಾಸ್ತರರು)** : ಬೆಳಗಾವಿ ಜಿಲ್ಲಾ ಸ್ವಾತಂತ್ರ್ಯ ಯೋಧರ ಶೈಕ್ಷಣಿಕ ಸಂಘ ನಿ. ಬೆಳಗಾವಿ ೨೦೦೬
* **ಅನ್ವಲ್ ರಿಪೋರ್ಟ ಆರ್ಪ ಇಂಡಿಯನ್ ಎಪಿಗ್ರಾಫಿ** : ಅಪೆಂಡಕ್ಸ್, ಇ.ನಂ-೮೮ : ಕಲ್ಕತ್ತಾ. ೧೯೪೦-೪೧
* ಅಪ್ಪಣ್ಣ ಬ. ವಗ್ಗರ : **ಮುಂಬೈ ಕರ್ನಾಟಕದ ಸಂಸ್ಥಾನಗಳಲ್ಲಿ ಸ್ವಾತಂತ್ರ್ಯ ಹೋರಾಟ :** ಅಪ್ರಕಟಿತ ಪ್ರಬಂಧ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ : ೨೦೦೫
* ಅಶೋಕ ಚಂದರಗಿ (ಸಂ) : **ಸ್ವಾತಂತ್ರ್ಯ ಸೇನಾನಿ ಅಣ್ಣೂ ಗುರೂಜಿ ಜನ್ಮಶತಮಾನೋತ್ಸವ ಸಮಾರಂಭದ ಸವಿನೆನಪು** : ದಿ. ಅಣ್ಣೂ ಗುರೂಜಿ ಜನ್ಮ ಶತಮಾನೋತ್ಸವ ಸಮಿತಿ, ಬೆಳಗಾವಿ ೨೦೦೬
* ಆಲೂರು ವೆಂಕಟರಾಯರು: **ಕರ್ನಾಟಕ ಗತವೈಭವ** : ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು – ೫೬೦೦೦೨ : ೨೦೦೬
* ಇತಿಹಾಸ ಮತ್ತು ಪುರಾತತ್ವ : **ಕನ್ನಡ ವಿಷಯ ವಿಶ್ವಕೋಶ** : ಮೈಸೂರು ವಿಶ್ವವಿದ್ಯಾಲಯ : ೨೦೦೯
* ಇರ್ಫಾನ ಹಬೀಬ ಕನ್ನಡ ಎಂ ಅಬ್ದುಲ ರೆಹಮಾನ ಪಾಷ : **ರಾಷ್ಟ್ರೀಯ ಆಂದೋಲನ ಸಿದ್ಧಾಂತದ ಮತ್ತು ಇತಿಹಾಸದ ಅಧ್ಯಯನಗಳು** : ನವ ಕರ್ನಾಟಕ ಪಬ್ಲಿಕೇಶನ್ಸ್ ಪ್ರೈವೆಟ್ ಕ್ರೆಸೆಂಟ್ ರಸ್ತೆ, ಬೆಂಗಳೂರು-೫೬೦೦೦೨ : ೨೦೧೨
* ಕಲಬುರ್ಗಿ ಎಂ. ಎಂ. (ಸಂ) : **ಜನ ಜೀವಾಳ (ವಾರಪತ್ರಿಕೆ)** : ಬಸವರಾಜ ಕಟ್ಟಿಮನಿ ಪ್ರತಿಷ್ಠಾನ ಬೆಳಗಾವಿ. ೨೦೧೪
* ಕಾಂಬೆಲ್ ಜೇಮ್ಸ್ : **ಬೆಳಗಮ್ ಡಿಸ್ಟ್ರಿಕ್ಟ್ ಗ್ಯಾಝೆಟೀಯರ** : ಬಾಂಬೆ. ೧೮೮೪
* ಕ್ಯಾತನಹಳ್ಳಿ ರಾಮಣ್ಣ : **ಫ್ಲೀಟರು ಸಂಗ್ರಹಿಸಿದ ಲಾವಣಿಗಳು** : ಪ್ರಸಾರಾಂಗ ಮಾನಸ ಗಂಗೋತ್ರಿ ಮೈಸೂರು. ೧೯೯೧
* ಕಾಮತ್ ಸೂರ್ಯನಾಥ : **ಕರ್ನಾಟಕದ ಸಂಕ್ಷಿಪ್ತ ಇತಿಹಾಸ** : ಎಂಸಿಸಿ ಪಬ್ಲಿಕೇಶನ್, ಬೆಂಗಳೂರು. ೨೦೦೫
* ಕೊಂಗವಾಡ ಜಿ.ವಿ. (ಸಂ) : **ಕಿತ್ತೂರು ಇತಿಹಾಸ :** ಬೆಳಗಾವಿ ೧೯೯೮
* ಗುಂಜಾಳ ಎಸ್. ಆರ್. (ಸಂ) : **ಬೆಳಗಾವಿ ಬೆಳಕು :** ಸಂಸ್ಮರಣ ಸಂಪುಟ, ಬೆಂಗಳೂರು ೨೦೦೩

* ಗುರುಲಿಂಗ ಕಾಪಸೆ (ಪ.ಸಂ) : **ಚಲೇಜಾವ್ ಚಳುವಳಿ ಅರವತ್ತರ ನೆನಪು ಮತ್ತು ಬಸವರಾಜ ಕಟ್ಟಿಮನಿ ಸ್ಮರಣ ಸಂಚಿಕೆ** : ಪಿ.ಎಸ್. ಮಲ್ಲಿಕಾರ್ಜುನ ಸ್ವಾಮಿ ರಜಿಸ್ಟಾರ ಕರ್ನಾಟಕ ಸಾಹಿತ್ಯ ಅಕಾಡೆಮಿ ಕನ್ನಡ ಭವನ ಬೆಂಗಳೂರು. ೨೦೦೩
* ಗೊಂಜಾಳ ಎಸ್. ಆರ್. : **ಬೆಳಗಾವಿ ಬೆಳಕು** : ಕಸಾಪ, ಬೆಂಗಳೂರು. ೨೦೦೩
* ಗೋಪಾಲ್ ಬಿ. ಆರ್. : **ಕಾರ್ಪಸ್ ಆಪ್ ಕದಂಬ ಇನ್ಸ್‌ಕ್ರಿಪ್ಷನ್ಸ್** : ಸಂ.೧ ಶಿರ್ಸಿ. ೧೯೮೫
* ಚಂದ್ರಕಾಂತ ಪೋಕಳೆ (ಅನುವಾದಕರು) : **ಸಾವರಕರ 'ಒಂಧು ಅಭಿನವ ದರ್ಶನ'** : ಸೂರ್ಯಕಾಂತ ಕೇಶವ ಶಾನಬಾಗ, ಬೆಳಗಾವಿ ಚಂದರಗಿ ಪ್ರಿಂಟರ್ಸ್, ಜಾಲಿಹಾಳ ಬಿಲ್ಡಿಂಗ್ (ಭಾರತೀಯ ಎಜನ್ಸಿ) ಶನಿವಾರ ಖೂಟ ಕಾಕತಿವೇಸ ರಸ್ತೆ, ಬೆಳಗಾವಿ. ೨೦೦೯
* ಚಂದ್ರಶೇಖರ ಅಕ್ಕಿ (ಸಂ) : **ಗೋಕಾವಿ ಸಿರಿ ಸಂಪದ ಸಂಸ್ಮರಣ ಸಂಚಿಕೆ** : ಮಹಾಲಿಂಗ ಮಂಗಿ ಪ್ರ. ಕ್ರಿಯಾಶೀಲ ಸಾಹಿತ್ಯ ಮತ್ತು ಸಾಂಸ್ಕೃತಿಕ ವೇದಿಕೆ, ಗೋಕಾಕ. ೨೦೦೬
* ಚಂದ್ರಶೇಖರ ಎಸ್. : **ವಸಾಹತುಕಾಲೀನ ಕರ್ನಾಟಕ** : ಸುವರ್ಣ ಕರ್ನಾಟಕ ಸಂದರ್ಭದಲ್ಲಿ ಕರ್ನಾಟಕ ಸರ್ಕಾರದ ಪರವಾಗಿ ಕೆ. ಆರ್. ನಿರಂಜನ ಆಯುಕ್ತಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಂದ ಪ್ರಕಟಿತ. ೨೦೦೬
* ಚಂದ್ರಹಾಸ ಗುಪ್ತಾ ಎ. ಆರ್. : **ಭಾರತದ ಗ್ಯಾಝೆಟಿಯರ್ ಸಂ. ೧ & ೨** : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ೧೯೮೬–೮೭
* ಚಕ್ರವರ್ತಿ ಸೂಲಿಬೆಲೆ : **ಅಪ್ರತಿಮ ದೇಶಭಕ್ತ ಸ್ವಾತಂತ್ರ್ಯ ವೀರ ಸಾವರಕರ** : ರಾಷ್ಟ್ರೋತ್ಥಾನ ಸಾಹಿತ್ಯ 'ಕೇಶವ ಶಿಲ್ಪ' ಕೆಂಪೇಗೌಡ ನಗರ, ಬೆಂಗಳೂರು. ೨೦೦೪ ಸೆಪ್ಟೆಂಬರ್
* ಚಕ್ರವರ್ತಿ ಸೂಲಿಬೆಲೆ : **ಸ್ವಾತಂತ್ರ್ಯ ಮಹಾ ಸಂಗ್ರಾಮ ಒಂದು ವಾಕ್ಚಿತ್ರ – ೧೮೫೭** ರಾಷ್ಟ್ರೋತ್ಥಾನ ಸಾಹಿತ್ಯ ಬೆಂಗಳೂರು. ೨೦೦೭
* ಜಿತೇಂದ್ರನಾಥ ಸಾನ್ಯಾಲ್ ಮೂಲ ಟಿ. ಜಿ. ಪ್ರಭಾಶಂಕರ : **ಅಮರ ಹುತಾತ್ಮ ಸರದಾರ ಭಗತ ಸಿಂಗ್** : ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ ನೆಹರು ಭವನ ೫, ಇನ್ಸ್ಟಿಟ್ಯೂಷನ್ ಏರಿಯಾ, ಫೇಜ್– II, ವಸಂತ ಕುಂಜ, ಹೊಸದೆಹಲಿ. ೨೦೧೦
* ತಾರಾಚಂದ ಮೂಲ: ದಿಕ್ಷಿತ ಜಿ.ಎಸ್. : **ಭಾರತದಲ್ಲಿ ಸ್ವಾತಂತ್ರ್ಯ ಚಳುವಳಿ ಸಂಪುಟ–೨** : ಪ್ರಸಾರಾಂಗ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೭೨
* ದೇವರಕೊಂಡಾರೆಡ್ಡಿ (ಸಂ) : **ಇತಿಹಾಸ ದರ್ಶನ ೨೦೧೬** : ಸಂಪುಟ–೩೧ : ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು. ೨೦೧೬
* ದೇವರಕೊಂಡಾರೆಡ್ಡಿ (ಸಂ) : **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೦೯** : ಹಂಪಿ. ೨೦೦೬

* ದೇಸಾಯಿ ಎಮ್. ಜಿ. (ಪ್ರ.ಸಂ.) : **ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಶತಮಾನೋತ್ಸವ ಸ್ಮರಣ ಸಂಚಿಕೆ** : ಬೆಳಗಾವಿ ಜಿಲ್ಲಾ ಸ್ವಾತಂತ್ರ್ಯ ಯೋಧರ ಶೈಕ್ಷಣಿಕ ಸಂಘ, ಶಿವಾಜಿ ನಗರ, ೧ನೇ ಮೇನ್, ಬೆಳಗಾವಿ ಮು. ಪೂಜಾ ಆಪ್‌ಸೆಟ್ ಬಾಪಟಗಲ್ಲಿ, ಬೆಳಗಾವಿ. ೨೦೦೬
* ದೇಸಾಯಿ ಎಮ್. ಬಿ. (ಪ್ರ.ಸಂ.) : **ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಶತಮಾನೋತ್ಸವ ಸ್ಮರಣ ಸಂಚಿಕೆ** : ಬೆಳಗಾವಿ ಜಿಲ್ಲಾ ಸ್ವಾತಂತ್ರ್ಯ ಯೋಧರ ಶೈಕ್ಷಣಿಕ ಸಂಘ, ಶಿವಾಜಿ ನಗರ, ೧ನೇ ಮೇನ್, ಬೆಳಗಾವಿ. ೨೦೦೬
* ದೇಶಪಾಂಡೆ ನಾ. ಬ. ಭದ್ರಕಾಳಿಚ. ಬ, ಮಾಳವದೆ, ಫ್ಹಿ. ಎ. ಬಲಕುಂದಿ (ಸಂ): **ಖಾದಿ ಕಿರಣ ಖಾದಿ (ಸ್ಮರಣ ಸಂಚಿಕೆ)** : ಗ.ಮು. ಮಾಳಗಿ ಚೇರಮನ್ನರು ಖಾದಿ ಮತ್ತು ಗ್ರಾ.ಸ.ಎ.ಸಂ.ನಿ., ಹುದಲಿ. ೧೯೯೮
* ದೇಶಪಾಂಡೆ ಭಾ. ಯ. (ಅಣ್ಣೂ ಗುರೂಜಿ) : **ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಸಮರ ಸಂಪುಟ–೧** : ಬೆಳಗಾವಿ ಜಿಲ್ಲಾ ಖಾದಿ ಗ್ರಾಮೋದ್ಯೋಗ ಸಂಘ, ಡಾ. ಶಮಾ ಪ್ರಸಾದ ಮುಖರ್ಜಿ ಪಥ, ಬೆಳಗಾವಿ. ೧೯೭೩
* ದೇಶಪಾಂಡೆ ನಾರಾಯಣ ಖಂಡೋ ಮತ್ತು ಭದ್ರಕಾಳಿ ಚನಗೌಡ (ಸಂ) : **ಸುವರ್ಣ ಚರಕ** : ಖಾದಿ ಮತ್ತು ಗ್ರಾಮೋದ್ಯೋಗ ಸಹಕಾರಿ ಸಂಘ : ಹುದಲಿ. ೨೦೦೪
* ದೇಶಪಾಂಡೆ ಭಾ. ಯ. (ಅಣ್ಣೂ ಗುರೂಜಿ) : **ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಸಮರ ಸಂಪುಟ–೨** : ಬೆಳಗಾವಿ ಜಿಲ್ಲಾ ಖಾದಿ ಗ್ರಾಮೋದ್ಯೋಗ ಸಂಘ, ಡಾ. ಶಮಾ ಪ್ರಸಾದ ಮುಖರ್ಜಿ ಪಥ, ಬೆಳಗಾವಿ. ೧೯೭೩
* ನರಸಿಂಹಯ್ಯ ಎಚ್. : **ಹೋರಾಟದ ಹಾದಿ** : ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು–೫೬೦೦೦೨ ಭಾಗ್ಯಂ ಬೈಂಡಿಂಗ್ ವರ್ಕ್ಸ, ಮೈಸೂರು ರೋಡ, ಬೆಂಗಳೂರು. ೨೦೦೬
* ನರಸಿಂಹಯ್ಯ ನರಹರಿ ದಾ. ಪರೀಖ (ಸಂ) : **ಮಹಾದೇವಿ ಬಾಯಿಯವರ ದಿನಚರಿ–ಮೊದಲನೆ ಭಾಗ** : ಪುಂಡಲಿಕಜಿ ಕಾತಗಡೆ ಮು.ಹ.ರಾ.ಮೋಹರೆ ಸಂಯುಕ್ತ ಕರ್ನಾಟಕ ಮುದ್ರಣಾಲಯ, ಹುಬ್ಬಳ್ಳಿ. ೧೯೫೩
* ನಾಗರತ್ನಮ್ಮ ಎಸ್.: **ಕರ್ನಾಟಕದಲ್ಲಿ ಅಸಹಕಾರ ಮತ್ತು ನಾಗರಿಕ ಕಾನೂನು ಭಂಗ ಚಳುವಳಿ** : ದೇಸಿ ಪುಸ್ತಕ ವಿಜಯನಗರ, ಬೆಂಗಳೂರು–೫೬೦೦೪೦. ೧೯೨೦–೧೯೩೪
* ನಾರಾಯಣ ಖ. ದೇಶಪಾಂಡೆ (ಸಂ) : **ಸುವರ್ಣ ಚರಕ ೨೦೦೪** : ಖಾದಿ ಮತ್ತು ಗ್ರಾಮೋದ್ಯೋಗ ಸಹಕಾರಿ ಉತ್ಪಾದಕ ಸಂಘ ನಿ., ಹುದಲಿ. ೨೦೦೭
* ಪಂಚಮುಖಿ ಆರ್.ಎಸ್. : **ಆರ್ಕಿಯಾಲಜಿ ಆಫ್ ಕರ್ನಾಟಕ** : ಕೆ.ಆರ್.ಐ, ಧಾರವಾಡ. ೧೯೫೩
* ಪಪ್ಪು ಆರ್.ಎಸ್. ಮತ್ತು ದೇವ್ ಎಸ್.ಜಿ. : **ಮ್ಯಾನ್ ಲ್ಯಾಂಡ್ ರಿಲೇಶನ್ಸ್ ಡ್ಯುರಿಂಗ್ ಪೇಲಿಯೋಲಿಥಿಕ್ ಟೈಮ್ಸ್ ಇನ್ ದಿ ಕಲಾದಗಿ ಬೇಸಿನ್** : ಕರ್ನಾಟಕ,ಡೆಕ್ಕನ್ ಕಾಲೇಜು, ಪೂನಾ. ೧೯೭೪

* ಪಾಟೀಲ ಮನೋಜ : **ಬೆಳಗಾವಿ ಜಿಲ್ಲೆಯ ಮಾರ್ಗದರ್ಶಿ** : ಬೆಳಗಾವಿ. ೧೯೮೭
* ಪಾಟೀಲ್ ಎಸ್.ಬಿ. : **ಕೂಹಂಡಿ ನಾಡು** : ಬೆಳಗಾವಿ. ೧೯೮೯
* ಪಾಟೀಲ್ ಎಸ್.ಬಿ. : **ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ** : ಬಸವಶ್ರೀ ಪ್ರಕಾಶನ ಸಂಕೇಶ್ವರ. ೧೯೮೨
* ಪಾರ್ಥಸಾರಥಿ ಕೆ.ಎಸ್. : **ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ: ಒಂದು ಚಾರಿತ್ರಿಕ ಹಿನ್ನೋಟ** : ನವಕರ್ನಾಟಕ ಪಬ್ಲಿಕೇಷನ್ಸ್, ಪ್ರವೈಟ್ ಲಿಮಿಟೆಡ್, ಬೆಂಗಳೂರು – ೫೬೦೦೦೧. ೨೦೧೧
* ಪ್ರೇಮಕುಮಾರ ಬಿ.ಪಿ. : **ನೌಕಾ ಬಂಡಾಯ ೧೯೪೬ ಸಾಗರದಲ್ಲಿ ಅಗ್ನಿಶಿಖೆ** : ರಾಷ್ಟ್ರೋತ್ಥಾನ ಸಾಹಿತ್ಯ 'ಕೇಶವ ಶಿಲ್ಪ' ಕೆಂಪೆಗೌಡ ನಗರ, ಬೆಂಗಳೂರು. ಜೂನ್ ೨೦೧೨
* ಬಸವರಾಜ ಕಟ್ಟಿಮನಿ : **ಮಾಡಿ ಮಡಿದವರು** : ಸ್ವಪ್ನ ಬುಕ್ ಹೌಸ್ ಗಾಂಧಿ ನಗರ, ಬೆಂಗಳೂರು. ೨೦೦೯
* ಬಸವರಾಜ ಕಟ್ಟಿಮನಿ : **ಸ್ವಾತಂತ್ರ್ಯದೆಡೆಗೆ ಕಾದಂಬರಿ** : ಸ್ವಪ್ನ ಬುಕ್ ಹೌಸ್ ಗಾಂಧಿ ನಗರ, ಬೆಂಗಳೂರು – ೫೬೦೦೦೯. ೧೯೪೬
* ಬಸವರಾಜ ಕಟ್ಟಿಮನಿ : **ಕಾದಂಬರಿಕಾರನ ಕಥೆ** : ಪ್ರಸಾರಾಂಗ : ಬಸವರಾಜ ಕಟ್ಟಿಮನಿ ಪ್ರತಿಷ್ಠಾನ ಬೆಳಗಾವಿ. ೨೦೧೨
* ಬಾಬು ಕೃಷ್ಣ ಮೂರ್ತಿ (ಸಂ) : **ವೀರ ಸಾವರಕರ ಬರೆದ ೧೮೫೭ ಬಾರತದ ಸ್ವಾತಂತ್ರ್ಯ ಸಂಗ್ರಾಮ** : ಶ್ರೀ ಸಮುದ್ಯತಾ ಸಾಹಿತ್ಯ ಬೆಂಗಳೂರು–೫೦೦೦೭೬. ೨೦೧೨
* ಬಾರ್ಕೂರ ಉದಯ : **ರಾಷ್ಟ್ರೀಯತೆ; ಇತಿಹಾಸ ಕಥನ** : ಶಾಲ್ಮಾ ಪ್ರಕಾಶನ ಬಾರ್ಕೂರ ಚೇರಮನ್ನರು ಇತಿಹಾಸ ವಿಭಾಗ ಮಂಗಳೂರು–೫೭೪೧೯೯. ೨೦೦೯
* ಬಾಲಸುಬ್ರಹ್ಮಣ್ಯ ಎನ್. (ಅನುವಾದ) : **ಮೂಲ: ಮಹಾತ್ಮಾ ಗಾಂಧಿ ಹಿಂದೂ ಧರ್ಮ ಎಂದರೇನು?** : ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ಎ–೫, ಗ್ರೀನ್ ಪಾರ್ಕ, ಹೊಸ ದೆಹಲಿ – ೧೧೦೦೧೬. ೧೯೯೫
* ಮಹಾಲಿಂಗ ಮಂಗಿ : **ಶತಾಯಷಿ–ಶರಣ, ದೇಶಪ್ರೇಮಿ (ಶ್ರೀ ಮುಂಡಪ್ಪ ಭೀಮರಾಯಪ್ಪ ಅಕ್ಕಿ)** : ಪೂರ್ಣಿಮಾ ಪ್ರಕಾಶನ, ಗೋಕಾಕ. ೨೦೧೪
* ಮಹಾಲಿಂಗ ಮಂಗಿ : **ಸೇವಾದಳದ ಸೇನಾನಿ** : ಸಂಕಲ್ಪ ಪ್ರಕಾಶನ, ನಂ. ೧, ೧ನೇಯ ಮುಖ್ಯ ರಸ್ತೆ, ೧ನೇ ಅಡ್ಡರಸ್ತೆ, ದೀಪಾಂಜಲಿ ನಗರ, ಬೆಂಗಳೂರು–೫೬೦೦೨೬. ೨೦೧೨
* ಮಾರಿಹಾಳ ವಿ. ಜಿ. : **ಬೆಳಗಾವಿ ಬೆಳಕು** : ೧೯೭೭
* ಮಾಳಗಿ ಗ. ಮು. (ಪ್ರ) : **ಖಾದಿ ಕಿರಣ** : ಮಲ್ಲಿಕಾರ್ಜುನ ಆಪ್‌ಸೆಟ್ ಪ್ರಿಂಟರ್ಸ್, ಸಿದ್ದನ್ನವರ ಕಾಂಪ್ಲೇಕ್ಸ್, ಗಣಪತಿ ಗಲ್ಲಿ, ಬೆಳಗಾವಿ. ೧೯೭೮
* ಮುತಾಲಿಕ್ ಆರ್. ಆರ್. : **ಹುಕ್ಕೇರಿ ತಾಲೂಕು ದರ್ಶನ** : ಐಬಿಎಚ್ ಪ್ರಕಾಶನ, ಬೆಂಗಳೂರು. ೧೯೮೭

* ರಾಮಚಂದ್ರ ವಡವಿ : **ಕುಂದರನಾಡಿನಲ್ಲಿ ಒಂದು ಅಧ್ಯಾಯ ಥೋಡೋ ಭಾರತ ಪರ್ವದಲ್ಲಿ** : ಖಾದಿ ಗ್ರಾಮೋದ್ಯೋಗ ಸಹಕಾರಿ ಉತ್ಪಾದಕ ಸಂಘ ನಿ., ಹುದಲಿ. ೧೯೭೧
* ವಗ್ಗರ ಎ. ಬಿ. & ಜರಕುಂಟಿ ಎಂ. ಆರ್. : **ರಾಮದುರ್ಗ ಸಂಸ್ಥಾನ ವಿಮೋಚನಾ ಹೋರಾಟ** : ಲಡಾಯಿ ಪ್ರಕಾಶನ, ಎಚ್. ೨೧, ಪ್ರಸಾದ ಹಾಸ್ಟೇಲ್, ಗದಗ. ೨೦೧೨
* ವರದರಾಯ ಹೂಯಿಲಗೋಳ (ಕನ್ನಡ ಅನುವಾದ) : **ಭಾರತದ ದೇಶ–ಕೋಶ ಸಂಪುಟ–೧** : (ಭಾರತದ ಗ್ಯಾಝೆಟಿಯರ್) ಕನ್ನಡ ಮತ್ತು ಸಂಸ್ಕೃತ ನಿರ್ದೇಶನಾಲಯ, ಕರ್ನಾಟಕ ಸರಕಾರ, ಬೆಂಗಳೂರು. ೧೯೮೬
* ವರದರಾಯ ಹೂಯಿಲಗೋಳ (ಕನ್ನಡ ಅನುವಾದ) : **ಭಾರತದ ದೇಶ–ಕೋಶ ಸಂಪುಟ–೨** : (ಭಾರತದ ಗ್ಯಾಝೆಟಿಯರ್) ಕನ್ನಡ ಮತ್ತು ಸಂಸ್ಕೃತ ನಿರ್ದೇಶನಾಲಯ, ಕರ್ನಾಟಕ ಸರಕಾರ, ಬೆಂಗಳೂರು. ೧೯೮೬
* ವೆಂಕಟರಂಗೋಕಟ್ಟಿ : **ಮುಂಬಯಿ ಗೆಝೆಟಿಯರ್** : ಕರ್ನಾಟಕ ಭಾಗ, ದೆಹಲಿ ೧೯೮೪
* ಶಂಕರನಾರಾಯಣರಾವ್ ಎನ್. ಪಿ. (ಮೂಲ ಹಕ್ಕುಗಳು) : **ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು ರಾಷ್ಟ್ರೀಯ ಚಳುವಳಿಯ ಸಮಗ್ರ ಪರಿಚಯ** : ನವಕರ್ನಾಟಕ ಪಬ್ಲಿಕೇಷನ್ಸ್, ಪ್ರೈವೆಟ್ ಲಿ. ೧೯೯೧
* ಶಾಲಿನಿ ರಜನೀಶ (ಪ್ರ.ಸಂ) : **ಬೆಳಗಾವಿ ಬೆಡಗು ಗಡಿನಾಡು ಉತ್ಸವ–೨೦೦೬** : ಸಂ. ಶ್ರೀ ಸ. ರಾ. ಸುಳಕೂಡೆ ದಿನೇಶ ಗುಡ್ ನ್ಯೂಜ್ ಪ್ರಿಂಟರ್ಸ್. ೨೦೦೬
* ಶಾಸ್ತ್ರಿ ಎಲ್. ಎಸ್. : **ಸ್ವಾತಂತ್ರ್ಯ ಸಂಗ್ರಾಮ (ರಾಷ್ಟ್ರ ರಾಜ್ಯ ಹಾಗೂ ಬೆಳಗಾವಿ ಜಿಲ್ಲೆಯಲ್ಲಿ)** : ಬೆಳಗಾವಿ ಜಿಲ್ಲಾ ಸ್ವಾತಂತ್ರ್ಯ ಯೋಧರ ಶೈಕ್ಷಣಿಕ ಸಂಘ ನಿ., ಬೆಳಗಾವಿ ೧ನೇ ಮುಖ್ಯ ರಸ್ತೆ, ಶಿವಾಜಿ ನಗರ, ಪೂಜಾ ಆಫಸೆಟ್ ಬೆಳಗಾವಿ. ೨೦೦೬
* ಶ್ರೀನಿವಾಸ ಕುಲಕರ್ಣಿ (ಲೇ) : **ಅಪ್ರತಿಮ ಸ್ವಾತಂತ್ರ್ಯ ಯೋಧ – ಗಂಗಾಧರರಾವ ದೇಶಪಾಂಡೆ** : ಖಾದಿ ಮತ್ತು ಗ್ರಾಮೋದ್ಯೋಗ ಉತ್ಪಾದಕರ ಸಂಘ, ಹುದಲಿ. ೨೦೧೬
* ಷೇಕ್ ಅಲಿ. ಬಿ. (ಸಂ) : **ಕರ್ನಾಟಕ ಚರಿತ್ರೆ, ಸಂ–೧** : ಕನ್ನಡ ವಿಶ್ವವಿದ್ಯಾಲಯ ಹಂಪಿ. ೧೯೯೭
* ಸದಾಶಿವ ಒಡೆಯರ : **ರಾಣಿ ಚೆನ್ನಮ್ಮ** : ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ ನೆಹರು ಭವನ, ವಸಂತ ಕುಂಜ, ಹೊಸದೆಹಲಿ. ೨೦೧೦
* ಸಂಗಮೇಶ ಹಂಡಗಿ : **ಕುಂದರನಾಡಿನ ಕುಂದಣ** : ಬೆಳಗಾವಿ. ೨೦೧೬
* ಸರೋಜನಿ ಚವಲಾರ : **ಬೆಳಗಾವಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು** : ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರುಸಾವಿರ ಮಠ, ಹುಬ್ಬಳ್ಳಿ, ಮು, ಸಂಯುಕ್ತ ಕರ್ನಾಟಕ ಪ್ರೆಸ್ ಮತ್ತು ಅಂಜಲಿ ಪ್ರಿಂಟಿಂಗ್ ಪ್ರೆಸ್, ದಾಜಿಬಾಪೇಟ್, ಹುಬ್ಬಳ್ಳಿ. ೧೯೮೮
* ಸಿದ್ದವ್ವನಹಳಿ ಕೃಷ್ಣಶರ್ಮ : **ಗಾಂಧಿ ಮತ್ತು ಕರ್ನಾಟಕ** : ಶ್ರೀ ರಾಮಚಂದ್ರ ವಡವಿ ಕಾಯಕದರ್ಶಿ, ಮೈಸೂರು ರಾಜ್ಯ ಗಾಂಧಿ ಸ್ಮಾರಕ ನಿಧಿ 'ಗಾಂಧಿಭವನ' ಕುಮಾರ ಪಾರ್ಕ, ಪೂರ್ವ ಬೆಂಗಳೂರು. ೨೦೦೮

* ಸೂರ್ಯನಾಥ ಕಾಮತ : **ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು** : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಥಮ, ದ್ವಿತೀಯ, ತೃತೀಯ ಸಂಪುಟಗಳು. ೧೯೯೮
* ಸೂರ್ಯನಾಥ ಕಾಮತ್ : **ಬೆಳಗಮ್ ಡಿಸ್ಟ್ರಿಕ್ಟ್ ಗ್ಯಾಝೆಟಿಯರರ** : ಕರ್ನಾಟಕ ಸರ್ಕಾರ, ಬೆಂಗಳೂರು. ೧೯೮೦
* ಸೋಮಲಿಂಗ ಅಪ್ಪಣ್ಣ ಮಳಗಲಿ & ಅಚ್ಯುತ ರಾಮಚಂದ್ರ ವಡವಿ : **ಸಚಿತ್ರ ಭಾರತ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸ ಮತ್ತು ಗಾಂಧೀಜಿ** : ಸ್ವಾತಂತ್ರ್ಯ ಸಂಗ್ರಾಮದ ಶತಮಾನೋತ್ಸವ ಸಂಘ (ರಿ), ಬೆಳಗಾವಿ ಶಿವಾಜಿ ನಗರ, ಬೆಳಗಾವಿ. ೨೦೧೨
* ಹಂಡಗಿ ಸಂಗಮೇಶ ಮತ್ತು ದಾನಪ್ಪಗೌಡರ ಎನ್.ಪಿ (ಸಂ) : **ಕುಂದರ ನಾಡಿನ ಕುಂದಣ** : ಸ್ಮರಣ ಸಂಚಿಕೆ, ಖಾದಿ ಮತ್ತು ಗ್ರಾಮೋದ್ಯೋಗ ಸಹಕಾರಿ ಸಂಘ, ಹುದಲಿ. ೧೯೮೨
* ಹರದಗಟ್ಟಿ ಎಸ್. ಎಮ್. (ಸಂ) : **ಬೆಳಗಾವಿ ಸಿರಿ ಸ್ಮರಣ ಸಂಚಿಕೆ** : ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್ ಕಾಗದಗೇರಿ ಓಣಿ, ಗದಗ-೫೮೨೧೦೧. ೨೦೦೩
* ಹರದಗಟ್ಟಿ. ಎಸ್.ಎಂ. (ಸಂ) : **ಬೆಳಗಾವಿ ಸಿರಿ, ಕುಂದರನಾಡು ಸ್ವಾತಂತ್ರ್ಯ ಸಂಗ್ರಾಮ, ಶಿವಾನಂದ ಭಾವಿಕಟ್ಟಿ (ಲೇ)** : ಸ್ಮರಣ ಸಂಚಿಕೆ, ಅಖಿಲ ಭಾರತ ೭೦ನೇ ಕನ್ನಡ ಸಾಹಿತ್ಯ ಸಮ್ಮೇಳನ, ಬೆಳಗಾವಿ. ೨೦೦೩
* ಹಿರೇಮಠ ಆರ್. ಸಿ ಮತ್ತು ಕಲಬುರ್ಗಿ ಎಂ ಎಂ. : **ಕನ್ನಡ ಶಾಸನ ಸಂಪದ** : ಪ್ರಸಾರಂಗ ಕವಿವಿ. ಧಾರವಾಡ. ೧೯೬೮
* ಅಪ್ರಕಟಿತ ಸಂಶೋಧನ ನಿಬಂಧ : **ಹಿಡಕಲ್ಲದ ಸ್ವಾತಂತ್ರ್ಯ ಯೋಧರು** : ಮದುಸುಧನ ಬೀಳಗಿ : ಹಂಪಿ ವಿಶ್ವವಿದ್ಯಾಲಯ – ೨೦೧೧ (ಅಪ್ರಕಟಿತ)

## ಆ. ಆಂಗ್ಲ ಭಾಷಾ ಗ್ರಂಥಗಳು :

* Bapat P. R. : ***Freedom movement in Balgaum District :*** Shivaji University Belgaum : 1988 June
* Bipin Chandrapala : ***FREEDOM STRUGGLE*** : National Book Trust, India Nehru Bhawan, 5 Institutional Area Phese II Vasant Kenj, New Dehli. 2012
* Bipin Chandrapala : ***INDIA - STRUGGLE FOR INDEPEND 1857-1947 :*** Penguin Books, New Delhi. 1987
* C.C. Case No. 29/1943 : ***In the court of sessions judge sangli at Sangli*** : Dtd : 10-12-1943
* Kulkarni R. H. : ***FREEDOM MOVEMENT IN BELGAUM DISTRICT :*** Shri Venkateshwar Publications, 226, Tilakawadi, Belgaum. 1992

* Narayan R. S. : ***BUILDERS OF MODERN INDIA - GANGADHAR RAO DESHPANDE :*** Ministry of Information And Broadcasting Government of India. Patiala House. New Delhi-110001. 1988 July
* Sarojini Shintri and K. Raghavendra Rao : ***WOMEN FREEDOM FIGHTERS IN KARNATAKA :*** Prasaranga, Karnataka University, Dharwad. 1983 Dec.
* Satyavrata Ghosh : ***INDIAN STRUGGLE FOR FREEDOM :*** B. R. Publishing Corporation, DELHI- 110007. 1988
* Sharma S. R. : ***FREEDOM MOVEMENT 1857-1947 :*** Shri Ram Sharma B. R. Publishing Corporation, DELHI-110007. 1988
* Shashidhar Melakunde : ***A HISTORY OF FREEDOM & UNIFICATION MOVEMENT IN KARNATAKA*** : Solapur 2016
* Shiladhar Y. Mugali : ***The Freedom Movement in Bombay Karnataka Role of Intellectures :*** Prasaranga, Karnataka University, Dharwad. 2005 Setpember.
* Shrinivas V. Kanade : ***Role of Press in Indian Nationalist Movement in Karnataka (1556-1947) :*** Prasaranga, Karnataka University, Dharwad. 2005.
* Somaling A. Malagali & Acchut Vadavi : ***PICTORIAL INDIA, HISTORY OF FREEDOM STRUGGLES & GANDHI :*** Swatantrya Sangramada Shatamanotsav Sangh (R) Belgaum, Karnataka, 1st Main Road, 990/2, Shivaji Nagar, Belagavi-590 016, 1st Edition 2012.
* Suryanath Kamath : ***GAZETTEER OF INDIA KARNATAKA STATE BELGAUM DISTRICT :*** V. B. Soobbiate & Sons 'Gouri Shenkar', 1101, OTC Road, Bangalore-560002. 1982
* Suryanath Kamath : ***QUIT INDIA MOVEMENT IN KARNATAKA :*** Bengalore 1988

